



# ಶ್ರೀಮದ್ಭಾಗವತ ಮಹಾಪುರಾಣ

## [ಶ್ರೀಮದ್ಭಾಗವತ ಮಹಾಪುರಾಣ-ದ್ವಿತೀಯ ಸ್ಕಂಧ]

**[**ಸುಮಾರು ಐದು ಸಾವಿರ ವರ್ಷಗಳ ಹಿಂದೆ, ದ್ವಾಪರದ ಕೊನೆಯಲ್ಲಿ ವೇದಗಳನ್ನು ವಿಂಗಡಿಸಿ ಬಳಕೆಗೆ ತಂದ ಮಹರ್ಷಿ ವೇದವ್ಯಾಸರೇ, ಅವುಗಳ ಅರ್ಥವನ್ನು ತಿಳಿಯಾಗಿ ವಿವರಿಸಲು ಹದಿನೆಂಟು ಪುರಾಣಗಳನ್ನು ರಚಿಸಿದರು. ಈ ಪುರಾಣಗಳಲ್ಲಿ ಹೆಚ್ಚು ಪ್ರಸಿದ್ಧವಾದುದು ಹಾಗೂ ಪುರಾಣಗಳ ರಾಜ ಎನ್ನಬಹುದಾದ ಮಹಾಪುರಾಣ ಭಾಗವತ.

ಸಾವು ಎನ್ನುವ ಹಾವು ಬಾಯಿ ತೆರೆದು ನಿಂತಿದೆ. ಜಗತ್ತಿನ ಎಲ್ಲಾ ಜೀವಜಾತಗಳು ಅಸಾಯಕವಾಗಿ ಅದರ ಬಾಯಿಯೊಳಗೆ ಸಾಗುತ್ತಿವೆ. ಈ ಹಾವಿನಿಂದ ಪಾರಾಗುವ ಉಪಾಯ ಉಂಟೇ? ಉಂಟು, ಶುಕಮುನಿ ನುಡಿದ ಶ್ರೀಮದ್ಭಾಗವತವೇ ಅಂತಹ ದಿವ್ಯೌಷಧ. ಜ್ಞಾನ-ಭಕ್ತಿ ವಿರಳವಾಗಿರುವ ಕಲಿಯುಗದಲ್ಲಂತೂ ಇದು ತೀರಾ ಅವಶ್ಯವಾದ ದಾರಿದೀಪ.

ಭಾಗವತದಲ್ಲಿ ಅನೇಕ ಕಥೆಗಳಿವೆ. ಆದರೆ ನಮಗೆ ಈ ಕಥೆಗಳಿಗಿಂತ ಅದರ ಹಿಂದಿರುವ ಸಂದೇಶ ಮುಖ್ಯ. ಒಂದು ತತ್ತ್ವದ ಸಂದೇಶಕ್ಕಾಗಿ ಒಂದು ಕಥೆ ಹೊರತು, ಅದನ್ನು ವಾಸ್ತವವಾಗಿ ನಡೆದ ಘಟನೆ ಎಂದು ತಿಳಿಯಬೇಕಾಗಿಲ್ಲ.

ಮನಸ್ಸು ಶುದ್ಧವಾಗಿದ್ದರೆ ಎಲ್ಲವೂ ಶುದ್ಧ. ಮನಸ್ಸು ಮಲೀನವಾದರೆ ಮೈತೊಳೆದು ಏನು ಉಪಯೋಗ? ನಮ್ಮ ಮನಸ್ಸನ್ನು ತೊಳೆದು ಶುದ್ಧ ಮಾಡುವ ಸಾಧನ ಈ ಭಾಗವತ. ಶ್ರದ್ಧೆಯಿಂದ ಭಾಗವತ ಓದಿದರೆ ಮನಸ್ಸು ಪರಿಶುದ್ಧವಾಗಿ ಭಗವಂತನ ಚಿಂತನೆಗೆ ತೊಡಗುತ್ತದೆ. ಬಿಡುಗಡೆಯ ದಾರಿಯನ್ನು ತೆರೆದು ತೋರಿಸುತ್ತದೆ.

ಪೂಜ್ಯ ಬನ್ನಂಜೆ ಗೋವಿಂದಾಚಾರ್ಯರು ತಮ್ಮ ಭಾಗವತ ಪ್ರವಚನದಲ್ಲಿ ಒಬ್ಬ ಸಾಮಾನ್ಯನಿಗೂ ಅರ್ಥವಾಗುವಂತೆ ವಿವರಿಸಿದ ಭಾಗವತದ ಅರ್ಥಸಾರವನ್ನು ಇ-ಪುಸ್ತಕ ರೂಪದಲ್ಲಿ ಸೆರೆ ಹಿಡಿದು ಆಸಕ್ತ ಅಧ್ಯಾತ್ಮ ಬಂಧುಗಳಿಗೆ ತಲುಪಿಸುವ ಒಂದು ಕಿರುಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.**]**

Visit us @: http://bhagavatainkannada.blogspot.in/ ಚಿತ್ರಕೃಪೆ: ಅಂತರ್ಜಾಲ

# ಪರಿವಿಡಿ

# ಓದುವ ಮೊದಲು

ಪೂಜ್ಯ ಬನ್ನಂಜೆ ಗೋವಿಂದಾಚಾರ್ಯರು ಒಬ್ಬ ಸಾಮಾನ್ಯ ಮನುಷ್ಯನಿಗೆ ಅರ್ಥವಾಗುವಂತೆ ವಿವರಿಸಿದ 'ಭಾಗವತ ಪ್ರವಚನ'ವನ್ನು ಬಳಸಿಕೊಂಡು ಇಲ್ಲಿ ಭಾಗವತದ ವಿವರಣೆಯನ್ನು ಪ್ರಸ್ತುತಪಡಿಸಲಾಗಿದೆ. ಓದುಗರು ಸಾಧ್ಯವಾದರೆ ಆಚಾರ್ಯರ ಪ್ರವಚನದ ಧ್ವನಿಸುರುಳಿಯನ್ನು ಕೇಳಿಸಿಕೊಳ್ಳಬೇಕಾಗಿ ಇಲ್ಲಿ ವಿನಂತಿಸಿಕೊಳ್ಳುತ್ತಿದ್ದೇವೆ. ಧ್ವನಿಸುರುಳಿಯನ್ನು ಕೇಳಲು ಸಾಧ್ಯವಾಗದೇ ಇದ್ದವರಿಗೆ ಅನುಕೂಲವಾಗಲೆಂದು ಈ ಪುಸ್ತಕವನ್ನು ಬರೆಯಲಾಗಿದೆ. ಅಧ್ಯಾತ್ಮ ಬಂಧುಗಳು ಈ ಮಹಾ ಗ್ರಂಥದಲ್ಲಡಗಿರುವ ಅಪೂರ್ವ ಅರ್ಥಸಾರವನ್ನು ಅರಿತು ತಮ್ಮ ಜೀವನವನ್ನು ಪಾವನಗೊಳಿಸಿಕೊಳ್ಳಬೇಕಾಗಿ ಪ್ರಾರ್ಥಿಸುತ್ತೇವೆ.

# ವಿಜ್ಞಾಪನೆ



ಸಂಪರ್ಕ ಕೊಂಡಿ: http://bhagavatainkannada.blogspot.in/

# ದ್ವಿತೀಯ ಸ್ಕಂಧ

## ಪ್ರಥಮೋऽಧ್ಯಾಯಃ

**॥ಓಂ ನಮೋ ಭಗವತೇ ವಾಸುದೇವಾಯ ಓಂ॥**

॥ ಶ್ರೀ ಗುರುಭ್ಯೋ ನಮಃ ಹರಿಃ ಓಂ ॥

## ಪರೀಕ್ಷಿತನನ್ನು ಪ್ರಶಂಸಿಸಿದ ಶುಕಾಚಾರ್ಯರು

ಉತ್ತರ ಕೊಡುವಂತಹ ಸುಸಂಬದ್ಧ ಪ್ರಶ್ನೆಯನ್ನು ಪ್ರಸಕ್ತ ಕಾಲದಲ್ಲಿ ಕೇಳಿದ ಪರೀಕ್ಷಿತ ರಾಜನನ್ನು ಶುಕಾಚಾರ್ಯರು ಪ್ರಶಂಸಿಸುವುದರೊಂದಿಗೆ ಭಾಗವತದ ಎರಡನೇ ಸ್ಕಂಧ ಆರಂಭವಾಗುತ್ತದೆ.

**ಶ್ರೀಶುಕ ಉವಾಚ--**

**ವರೀಯಾನೇಷ ತೇ ಪ್ರಶ್ನಃ ಕೃತೋ ಲೋಕಹಿತಂ ನೃಪ ।**
**ಆತ್ಮವಿತ್ಸಮ್ಮತಃ ಪುಂಸಾಂ ಶ್ರೋತವ್ಯಾದಿಷು ಯಃ ಪರಃ ॥೦೧॥**

"ಇಡೀ ಮಾನವ ಸಮುದಾಯಕ್ಕೆ ಅವಶ್ಯಕವಾದ ಪ್ರಶ್ನೆಯನ್ನು ನೀನು ಕೇಳಿದೆ. ಈ ಪ್ರಶ್ನೆ ಕೇವಲ ನಿನ್ನೊಬ್ಬನದಷ್ಟೇಯೇ ಅಲ್ಲ, ಇದು ಪ್ರತಿಯೊಬ್ಬ ಮನುಷ್ಯ ತಿಳಿಯಲೇಬೇಕಾದ ವಿಚಾರದ ಪ್ರಶ್ನೆ. ಈ ಪ್ರಶ್ನೆಗೆ ಉತ್ತರ ದೊರಕಿದರೆ ಇಡೀ ಮನುಕುಲದ ಸಮಸ್ಯೆಗೆ ಉತ್ತರ ಸಿಕ್ಕಂತಾಗುತ್ತದೆ. 'ಮನುಷ್ಯ ಜೀವನದಲ್ಲಿ ಕೇಳಲೇಬೇಕಾದ ಸಂಗತಿ ಯಾವುದು' ಎನ್ನುವ ನಿನ್ನ ಪ್ರಶ್ನೆ ಕೇವಲ ನನಗಷ್ಟೇ ಖುಷಿ ಕೊಡುವ ಪ್ರಶ್ನೆಯಲ್ಲ, ಇದು ಎಲ್ಲಾ ಆತ್ಮಜ್ಞಾನಿಗಳೂ ಮೆಚ್ಚುವ ಪ್ರಶ್ನೆ. ಇದು ಎಲ್ಲಾ ಅಜ್ಞಾನಿಗಳಿಗೂ ಉದ್ಧಾರದ ದಾರಿ ತೋರುವ ವಿಚಾರದ ಮೇಲಿನ ಪ್ರಶ್ನೆ. ನೀನು ಇಡೀ ಲೋಕಕ್ಕೆ ಕಲ್ಯಾಣಕರವಾಗುವಂತಹ ಪ್ರಶ್ನೆ ಮಾಡಿದೆಯಲ್ಲಾ, ತುಂಬಾ ಸಂತೋಷವಾಯಿತು" ಎಂದು ಪರೀಕ್ಷಿತ ರಾಜನ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ ಶುಕಾಚಾರ್ಯರು.

**ಶ್ರೋತವ್ಯಾನೀಹ ರಾಜೇಂದ್ರ ನೃಣಾಂ ಸಂತಿ ಸಹಸ್ರಶಃ ।**
**ಅಪಶ್ಯತಾಮಾತ್ಮತತ್ತ್ವಂ ಗೃಹೇಷು ಗೃಹಮೇಧಿನಾಂ ॥೦೨॥**

**ನಿದ್ರಯಾ ಹ್ರಿಯತೇ ನಕ್ತಂ ವ್ಯವಾಯೇನ ನವಂ ವಯಃ ।**
**ದಿವಾ ಚಾರ್ಥೇಹಯಾ ರಾಜನ್ ಕುಟುಂಬಭರಣೇನ ವಾ ॥೦೩॥**

ಶುಕಾಚಾರ್ಯರು ಹೇಳುತ್ತಾರೆ: "ಇಂದು ಪ್ರಶ್ನೆ ಹಾಕುವವರೇ ಇಲ್ಲವಾಗಿದ್ದಾರೆ. ಹೇಳಿದರೆ ಕೇಳುವವರೂ ಇಲ್ಲ. ಇಂತಹ ಸಮಯದಲ್ಲಿ ನೀನು ಕೇಳಬೇಕೆಂದು ಸಂಕಲ್ಪಿಸಿ ಕುಳಿತಿರುವುದು ಶ್ಲಾಘನೀಯ" ಎಂದು.

ಜೀವನದಲ್ಲಿ ಕೇಳಬೇಕಾದ ಸಂಗತಿ ಅನೇಕ. ಅದು ಏಳು ದಿನದಲ್ಲಲ್ಲ, ಏಳು ಜನ್ಮದಲ್ಲೂ ಮುಗಿಯದ ವಿಚಾರ. ದೇವಲೋಕದಲ್ಲಿ ದೇವೇಂದ್ರ ಬೃಹಸ್ಪತಿಯಾಚಾರ್ಯರಿಂದ ಪಾಠ ಕೇಳಿದ ಪ್ರಸಂಗವನ್ನು ವಿವರಿಸುತ್ತಾ ಪತಂಜಲಿ ಹೇಳುತ್ತಾನೆ: "ಸಾವಿರ-ಸಾವಿರ ವರ್ಷಗಳ ಕಾಲ ಪಾಠ ಕೇಳಿದರೂ ಕಲಿತು ಮುಗಿಯಲಿಲ್ಲ" ಎಂದು. ಇದರರ್ಥ ಸಾವಿರ-ಸಾವಿರ ವರ್ಷ ಕಲಿತರೂ ಮುಗಿಯದಷ್ಟು ಜ್ಞಾನವಿದೆ. ಆದರೆ ಇಂದು ಯಾರಿಗೂ ಈ ಅಪೂರ್ವವಾದ ವೇದಾಂತ ಬೇಡವಾಗಿದೆ. ಬಾಲ್ಯದಲ್ಲಿ ವೇದಾಂತ ಸಾಧ್ಯವಾಗಲಿಲ್ಲ, ಮುದಿತನದಲ್ಲಿ ಅಧ್ಯಯನಕ್ಕೆ ತ್ರಾಣವಿಲ್ಲ, ಇನ್ನು ಯೌವನದಲ್ಲಿ ಮನೆ, ಸಂಸಾರ, ಇತ್ಯಾದಿಯಲ್ಲಿ ಕಾಲ ಕಳೆದು ಹೋಗುತ್ತದೆ. ಲೌಕಿಕದಿಂದಾಚೆಗೆ ಅಧ್ಯಾತ್ಮವೆಂಬ ಒಂದು ಅಪೂರ್ವ ಮೌಲ್ಯ ಇದೆ ಎನ್ನುವ ಎಚ್ಚರವೇ ಇಂದಿನ ಜನರಿಗೆ ತಿಳಿದಿಲ್ಲ. ಎಲ್ಲರೂ ಕೇವಲ ಐಹಿಕ ಜೀವನವೇ ಪುರುಷಾರ್ಥ ಎಂದು ತಿಳಿದು ಬದುಕುತ್ತಿದ್ದಾರೆ. ದೇಹದ ಪೋಷಣೆಯಿಂದಾಚೆಗೆ, ದೇಹದೊಳಗಿರುವ ಅನಾದಿ-ಅನಂತವಾಗಿರುವ ನಿತ್ಯತತ್ತ್ವದ ಎಚ್ಚರ ಯಾರಿಗೂ ಇಲ್ಲ.

ಭಗವಂತನ ಬಗೆಗೆ ಎಚ್ಚರ ಇಲ್ಲದೇ ಬದುಕುತ್ತಿರುವ ಜನ ಹಗಲಿನಲ್ಲಿ ಹಣದ ಹಿಂದೆ ಓಡಿದರೆ, ರಾತ್ರಿಯನ್ನು ನಿದ್ದೆಯಲ್ಲೋ ಅಥವಾ ಲೈಂಗಿಕ ಸುಖದಲ್ಲೋ ಕಳೆಯುತ್ತಿರುತ್ತಾರೆ. ಇದನ್ನೇ ಕಾರಣವಾಗಿಟ್ಟುಕೊಂಡು ತಮ್ಮಲ್ಲಿ ವೇದಾಂತ ಚಿಂತನೆಗೆ ಸಮಯವಿಲ್ಲ ಎನ್ನುವವರಿದ್ದಾರೆ. ಮನಶಾಸ್ತ್ರದ ಹಿನ್ನೆಲೆಯಲ್ಲಿ ನೋಡಿದರೆ 'ಸಮಯವಿಲ್ಲ' ಎನ್ನುವುದರ ಒಳಾರ್ಥ 'ಮನಸ್ಸಿಲ್ಲ' ಎಂದು.

ಗೇಹಾಪತ್ಯಕಳತ್ರಾದಿಷ್ವಾತ್ಮದೈನ್ಯೇಷ್ವಸತ್ಸ್ವಪಿ ।
ತೇಷು ಪ್ರಸಕ್ತೋ ನಿಧನಂ ಪಶ್ಯನ್ನಪಿ ನ ಪಶ್ಯತಿ ॥೦೪॥

ತಸ್ಮಾದ್ ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾಽಭಯಮ್ ॥೦೫॥

ಏತಾವಾನ್ ಸಾಂಖ್ಯಯೋಗಾಭ್ಯಾಂ ಸ್ವಧರ್ಮಪರಿನಿಷ್ಠಯಾ ।
ಜನ್ಮಲಾಭಃ ಪರಃ ಪುಂಸಾಮಂತೇ ನಾರಾಯಣಸ್ಮೃತಿಃ ॥೦೬॥

ನಾವು ವ್ಯಾವಹಾರಿಕ ವಿಚಾರದಲ್ಲಿ ಇರಬಾರದು ಎಂದಲ್ಲ, ಆದರೆ ಅದರಲ್ಲೇ ಮುಳುಗುವುದು ತಪ್ಪು. ಇಂದು ಎಲ್ಲರೂ ಮನೆ, ಪತಿ, ಪತ್ನಿ, ಮಕ್ಕಳು, ಇತ್ಯಾದಿ ವಿಚಾರದಲ್ಲೇ ಮುಳುಗಿ ಬಿಟ್ಟಿದ್ದಾರೆ. ಇದರಿಂದಾಗಿ ಕೇವಲ ವ್ಯಕ್ತಿ ನಾಶವಷ್ಟೇ ಅಲ್ಲ, ವ್ಯಕ್ತಿತ್ವದ ಪತನವಾಗುತ್ತಿದೆ. ವ್ಯಾವಹಾರಿಕ ವಿಚಾರದಲ್ಲೇ ಮುಳುಗಿ ಅದರಿಂದ ವ್ಯಕ್ತಿತ್ವ ನಾಶವಾಗುವುದನ್ನು ಕಣ್ಣಾರೆ ಕಂಡರೂ ಸಹ, ಅದೇ ಸರ್ವಸ್ವ ಎಂದು ಕಣ್ಮುಚ್ಚಿ ಬದುಕುತ್ತಿದ್ದಾರೆ ಜನ. ಹೀಗಿರುವಾಗ ಆತ್ಮಜ್ಞಾನಿಗಳ ಸಮ್ಮುಖದಲ್ಲಿ ಪರೀಕ್ಷಿತ 'ಕೇಳಬೇಕು' ಎಂದು ಅಭಿಲಾಷೆ ವ್ಯಕ್ತಪಡಿಸಿರುವುದನ್ನು ಶುಕಾಚಾರ್ಯರು ಕೊಂಡಾಡುತ್ತಾರೆ.

ಮನುಷ್ಯನ ಬದುಕೇ ಭಯದ ಸರಮಾಲೆ. 'ಭಗವಂತ ನಮ್ಮನ್ನು ರಕ್ಷಿಸುತ್ತಾನೆ' ಎನ್ನುವ ಭರವಸೆ ಯಾರಿಗಿಲ್ಲವೋ, ಯಾರು 'ನಮ್ಮನ್ನು ನಾವೇ ರಕ್ಷಿಸಿಕೊಳ್ಳಬೇಕು' ಎಂದು ತೀರ್ಮಾನಮಾಡಿ ಬದುಕುತ್ತಿರುತ್ತಾರೋ, ಅವರಿಗೆ ಭಯದಿಂದ ಪಾರಾಗುವ ದಾರಿಯೇ ಇಲ್ಲ. "ನನಗೊಬ್ಬ ರಕ್ಷಕನಿದ್ದಾನೆ, ಅವನು ರಕ್ಷಿಸುವಷ್ಟು ಕಾಲ ನನಗೆ ಯಾರೂ

ಏನನ್ನೂ ಮಾಡಲಾರರು, ಅವನು ಕೈಬಿಟ್ಟರೆ ಯಾರೂ ನನ್ನನ್ನು ರಕ್ಷಿಸಲಾರರು, ನನ್ನನ್ನು ರಕ್ಷಿಸುವ ಆ ಭಗವಂತ ರಕ್ಷಿಸಿಯೇ ರಕ್ಷಿಸುತ್ತಾನೆ" ಎನ್ನುವ ಪೂರ್ಣ ಭರವಸೆ ನಮ್ಮಲ್ಲಿದ್ದಾಗ ಯಾವ ಭಯವೂ ಇಲ್ಲ. ಇದೊಂದೇ ಭಯದಿಂದ ಪಾರಾಗುವ ಉಪಾಯ. ಒಟ್ಟಿನಲ್ಲಿ ಹೇಳಬೇಕೆಂದರೆ: ನಮ್ಮ ಬದುಕಿನ ಹೊಣೆಯನ್ನು ನಾವೇ ಹೊತ್ತರೆ ಅದು ಭಯ; ವಿಶ್ವ ನಿಯಾಮಕ ಭಗವಂತ ಎಲ್ಲವನ್ನೂ ನೋಡುತ್ತಿದ್ದಾನೆ, ಅವನು ರಕ್ಷಿಸುತ್ತಿದ್ದಾನೆ ಎನ್ನುವ ಭಾವ ಧೈರ್ಯ. ಭಗವಂತನ ರಕ್ಷಣೆಯ ಹೊಣೆಯನ್ನು ನಂಬಿದವರಿಗೆ ಯಾವ ಪ್ರಸಂಗದಲ್ಲೂ ಭಯವಾಗುವುದಿಲ್ಲ. ಹೀಗಾಗಿ ಭಯಾತೀತನಾಗಲು ಇರುವ ಒಂದೇ ಒಂದು ದಾರಿ-ಭಗವಂತನ ಬಗೆಗಿನ ಎಚ್ಚರ.

ಮೇಲಿನ ಶ್ಲೋಕದಲ್ಲಿ ಭಗವಂತನನ್ನು ಸರ್ವಾತ್ಮಾ, ಹರಿಃ, ಈಶ್ವರ ಎಂದು ಸಂಬೋಧಿಸಿದ್ದಾರೆ. 'ಸರ್ವಾತ್ಮಾ' ಎಂದರೆ ಎಲ್ಲರೊಳಗೂ ಇರುವವನು, ಎಲ್ಲರನ್ನೂ ಹೊತ್ತವನು ಎಂದರ್ಥ. ನನ್ನೊಳಗಿದ್ದು ನನ್ನನ್ನು ಭಗವಂತ ರಕ್ಷಿಸುತ್ತಿರುವಾಗ ನನಗೇಕೆ ಭಯ ಎನ್ನುವ ಸಂಕಲ್ಪ ನಮ್ಮಲ್ಲಿದ್ದಾಗ, ಒಂದು ವೇಳೆ ನಾವು ದುರಂತಕ್ಕೊಳಗಾಗುವ ಪ್ರಸಂಗ ಬಂದರೂ ಕೂಡಾ, ಅದು ನಮಗೆ ಭಯಾನಕ ಎನಿಸುವುದಿಲ್ಲ.

ಇಲ್ಲಿ 'ಈಶ್ವರ' ಎಂದರೆ ಎಲ್ಲಾ ದೇವಾದಿ-ದೇವತೆಗಳಿಗೂ ಒಡೆಯನಾದ, ಸರ್ವಸಮರ್ಥ ಭಗವಂತ. ಅವನೇ ನಾರಾಯಣ. ಇದನ್ನೇ ಶಂಕರಾಚಾರ್ಯರು "***ಈಶ್ವರಃ ಈಶನಶೀಲೋ ನಾರಾಯಣಃ***" ಎಂದು ವರ್ಣಿಸಿದ್ದಾರೆ. ಅಂತಹ ನಾರಾಯಣನಿಗೆ ನಾವು ಶರಣಾಗಬೇಕು.

ಸಂಸಾರ ದುಃಖವನ್ನು ಪರಿಹರಿಸಿ ನಮ್ಮನ್ನು ಸಂಸಾರದಿಂದ ಬಿಡುಗಡೆಗೊಳಿಸುವವನು ಹರಿಃ. ನಾವು ಭಕ್ತಿಯಿಂದ ಏನನ್ನು ಅರ್ಪಣೆ ಮಾಡಿದೆವೋ ಅದನ್ನು ಸ್ವೀಕರಿಸಿ ಅನಂತ ಫಲವನ್ನು ಕೊಡುವವನು ಹರಿಃ. ಇಂತಹ ಭಗವಂತನ ಅರಿವೇ ಜೀವನದ ಸಾರ್ಥಕ್ಯ. ನಾವು ತಿಳಿಯಬೇಕಾಗಿರುವುದು, ಕೇಳಬೇಕಾಗಿರುವುದು ಮತ್ತು ಧ್ಯಾನಿಸಬೇಕಾಗಿರುವುದು ಭಗವಂತನನ್ನು. ಹೀಗಾಗಿ ಯಾವುದನ್ನು ತಿಳಿದರೆ ಎಲ್ಲವನ್ನೂ ತಿಳಿಯಬಹುದೋ ಅಂತಹ ಭಗವಂತನನ್ನು ನಿರಂತರ ತಿಳಿಯುವ ಪ್ರಯತ್ನವೇ ಜೀವನದ ಅತಿದೊಡ್ಡ ಸಾಧನೆ.

ಈ ಹಿಂದೆ ಹೇಳಿದಂತೆ ಮನುಷ್ಯ ಸಾಯುವ ಕ್ಷಣದಲ್ಲಿ ಯಾವುದನ್ನು ಉತ್ಕಟವಾಗಿ ನೆನೆಯುತ್ತಾನೋ, ಅದನ್ನೇ ಮುಂದಿನ ಜನ್ಮದಲ್ಲಿ ಪಡೆಯುತ್ತಾನೆ. ಹೀಗಾಗಿ ಪ್ರಾಣೋತ್ಕ್ರಮಣ ಕಾಲದಲ್ಲಿ ಭಗವಂತನನ್ನು ನೆನೆದವನು ಮುಂದೆ ಭಗವಂತನನ್ನು ಸೇರುತ್ತಾನೆ. ಆದರೆ ಇದು ಅಷ್ಟು ಸುಲಭದ ಕೆಲಸವಲ್ಲ. ಇದಕ್ಕಾಗಿ ಜನ್ಮ-ಜನ್ಮಾಂತರದ ಸಾಧನೆ ಅಗತ್ಯ. ಕೆಲವೊಮ್ಮೆ ಇಡೀ ಜೀವಮಾನವೆಲ್ಲಾ ಭಗವಂತನ ಸ್ಮರಣೆ ಮಾಡಿದರೂ ಕೂಡಾ, ಸಾಯುವ ಕ್ಷಣದಲ್ಲಿ ಭಗವಂತನ ಸ್ಮರಣೆ ಬಾರದೇ ಹೋಗಬಹುದು. ಜೀವನದ ಪರಮ ಸೌಭಾಗ್ಯ ಎಂದರೆ ಕೊನೇ ಕ್ಷಣದಲ್ಲಿ ನಾರಾಯಣ ಸ್ಮೃತಿ ಬರುವುದು. ಅಂತಹ ಎಚ್ಚರವನ್ನು, ಸಾವಿನ ಕೊನೇ ಕ್ಷಣದಲ್ಲಿ ಮನಸ್ಸನ್ನು ಹೇಗೆ ಧ್ಯಾನಕ್ಕೆ ಒಡ್ಡಿಕೊಳ್ಳಬೇಕು ಎನ್ನುವ ಧ್ಯಾನ ಪ್ರಕ್ರಿಯೆಯನ್ನು ಶುಕಾಚಾರ್ಯರು ಪರೀಕ್ಷಿತನಿಗೆ ಉಪದೇಶಿಸುವುದನ್ನು ಈ ಅಧ್ಯಾಯದ ಮುಂದಿನ ಭಾಗದಲ್ಲಿ ಕಾಣಬಹುದು.

## ಭಾಗವತ ಪುರಾಣ ಎನ್ನುವ ಬ್ರಹ್ಮಸಮ್ಮಿತ

**ಪ್ರಾಯೇಣ ಮುನಯೋ ರಾಜನ್ ನಿವೃತ್ತಾ ವಿಧಿನಿಷೇಧತಃ ।**
**ನೈರ್ಗುಣ್ಯಸ್ಥಾ ರಮಂತೇ ಸ್ಮ ಗುಣಾನುಕಥನೇ ಹರೇಃ ॥೦೭॥**

**ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಂ ।**
**ಅಧೀತವಾನ್ ದ್ವಾಪರಾದೌ ಪಿತುರ್ದ್ವೈಪಾಯನಾದಹಮ್ ॥೦೮॥**

“ಶಾಸ್ತ್ರಗಳನ್ನು ಮನನಮಾಡಿ ಎಲ್ಲಾ ವಿಧಿ ನಿಷೇಧವನ್ನು ಮೀರಿ ನಿಂತ ಅಪರೋಕ್ಷ ಜ್ಞಾನಿಗಳೂ ಕೂಡಾ ಸದಾ ಹರಿಯ ಗುಣಗಾನವನ್ನು, ಭಗವಂತನ ಕಥಾನುಶ್ರವಣವನ್ನು ಬಯಸುತ್ತಾರೆ. ಹೀಗಾಗಿ ಈ ಸಂದರ್ಭದಲ್ಲಿ ನಾನು ನಿನಗೆ ನನ್ನ ತಂದೆ ವೇದವ್ಯಾಸರು ಉಪದೇಶಿಸಿರುವ, ಅಷ್ಟಾದಶಪುರಾಣಗಳಲ್ಲಿ ಅತ್ಯಂತ ಶ್ರೇಷ್ಠವೆನಿಸಿರುವ, ಪುರಾಣಗಳ ಸಾರಭೂತವಾದ ಭಾಗವತವನ್ನು ಹೇಳುತ್ತೇನೆ” ಎನ್ನುತ್ತಾರೆ ಶುಕಾಚಾರ್ಯರು.

ಶುಕಾಚಾರ್ಯರು “ನಾನು ಈಗ ಹೇಳುತ್ತಿರುವ ಗ್ರಂಥ ಭಾಗವತ ಪುರಾಣ ಎನ್ನುವ ಬ್ರಹ್ಮಸಮ್ಮಿತ” ಎಂದಿದ್ದಾರೆ. ಇಲ್ಲಿ ‘ಭಾಗವತ’ ಎನ್ನುವ ಶಬ್ದ ಮೂರು ಅರ್ಥಗಳಲ್ಲಿ ಈ ಪುರಾಣಕ್ಕೆ ಅನ್ವರ್ಥವಾಗಿದೆ. ಭಗವಂತನನ್ನು ಪ್ರತಿಪಾದಿಸುವ ಗ್ರಂಥವಾಗಿರುವುದರಿಂದ ಇದು ಭಾಗವತ; ಭಗವಂತನ ಅವತಾರವಾದ ವೇದವ್ಯಾಸರು ರಚಿಸಿರುವ ಗ್ರಂಥವಾಗಿರುವುದರಿಂದ ಇದು ಭಾಗವತ ಮತ್ತು ಭಗವದ್ ಭಕ್ತರಿಗೆ(ಭಾಗವತರಿಗೆ) ಪ್ರಿಯವಾದ ಗ್ರಂಥವಾದುದರಿಂದ ಇದು ಭಾಗವತ. ಇನ್ನು ಪುರಾಣ ಎಂದರೆ ಪ್ರಾಚೀನ ಗ್ರಂಥ. ಇದು ಎಂದೂ ಹೊಸತನವನ್ನು ಕಳೆದುಕೊಳ್ಳದ ಹಳೇ ಗ್ರಂಥ.

ಇಲ್ಲಿ ಬಳಸಿರುವ ‘ಬ್ರಹ್ಮಸಮ್ಮಿತ’ ಎನ್ನುವ ವಿಶೇಷಣ ಎರಡು ವಿಧದಲ್ಲಿ ತೆರೆದುಕೊಳ್ಳುತ್ತದೆ. ‘ಸಮ್ಮಿತ’ ಎಂದರೆ ‘ತಿಳಿಯಲ್ಪಟ್ಟದ್ದು’. ಬ್ರಹ್ಮ ಎಂದರೆ ಶಬ್ದಗಳಲ್ಲೇ ಅತಿದೊಡ್ಡದಾದದ್ದು--ಅಂದರೆ ವೇದ. ಅದೇ ರೀತಿ ಬ್ರಹ್ಮ ಎಂದರೆ ಸಮಸ್ತ ಪ್ರಪಂಚದಲ್ಲಿ ಅತಿದೊಡ್ಡ ವಸ್ತುವಾಗಿರುವ ಭಗವಂತ. ಹೀಗಾಗಿ ವೇದತುಲ್ಯವಾದುದು ಹಾಗೂ ಯಾವುದರಿಂದ ಭಗವಂತ ಚೆನ್ನಾಗಿ ತಿಳಿಯಲ್ಪಡುತ್ತಾನೋ ಅದು ಬ್ರಹ್ಮಸಮ್ಮಿತ. ಅಂದರೆ ಭಗವಂತನ ಬಗೆಗೆ ನಮಗೆ ಯಥಾರ್ಥವಾದ ಅರಿವನ್ನು ಕೊಡತಕ್ಕಂತಹ ಗ್ರಂಥ ಭಾಗವತ. ಒಟ್ಟಿನಲ್ಲಿ ಹೇಳಬೇಕೆಂದರೆ: “ಭಗವಂತನನ್ನು ಚೆನ್ನಾಗಿ ತಿಳಿಸುವ, ವೇದತುಲ್ಯವಾದ ಭಾಗವತವೆಂಬ ಪುರಾಣವನ್ನು ನಾನು ನಿನಗೆ ಹೇಳುತ್ತೇನೆ” ಎಂದಿದ್ದಾರೆ ಶುಕಾಚಾರ್ಯರು. [ಭಾಗವತವನ್ನು ಪಂಚಮವೇದ ಎಂದು ಕರೆಯುವುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು.]

ಇಲ್ಲಿ ಶುಕಾಚಾರ್ಯರು “ನಾನು ನನ್ನ ತಂದೆಯಾದ ದ್ವೈಪಾಯನರಿಂದ ‘ದ್ವಾಪರಾದೌ’ದಲ್ಲಿ ಅಧ್ಯಯನ ಮಾಡಿರುವ ಭಾಗವತವನ್ನು ನಿನಗೆ ಹೇಳುತ್ತೇನೆ” ಎಂದಿದ್ದಾರೆ. ಮೇಲ್ನೋಟದಲ್ಲಿ ನೋಡಿದರೆ ‘ದ್ವಾಪರಾದೌ’ ಎಂದರೆ ದ್ವಾಪರದ ಆದಿ. ಆದರೆ ನಮಗೆ ತಿಳಿದಂತೆ ದ್ವಾಪರದ ಅಂತ್ಯದಲ್ಲಿ ವೇದವ್ಯಾಸರ ಅವತಾರವಾಗಿರುವುದು. ಹೀಗಿರುವಾಗ ದ್ವಾಪರದ ಆದಿಯಲ್ಲಿ ಹೇಗೆ ಈ ಉಪದೇಶ ನಡೆಯಿತು ಎನ್ನುವ ಪ್ರಶ್ನೆ ನಮ್ಮನ್ನು ಕಾಡುತ್ತದೆ. ಈ ಎಲ್ಲಾ ಸಮಸ್ಯೆಗೆ ಉತ್ತರ ಸಿಗಬೇಕಾದರೆ ಸ್ಕಾಂದಪುರಾಣದಲ್ಲಿನ ಶ್ಲೋಕವೊಂದನ್ನು ನೋಡಬೇಕು. ಅಲ್ಲಿ ಹೇಳುತ್ತಾರೆ: ***ದ್ವಾಪರೇ, ಆದೌ ಚ ಕೃಷ್ಣಾವತಾರಾಪೇಕ್ಷಯಾ । ವ್ಯಾಸಃ ಷಟ್ ಶತ ವರ್ಷೀಯೋ ಧೃತರಾಷ್ಟ್ರ ಮಜೀಜನತ್ ॥ ಇತಿ ಸ್ಕಾಂದೇ ।***

ಇಲ್ಲಿ ಹೇಳುವಂತೆ ‘ದ್ವಾಪರಾದೌ’ ಎಂದರೆ ದ್ವಾಪರದ ಆದಿ ಅಲ್ಲ. ದ್ವಾಪರದಲ್ಲಿ, ಅದರಲ್ಲಿಯೂ ಕೃಷ್ಣಾವತಾರಕ್ಕಿಂತ ಮೊದಲು ವೇದವ್ಯಾಸರ ಅವತಾರವಾಯಿತು; ವೇದವ್ಯಾಸರು ಆರುನೂರು ವರ್ಷ ವಯಸ್ಸಿನವರಿದ್ದಾಗ ಅವರಿಂದ ಧೃತರಾಷ್ಟ್ರನ ಜನನವಾಯಿತು. ಈ ಹಿನ್ನೆಲೆಯಲ್ಲಿ ಶುಕಾಚಾರ್ಯರ ಮಾತನ್ನು ಗಮನಿಸಿದರೆ ಅವರು ಹೇಳಿರುವುದು “ಕೃಷ್ಣಾವತಾರಕ್ಕಿಂತ ಮೊದಲು, ದ್ವಾಪರದಲ್ಲಿ ವ್ಯಾಸರು ನನಗೆ ಭಾಗವತವನ್ನು ಹೇಳಿದರು” ಎಂದು. ಈ ಮಾತಿನಿಂದ ನಮಗೆ ತಿಳಿಯುವುದೇನೆಂದರೆ: ಮಹಾಭಾರತವನ್ನು ಹೇಗೆ ವೇದವ್ಯಾಸರು ಮಹಾಭಾರತ ನಡೆಯುವ ಮೊದಲೇ ರಚಿಸಿದ್ದರೋ-ಹಾಗೇ, ಕೃಷ್ಣನ ಕಥೆಯಾಗಿರುವ ಭಾಗವತವನ್ನು ರಚಿಸಿರುವುದು ಕೃಷ್ಣಾವತಾರಕ್ಕಿಂತಲೂ ಮೊದಲು. ಏಕೆಂದರೆ ಈ ಎಲ್ಲಾ ಘಟನೆಗಳೂ ಕೂಡಾ ಕಾಲಚಕ್ರದಲ್ಲಿ ಕಾಲಾತೀತವಾಗಿ ನಡೆಯುವಂತಹದ್ದು. ಈ ಘಟನೆ ಹಿಂದಿನ ಕಲ್ಪದಲ್ಲಿಯೂ ಆಗಿದೆ, ಈ ಕಲ್ಪದಲ್ಲಿಯೂ ನಡೆದಿದೆ, ಮುಂದಿನ ಕಲ್ಪದಲ್ಲೂ ನಡೆಯುತ್ತದೆ. ವೈದಿಕ ಮತ್ತು ಶಾಸ್ತ್ರೀಯವಾದ ಇತಿಹಾಸಕ್ಕೆ ಭೂತಕಾಲವಿದೆ, ವರ್ತಮಾನ ಕಾಲವಿದೆ ಹಾಗೂ ಭವಿಷ್ಯತ್ಕಾಲವೂ ಇದೆ.

ಇಲ್ಲಿ ವೇದವ್ಯಾಸರನ್ನು 'ದ್ವೈಪಾಯನ' ಎಂದು ಸಂಬೋಧಿಸಿದ್ದಾರೆ. ವ್ಯಾಸರ ಮೂಲನಾಮ ಕೃಷ್ಣ. ಅವರು ಯಮುನಾದ್ವೀಪದಲ್ಲಿ ಹುಟ್ಟಿರುವುದರಿಂದ ಅವರಿಗೆ ಬಂದ ಹೆಸರು ದ್ವೈಪಾಯನ. ನಂತರ ವೇದವನ್ನು ವಿಂಗಡಣೆ ಮಾಡಿಕೊಟ್ಟಿರುವುದರಿಂದ ಅವರಿಗೆ ವೇದವ್ಯಾಸ ಎನ್ನುವ ಶಿರೋನಾಮೆ ಬಂತು. ಭಾಗವತವನ್ನು ಭಗವಂತನ ಅವತಾರವಾದ ವೇದವ್ಯಾಸರು(ಹರಿ) ತನ್ನ ಮಗ, ಶಿವನ ಅವತಾರವಾದ ಶುಕಾಚಾರ್ಯರಿಗೆ(ಹರ) ಹೇಳಿದರು. ಹೀಗೆ ಹರಿ-ಹರರಿಂದ ಹರಿದುಬಂದ ಗ್ರಂಥ ಭಾಗವತ.

ಪರಿನಿಷ್ಠಿತೋSಪಿ ನೈರ್ಗುಣ್ಯ ಉತ್ತಮಶ್ಲೋಕಲೀಲಯಾ ।
ಗೃಹೀತಚೇತಾ ರಾಜರ್ಷ ಆಖ್ಯಾನಂ ಯದಧೀತವಾನ್ ॥೦೯॥

ತಾನೇಕೆ ಭಾಗವತವನ್ನು ಕೇಳಿದೆ ಎನ್ನುವುದನ್ನು ವಿವರಿಸುತ್ತಾ ಶುಕಾಚಾರ್ಯರು ಹೇಳುತ್ತಾರೆ: "ಜೀವನ್ಮುಕ್ತನಾದ ನಾನು ಏನನ್ನೋ ಗಳಿಸುವುದಕ್ಕೋಸ್ಕರ ಭಾಗವತ ಶ್ರವಣ ಮಾಡಿರುವುದಲ್ಲ, ಬದಲಿಗೆ ಭಗವಂತನ ಲೀಲೆಗಳನ್ನು ಕೇಳಬೇಕು ಎನ್ನುವ ತುಡಿತದಿಂದಾಗಿ ತಂದೆಯಿಂದ ಭಾಗವತ ಕೇಳಿದೆ" ಎಂದು. ಇಲ್ಲಿ ಶುಕಾಚಾರ್ಯರು ಭಗವಂತನನ್ನು 'ಉತ್ತಮಶ್ಲೋಕ' ಎಂದು ಸಂಬೋಧಿಸಿದ್ದಾರೆ. ಸಂಸಾರ ಬಂಧವನ್ನು ದಾಟಿನಿಂತ ಅಪರೋಕ್ಷ ಜ್ಞಾನಿಗಳೂ ಕೂಡಾ ಯಾರ ಗುಣಗಾನ ಮಾಡಲು ಇಷ್ಟಪಡುತ್ತಾರೋ ಅಂತಹ ಭಗವಂತ ಉತ್ತಮಶ್ಲೋಕ.

## ಶುಕಾಚಾರ್ಯರಿಂದ ಭಾಗವತ ಉಪದೇಶ ಆರಂಭ

ಪರೀಕ್ಷಿತನಿಗೆ ಭಾಗವತ ಉಪದೇಶ ಮಾಡುವಾಗ ಶುಕಾಚಾರ್ಯರು ನಮ್ಮ ಧ್ಯಾನದ ಸ್ಥಿತಿ ಹೇಗಿರಬೇಕು ಎನ್ನುವುದನ್ನು ಮೊದಲು ವಿವರಿಸಿ, ಆನಂತರ ಭಗವಂತನ ಕಥಾನುಭವವನ್ನು ವಿವರಿಸಿದ್ದಾರೆ. ಇಲ್ಲಿ ಧ್ಯಾನ ಸ್ಥಿತಿಯಲ್ಲಿ ಮನುಷ್ಯ ಯಾವ ರೀತಿ ಸಾಧನೆ ಮಾಡಬೇಕು ಎನ್ನುವ ಅದ್ಭುತ ವಿವರಣೆ ಇದೆ. ಇದು ತುಂಬಾ ಮಹತ್ವವಾದ ಆದರೆ ಅಷ್ಟೇ ಕ್ಲಿಷ್ಟವಾದ ಸಂಗತಿ. ಇಲ್ಲಿ ವಿವರಿಸಲಾದ ವಿಷಯಕ್ಕೆ ಮನಸ್ಸು ಶ್ರುತಿಗೂಡದೇ, ಕೇಳಿದ ತಕ್ಷಣ ಈ ವಿಚಾರ ಗ್ರಹಣವಾಗುವುದಿಲ್ಲ. ಅಂತಹ ಅತ್ಯಂತ ಎತ್ತರದ ಸ್ಥಿತಿಯಲ್ಲಿನ ಮನುಷ್ಯನ ಸಾಧನೆಯ ಚಿತ್ರಣ ಇಲ್ಲಿದೆ. [ಓದುಗರು ಈ ವಿಷಯವನ್ನು ಗಮನದಲ್ಲಿಟ್ಟುಕೊಂಡು ಮುಂದಿನ ಭಾಗವನ್ನು ಓದಬೇಕಾಗಿ ವಿನಂತಿಸಿಕೊಳ್ಳುತ್ತೇವೆ].

## ಸಾವು ವಿಕೃತಿಯಲ್ಲ ಅದು ಸಹಜ ಸ್ಥಿತಿ-ಅದಕ್ಕಾಗಿ ಭಯಬೇಡ

ಅಂತಕಾಲೇ ತು ಪುರುಷ ಆಗತೇ ಗತಸಾಧ್ವಸಃ ।
ಛಿಂದ್ಯಾದಸಂಗಶಸ್ತ್ರೇಣ ಸ್ಪೃಹಾಂ ದೇಹೇSನು ಯೇ ಚ ತಮ್ ॥೧೫॥

"ಮೊತ್ತಮೊದಲು ಸಾವಿನ ಭಯ ಬಿಟ್ಟುಬಿಡಬೇಕು" ಎಂದಿದ್ದಾರೆ ಶುಕಾಚಾರ್ಯರು. ಶಾಸ್ತ್ರಕಾರರು ಹೇಳುವಂತೆ: "*ಗೃಹಿತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್*"- ಯಾವ ಕ್ಷಣಕ್ಕೂ ನಾವು ಮೃತ್ಯು ವಶರಾಗಬಹುದು ಎಂದುಕೊಂಡು ನಾವು ಧರ್ಮಾಚರಣೆ ಮಾಡಬೇಕು. ಅಂತ್ಯಕಾಲ ಎನ್ನುವುದು ಹೇಳಿಕೊಂಡು ಬರುವುದಿಲ್ಲ. ಅದು

ಯಾವ ಕ್ಷಣದಲ್ಲಿ ಕೂಡಾ ಬರಬಹುದು. ಬದುಕು ಎಂದರೆ ಅದು ಸಾವಿನ ಸಿದ್ಧತೆ. ಅನಿವಾರ್ಯವಾಗಿರುವ ಸಾವಿನ ಬಗ್ಗೆ ಎಂದೂ ಭಯಪಡಬಾರದು.

ಸತ್ತ ನಂತರ ಏನು ಎನ್ನುವುದು ತಿಳಿದಿಲ್ಲದೇ ಇರುವುದೇ ಸಾವಿನ ಭಯಕ್ಕೆ ಕಾರಣ. ಅಜ್ಞಾನವೇ ಭಯ, ಅರಿವೇ ಅಭಯ. ಮೊತ್ತಮೊದಲು ನಾವು ತಿಳಿಯಬೇಕಾಗಿರುವುದು 'ಸಾವು ಭಯಾನಕವಲ್ಲ' ಎನ್ನುವ ವಿಚಾರವನ್ನು. ***ಮರಣಂ ಪ್ರಕೃತಿ ಶರೀರಿಣಾಂ ವಿಕೃತಿ ಜೀವನಂ ಉಚ್ಯತೇ.*** ಸಾವು ಅನ್ನುವುದು ಸಹಜ ಸ್ಥಿತಿ, ಬದುಕೇ ವಿಕೃತಿ. ಸ್ಥೂಲ ಶರೀರದೊಳಗಿರುವ ಜೀವ ಪಂಜರದೊಳಗಿರುವ ಗಿಳಿಯಂತೆ. ಆದರೆ ಸೂಕ್ಷ್ಮಶರೀರ ಎಂದರೆ ಅದು ಆಕಾಶದಲ್ಲಿ ಸ್ವಚ್ಛಂದವಾಗಿ ಹಾರುವ ಪಕ್ಷಿ. ಜೀವ ತನ್ನ ಸಹಜ ಸ್ಥಿತಿಗೆ ಮರಳುವುದು ಸಾವು ಎಂದು ತಿಳಿದಾಗ ಸಾವಿನ ಭಯವಿಲ್ಲ.

## ಬ್ರಹ್ಮಾಕ್ಷರವಾದ ಓಂಕಾರ ಧ್ಯಾನ

ಅಭ್ಯಸೇನ್ಮನಸಾ ಶುದ್ಧಂ ತ್ರಿವೃತ್ ಬ್ರಹ್ಮಾಕ್ಷರಂ ಪರಮ್ ।
ಮನೋ ಯಚ್ಛೇಜ್ಜಿತಶ್ವಾಸೋ ಬ್ರಹ್ಮಬೀಜಮವಿಸ್ಮರನ್ ॥೧೭॥

ಸಾಧನೆ ಹೇಗೆ ಮಾಡಬೇಕು ಎನ್ನುವುದನ್ನು ವಿವರಿಸುತ್ತಾ ಶುಕಾಚಾರ್ಯರು ಹೇಳುತ್ತಾರೆ: "ಮನಸ್ಸಿನಲ್ಲಿ ಮೂರು ಮಡಿಕೆಯ**(3-fold)** ಅಕ್ಷರವನ್ನು ಧ್ಯಾನ ಮಾಡು" ಎಂದು. ಇಲ್ಲಿ ಮೂರು ಮಡಿಕೆಯ ಅಕ್ಷರ(ತ್ರಿವೃತ್) ಅಂದರೆ ಅ-ಕಾರ, ಉ-ಕಾರ ಮತ್ತು ಮ-ಕಾರದಿಂದ ಕೂಡಿದ ಓಂಕಾರ. ಈ ಓಂಕಾರವನ್ನು ಶುಕಾಚಾರ್ಯರು '***ಬ್ರಹ್ಮಾಕ್ಷರಂ ಪರಮ್***' ಎಂದಿದ್ದಾರೆ. ಅಂದರೆ ಇದು ಭಗವಂತನನ್ನು ಹೇಳುವ ಅಕ್ಷರಗಳಲ್ಲೇ ಅತ್ಯಂತ ಶ್ರೇಷ್ಠವಾದ ಅಕ್ಷರ ಹಾಗೂ ಭಗವಂತನನ್ನು ಚಿಂತನೆ ಮಾಡಲು ಇರತಕ್ಕಂತಹ ಮಂತ್ರಗಳಲ್ಲೇ ಅತ್ಯಂತ ಶ್ರೇಷ್ಠ ಮಂತ್ರ. ಓಂಕಾರ ಎನ್ನುವುದು ಇಡೀ ಉಪಾಸನೆಯ ಬೆಳವಣಿಗೆಯ ಬೀಜ. ಹಾಗಾಗಿ ಓಂಕಾರದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿದರೆ ಎಲ್ಲಾ ಸತ್ಯಗಳೂ ಒಂದೊಂದಾಗಿ ತೆರೆದುಕೊಳ್ಳುತ್ತವೆ.

ಓಂಕಾರದಲ್ಲಿರುವ ಮೂರು ಅಕ್ಷರಗಳಲ್ಲಿ ಮೊದಲನೇ ಅಕ್ಷರ ಅ-ಕಾರ. 'ಅ' ಎನ್ನುವುದು 'ಆಪ್ತಿ' ಎನ್ನುವ ಪದದ ಸಂಕ್ಷೇಪಾಕ್ಷರ**(Abbreviation)**. ಬಾಹ್ಯ ಪ್ರಪಂಚದೊಂದಿಗೆ ನಮ್ಮ ಸಂಪರ್ಕವೇ ಆಪ್ತಿ. ಅಂದರೆ ಇದು ನಮ್ಮ ಮೂರು ಅವಸ್ಥೆಗಳಲ್ಲಿ(ಎಚ್ಚರ, ಕನಸು ಮತ್ತು ನಿದ್ರೆ) ಮೊದಲನೆಯದಾದ ಎಚ್ಚರವನ್ನು ಹೇಳುತ್ತದೆ. ನಮ್ಮ ಎಚ್ಚರಾವಸ್ಥೆಯನ್ನು ನಿಯಂತ್ರಿಸುವವನು ಭ್ರೂಮಧ್ಯದಲ್ಲಿ ಬಲಗಣ್ಣಿನ ಸಮೀಪದ ಶಕ್ತಿ ಕೇಂದ್ರದಲ್ಲಿ ನೆಲೆಸಿರುವ, ಅ-ಕಾರವಾಚ್ಯನಾದ, 'ವಿಶ್ವ' ನಾಮಕ ಭಗವಂತ. ಇದು ಭಗವಂತನ ಅನಿರುದ್ಧ ರೂಪ. ಈ ಸ್ಥಿತಿಯಲ್ಲಿ ಪ್ರಪಂಚದ ಅರಿವಿಗೆ ಯಾವುದೇ ನಿರೋಧ(ತಡೆ)ವಿಲ್ಲ. ಇದು ಎಲ್ಲಾ ಇಂದ್ರಿಯಗಳು ತೆರೆದುಕೊಂಡಿರುವ ಸ್ಥಿತಿಯಾಗಿರುವುದರಿಂದ ನಾವು ನಮ್ಮ ಇಂದ್ರಿಯಗಳಿಂದ ಅನುಭವವನ್ನು ಪಡೆಯುತ್ತೇವೆ. ಆದರೆ ಅನುಭವವನ್ನು ಕೊಡುವ ಇಂದ್ರಿಯಗಳ ಒಡೆತನ ನಮಗಿಲ್ಲ. ಉದಾಹರಣೆಗೆ ಕಣ್ಣಿನಿಂದ ಒಂದು ವಸ್ತುವನ್ನು ನಾವು ನೋಡುತ್ತೇವೆ. ಈ ರೀತಿ ನೋಡಬೇಕಾದರೆ ಅಲ್ಲಿ ಕನಿಷ್ಠ ಮೂರು ಸಂಗತಿಗಳು ಬೇಕಾಗುತ್ತದೆ. ೧. ನಮಗೆ ಕಾಣುವ ಕಣ್ಣಿರಬೇಕು. ೨. ಕಾಣುವಂತಹ ರೂಪ ನಮ್ಮ ಮುಂದಿರಬೇಕು. ೩. ರೂಪಕ್ಕೂ ಕಣ್ಣಿಗೂ ಸಂಪರ್ಕವಾಗುವ ಬೆಳಕಿರಬೇಕು. ಈ ಮೂರರಲ್ಲಿ ಯಾವುದರ ಒಡೆತನವೂ ನಮಗಿಲ್ಲ. ನಾವು ಹುಟ್ಟುವಾಗಲೇ ಆ ಭಗವಂತ ನಮಗೆ ಕಣ್ಣನ್ನು ಕಾಣಿಕೆಯಾಗಿ ಕೊಟ್ಟಿರುವುದರಿಂದ ಅದು ನಮ್ಮಲ್ಲಿದೆ(ಯಾವುದೇ ಕ್ಷಣದಲ್ಲಿ ಆತ ಅದನ್ನು ಹಿಂದೆ ಪಡೆಯಬಹುದು ಎನ್ನುವ ಎಚ್ಚರ ನಮ್ಮಲ್ಲಿರಬೇಕು). ನಮ್ಮ ಸುತ್ತಮುತ್ತ ರೂಪಾತ್ಮಕ ಪ್ರಪಂಚವನ್ನು ಭಗವಂತ ಸೃಷ್ಟಿಸಿರುವುದರಿಂದ ನಾವು ಅದನ್ನು

ನೋಡುಬಹುದು. ನಮ್ಮ ಕಣ್ಣು ರೂಪವನ್ನು ಗ್ರಹಿಸುವುದಕ್ಕೋಸ್ಕರ ಮುಗಿಲ ಕಣ್ಣಾದ ಸೂರ್ಯನನ್ನು ಭಗವಂತ ಇಟ್ಟಿರುವುದರಿಂದ ರೂಪ ಕಣ್ಣಿಗೆ ಕಾಣಿಸುತ್ತದೆ. ಇದೆಲ್ಲವನ್ನೂ ತಿಳಿದಾಗ, ಎಚ್ಚರದ ಸ್ಥಿತಿಯಲ್ಲಿನ ಇಂದ್ರಿಯಾನುಭವದ ಹಿಂದಿನ ಆ ಭಗವದ್ ಶಕ್ತಿಯ ಮಹತ್ವ ತಿಳಿಯುತ್ತದೆ. ಇಂತಹ ವಿಶ್ವನಾಮಕ ಭಗವಂತನನ್ನು ಓಂಕಾರದಲ್ಲಿ ಧ್ಯಾನಿಸುವುದೇ ಅ-ಕಾರೋಪಾಸನೆ.

ಓಂಕಾರದಲ್ಲಿನ ಎರಡನೇ ಅಕ್ಷರವಾದ 'ಉ' ಉತ್ಕರ್ಷ ಎನ್ನುವುದರ ಸಂಕ್ಷೇಪಾಕ್ಷರ. ಉತ್ಕರ್ಷ ಎಂದರೆ ಒಳಕ್ಕೆ ಸೆಳೆದುಕೊಳ್ಳುವುದು. ಎಲ್ಲಾ ಇಂದ್ರಿಯಗಳನ್ನು ಒಳಕ್ಕೆ ಸೆಳೆದುಕೊಂಡು ಒಳಗಿನ ಪ್ರಪಂಚದಲ್ಲಿ ಕನಸು ಕಾಣುವುದೇ ಎಚ್ಚರದ ನಂತರದ ಎರಡನೇ ಅವಸ್ಥೆ. ***ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ (ಕಠ-೨-೨-೮)*** ನಾವು ಮಲಗಿರುವಾಗ ಎಚ್ಚರದಿಂದಿದ್ದು, ನಮ್ಮ ಗಂಟಲಿನಲ್ಲಿರುವ ವಿಶುದ್ಧಿಚಕ್ರದ ಒಂದು ಸೂಜಿ ಮೊನೆಯಷ್ಟು ಸೂಕ್ಷ್ಮ ಪರದೆಯಲ್ಲಿ ನಮಗೆ ಕನಸಿನ ಪ್ರಪಂಚವನ್ನು ತೋರುವವನು ಉ-ಕಾರ ವಾಚ್ಯ ತೈಜಸ ನಾಮಕ ಭಗವಂತ. ಇದು ಭಗವಂತನ ಪ್ರದ್ಯುಮ್ನ ರೂಪ. ಒಳಗೆ ಬೆಳಕು(ದ್ಯುಮ್ನ) ಹಾಯಿಸಿ ಕನಸು ಕಾಣಿಸುವ ರೂಪವಿದು. ಕನಸು ಕಾಲದ ಬೇಲಿಯನ್ನು ಮೀರಿ ಕೆಲಸ ಮಾಡಬಲ್ಲುದು. ಅಂದರೆ ಮುಂದೆ ನಡೆಯುವ ವಿಷಯ ಇಂದು ಕನಸಿನಲ್ಲಿ ಬಂದರೆ ಆಶ್ಚರ್ಯವಿಲ್ಲ. ಕನಸಿನ ಅದ್ಭುತ ಪ್ರಪಂಚವನ್ನು ನಮ್ಮ ಮುಂದೆ ತೆರೆದಿಡುವ ಭಗವಂತನ ಲೀಲೆಯನ್ನು ಬೃಹದಾರಣ್ಯಕ ಉಪನಿಷತ್ತು ಸುಂದರವಾಗಿ ಚಿತ್ರಿಸುತ್ತದೆ. ಅಲ್ಲಿ ಹೇಳುತ್ತಾರೆ: ***"ನ ತತ್ರ ರಥಾಃ ನ ರಥಯೋಗಾ ನ ಪಂಥಾನೋ ಭವಂತಿ ಅಥ ರಥಾನ್ ರಥಯೋಗಾನ್ ಪಥಃ ಸೃಜತೇ; ನ ತತ್ರಾನಂದಾ ಮುದಃ ಪ್ರಮುದೋ ಭವಂತಿ, ಅಥಾನಂದಾನ್ ಮುದಃ ಪ್ರಮುದಃ ಸೃಜತೇ; ನ ತತ್ರ ವೇಶಾಂತಾಃ ಪುಷ್ಕರಿಣ್ಯಃ ಸ್ರವಂತ್ಯೋ ಭವಂತಿ, ಅಥ ವೇಶಾಂತಾನ್ ಪುಷ್ಕರಿಣೀಃ ಸ್ರವಂತೀಃ ಸೃಜತೇ; ಸ ಹಿ ಕರ್ತಾ" (೪-೩-೧೦).*** ಅಂದರೆ- ಅಲ್ಲಿ ರಥವಿಲ್ಲ-ಕುದುರೆಗಳಿಲ್ಲ-ರಸ್ತೆಗಳಿಲ್ಲ, ಆನಂದ-ಹರ್ಷ-ಪ್ರಮೋದಗಳಿಲ್ಲ, ಕೆರೆ-ಸರೋವರ-ನದಿಗಳಿಲ್ಲ. ಆದರೆ ಎಲ್ಲವನ್ನೂ ಸೃಷ್ಟಿಮಾಡಿ ನಮ್ಮ ಅನುಭವಕ್ಕೆ ಬರುವಂತೆ ಮಾಡುತ್ತಾನೆ ಕನಸಿನ ನಿಯಾಮಕನಾದ ತೈಜಸ ನಾಮಕ ಭಗವಂತ. ಇಂತಹ ಉ-ಕಾರ ವಾಚ್ಯ ಭಗವಂತನನ್ನು ಓಂಕಾರದಲ್ಲಿ ಧ್ಯಾನಿಸುವುದೇ ಉ-ಕಾರೋಪಾಸನೆ.

ಓಂಕಾರದಲ್ಲಿನ ಮೂರನೇ ಅಕ್ಷರ ಮ-ಕಾರ. ಇದು ಮಾನ(ಅಂತರ್ಗತ) ಎನ್ನುವುದರ ಸಂಕ್ಷೇಪಾಕ್ಷರ. ಮಾನ ಎಂದರೆ ಹುದುಗಿಕೊಳ್ಳುವುದು. ಹೃದಯದಲ್ಲಿರುವ ಜೀವವನ್ನು ಹೃದಯದಲ್ಲೇ ನೆಲೆಸಿರುವ ಮ-ಕಾರವಾಚ್ಯ ಭಗವಂತ ತನ್ನ ಮಡಿಲಿನಲ್ಲಿ ಹುದುಗಿಸಿಕೊಳ್ಳುವ ಸ್ಥಿತಿ- ನಮ್ಮ ನಿದ್ರಾಸ್ಥಿತಿ. ಈ ಸ್ಥಿತಿಯಲ್ಲಿ ನಮ್ಮ ಯಾವ ಬಾಹ್ಯೇಂದ್ರಿಯಗಳೂ ಕೆಲಸ ಮಾಡುವುದಿಲ್ಲ. ಜೀವನನ್ನು ತನ್ನೊಳಗೆ ಕರ್ಷಣೆಮಾಡಿ ನಿದ್ರೆ ಬರಿಸುವ ಸಂಕರ್ಷಣ ಈ ಸ್ಥಿತಿಯ ನಿಯಾಮಕ. ಹೇಗೆ ತಾಯಿಯ ಮಡಿಲಲ್ಲಿರುವ ಮಗು ಭಯಾತೀತವಾಗಿರುತ್ತದೋ ಹಾಗೇ, ಭಗವಂತನ ಮಡಿಲಲ್ಲಿ ನಿದ್ರಿಸುವ ಜೀವಕ್ಕೆ ಭಯ ಮತ್ತು ದುಃಖದ ಸ್ಪರ್ಶವಿಲ್ಲ. ನಿದ್ರೆಯಲ್ಲಿ ನಮಗೆ 'ನನ್ನದು' ಎನ್ನುವುದರ ಅರಿವಿಲ್ಲದಿರುವುದರಿಂದ ಭಯವಿಲ್ಲ. ನಾವು ಜೀವನದಲ್ಲಿ ದುಃಖಾತೀತರಾಗಬೇಕೆಂದರೆ ಎಚ್ಚರದಲ್ಲೂ ಕೂಡಾ ಈ 'ನನ್ನ' ಎನ್ನುವ ಕುಕ್ಕುಲತೆ(**Attachment**-ಮೋಹ-ವಾಂಛಲ್ಯ)ಯನ್ನು ಕಡಿಮೆ ಮಾಡಿಕೊಳ್ಳಬೇಕು. ಇದು ಭಾರತೀಯ ತತ್ತ್ವಶಾಸ್ತ್ರ ಹೇಳುವ ಅಪೂರ್ವ ಮನಃಶಾಸ್ತ್ರ. ನಿದ್ರೆಯ ನಿಯಾಮಕ, ಮ-ಕಾರವಾಚ್ಯ, ಪ್ರಾಜ್ಞ ನಾಮಕ ಭಗವಂತನನ್ನು ಓಂಕಾರದಲ್ಲಿ ಉಪಾಸನೆ ಮಾಡುವುದೇ ಮ-ಕಾರೋಪಾಸನೆ.

ಒಟ್ಟಿನಲ್ಲಿ ಹೇಳಬೇಕೆಂದರೆ: ಬ್ರಹ್ಮನನ್ನು ಹೇಳುವ ಅಕ್ಷರದಿಂದ (ಓಂಕಾರದಿಂದ) ಅಕ್ಷರನಾದ ಬ್ರಹ್ಮನನ್ನು ಧ್ಯಾನದಲ್ಲಿ ತಿಳಿಯಬೇಕು. ಮೂರು ಕಾಲದಲ್ಲಿ ಹಾಗೂ ಮೂರು ಲೋಕದಲ್ಲಿ ತುಂಬಿರುವ, ಮೂರು ಅವಸ್ಥೆಗಳನ್ನು ನಿಯಂತ್ರಿಸುವ, ಸೃಷ್ಟಿ-ಸ್ಥಿತಿ-ಸಂಹಾರಕರ್ತನಾದ, ಮೂರು ವೇದಗಳಿಂದ ಪ್ರತಿಪಾದ್ಯನಾದ ಭಗವಂತನನ್ನು

ಧ್ಯಾನದಲ್ಲಿ ಕಾಣುವ ಪ್ರಯತ್ನವನ್ನು ನಾವು ಮಾಡಬೇಕು. ಓಂಕಾರ ವಾಚ್ಯನಾದ ಭಗವಂತನ ಗುಣವನ್ನು ಓಂಕಾರದ ಒಂದೊಂದು ಅಕ್ಷರದಲ್ಲಿ ಹಾಗೂ ಸಮಷ್ಟಿಯಾಗಿ ಅನುಸಂಧಾನ ಮಾಡಬೇಕು.

ಓಂಕಾರಕ್ಕಿರುವುದು ಒಂದೇ ಮುಖವಲ್ಲ. ಅದಕ್ಕೆ ಅನೇಕ ಮುಖಗಳಿವೆ. ಮಾಂಡೂಕ್ಯ ಉಪನಿಷತ್ತಿನಲ್ಲಿ ಹೇಳುವಂತೆ: ***ಅಮಾತ್ರೋSನಂತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ । ಓಂಕಾರೋ ವಿದಿತೋ ಏನ ಸ ಮುನಿರ್ನೇತಾರೋ ಜನಃ ॥*** ಇಲ್ಲಿ ಹೇಳುವಂತೆ-ಓಂಕಾರ 'ಅನಂತಮಾತ್ರ'. ಮಾತ್ರೆಗಳು ಎಂದರೆ ರೂಪಗಳು. ಅನಂತ ರೂಪನಾದ ಭಗವಂತನ ಅನಂತ ರೂಪಗಳನ್ನೂ ಓಂಕಾರ ಹೇಳುತ್ತದೆ. ಹಾಗಾಗಿ ಓಂಕಾರದ ಅರ್ಥವೂ ಅನಂತ. ಓಂಕಾರದ ಒಂದು ಅಧಿಷ್ಠಾನದಲ್ಲಿ ಭಗವಂತನ ಅನಂತ ರೂಪಗಳ ಚಿಂತನೆ ಸಾಧ್ಯ. ಎಚ್ಚರ-ಕನಸು-ನಿದ್ರೆಯನ್ನು ನಿಯಂತ್ರಿಸುವ ಭಗವಂತನನ್ನು ನಾವು ಈ ಮೂರು ಅವಸ್ಥೆಗಳಿಂದಾಚೆಗೆ ಹೋಗಿ ಧ್ಯಾನ ಮಾಡಬೇಕು. ಓಂಕಾರದ ನಾದದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿ, ನಾದವಾಚ್ಯನಾದ ಭಗವಂತನಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು. ಎಚ್ಚರ-ಕನಸು-ನಿದ್ರೆಯಿಂದಾಚೆಗಿನ ನಾಲ್ಕನೇ ಸ್ಥಿತಿ 'ತುರಿಯಾವಸ್ಥೆ'. ಈ ಸ್ಥಿತಿಯಲ್ಲಿ ಕಾಣುವ ಭಗವಂತನ ಹೆಸರು 'ತುರಿಯ'(ನಾಲ್ಕನೇ ರೂಪ). ಇದು ವಾಸ್ತವವಾಗಿ ವಾಸುದೇವ ರೂಪ. ಮೋಕ್ಷಗಮ್ಯನಾದ ಭಗವಂತನ ಮೋಕ್ಷಪ್ರದ ರೂಪವಿದು. ಇದಲ್ಲದೆ ನಾದ ಪ್ರತಿಪಾದ್ಯವಾದ ಭಗವಂತನ ಇನ್ನೊಂದು ರೂಪ ವರಾಹರೂಪ.

ನಾದೋಪಾಸನೆ ಬಹಳ ಕ್ಲಿಷ್ಟವಾದ ಉಪಾಸನೆ. ಸಾಧನೆಯಲ್ಲಿ ಅಪರೋಕ್ಷ ಜ್ಞಾನಿಗಳಿಗೂ ಕೂಡಾ ಭಗವಂತನ ಸಾಕ್ಷಾತ್ಕಾರ ಪಡೆಯುವ ಸ್ಥಿತಿಯಲ್ಲಿ ವಾಸುದೇವ ರೂಪ ಸದಾ ಕಾಣಿಸುವುದಿಲ್ಲ. ಅವರು ಎಲ್ಲೋ ಆಗೊಮ್ಮೆ-ಈಗೊಮ್ಮೆ ಮಿಂಚಿನಂತೆ ಈ ರೂಪವನ್ನು ಕಾಣುತ್ತಾರೆ. ಇಂತಹ ದುರ್ಲಭವಾದ ವಾಸುದೇವ ರೂಪದ ಸಾಕ್ಷಾತ್ಕಾರಕ್ಕಾಗಿ ಯಾವ ಸಿದ್ಧತೆ ಬೇಕು ಎನ್ನುವುದನ್ನು ಶುಕಾಚಾರ್ಯರು ಮುಂದೆ ವಿವರಿಸುತ್ತಾರೆ.

## ಧ್ಯಾನದ ಸಿದ್ಧತೆ-ಮನಸ್ಸಿನ ಏಕಾಗ್ರತೆ

**ನಿಯಚ್ಛೇದ್ವಿಷಯೇಭ್ಯೋSಕ್ಷಾನ್ ಮನಸಾ ಬುದ್ಧಿಸಾರಥಿಃ ।**
**ಮನಃ ಕರ್ಮಭಿರಾಕ್ಷಿಪ್ತಂ ಶುಭಾರ್ಥೇ ಧಾರಯೇದ್ ಧಿಯಾ ॥೧೮॥**

ಮನಸ್ಸು ಏಕಾಗ್ರವಾಗಬೇಕಾದರೆ ಅದಕ್ಕೆ ಪೂರ್ವಸಿದ್ಧತೆ ಬೇಕು. ಅಪರಿಚಿತ ಕ್ಷೇತ್ರದಲ್ಲಿ ಮನಸ್ಸಿಗೆ ತರಬೇತಿ ಕೊಡದಿದ್ದರೆ ಅದು ಅದನ್ನು ಸ್ವೀಕರಿಸುವುದಿಲ್ಲ. ಧ್ಯಾನದ ರುಚಿ ಗೊತ್ತಿಲ್ಲದ ಮನಸ್ಸು ಧ್ಯಾನದಲ್ಲಿ ಕೇಂದ್ರೀಕೃತವಾಗಲಾರದು. ನಮ್ಮ ಮನಸ್ಸು ಸದಾ ವಿಷಯಗಳ(ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ) ಹಿಂದೆ ಸುತ್ತುತ್ತಿರುತ್ತದೆ. ಪ್ರತಿಯೊಂದು ಇಂದ್ರಿಯದ ಧರ್ಮವೂ ವಿಷಯಗಳನ್ನು ಗ್ರಹಿಸುವುದಾದರೂ ಕೂಡಾ, ವಿಷಯ ಗ್ರಹಣವೇ ಚಟವಾದಾಗ ಅದು ಅಧರ್ಮವಾಗುತ್ತದೆ. ಉದಾಹರಣೆಗೆ ನೋಡುವುದು ಕಣ್ಣಿನ ಧರ್ಮ, ಆದರೆ ನೋಡಬಾರದ್ದನ್ನು ನೋಡುವುದು ಅಧರ್ಮ. ಇಂದ್ರಿಯಗಳಿಗೆ ಕೇವಲ ವಿಷಯಗಳೇ ಬಹಳ ಪ್ರಿಯವಾದ ಸಂಗತಿಯಾದಾಗ, ಇವುಗಳನ್ನು ಬಿಟ್ಟು ಇವುಗಳಿಂದಾಚೆಗಿನ ಅಪರಿಚಿತ ಸಂಗತಿಯನ್ನು ಮನಸ್ಸು ಯೋಚಿಸುವುದಿಲ್ಲ. ಮೊದಲು ಮನಸ್ಸನ್ನು ಈ ವ್ಯಸನದಿಂದ ಆಚೆ ಕೊಂಡೊಯ್ಯಬೇಕು. ಹೀಗೆ ಮಾಡಬೇಕಾದರೆ ಮೊದಲು ನಾವು ಯಾವುದನ್ನು ಹಚ್ಚಿಕೊಂಡಿದ್ದೇವೋ ಅದು ನಾವು ತಿಳಿದುಕೊಂಡಷ್ಟು ಮಹತ್ವದ್ದಲ್ಲ, ಅದರಿಂದ ನನಗೆ ಉಪಯೋಗವಿಲ್ಲ, ಅದರಿಂದಾಚೆಗೆ ಅನೇಕ ಅಪೂರ್ವ ಸಂಗತಿಗಳಿವೆ ಎನ್ನುವ ಎಚ್ಚರ ನಮ್ಮಲ್ಲಿ ಬೆಳೆಯಬೇಕು. ಈ ಎಚ್ಚರದಿಂದ ನಾವು ನಮ್ಮ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು.

ಇಂದ್ರಿಯಗಳನ್ನು ಹಿಡಿತದಲ್ಲಿಟ್ಟು ಸಾಧನೆ ಮಾಡುವುದು ಅಷ್ಟು ಸುಲಭದ ಕೆಲಸವಲ್ಲ. ಕಠೋಪನಿಷತ್ತಿನಲ್ಲಿ ಯಮ ಹೇಳುವಂತೆ: *ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ ಕವಯೋ ವದಂತಿ ॥ಕಠ ೧-೩-೧೪॥* "ಭಗವಂತನ ಕಡೆಗೆ ಸಾಗುವ ಮಾರ್ಗ ಬಹಳ ದುರ್ಗಮ. ಅದು ಕತ್ತಿಯ ಅಲುಗಿನ ಮೇಲಿನ ನಡೆಯಂತೆ. ಇಂತಹ ಮಾರ್ಗದಲ್ಲಿನ ಕಷ್ಟಗಳನ್ನು ಸಹಿಸಿಕೊಂಡು ಮುನ್ನಡೆಯಬಲ್ಲವರು ಭಗವಂತನನ್ನು ಸೇರಬಲ್ಲರು". ಕಷ್ಟ ಪಡದೇ ಯಾವುದನ್ನೂ ಸಾಧಿಸಲು ಸಾಧ್ಯವಿಲ್ಲ.

ಇಂದ್ರಿಯ ನಿಗ್ರಹ ಸಾಧಿಸುವುದು ಕಠಿಣ. *ಇಂದ್ರಿಯ ನಿಗ್ರಹ ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ। ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥೨-೬೦॥* -- "ಸಾಧಕ ಸಾಕಷ್ಟು ತಿಳಿದುಕೊಂಡರೂ, ಸಾಕಷ್ಟು ಪ್ರಯತ್ನಿಸಿದರೂ ಕೂಡಾ, ಇಂದ್ರಿಯಗಳು ಬಲವಂತವಾಗಿ ಮನಸ್ಸನ್ನು ಕಲುಕಿ ಸೆಳೆದುಬಿಡುತ್ತವೆ" ಎಂದು ಶ್ರೀಕೃಷ್ಣ ಗೀತೆಯಲ್ಲೇ ಹೇಳಿದ್ದಾನೆ. ಇಂತಹ ಸಂಧರ್ಭದಲ್ಲಿ ನಮ್ಮ ಸಾಧನೆ ಹೇಗಿರಬೇಕು ಎನ್ನುವುದನ್ನು ಕಠೋಪನಿಷತ್ತಿನಲ್ಲಿ ಯಮ ನಚಿಕೇತನಿಗೆ ವಿವರಿಸುವುದನ್ನು ಕಾಣುತ್ತೇವೆ. ***ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ । ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥೧-೩-೩॥ ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ । ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥೧-೩-೪॥*** ಇಲ್ಲಿ ಹೇಳುವಂತೆ: " ಜೀವ ಭಗವಂತನ ಕಡೆಗೆ ಸಾಗುವ ಪಯಣಿಗ. ಸಾಧನಾ ಶರೀರವೇ ಅವನ ರಥ". ಇಲ್ಲಿ ಸಾಧನಾ ಶರೀರ ಎಂದರೆ ಮನುಷ್ಯ ಶರೀರ. ಮಾನವ ಜನ್ಮ ಬಾರದೇ, ಮರವೋ, ಪ್ರಾಣಿಯೋ ಆಗಿ ಹುಟ್ಟಿದರೆ ಆ ಶರೀರ ಭಗವಂತನೆಡೆಗೆ ಸಾಗುವ ರಥವಾಗುವುದಿಲ್ಲ. ಆ ಶರೀರದ ಮೂಲಕ ಜೀವಕ್ಕೆ ಸಾಧನೆ ಸಾಧ್ಯವಿಲ್ಲ. ಹಾಗಾಗಿ ಮನುಷ್ಯ ಜನ್ಮ ಬಹಳ ಶ್ರೇಷ್ಠ ಜನ್ಮ. ಈ ಅರಿವು ಇಲ್ಲದ ನಾವು ಇಂದು ನಮಗೆ ಭಗವಂತ ನೀಡಿದ ಶ್ರೇಷ್ಠ ಜನ್ಮವನ್ನು ಯಾವುದೋ ಲೌಕಿಕ ವಿನೋದದಲ್ಲಿ ಕಳೆಯುತ್ತಾ ವ್ಯರ್ಥ ಮಾಡಿಕೊಳ್ಳುತ್ತಿದ್ದೇವೆ. ಇದರಿಂದಾಗಿ ನಮಗೆ ಭಗವಂತ ನೀಡಿದ ರಥವನ್ನು ನಾವು ಸರಿಯಾದ ದಿಕ್ಕಿನಲ್ಲಿ ಬಳಸುತ್ತಿಲ್ಲ. ಬೇಜವಾಬ್ಧಾರಿಯುತವಾಗಿ ಸಾಗುವ ಮನುಷ್ಯನ ಜೀವನ ಪ್ರಾಣಿ ಜೀವನಕ್ಕಿಂತ ಕಡೆ. ನಾವು ಭಗವಂತ 'ನನ್ನೆಡೆಗೆ ಬಾ' ಎಂದು ಕಳುಹಿಸಿಕೊಟ್ಟ ಈ ಶರೀರವೆಂಬ ರಥದಲ್ಲಿ ಕುಳಿತು ಭಗವಂತನೆಡೆಗೆ ಸಾಗಬೇಕು. ಹೀಗೆ ಸಾಗುವಾಗ ನಮ್ಮ ರಥ ದಾರಿ ತಪ್ಪದೇ ಸೇರಬೇಕಾದ ಗುರಿಯನ್ನು ತಲುಪಲು ಕುದುರೆ-ಕಡಿವಾಣದ ಜೊತೆಗೆ ನಮಗೊಬ್ಬ ಉತ್ತಮ ಸಾರಥಿ ಬೇಕು. ನಮಗೆ ಆ ಸಾರಥಿಯನ್ನೂ ಕೂಡಾ ಭಗವಂತ ಕೊಟ್ಟಿದ್ದಾನೆ. ಯಾವುದು ಸರಿ, ಯಾವುದು ತಪ್ಪು ಎಂದು ನಿರ್ಣಯಿಸುವ ವಿವೇಕ ಪ್ರಜ್ಞೆ(ಬುದ್ಧಿ)ಯೇ ಆ ಸಾರಥಿ. ಬುದ್ಧಿ ಎಂಬ ಸಾರಥಿಯಿಂದ, ಮನಸ್ಸೆಂಬ ಕಡಿವಾಣವನ್ನು ಹಿಡಿದು, ಇಂದ್ರಿಯವೆಂಬ ಕುದುರೆಯನ್ನು ನಿಯಂತ್ರಿಸಿ, ಅಧ್ಯಾತ್ಮ ಸಾಮ್ರಾಜ್ಯದಲ್ಲಿ ನಾವು ಮುಂದೆ ಸಾಗಬೇಕು.

ಭಗವಂತನೆಡೆಗೆ 'ಜೀವ' ಸಾಗಲು ಭಗವಂತ ಕೊಟ್ಟ ರಥಕ್ಕೆ ಐದು ಕುದುರೆಗಳು. ಅವುಗಳೆಂದರೆ: ಎರಡು ಕಿವಿ, ಎರಡು ಕಣ್ಣು ಹಾಗೂ ಒಂದು ಬಾಯಿ. ಶಬ್ದ, ರೂಪ ಮತ್ತು ಮಾತು ಈ ಕುದುರೆಗಳು ಮೇಯುವ ಹುಲ್ಲುಗಾವಲು. ಹಾಗಾಗಿ ನಾವು ನಮ್ಮ ಕಣ್ಣನ್ನು ಭಗವಂತನ ಕ್ಷೇತ್ರವನ್ನು ನೋಡುವುದಕ್ಕೆ ಉಪಯೋಗಿಸಬೇಕು, ಕಿವಿಯನ್ನು ಭಗವಂತನ ಮಹಿಮೆಯನ್ನು ಕೇಳಿ ತಿಳಿದುಕೊಳ್ಳುವುದಕ್ಕಾಗಿ ಹಾಗೂ ಮಾತು ಭಗವಂತನ ಮಹಿಮೆಯನ್ನು ಇನ್ನೊಬ್ಬರಿಗೆ ಹೇಳುವುದಕ್ಕಾಗಿ ಉಪಯೋಗಿಸಬೇಕು. ಭಗವಂತ ನಮಗೆ ನೀಡಿರುವ ಬುದ್ಧಿಶಕ್ತಿಯನ್ನು ಉಪಯೋಗಿಸಿಕೊಂಡು ಯಾವುದು ಸರಿ, ಯಾವುದು ತಪ್ಪು ಎನ್ನುವ ವಿಶ್ಲೇಷಣೆ ಮಾಡಬೇಕು. ಬುದ್ಧಿಶಕ್ತಿಯನ್ನು ಉಪಯೋಗಿಸಿ ನಾವು ನಮ್ಮನ್ನು ನಿಯಂತ್ರಿಸಿಕೊಳ್ಳದೇ ಸಮಯವನ್ನು ವ್ಯರ್ಥ ಮಾಡಿದರೆ, ಇಂದು ಕಳೆದುಕೊಂಡ ಕ್ಷಣ ಇನ್ನೆಂದೂ ಮರಳಿ ಬರಲಾರದು. ಬದುಕಿನ ಪ್ರತಿಯೊಂದು ಕ್ಷಣವನ್ನೂ ಸದುಪಯೋಗ ಮಾಡಿಕೊಳ್ಳಬೇಕು ಎನ್ನುವ ಎಚ್ಚರ ಬೆಳೆದಾಗ,

ಸರಿದಾರಿಯಲ್ಲೇ ನಡೆಯಬೇಕು ಎನ್ನುವ ಹಠ ಬರುತ್ತದೆ. ಈ ಸ್ಥಿತಿಯಲ್ಲಿ ಮನಸ್ಸನ್ನು ನಿಯಂತ್ರಿಸುವುದು ಸುಲಭವಾಗುತ್ತದೆ.

ಈ ಹಿಂದೆ ಹೇಳಿದಂತೆ-ಮನಸ್ಸನ್ನು ಬುದ್ಧಿಶಕ್ತಿಯಿಂದ ನಿಯಂತ್ರಣ ಮಾಡುವುದು ಅಷ್ಟು ಸುಲಭದ ವಿಷಯವಲ್ಲ. ಅನೇಕ ಮಂದಿಗೆ ಭೌದ್ಧಿಕ ಚಿಂತನೆಯೇ ಸಾಧ್ಯವಾಗುವುದಿಲ್ಲ. ಭೌದ್ಧಿಕ ಚಿಂತನೆ ಮಾಡಿದರೂ ಸಹ, ಅಲ್ಲಿ ಕಂಡ ಸತ್ಯವನ್ನು ಆಚರಣೆಗೆ ತರುವುದು ಕಷ್ಟವಾಗುತ್ತದೆ. ಇಂದ್ರಿಯ ಸೆಳೆತ ಅದೆಷ್ಟು ಬಲವಾಗಿದೆ ಎಂದರೆ, ಕೆಲವೊಮ್ಮೆ ಅದಕ್ಕೆ ಕಡಿವಾಣ ಹಾಕಿ ನಿಯಂತ್ರಿಸುವುದು ಸಾಧ್ಯವಾಗುವುದಿಲ್ಲ. ಇದಕ್ಕಾಗಿಯೇ ಸಮಾಜದಲ್ಲಿ ಶಾಸನಗಳನ್ನು ತರಲಾಯಿತು. ಇಂದು ನಾವು ಹೆಚ್ಚು ಪಾಪಗಳನ್ನು ಮಾಡದೇ ಇರುವುದು ಕಾನೂನಿನ ಭಯದಿಂದ ಹೊರತು, ಭೌದ್ಧಿಕ ಚಿಂತನೆಯಿಂದಲ್ಲ. ಆದರೆ ನಿಜವಾಗಿ ಇರಬೇಕಾಗಿರುವುದು ವಿವೇಕ, ಭಯವಲ್ಲ. ಏಕೆಂದರೆ ಭಯದಿಂದ ಮಾಡುವುದು ಶಾಶ್ವತವಲ್ಲ. ವಿವೇಕದ ಸಾರಥ್ಯ ಸಿಗುವ ತನಕ ಮನಸ್ಸೆಂಬ ಕಡಿವಾಣವನ್ನು ಗಟ್ಟಿಯಾಗಿ ಹಿಡಿದು, ಇಂದ್ರಿಯವೆಂಬ ಕುದುರೆಗಳನ್ನು ನಿಯಂತ್ರಿಸುವುದು ಕಷ್ಟ. ಆದ್ದರಿಂದ ಸಾಧನಾ ಮಾರ್ಗದಲ್ಲಿ ನಮಗಿರುವುದು ಒಂದೇ ಒಂದು ದಾರಿ. ನಾವು ಜೀವನದ ಸತ್ಯದ ಬಗ್ಗೆ ಗಂಭೀರ ಚಿಂತನೆ ಮಾಡಬೇಕು. ಯಾವುದು ಸರಿ, ಯಾವುದು ತಪ್ಪು ಎನ್ನುವುದನ್ನು ಚಿಂತಿಸಿ, "ಸರಿಯಾದುದ್ದನ್ನೇ ಮಾಡಬೇಕು" ಎನ್ನುವ ನಿರ್ಧಾರ ಮಾಡಬೇಕು. ಅದೇ ವಿವೇಕ. ಈ ವಿವೇಕದ ಕೈಯಲ್ಲಿ ನಾವು ನಮ್ಮ ಬದುಕಿನ ಸಾರಥ್ಯವನ್ನು ಕೊಟ್ಟಾಗ, ಇಂದ್ರಿಯಗಳು ದಾರಿ ತಪ್ಪುವುದು ಕಡಿಮೆಯಾಗುತ್ತದೆ. ಇದನ್ನೇ ಇಲ್ಲಿ ಶುಕಾಚಾರ್ಯರು 'ಬುದ್ಧಿಸಾರಥಿ' ಎಂದಿದ್ದಾರೆ. ಈ ರೀತಿ ಮನಸ್ಸಿನ ನಿಯಂತ್ರಣ ಸಾಧಿಸಲು ನಮಗೆ ಅನೇಕ ಜನ್ಮಗಳೇ ಬೇಕಾಗಬಹುದು. ಆದರೆ ಈ ದಿಕ್ಕಿನಲ್ಲಿ ಮಾಡುವ ಸಾಧನೆ ವ್ಯರ್ಥವಲ್ಲ. ಅದು ಜನ್ಮ-ಜನ್ಮಾಂತರವಾಗಿ ಮುಂದುವರಿಯುವ ಸಾಧನೆ.

ಶುಕಾಚಾರ್ಯರು ಹೇಳುತ್ತಾರೆ: "ಸಂಕಲ್ಪ ಮತ್ತು ವಿಕಲ್ಪ ಎನ್ನುವುದು ಮನಸ್ಸಿನ ಕರ್ಮಗಳು" ಎಂದು. ಮನುಷ್ಯನ ಬದುಕೆಲ್ಲಾ ಆಸೆಗಳ ಸರಮಾಲೆ(ಸಂಕಲ್ಪ-Desire). ಏನೇನನ್ನೋ ಬಯಸುವುದು, ನಂತರ ಯಾವುದು ಬೇಕು, ಯಾವುದು ಬೇಡ ಎಂದು ತಿಳಿಯದೆ ಗೊಂದಲಕ್ಕೊಳಗಾಗುವುದು(ವಿಕಲ್ಪ-Confusion). ಖಚಿತವಾದ ತಿಳುವಳಿಕೆ ಇಲ್ಲದೇ ಇರುವುದರಿಂದ ಎಲ್ಲವೂ ಗೊಂದಲ. ನಮ್ಮ ಇಂದಿನ ಅನುಷ್ಠಾನಗಳೂ ಕೂಡಾ ಹೀಗೆ. ಅವು ಬುದ್ಧಿಯಿಂದ ಬಂದವುಗಳಲ್ಲ. ಅವು ಕೇವಲ ಮನಸ್ಸಿನ ಗೊಂದಲಗಳು. ಕೆಲವು ಕಡೆ ಕೆಲವು ಆಚರಣೆಗಳಿರುತ್ತವೆ. ಅವುಗಳಿಗೆ ಶಾಸ್ತ್ರದ ಆಧಾರ ಇರುವುದಿಲ್ಲ. ಆದರೆ ಒಬ್ಬರು ಮಾಡುವುದನ್ನು ನೋಡಿ ಇನ್ನೊಬ್ಬರು ಮಾಡುತ್ತಾರೆ. ಮಾಡದಿದ್ದರೆ ಏನಾಗುತ್ತದೋ ಎನ್ನುವ ಭಯದಿಂದ ಮತ್ತೊಬ್ಬರು ಅದನ್ನು ಅನುಸರಿಸುತ್ತಾರೆ! ಈ ರೀತಿ ನಾವು ಮಾಡುವ ಧಾರ್ಮಿಕ ಕ್ರಿಯೆಗಳೂ ಕೂಡಾ ಬರೀ ಗೊಂದಲದ ಗೂಡಾಗುತ್ತಿದೆ. ಅಲ್ಲಿ ಖಚಿತವಾದ ತೀರ್ಮಾನವಿರುವುದಿಲ್ಲ. ಇದರಿಂದಾಗಿ ಯಾವುದು ನಿಜವಾದ ಧರ್ಮ ಎನ್ನುವ ತಿಳುವಳಿಕೆ ಇಲ್ಲದೆ, ಸ್ವಚ್ಛವಾದ ಅನುಷ್ಠಾನವಿಲ್ಲದೆ, ಧರ್ಮಪ್ರಜ್ಞೆಯೇ ಇಲ್ಲದೆ ಗೊಂದಲದಲ್ಲಿ ನಾವು ಬದುಕುತ್ತಿರುತ್ತೇವೆ. ಇನ್ನು ಕೆಲವೊಮ್ಮೆ ಯಾವುದು ಸರಿ, ಯಾವುದು ತಪ್ಪು ಎನ್ನುವುದು ತಿಳಿದಿದ್ದರೂ ಕೂಡಾ, ನಮ್ಮ ಮನಸ್ಸು ನಮ್ಮನ್ನು ಬೇಡವಾದ ಕಡೆಗೇ ಎಳೆದೊಯ್ಯುತ್ತದೆ. ಇದಕ್ಕೆ ಕಾರಣ ನಾವು ನಮ್ಮ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳು. ಆ ಕರ್ಮಫಲಕ್ಕನುಗುಣವಾಗಿ ನಾವು ದಾರಿ ತಪ್ಪುತ್ತೇವೆ.

ಶುಕಾಚಾರ್ಯರು ಹೇಳುತ್ತಾರೆ: "ಅಶುಭದ ಕಡೆಗೆ ಹೋಗುವ ಮನಸ್ಸನ್ನು ಶುಭದತ್ತ ತಿರುಗಿಸು" ಎಂದು. ಎಲ್ಲವುದಕ್ಕಿಂತ ಪವಿತ್ರವಾದುದು, ಎಲ್ಲವುದಕ್ಕಿಂತ ಮಂಗಳಕರವಾದುದು ಎಂದರೆ ಭಗವಂತ. ಅದೇ ಶುಭ. ನಾವು ನಮ್ಮ ಮನಸ್ಸಿನಲ್ಲಿ ತುಂಬಿರುವ ಕೊಳೆಯನ್ನು ತೊಳೆದು, ಅಲ್ಲಿ ಶುಭ್ರವಾದ ಭಗವಂತನನ್ನು ತುಂಬಿಸುವ ಪ್ರಯತ್ನ

ಮಾಡಬೇಕು. ಒಳಗಿರುವ ಕೊಳೆಯನ್ನು ತೊಳೆಯದೇ ಒಳ್ಳೆಯದನ್ನು ತುಂಬಿಸುವ ಪ್ರಯತ್ನ-ಕೆಸರಿನ ಪಾತ್ರೆಗೆ ಹಾಲನ್ನು ತುಂಬಿಸಿದಂತೆ ವ್ಯರ್ಥವಾಗುತ್ತದೆ. ಹಾಗಾಗಿ ಮೊದಲು ವಿವೇಕದಿಂದ ಮನಸ್ಸನ್ನು ಸ್ವಚ್ಛಗೊಳಿಸಿ, ಸ್ವಚ್ಛವಾದ ಮನಸ್ಸಿನಿಂದ ಮಾಂಗಲಿಕವಾದ ಭಗವಂತನ ಚಿಂತನೆ ಮಾಡಬೇಕು.

## ಧ್ಯಾನದಲ್ಲಿ ಭಗವಂತನ ರೂಪಚಿಂತನೆ

ತತ್ರೈಕಾವಯವಂ ಧ್ಯಾಯೇದವ್ಯುಚ್ಛಿನ್ನೇನ ಚೇತಸಾ ।
ಮನೋ ನಿರ್ವಿಷಯಂ ಯುಕ್ತ್ವಾ ತತಃ ಕಿಂಚಿನ್ನ ಸಂಸ್ಮರೇತ್ ।
ಪದಂ ತತ್ಪರಮಂ ವಿಷ್ಣೋರ್ಮನೋ ಯತ್ರ ಪ್ರಸೀದತಿ ॥೧೯॥

ಈ ಹಿಂದೆ "ಮನಃಶುದ್ಧಿಯಿಂದ ಭಗವಂತನನ್ನು ಧ್ಯಾನ ಮಾಡಬೇಕು" ಎಂದು ಹೇಳಿದ ಶುಕಾಚಾರ್ಯರು, ಇಲ್ಲಿ ಧ್ಯಾನದಲ್ಲಿ ಭಗವಂತನನ್ನು ಹೇಗೆ ಕಾಣಬೇಕು ಎನ್ನುವುದನ್ನು ವಿವರಿಸಿದ್ದಾರೆ. ನಮ್ಮಂತೆ ಭಗವಂತನಿಗೂ ಕರ-ಚರಣಗಳಿರುವ ರೂಪವಿದೆ ಎಂದು ಅವನನ್ನು ನಾವು ಪಾದದಿಂದ ಕೇಶದ ತನಕ ಮನಸ್ಸಿನ ಕಣ್ಣಿನಲ್ಲಿ ಕಾಣಬೇಕು. ಆದರೆ ಧ್ಯಾನದಲ್ಲಿ ಆತನ ಪೂರ್ಣ ಶರೀರವನ್ನು ಸೆರೆ ಹಿಡಿದು ಏಕಾಗ್ರ ಸಾಧಿಸುವುದು ಕಷ್ಟ. ಅದಕ್ಕಾಗಿ ಶುಕಾಚಾರ್ಯರು ಹೇಳುತ್ತಾರೆ: "ಭಗವಂತನ ಯಾವುದಾದರೂ ಒಂದು ಅವಯವವನ್ನು ಮನಸ್ಸಿನಲ್ಲಿ ಏಕಾಗ್ರ ಮಾಡು" ಎಂದು. ಭಗವಂತನ ಮುಂಗುರುಳು, ಕೊಳಲನ್ನೂದುವ ಆತನ ಕಿರಿಬೆರಳು, ಮಂದಹಾಸ ಬೀರುವ ಆತನ ತುಟಿ, ಕರುಣಾರಸವನ್ನು ಬೀರುವ ಆತನ ಕಣ್ಣು, ಹೊಂಬೆಳಕನ್ನು ಸೂಸುವ ಆತನ ಉಗುರು, ಹೀಗೆ ನಮಗೆ ಯಾವುದು ಇಷ್ಟವೋ ಆ ಅವಯವವನ್ನು ಮನಸ್ಸಿನಲ್ಲಿ ನೆಲೆಗೊಳಿಸಲು ಪ್ರಯತ್ನಪಡಬೇಕು. ಉದಾಹರಣೆಗೆ: ಭಗವಂತ ತನ್ನ ಅರಳುಗಣ್ಣಿನಿಂದ ನನ್ನನ್ನು ನೋಡುತ್ತಿದ್ದಾನೆ, ಅವನ ಕಾರುಣ್ಯದ ರಸ ನನ್ನ ಮೇಲೆ ಹರಿಯುತ್ತಿದೆ, ಆ ರಸಪೂರದಲ್ಲಿ ನಾನು ಆನಂದವಾಗಿ ಓಲಾಡುತ್ತಿದ್ದೇನೆ ಎಂದು ಯೋಚಿಸುತ್ತಾ, ಭಗವಂತನ ಕಣ್ಣಿನ ಬೆಳಕಲ್ಲಿ ಮನಸ್ಸನ್ನು ನೆಲೆಗೊಳಿಸಿ ಧ್ಯಾನ ಮಾಡಬಹುದು.

ಮೊದಲು ನಾವು ಭಗವಂತನ ಏಕ ಅವಯವವನ್ನು ಮನಸ್ಸಿನಲ್ಲಿ ಧಾರಣೆ ಮಾಡಬೇಕು. ಕೆಲವೊಮ್ಮೆ ಮನಸ್ಸಿನ ಕಣ್ಣಿಗೆ ರೂಪ ಕಾಣುತ್ತದೆ, ಆದರೆ ಸ್ವಲ್ಪ ಹೊತ್ತಿನಲ್ಲಿ ಅದು ಕಣ್ಮರೆಯಾಗುತ್ತದೆ. ಹೀಗಾದಾಗ ಆ ರೂಪವನ್ನು ಕಾಣಲು ಮರಳಿ ಪ್ರಯತ್ನಿಸುವುದೇ ಧಾರಣೆ. ಎಷ್ಟು ಸಲ ರೂಪ ಕಣ್ಮರೆಯಾಗುತ್ತದೋ ಅಷ್ಟು ಸಲ ಕಣ್ಮುಚ್ಚಿ ಏಕಾಗ್ರತೆಯನ್ನು ಸಾಧಿಸಿ ಆ ರೂಪವನ್ನು ಮರಳಿ ಕಾಣಬೇಕು. ಹೀಗೆ ಮಾಡುತ್ತಾ-ಮಾಡುತ್ತಾ ಕೊನೆಗೆ ಆ ರೂಪ ಮನಸ್ಸಿನಲ್ಲಿ ಸ್ಥಿರಗೊಳ್ಳುತ್ತದೆ. ಇದೇ ಧ್ಯಾನ ಸ್ಥಿತಿ.

ಧ್ಯಾನ ಮಾಡಬೇಕೆಂದು ಬಯಸುವುದು ಮನಸ್ಸು, ಆದರೆ ಆ ನಂತರ ಅದೇ ಮನಸ್ಸು ಧ್ಯಾನ ಮಾಡಬೇಕೋ ಬೇಡವೋ ಎನ್ನುವ ಗೊಂದಲಕ್ಕೊಳಗಾಗುತ್ತದೆ. ಹೀಗಾದಾಗ ಬುದ್ಧಿ ಕೆಲಸ ಮಾಡುತ್ತದೆ. ಧ್ಯಾನ ಮಾಡಲೇಬೇಕು ಎಂದು ಅದು ತೀರ್ಮಾನ ತೆಗೆದುಕೊಳ್ಳುತ್ತದೆ. ಈ ರೀತಿ ತೀರ್ಮಾನವಾದ ಮೇಲೆ ಚಿತ್ತ ಧ್ಯಾನದಲ್ಲಿ ತೊಡಗುತ್ತದೆ. ಹೀಗೆ ಧ್ಯಾನದಲ್ಲಿ ತೊಡಗಿದಾಗ ಕೆಲವೊಮ್ಮೆ ಅದು ನಮಗರಿವಿಲ್ಲದೇ ವಿಚ್ಛೇದಗೊಳ್ಳುತ್ತದೆ. ಅದಕ್ಕಾಗಿ ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಎಂದೂ ಚಿತ್ತ ವಿಚ್ಛೇದಗೊಳ್ಳದಂತೆ ಅದನ್ನು ಪರಿಣತಿಗೊಳಿಸಬೇಕು" ಎಂದು. ಹೀಗೆ

ಮನಸ್ಸು ನಿರ್ವಿಷಯವಾಗಿ ಸ್ವಚ್ಛವಾದಾಗ ಅದರಲ್ಲಿ ಭಗವಂತನನ್ನು ತುಂಬಿಸಿ, ಭಗವಂತನನ್ನಲ್ಲದೆ ಇನ್ನ್ಯಾವುದರ ಬಗ್ಗೆಯೂ ಯೋಚನೆ ಮಾಡದೆ ಏಕಾಗ್ರವಾಗಿ ಭಗವಂತನಲ್ಲಿ ನೆಲೆನಿಲ್ಲಬೇಕು.

ಕೆಲವರಿಗೆ ಮೇಲೆ ವಿವರಿಸಿದ ಧ್ಯಾನ ಪ್ರಕ್ರಿಯೆಯಲ್ಲಿ ಒಂದು ಸಂಶಯ ಬರುತ್ತದೆ. ಅದೇನೆಂದರೆ: "ಸರ್ವಗತನಾದ ಭಗವಂತನನ್ನು ಒಂದು ಚಿಕ್ಕ ರೂಪದಲ್ಲಿ ಧ್ಯಾನಿಸುವುದು ಸರಿಯೇ" ಎಂದು. ಅದಕ್ಕಾಗಿ ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಈ ರೀತಿ ಧ್ಯಾನದಲ್ಲಿ ನೀನು ಕಾಣುವುದು ವಿಷ್ಣುವಿನ ಸ್ವರೂಪವನ್ನು" ಎಂದು. ಇಲ್ಲಿ ಬಳಸಿರುವ 'ವಿಷ್ಣು' ಎನ್ನುವ ಪದ ನಮ್ಮ ಮೇಲಿನ ಸಂಶಯವನ್ನು ಪರಿಹರಿಸುತ್ತದೆ. ಏಕೆಂದರೆ ವಿಷ್ಣು ಎಂದರೆ 'ವೇವೇಷ್ಟತಿ ವಿಷ್ಣುಃ'. ಅಂದರೆ ಯಾರು ಸರ್ವಗತನೋ ಆತ ವಿಷ್ಣು. ವಿಷತೀತಿ ವಿಷ್ಣುಃ. ಅಂದರೆ ದೊಡ್ಡದಕ್ಕಿಂತ ದೊಡ್ಡವನಾಗಿ ಎಲ್ಲೆಡೆ ತುಂಬಿರುವ ಭಗವಂತ ಸಣ್ಣದಕ್ಕಿಂತ ಸಣ್ಣವನಾಗಿ ನಮ್ಮೊಳಗೂ ತುಂಬಿದ್ದಾನೆ ಎಂದರ್ಥ. ಭಗವಂತ ಸಾಕಾರನೂ ಹೌದು, ನಿರಾಕಾರನೂ ಹೌದು. ಸರ್ವಸಮರ್ಥನಾದ ಭಗವಂತ ತನ್ನ ಭಕ್ತನಿಗೆ ಯಾವ ರೂಪದಲ್ಲಿ ಬೇಕಾದರೂ ದರ್ಶನ ಕೊಡಬಲ್ಲ. ಹೀಗಾಗಿ ಸರ್ವಗತನಾದ ಭಗವಂತನ ಆಕಾರವನ್ನು ನಾವು ಧ್ಯಾನ ಮಾಡಬಹುದು ಎನ್ನುವ ಸೂಚನೆಯನ್ನು ಇಲ್ಲಿ ಶುಕಾಚಾರ್ಯರು 'ವಿಷ್ಣು' ಎನ್ನುವ ಪದದ ಮೂಲಕ ನೀಡಿದ್ದಾರೆ.
ಧ್ಯಾನದಲ್ಲಿ ಭಗವಂತನನ್ನು ಕಂಡಾಗ ಮನಸ್ಸು ಹುಚ್ಚೆದ್ದು ಕುಣಿಯುತ್ತದೆ. ಆ ನಂತರ ಅದು ಆ ಸ್ಥಿತಿಯಿಂದೀಚೆಗೆ ಬರಲು ಒಪ್ಪುವುದಿಲ್ಲ. ಈ ಸ್ಥಿತಿಯನ್ನು ಕೆಲವರು ಪೂರ್ವಜನ್ಮದ ಸಾಧನೆಯ ಫಲದಿಂದಾಗಿ ತಕ್ಷಣ ಗಳಿಸಬಲ್ಲವರಾದರೆ, ಇನ್ನು ಕೆಲವರು ಅದಕ್ಕಾಗಿ ನಿರಂತರ ಸಾಧನೆ ಮಾಡಬೇಕಾಗುತ್ತದೆ.

ಯಸ್ಯಾಂ ಸಂಧಾರ್ಯಮಾಣಾಯಾಂ ಯೋಗಿನೋ ಭಕ್ತಿಲಕ್ಷಣಃ ।
ಆಶು ಸಂಪದ್ಯತೇ ಯೋಗ ಆಶ್ರಯಂ ಭದ್ರಮೀಕ್ಷತಃ ॥೨೧॥

ಸಾಮಾನ್ಯವಾಗಿ ನಮ್ಮಲ್ಲಿರುವುದು 'ಕೇಳಿ ಬಂದ ಭಕ್ತಿ'. ಅಂದರೆ ಭಗವಂತನಲ್ಲಿ ಭಕ್ತಿ ಮಾಡಬೇಕು ಎಂದು ಹಿರಿಯರು ಹೇಳಿದ್ದನ್ನು ಕೇಳಿ ನಾವು ಭಕ್ತಿ ಮಾಡುವುದು. ಆದರೆ ನಿಜವಾದ ಭಕ್ತಿ ಮೂಡುವುದು ಧ್ಯಾನ ಸ್ಥಿತಿಯಲ್ಲಿ ಭಗವಂತನ ಸ್ವರೂಪವೆಂಬ ಮಹಾ ಸಂಪತ್ತನ್ನು ಕಂಡಾಗ. ಜಗತ್ತಿನಲ್ಲಿ ನಾವು ಪ್ರೀತಿಸಿದ ಎಲ್ಲಾ ವಸ್ತುಗಳಿಗಿಂತ ಅದ್ಭುತವಾದ ವಸ್ತು ನಮಗೆ ಸಿಕ್ಕಿದಾಗ ನಮ್ಮೆಲ್ಲಾ ಪ್ರೀತಿ ಅದಕ್ಕೆ ಮೀಸಲಾಗುತ್ತದೆ. ಅದಕ್ಕಿಂತ ಬೇರೆ ಯಾವುದೂ ಬೇಡ ಎನಿಸುತ್ತದೆ. ಈ ರೀತಿ ಹುಟ್ಟುವ ಪ್ರೀತಿ ಮಹಾತ್ಮ್ಯಪೂರಕವಾದ ಪ್ರೀತಿ. ಈ ಸ್ಥಿತಿಯಲ್ಲಿ ಇನ್ನೊಬ್ಬರು ನಮಗೆ 'ಭಕ್ತಿ ಮಾಡು' ಎಂದು ಹೇಳಬೇಕಾಗಿಲ್ಲ, ಭಕ್ತಿ ತನ್ನಷ್ಟಕ್ಕೆ ತಾನು ಬಂದುಬಿಡುತ್ತದೆ. ಹೀಗಾಗಲು ಕಾರಣ ಏನೆಂದರೆ: ನಮಗೆ ಬದುಕಿನಲ್ಲಿ ಇರುವ ಮೂಲಭೂತವಾದ ಚಿಂತೆ ಎಂದರೆ 'ನೆಲೆ ಕಾಣುವುದು ಹೇಗೆ' ಎನ್ನುವುದು. ಈ ಅಭದ್ರತೆ ಪ್ರತಿಯೊಬ್ಬರನ್ನೂ ಕಾಡುತ್ತಿರುತ್ತದೆ. ಹೀಗಿರುವಾಗ ಅಂತರಂಗದಲ್ಲಿ ಭಗವಂತನನ್ನು ಕಂಡಾಗ 'ನಾವು ಭಗವಂತನ ರಕ್ಷಣೆಯಲ್ಲಿದ್ದೇವೆ' ಎನ್ನುವ ಸತ್ಯ ತಿಳಿದುಬಿಡುತ್ತದೆ. ಈ ಸತ್ಯ ತಿಳಿದ ಪ್ರತಿಯೊಬ್ಬನೂ ಭಯಾತೀತನಾಗುತ್ತಾನೆ. ಪರಮಮಾಂಗಲಿಕವಾದ ಸುಭದ್ರ ನೆಲೆ ಸಿಗುವುದು ಭಗವಂತನಿಂದ. ಧ್ಯಾನದ ಮೂಲಕ ಬಾಹ್ಯ ಸಂಪತ್ತಿನ ಸೀಮೆ ಹಾಗೂ ಭಗವಂತನ ಅನಂತ ರಕ್ಷಣೆಯ ಸತ್ಯವನ್ನು ಅನುಭವಿಸಿದಾಗ ಮನಸ್ಸು ನಿಶ್ಚಲವಾಗಿ ಆನಂದವನ್ನು ಅನುಭವಿಸುತ್ತದೆ.

**ರಾಜೋವಾಚ--**

**ಯಥಾ ಸಂಧಾರ್ಯತೇ ಬ್ರಹ್ಮನ್ ಧಾರಣಾ ಯತ್ರ ಸಮ್ಮತಾ ।**
**ಯಾದೃಶೀ ವಾ ಹರೇದಾಶು ಪುರುಷಸ್ಯ ಮನೋಮಲಮ್ ॥೨೨॥**

ಶುಕಾಚಾರ್ಯರು ಒಂದು ಘಟ್ಟದಲ್ಲಿ ಧ್ಯಾನದ ಕುರಿತು ಹೇಳಿ ಮುಗಿಸಿದಾಗ ಪರೀಕ್ಷಿತ "ನನಗೆ ಧ್ಯಾನದ ಕುರಿತು ಇನ್ನೂ ವಿವರವಾಗಿ ಹೇಳಿ" ಎಂದು ಕೇಳಿಕೊಳ್ಳುತ್ತಾನೆ. ಇದು ನಮ್ಮ ನಿಮ್ಮೆಲ್ಲರ ಪರ ಪರೀಕ್ಷಿತ ಹಾಕಿದ ಪ್ರಶ್ನೆ. ಆತ ಇಲ್ಲಿ ಶುಕಾಚಾರ್ಯರಲ್ಲಿ ಮೂರು ಪ್ರಶ್ನೆಗಳನ್ನು ಕೇಳುತ್ತಾನೆ. ಮನಸ್ಸನ್ನು ಎಲ್ಲಿ ಧಾರಣೆ ಮಾಡಬೇಕು? ಹೇಗೆ ಧಾರಣೆ ಮಾಡಬೇಕು ಮತ್ತು ಮನಸ್ಸನ್ನು ಸ್ವಚ್ಛಗೊಳಿಸುವುದು ಹೇಗೆ? ಇವೇ ಆ ಮೂರು ಪ್ರಶ್ನೆಗಳು. ನಮ್ಮಲ್ಲಿ ಇಂದು ಹೆಚ್ಚಿನವರು ಬಾಹ್ಯ ಮಡಿ ಕುರಿತು ಅನೇಕ ರೀತಿ ಹೇಳುತ್ತಾರೆ. ಆದರೆ ಮನಸ್ಸಿನ ಕೊಳೆಯನ್ನು ತೊಳೆದು ಮಡಿಯಾಗುವುದು ಹೇಗೆ ಎನ್ನುವುದು ನಮಗೆ ತಿಳಿದಿಲ್ಲ. ಇದೇ ಪ್ರಶ್ನೆಯನ್ನು ಇಲ್ಲಿ ಪರೀಕ್ಷಿತ ಶುಕಾಚಾರ್ಯರಲ್ಲಿ ಕೇಳುತ್ತಿದ್ದಾನೆ.

## ಆಸನ, ಉಸಿರಿನ ನಿಯಂತ್ರಣ, ಸಂಗತ್ಯಾಗ ಮತ್ತು ಇಂದ್ರಿಯ ನಿಗ್ರಹ

**ಶ್ರೀಶುಕ ಉವಾಚ--**

**ಜಿತಾಸನೋ ಜಿತಶ್ವಾಸೋ ಜಿತಸಂಗೋ ಜಿತೇಂದ್ರಿಯಃ ।**
**ಸ್ಥೂಲೇ ಭಗವತೋ ರೂಪೇ ಮನಃ ಸಂಧಾರಯೇದ್ ಧಿಯಾ ॥೨೩॥**

ಧ್ಯಾನಕ್ಕೆ ಪೂರ್ವ ಸಿದ್ಧತೆ ಅಗತ್ಯ. ಕೇವಲ ಕಣ್ಮುಚ್ಚಿ ಕುಳಿತಾಗ ಮನಸ್ಸು ಏಕಾಗ್ರವಾಗುವುದಿಲ್ಲ. ಈ ಹಿಂದೆ ಹೇಳಿದಂತೆ ಧ್ಯಾನ ನಡೆಯುವುದು ಚಿತ್ತದಲ್ಲಿ. ಚಿತ್ತ ಸ್ಥಿರವಾಗಬೇಕಾದರೆ ಮನಸ್ಸು ಸ್ಥಿರವಾಗಬೇಕು. ಮನಸ್ಸು ಸ್ಥಿರವಾಗಬೇಕಾದರೆ ಪ್ರಾಣಮಯಕೋಶ ಸ್ಥಿರವಾಗಬೇಕು. ಅದಕ್ಕಾಗಿ ಉಸಿರಾಟದ ಸ್ಥಿರತೆ ಸಾಧಿಸಬೇಕು. ಪ್ರಾಣಮಯಕೋಶ ಸ್ಥಿರವಾಗುವ ಮೊದಲು ಅನ್ನಮಯಕೋಶ ಸ್ಥಿರವಾಗಬೇಕು. ಅಂದರೆ ನಿಶ್ಚಲವಾಗಿ ಕುಳಿತುಕೊಳ್ಳುವ ಅಭ್ಯಾಸ ಮಾಡಬೇಕು. ಅದನ್ನೇ ಇಲ್ಲಿ ಶುಕಾಚಾರ್ಯರು 'ಜಿತಾಸನಃ' ಎಂದಿದ್ದಾರೆ. ನಾವು ಎಲ್ಲಿ ಧ್ಯಾನಕ್ಕೆ ಕುಳಿತುಕೊಳ್ಳುತ್ತೇವೋ ಆ ಪರಿಸರ ಶುದ್ಧವಾಗಿರಬೇಕು, ಕುಳಿತುಕೊಳ್ಳುವ ಆಸನ ಶುದ್ಧವಾಗಿರಬೇಕು ಮತ್ತು ನಮ್ಮ ದೇಹ ಶುದ್ಧವಾಗಿರಬೇಕು. ಇದಲ್ಲದೇ ತೀರಾ ಅವಶ್ಯಕವಾದ ನಾಲ್ಕನೇ ಶುದ್ಧಿ-ಮನಃಶುದ್ಧಿ. ಈ ನಾಲ್ಕು ವಿಧದ ಶೌಚದ ನಂತರ ಮುಂದಿನ ಪ್ರಕ್ರಿಯೆ.

ಮೊದಲನೆಯದಾಗಿ ಧ್ಯಾನಕ್ಕೆ ಕುಳಿತುಕೊಳ್ಳುವ ಪರಿಸರದ ಶುದ್ಧಿ. ಕುಳಿತುಕೊಳ್ಳುವ ಧ್ಯಾನಕೋಣೆ ಏಕಾಂತವಾಗಿರಬೇಕು. ಅಲ್ಲಿ ಶಬ್ದ ಮಾಲಿನ್ಯ ಇರಕೂಡದು. [ಹಕ್ಕಿಗಳ ಚಿಲಿಪಿಲಿ, ವೇದಮಂತ್ರಪಠಣ ಧ್ಯಾನಕ್ಕೆ ಪೂರಕ. ವೇದವನ್ನು ಶ್ರುತಿಬದ್ಧವಾಗಿ ಹಾಡಬೇಕು. ಹೇಗೆ ಸಂಗೀತಕಾರರು ತಂಬೂರ ಶ್ರುತಿಮಾಡಿ ಹಾಡುತ್ತಾರೋ ಹಾಗೇ ಶ್ರುತಿಯೊಂದಿಗೆ ವೇದಮಂತ್ರ ಪಠಣ ಮಾಡಬೇಕು. ಅಪಶ್ರುತಿಯಲ್ಲಿ ಪಠಿಸಿದರೆ ಅದು ಶುದ್ಧವಾದ ವೇದ ನಾದವಾಗುವುದಿಲ್ಲ ಮತ್ತು ಅದು ಧ್ಯಾನಕ್ಕೆ ಪೂರಕವಲ್ಲ. ಇನ್ನು ಹಕ್ಕಿಗಳು ಎಂದೂ ಅಪಶ್ರುತಿಯಲ್ಲಿ ಹಾಡುವುದಿಲ್ಲ. ಅದು ಭಗವದ್ ದತ್ತವಾಗಿ ಬಂದಿರುವ ಸಹಜ ನಾದವಾಗಿರುವುದರಿಂದ ಅದರಿಂದ ಧ್ಯಾನಕ್ಕೆ ತೊಂದರೆಯಾಗುವುದಿಲ್ಲ]

ಎರಡನೇ ಶುದ್ಧಿ-ದೇಹಶುದ್ಧಿ : ಮುಂಜಾನೆ ಎದ್ದ ನಂತರ ಮೊದಲ ಶೌಚ ಎಂದರೆ ಮಲ-ಮೂತ್ರ ವಿಸರ್ಜನೆ, ದಂತ ಮಾರ್ಜನ. ನಂತರ ಮುಖ-ಮಾರ್ಜನಮಾಡಿ, ಮಂತ್ರಾಚಮನದಿಂದ ವೇದಪ್ರತಿಪಾದ್ಯನಾದ ಭಗವಂತನನ್ನು ನೆನೆದು, ಸಮಗ್ರ ಸ್ನಾನದಿಂದ ದೇಹಶುದ್ಧಿ ಮಾಡಬೇಕು. ದೇಹಶುದ್ಧಿಗೆ ಪ್ರಕೃತಿದತ್ತವಾದ ಸಾಧನ ಮೃತ್ತಿಕೆ. ಶುದ್ಧವಾದ ಸ್ಥಳದಲ್ಲಿರುವ ಕೆಂಪು ಮಣ್ಣನ್ನು ಚೆನ್ನಾಗಿ ಗಾಳಿಸಿದರೆ ಹಿಟ್ಟಿನಂತಹ ಭಾಗ ಕೆಳಕ್ಕೆ ಬೀಳುತ್ತದೆ. ಅದಕ್ಕೆ ನೀರನ್ನು ಸೇರಿಸಿದಾಗ ಅದು ಕೆನೆ(Cream)ಯಂತಾಗುತ್ತದೆ. ಅದನ್ನು ಪಾತ್ರೆಯಲ್ಲಿ ಸಂಗ್ರಹಮಾಡಿಟ್ಟುಕೊಂಡು ಮೈಗೆ ಹಚ್ಚಿಕೊಳ್ಳಬೇಕು. ಸಾಬೂನನ್ನು ಬಳಸದೇ ಶುದ್ಧ ಮೃತ್ತಿಕಾ ಸ್ನಾನ ಮಾಡುವುದರಿಂದ ಯಾವುದೇ ಚರ್ಮರೋಗ ಬರುವುದಿಲ್ಲ, ಚರ್ಮರೋಗ ಇದ್ದರೆ ವಾಸಿಯಾಗುತ್ತದೆ, ಚರ್ಮಕ್ಕೆ ಹೊಳಪು ಬರುತ್ತದೆ ಮತ್ತು ಮನಸ್ಸಿಗೆ ಸ್ಫೂರ್ತಿ ಸಿಗುತ್ತದೆ.

ಮೂರನೆಯದಾಗಿ ಮನಃಶುದ್ಧಿ. ಇದಕ್ಕಾಗಿ ಮುಖ್ಯವಾಗಿ ಯಮ-ನಿಯಮನ ಪಾಲನೆ ಮಾಡಬೇಕು. ಯೋಗಶಾಸ್ತ್ರದಲ್ಲಿ ಯಮ ಎನ್ನುವ ಪದವನ್ನು ವಿಶಿಷ್ಟ ಅರ್ಥದಲ್ಲಿ ಬಳಸಿದ್ದಾರೆ. ಅದು ನಾವು ಮಾಡಬಾರದ ಐದು ನಿಯಮಗಳನ್ನು ಮತ್ತು ಸಾಮಾಜಿಕವಾಗಿ ನಮ್ಮ ನಡೆ ಹೇಗಿರಬೇಕು ಎನ್ನುವುದನ್ನು ವಿವರಿಸುತ್ತದೆ. (೧) ಹಿಂಸೆ, (೨) ಸುಳ್ಳು ಹೇಳುವುದು,(೩) ಕದಿಯುವುದು, (೪) ಅತಿಯಾದ ಕಾಮ ಮತ್ತು (೫) ಇನ್ನೊಬ್ಬರ ಮುಂದೆ ಕೈಚಾಚುವುದು. ಇವು ಭಗವಂತನ ಉಪಾಸನೆಯ ಮಾರ್ಗದಲ್ಲಿ ಬಿಡಬೇಕಾದ ಐದು ನಿಯಮಗಳು. ಈ ಐದರಿಂದ ಸಮಾಜದ ಸ್ವಾಸ್ಥ್ಯ ಕೆಡುವುದಷ್ಟೇ ಅಲ್ಲದೆ, ನಮ್ಮ ಮನಸ್ಸೂ ಕೂಡಾ ಕೆಡುತ್ತದೆ.

ಮುಖ್ಯವಾಗಿ ಮನಃಶುದ್ಧಿಗಾಗಿ ನಾವು ಬಿಡಬೇಕಾಗಿರುವುದು ಕಾಮ-ಕ್ರೋಧ-ಲೋಭಗಳನ್ನು. ಇದನ್ನು ಶ್ರೀಕೃಷ್ಣ ಗೀತೆಯಲ್ಲಿ ಸುಂದರವಾಗಿ ವರ್ಣಿಸಿರುವುದನ್ನು ಕಾಣುತ್ತೇವೆ. ***ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ । ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್ ॥೧೬-೨೧॥*** ಇಲ್ಲಿ ಶ್ರೀಕೃಷ್ಣ ಹೇಳುತ್ತಾನೆ: "ಕಾಮ, ಕ್ರೋಧ, ಮತ್ತು ಲೋಭ ಇವು ಆತ್ಮನಾಶದ ಮೂರು ದಾರಿಗಳು" ಎಂದು. ಕ್ರೋಧ ಎನ್ನುವುದು ಕಾಮದ ಮರಿ. ನಮಗೆ ಕ್ರೋಧ ಬರುತ್ತಿದೆ ಎಂದರೆ ನಮ್ಮ ಒಳಗೆ ಬಹಳ ಆಸೆಗಳು ಹುದುಗಿವೆ ಎಂದರ್ಥ. ಅದು ನೆರವೇರದೇ ಇದ್ದಾಗ ನಮಗೆ ಕೋಪ ಬರುತ್ತದೆ. "ಕಾಮ-ಕ್ರೋಧ-ಲೋಭ ಎನ್ನುವುದು ನಮ್ಮನ್ನು ಅಧಃಪಾತಕ್ಕೆ ತಳ್ಳುವ ಮೂರು ನರಕದ ಬಾಗಿಲುಗಳಾಗಿರುವುದರಿಂದ ಅವುಗಳಿಂದ ದೂರವಿರು" ಎಂದು ಶ್ರೀಕೃಷ್ಣ ನಮ್ಮನ್ನು ಎಚ್ಚರಿಸಿದ್ದಾನೆ. ಇವು ನಮ್ಮ ವ್ಯಕ್ತಿತ್ವವನ್ನು ಹಾಳುಮಾಡುವ ಮೂಲ ಶತ್ರುಗಳು. ಇತರ ಎಲ್ಲಾ ದುರ್ಗುಣಗಳೂ ಇವುಗಳ ಮರಿಗಳು. ಮನುಷ್ಯ ಈ ಮೂರು ದುರ್ಗುಣಗಳಿಂದ ತನ್ನ ನರಕವನ್ನು ತಾನೇ ಸೃಷ್ಟಿಸಿಕೊಳ್ಳುತ್ತಾನೆ. ಈ ಮೂರನ್ನು ಬಿಟ್ಟರೆ ಮನಸ್ಸು ಸ್ವಚ್ಛವಾಗುತ್ತದೆ.

ನಾಲ್ಕನೆಯದಾಗಿ ಆಸನಶುದ್ಧಿ: ಧ್ಯಾನಕ್ಕೆ ಕುಳಿತುಕೊಳ್ಳುವ ಆಸನ ಶುದ್ಧವಾಗಿಲ್ಲದಿದ್ದರೆ ಧ್ಯಾನ ಸಾಧ್ಯವಿಲ್ಲ. ಆಸನ ಸಿದ್ಧಪಡಿಸುವ ಮೊದಲು ಏಕಾಂತ ಸ್ಥಳದಲ್ಲಿ ನೆಲ ಶುದ್ಧವಾಗಿದೆಯೋ ಇಲ್ಲವೋ ಎಂದು ನೋಡಿಕೊಳ್ಳಬೇಕು. ನಮಗೆ ತಿಳಿದಂತೆ ಭೂಮಿಯಲ್ಲಿ ಕೆಲವು ಸ್ಥಳಗಳಲ್ಲಿ ಮನಸ್ಸಿಗೆ ಪೋಷಕವಾದ ಕಂಪನವಿದ್ದರೆ ಇನ್ನು ಕೆಲವು ಸ್ಥಳಗಳಲ್ಲಿ ಇರುವುದಿಲ್ಲ. ಎಲ್ಲಿ ಕುಳಿತಾಗ ನಮಗೆ ಹೆಚ್ಚು ಏಕಾಗ್ರತೆ ಸಿಗುತ್ತದೋ ಮತ್ತು ಮನಸ್ಸು ಪ್ರಸನ್ನವಾಗಿ ವಿಷಯಗಳನ್ನು ಯೋಚಿಸುವುದರ ಕಡೆಗೆ ಹರಿಯುತ್ತದೋ, ಅಲ್ಲಿ ಮನಸ್ಸಿಗೆ ಪೂರಕವಾದ ತರಂಗವಿರುತ್ತದೆ ಹಾಗೂ ಅದು ಧ್ಯಾನಕ್ಕೆ ಪೂರಕವಾದ ಸ್ಥಳವಾಗಿರುತ್ತದೆ. ಪುಣ್ಯ ಕ್ಷೇತ್ರಗಳು ಸಾತ್ತ್ವಿಕ ಕಂಪನ ಇರುವ ಕಡೆಯೇ ಇರುವುದರಿಂದ ಅಲ್ಲಿ ಎಲ್ಲಾ ಕಡೆಯೂ ಸಾತ್ತ್ವಿಕ ಕಂಪನವಿರುತ್ತದೆ(ಉದಾಹರಣೆಗೆ ಬದರಿ ಕ್ಷೇತ್ರ). ಹಾಗಾಗಿ ಅಂತಹ ಕ್ಷೇತ್ರಗಳಲ್ಲಿ ಧ್ಯಾನಕ್ಕೆ ಕುಳಿತುಕೊಳ್ಳುವಾಗ ನೆಲ ಶುದ್ಧಿ ಪರೀಕ್ಷಿಸಬೇಕಾಗಿಲ್ಲ.

ಸ್ಥಳ ನಿಗದಿಯಾದ ನಂತರ ನೆಲದಲ್ಲಿರುವ, ನಮ್ಮ ಧ್ಯಾನಕ್ಕೆ ಭಾದಕವಾಗುವ ತರಂಗಗಳು ನಮ್ಮ ದೇಹ ಪ್ರವೇಶಿಸದಂತೆ ತಡೆಯಲು ಅಲ್ಲಿ ಆಸನವನ್ನು ಸಿದ್ಧಪಡಿಸಬೇಕಾಗುತ್ತದೆ. ಆಸನದಲ್ಲಿ ಎರಡು ವಿಧ. ಒಂದು ಕುಳಿತುಕೊಳ್ಳುವ ಭಂಗಿ(**Posture**) ಮತ್ತು ಇನ್ನೊಂದು ಕುಳಿತುಕೊಳ್ಳುವ ಸಾಧನ. ಕುಳಿತುಕೊಳ್ಳುವ ಸಾಧನವಾಗಿ ಪಟ್ಟೆ, ದಾವಳಿ, ದರ್ಭೆಯ ಚಾಪೆ ಬಳಸಬೇಕು ಮತ್ತು ಅದರ ಮೇಲೆ ಕೃಷ್ಣಾಜಿನ(ಸಂಸಾರಿಗಳಿಗೆ) ಅಥವಾ ವ್ಯಾಘ್ರಾಜಿನ(ಸನ್ಯಾಸಿಗಳಿಗೆ) ಬಳಸಬೇಕು. ಒಂದು ವೇಳೆ ಇದ್ಯಾವುದೂ ಸಿಗದಿದ್ದರೆ ಮಣೆಯನ್ನು ಬಳಸಬಹುದು. ಇಲ್ಲಿ ಕೃಷ್ಣಾಜಿನ ಮತ್ತು ವ್ಯಾಘ್ರಾಜಿನ ಪ್ರಾಣಿಯ ಚರ್ಮವಾಗಿದ್ದರೂ ಕೂಡಾ, ಅದರಲ್ಲಿ ಮನಸ್ಸನ್ನು ಶುದ್ಧಗೊಳಿಸುವ ವಿಶೇಷ ಶಕ್ತಿ ಇರುವುದರಿಂದ ಅದು ಮಡಿ. ಹಾಗಾಗಿ ಅದನ್ನು ಬಳಸುವಾಗ ಅದಕ್ಕೆ ಗೋಮಯವನ್ನು ಸಿಂಪಡಿಸುವ ಅಗತ್ಯವಿಲ್ಲ. ವ್ಯಾಘ್ರಾಜಿನ ನಮ್ಮ ಮನಸ್ಸನ್ನು ಸಂಸಾರದಿಂದ ವಿರಕ್ತಿಯತ್ತ ಕೊಂಡೊಯ್ಯಲು ಪೂರಕವಾಗಿರುವುದರಿಂದ ಗೃಹಸ್ಥನಾದವನು ವ್ಯಾಘ್ರಾಜಿನವನ್ನು ಬಳಸಬಾರದು. ಸಂಸಾರವನ್ನು ತೊರೆದ ನೈಷ್ಠಿಕ ಬ್ರಹ್ಮಚಾರಿಗಳಷ್ಟೇ ವ್ಯಾಘ್ರಾಜಿನವನ್ನು ಬಳಸುತ್ತಾರೆ.

ಈ ರೀತಿಯ ಆಸನವನ್ನು ತಯಾರಿಸಿಕೊಂಡ ನಂತರ ಸ್ವಚ್ಛವಾದ ಧ್ಯಾನಕ್ಕೆ ಅನುಕೂಲವಾದ ಭಂಗಿ(**Posture**)ಯಲ್ಲಿ ನೆಟ್ಟಗೆ ಕುಳಿತುಕೊಳ್ಳಬೇಕು. ನಮಗೆ ಸಾಧ್ಯವಾಗದ ಆಸನದಲ್ಲಿ ಬಲವಂತವಾಗಿ ಕೂರುವುದು ಧ್ಯಾನಕ್ಕೆ ಪೂರಕವಲ್ಲ. ಸಾಮಾನ್ಯವಾಗಿ ನಾಲ್ಕು ಆಸನಗಳನ್ನು ವಿಶೇಷವಾಗಿ ಧ್ಯಾನಕ್ಕೆ ಬಳಸುತ್ತಾರೆ. ೧. ಪದ್ಮಾಸನ, ೨. ವೀರಾಸನ, ೩. ಸ್ವಸ್ತಿಕಾಸನ ಮತ್ತು ೪. ವಜ್ರಾಸನ. ಹೀಗೆ ಒಳ್ಳೆಯ ಪರಿಸರದಲ್ಲಿ, ಸ್ವಚ್ಛವಾದ ಮೈ-ಮನಗಳ ಜೊತೆಗೆ , ಸ್ವಚ್ಛವಾದ ಕೋಣೆಯಲ್ಲಿ, ಶುದ್ಧವಾದ ಆಸನದ ಮೇಲೆ, ಚಲನೆ ಇಲ್ಲದೆ, ನೆಟ್ಟಗೆ ನಿಶ್ಚಲವಾಗಿ ಧ್ಯಾನಕ್ಕೆ ಕುಳಿತುಕೊಳ್ಳಬೇಕು.

ಜಿತಾಸನದ ನಂತರ ಶುಕಾಚಾರ್ಯರು 'ಜಿತಶ್ವಾಸಃ' ಎಂದಿದ್ದಾರೆ. ಅಂದರೆ ಉಸಿರಿನ(ಪ್ರಾಣಕೋಶದ) ನಿಯಂತ್ರಣ. ಒಬ್ಬ ಮನುಷ್ಯ ಸರಿಯಾಗಿ ಉಸಿರಾಡುತ್ತಿದ್ದಾನೆ ಎಂದರೆ ಆತ ಆರೋಗ್ಯವಾಗಿದ್ದಾನೆ ಎಂದರ್ಥ. ನಮ್ಮ ಉಸಿರು ಹೇಗಿರಬೇಕು, ಅದರಿಂದ ಹೇಗೆ ಆರೋಗ್ಯ ಬರುತ್ತದೆ ಎನ್ನುವುದನ್ನು ನಾವು ತಿಳಿದಿರಬೇಕು. ಶ್ವಾಸ ಎಂದರೆ ವಾತಾವರಣದಲ್ಲಿರುವ ಪ್ರಾಣಶಕ್ತಿಯನ್ನು(ಆಮ್ಲಜನಕ) ಒಳಗೆ ತೆಗೆದುಕೊಂಡು ನಂತರ ಒಳಗಿರುವ ಅಪಾನ ಶಕ್ತಿ(ಕಾರ್ಬನ್ ಡೈ ಆಕ್ಸೈಡ್)ಯನ್ನು ಹೊರ ಹಾಕುವುದು. ಉಸಿರಾಡುವಾಗ ಅವಸರ-ಅವಸರವಾಗಿ ಉಸಿರಾಡಬಾರದು. ಒಳಗೆ ತೆಗೆದುಕೊಳ್ಳುವಾಗ ಧೀರ್ಘ ಹಾಗೂ ಪೂರ್ಣವಾಗಿ ಒಳಗೆ ತೆಗೆದುಕೊಳ್ಳಬೇಕು ಹಾಗೂ ಹೊರ ಹಾಕುವಾಗ ಒಳಗೆ ಕೊಳೆ ಉಳಿಯದಂತೆ ಪೂರ್ತಿಯಾಗಿ ಹೊರ ಹಾಕಬೇಕು. ಈ ರೀತಿ ಒಳಗೆ ಯಾವುದೇ ಕೊಳೆ ಇಲ್ಲದಂತೆ ನಿರಂತರ ಶುದ್ಧೀಕರಣ ನಡೆಯಬೇಕು. ಇದೇ ಪ್ರಾಣಶುದ್ಧಿ.

ಪ್ರಾಣಶುದ್ಧಿ ಆದ ಮೇಲೆ ಪ್ರಾಣ ಸ್ಥಿರತೆ. ಅಂದರೆ ಪ್ರಾಣಮಯಕೋಶವನ್ನು ನಿಶ್ಚಲಗೊಳಿಸುವಿಕೆ. ಇದಕ್ಕೆ ಎರಡು ವಿಧಾನಗಳಿವೆ. ೧. ಬಾಹ್ಯಕುಂಭಕ ೨. ಅಂತಃಕುಂಭಕ. ಶ್ವಾಸವನ್ನು ಪೂರ್ತಿಯಾಗಿ ಹೊರಬಿಟ್ಟಮೇಲೆ ಒಳಗೆ ನಿರ್ವಾತ ಸ್ಥಿತಿಯಲ್ಲಿ ಶ್ವಾಸವನ್ನು ಒಳಗೆ ತೆಗೆದುಕೊಳ್ಳದೆ ಸ್ಥಿರವಾಗಿ ಕುಳಿತುಕೊಳ್ಳುವುದು ಬಾಹ್ಯಕುಂಭಕ; ಪೂರ್ಣವಾಗಿ ಶ್ವಾಸವನ್ನು ಒಳಕ್ಕೆ ತೆಗೆದುಕೊಂಡ ನಂತರ, ಹೊರಬಿಡದೆ ಸ್ಥಗನಗೊಳಿಸುವುದು ಅಂತಃಕುಂಭಕ. [ಪ್ರಾಣಾಯಾಮ ಮಾಡುವಾಗ ಎಚ್ಚರಿಕೆ ಅಗತ್ಯ. ಯೋಗ್ಯ ಗುರುವಿನ ಮಾರ್ಗದರ್ಶನ ಅಗತ್ಯ. ಹೃದ್ರೋಗಿಗಳು ಅಂತಃಕುಂಭಕ ಮಾಡಕೂಡದು. ತಲೆನೋವು ಇದ್ದಾಗ ಪ್ರಾಣಾಯಾಮ ಮಾಡಬಾರದು]. ಈ ಎರಡೂ ಸ್ಥಿತಿಯಲ್ಲಿ ಒಳಗೆ ಪ್ರಾಣಾಗ್ನಿ ನಿರ್ಮಾಣವಾಗುತ್ತದೆ. ಈ ಪ್ರಾಣಾಗ್ನಿ ಒಳಗಿರುವ ಎಲ್ಲಾ ದೋಷಗಳನ್ನು ಸುಡುವ ಅಗ್ನಿಯಾಗುತ್ತದೆ. ಇದು ಕೇವಲ ಪಾಪ ಬಸ್ಮೀಕರಣ ಮಾಡುವ ಪ್ರಕ್ರಿಯೆಯಷ್ಟೇ ಅಲ್ಲ, ನಮ್ಮೊಳಗೆ ಕೂತು ನಮ್ಮಲ್ಲಿ ಕೆಟ್ಟ ಬುದ್ಧಿ ಹುಟ್ಟಿಸುವ ಕ್ಷುದ್ರ ಆಸುರೀ ಶಕ್ತಿಗಳನ್ನೂ ಕೂಡಾ ಇದು ಓದ್ದೋಡಿಸುತ್ತದೆ. ಇದನ್ನೇ ಪಾಪಪುರುಷ ನಿರಸನ ಎನ್ನುತ್ತಾರೆ.

ಪ್ರಾಣಾಯಾಮ ಮಾಡುವಾಗ ಮೊದಲು ರೇಚಕ ಮತ್ತು ಪೂರಕವನ್ನು ಮೂಗಿನ ಎರಡೂ ಹೊಳ್ಳೆಗಳಿಂದ ಮಾಡಬಹುದು. ನಂತರ ಒಂದು ಹೊಳ್ಳೆಯಿಂದ ತೆಗೆದುಕೊಂಡು ಅದೇ ಹೊಳ್ಳೆಯಿಂದ ಹೊರಕ್ಕೆ ಬಿಡುವುದು, ಇನ್ನೊಂದು ಹೊಳ್ಳೆಯಿಂದ ತೆಗೆದುಕೊಂಡು ಅದೇ ಹೊಳ್ಳೆಯಿಂದ ಹೊರ ಬಿಡುವುದು ಮತ್ತು ಒಂದು ಹೊಳ್ಳೆಯಿಂದ ತೆಗೆದುಕೊಂಡು ಇನ್ನೊಂದು ಹೊಳ್ಳೆಯಿಂದ ಬಿಡುವುದು, ಹೀಗೆ ನಾನಾ ವಿಧಾನದಿಂದ ನಾಸಾಶುದ್ಧಿ-ನಾಡಿಶುದ್ಧಿ ಸಾಧಿಸಿ, ಆಮೇಲೆ ಪ್ರಾಣಶುದ್ಧಿ ಸಾಧಿಸಬೇಕು.

ಸಾಮಾನ್ಯವಾಗಿ ಪ್ರಾಣಾಯಾಮ ಎಂದರೆ ಬಲದಿಂದ ರೇಚಕ, ಎಡದಿಂದ ಪೂರಕ, ಆಮೇಲೆ ಕುಂಭಕ. ಹಿಂದೆ ಹೇಳಿದಂತೆ ಶ್ವಾಸವನ್ನು ಒಳಕ್ಕೆ ತೆಗೆದುಕೊಳ್ಳುವಾಗ ಮೈ ಬೆಲೂನಿನಂತೆ ಉಬ್ಬಿಕೊಳ್ಳಬೇಕು. ರೇಚಕ ಮಾಡುವಾಗ ಹೊಟ್ಟೆ ಒಳಕ್ಕೆ ಎಳೆದುಕೊಂಡು ಒಳಗಿರುವ ಎಲ್ಲಾ ಗಾಳಿಯನ್ನು ಖಾಲಿ ಮಾಡಬೇಕು. ಕುಂಭಕ ಸ್ಥಿತಿಯಲ್ಲಿ ಎಲ್ಲಿಯೂ ಸೋರದಂತೆ ಹೃದಯದಲ್ಲಿ ಶ್ವಾಸವನ್ನು ಸ್ಥಗನಗೊಳಿಸಬೇಕು. ಹೃದಯದಲ್ಲಿ ಶ್ವಾಸವನ್ನು ಸ್ಥಗನಗೊಳಿಸುವಾಗ ಮಲ-ಮೂತ್ರದ್ವಾರವನ್ನು ಒಳಕ್ಕೆಳೆದುಕೊಳ್ಳಲು ಮರೆಯಬಾರದು. ಇದನ್ನು ಮೂಲಬಂಧ ಎನ್ನುತ್ತಾರೆ. ಈ ರೀತಿ ಮಾಡದೇ ಕುಂಭಕ ಮಾಡಿದರೆ ಮೂಲವ್ಯಾಧಿ ಬರುವ ಸಾಧ್ಯತೆ ಹೆಚ್ಚು. ಹೀಗೆ ಪ್ರಾಣಾಯಾಮದಿಂದ ಪ್ರಾಣಮಯಕೋಶದ ಸ್ಥಿರತೆ ಸಾಧಿಸುವುದನ್ನು ಶುಕಾಚಾರ್ಯರು ಇಲ್ಲಿ ಜಿತಶ್ವಾಸಃ ಎಂದಿದ್ದಾರೆ.

ಶ್ವಾಸವನ್ನು ಗೆದ್ದಮೇಲೆ ಮನಸ್ಸನ್ನು ಸ್ಥಿರಗೊಳಿಸಬೇಕು. ಅದಕ್ಕಾಗಿ ನಾವು ಸಂಗವನ್ನು ಗೆಲ್ಲಬೇಕು(ಜಿತಸಂಗಃ) ಎಂದಿದ್ದಾರೆ ಶುಕಾಚಾರ್ಯರು. ಶ್ರೀಕೃಷ್ಣ ಗೀತೆಯಲ್ಲಿ ಹೇಳುವಂತೆ: ***ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥೨-೬೨॥.*** ಮನಸ್ಸಿನ ಕೊಳೆ ಎಂದರೆ ಅದು ಕಾಮ-ಕ್ರೋಧ ಹಾಗೂ ಅದು ಬರುವುದು ಸಂಗದಿಂದ. ಒಂದು ವಸ್ತುವನ್ನು ನೋಡದೇ ಇದ್ದರೆ, ಅದರ ಬಗ್ಗೆ ಕೇಳದೇ ಇದ್ದರೆ ಅದು ನಮಗೆ ಬೇಕು ಎನಿಸುವುದಿಲ್ಲ. ನೋಡಿದ ಮೇಲೆ ಕಾಮ ಹುಟ್ಟುತ್ತದೆ. ನಂತರ ಅದು ಸಿಗದಿದ್ದರೆ ಕ್ರೋಧ. ಆದ್ದರಿಂದ ಮನಸ್ಸನ್ನು ಸ್ವಚ್ಛವಾಗಿಡಲು ನಾವು ನಮ್ಮಿಂದ ಸಾಧ್ಯವಾದಷ್ಟು ವಿಷಯ ಸಂಪರ್ಕದ ಕಡೆಗೆ ಮನಸ್ಸಿನ ಸಂಪರ್ಕವನ್ನು ಕಡಿಮೆ ಮಾಡಬೇಕು. ಆಗ ಕಾಮ-ಕ್ರೋಧಗಳು ಕಡಿಮೆಯಾಗಿ ಮನಸ್ಸು ಶುದ್ಧವಾಗಲು ಸಹಾಯವಾಗುತ್ತದೆ. ಗೀತೆಯಲ್ಲಿ ಶ್ರೀಕೃಷ್ಣ ಸಂಗವನ್ನು ಹೇಗೆ ಗೆಲ್ಲಬೇಕು ಎನ್ನುವುದನ್ನು ವಿವರಿಸುತ್ತಾ ಹೇಳುತ್ತಾನೆ: ***"ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ"*** ಎಂದು. ॥೧೩-೧೦॥. ಅಂದರೆ- ಎಲ್ಲಿ ಬೇಡವಾದ ವಿಚಾರಕ್ಕಾಗಿ ಜನಜಂಗುಳಿ ಸೇರುತ್ತದೋ, ಅಂತಹ ಜನಜಂಗುಳಿಯಿಂದ ದೂರವಿರು ಎಂದರ್ಥ. ಮೌನ ಮತ್ತು ಏಕಾಂತ ಇದು ಮನಸ್ಸಿನ ಏಕಾಗ್ರತೆಗೆ ಬಹಳ ಮುಖ್ಯ ಸಾಧನ. ಇಷ್ಟೇ ಅಲ್ಲದೇ ಮನಸ್ಸನ್ನು ಕೆಡಿಸುವ ಬಿಟ್ಟಿ ಭೋಜನಕ್ಕೆ ಹಾತೊರೆಯುವುದನ್ನೂ ನಾವು ಬಿಡಬೇಕು. ಊಟದ ಸಮಯದಲ್ಲಿ ಹಾಳು ಹರಟೆ ನಿಷಿದ್ಧ. ಭೋಜನ ಎನ್ನುವುದು ಮೌನದಲ್ಲಿ, ಭಗವಂತನ ಸ್ಮರಣೆಯಲ್ಲಿ ನಡೆಯಬೇಕು. ಹೀಗೆ ಯಾವ ಸಂಪರ್ಕದಿಂದ ಮನಸ್ಸು ಕಲುಷಿತವಾಗುತ್ತದೋ ಅಂತಹ ಸಾಮಾಜಿಕ ಸಂಪರ್ಕದಿಂದ ದೂರವಿರಲು ಪ್ರಯತ್ನಿಸಬೇಕು.

ಕೇವಲ ಬಾಹ್ಯಸಂಗ ತೊರೆದರೆ ಸಾಲದು, ನಾವು ನಮ್ಮೊಳಗೇ ಇರುವ ಅಂತಃಶತ್ರುಗಳಾದ ಇಂದ್ರಿಯಗಳನ್ನು ನಿಯಂತ್ರಿಸಬೇಕು. ಅದಕ್ಕಾಗಿ ಶುಕಾಚಾರ್ಯರು ಇಲ್ಲಿ 'ಜಿತೇಂದ್ರಿಯಃ' ಎಂದಿದ್ದಾರೆ. ನಾವು ಬೇಡವಾದುದನ್ನು ಬಯಸುವ ಇಂದ್ರಿಯ ಚಾಪಲ್ಯಕ್ಕೆ ನಿಧಾನವಾಗಿ ಕಡಿವಾಣ ಹಾಕಬೇಕು. ಹೀಗೆ ಆಸನ ಸ್ವಚ್ಛಗೊಳಿಸಿ ಆಸನ ಸ್ಥಿರಗೊಳಿಸಬೇಕು, ಪ್ರಾಣ ಸ್ವಚ್ಛಗೊಳಿಸಿ ಪ್ರಾಣ ಸ್ಥಿರಗೊಳಿಸಬೇಕು ಮತ್ತು ಮನಸ್ಸನ್ನು ಸ್ವಚ್ಛಗೊಳಿಸಿ ಮನಸ್ಸನ್ನು ಸ್ಥಿರಗೊಳಿಸಬೇಕು. ನಂತರ ಸ್ವಚ್ಛವಾದ ಮನಸ್ಸಿನಲ್ಲಿ ಭಗವಂತನನ್ನು ತುಂಬಿಸಬೇಕು.

# ಧ್ಯಾನದಲ್ಲಿ ಕಾಣಬೇಕಾದ ಭಗವಂತನ ಸ್ಥೂಲರೂಪ

ಭಗವಂತನ ಪರಿಚಯವೇ ಇಲ್ಲದಿರುವಾಗ ಭಗವಂತನನ್ನು ಮನಸ್ಸಿನಲ್ಲಿ ತುಂಬುವುದು ಹೇಗೆ? ಈ ಪ್ರಶ್ನೆಗೆ ಶುಕಾಚಾರ್ಯರು ಇದೇ ಶ್ಲೋಕದಲ್ಲಿ ಉತ್ತರಿಸಿರುವುದನ್ನು ಕಾಣುತ್ತೇವೆ. ಶುಕಾಚಾರ್ಯರು ಹೇಳುತ್ತಾರೆ: "ತಿಳಿದಿರುವ ಭಗವಂತನ ಸ್ಥೂಲ ರೂಪವನ್ನು ಮೊದಲು ಧ್ಯಾನದಲ್ಲಿ ಕಾಣಬೇಕು" ಎಂದು. ತಿಳಿದಿರುವ ರೂಪ ಎಂದರೆ ಅದು ಜ್ಞಾನಾನಂದಮಯವಾದ ರೂಪವಲ್ಲ. ಅದು ನಾವು ಮನೆಯಲ್ಲಿ ಪೂಜಿಸುವ ಭಗವಂತನ ಸ್ಥೂಲ ಪ್ರತೀಕ. ಅಷ್ಟೇ ಅಲ್ಲದೆ ಇಡೀ ಬ್ರಹ್ಮಾಂಡವೇ ಭಗವಂತನ ಪ್ರತೀಕ. ಪುರುಷಸೂಕ್ತದಲ್ಲಿ ಹೇಳುವಂತೆ: ***ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಂ*** *॥೧॥* ಭಗವಂತ ಇಡೀ ವಿಶ್ವದಲ್ಲಿ ತುಂಬಿದ್ದಾನೆ. ಹೀಗಾಗಿ ಕಣ್ಣಿಗೆ ಕಾಣುವ ವಿಶ್ವದಲ್ಲಿ ಕಾಣದ ಭಗವಂತನನ್ನು ಕಾಣುವ ಪ್ರಯತ್ನ ಮಾಡಬೇಕು. ಕಣ್ಮುಚ್ಚಿ ಧ್ಯಾನದಲ್ಲಿ ಕುಳಿತಾಗ ಅಲ್ಲಿ ಏನೇ ಕಾಣಲಿ, ಅದರಲ್ಲಿ ಭಗವಂತನ ಅನುಸಂಧಾನ ಮಾಡಬೇಕು. ಅಲ್ಲಿ ನಗರ ಕಾಣಬಹುದು, ಪರಿಚಿತ ವ್ಯಕ್ತಿ ಕಾಣಬಹುದು, ಯುವಕನಿಗೆ ಯುವತಿ ಕಾಣಬಹುದು ಹಾಗೂ ಯುವತಿಗೆ ಯುವಕ. ಆದರೆ ಇವೆಲ್ಲವುದರ ಹಿಂದೆ ಒಂದು ಜ್ಞಾನಾನಂದಮಯವಾದ ಶಕ್ತಿ ಇದೆ ಎಂದು ತಿಳಿದು ಧ್ಯಾನ ಮುಂದುವರಿಸಬೇಕು. ಧ್ಯಾನ ಪ್ರಕ್ರಿಯೆಯಲ್ಲಿ ಇದೊಂದು ಭವ್ಯ ಕಲ್ಪನೆ. ಜ್ಞಾನಾನಂದನಾದ ಭಗವಂತ ನನ್ನೊಳಗೆ, ಪ್ರಪಂಚದ ಪ್ರತಿಯೊಂದು ಅಣು-ಕಣದೊಳಗೆ ತುಂಬಿದ್ದಾನೆ ಎನ್ನುವ ವಿವೇಕಪ್ರಜ್ಞೆ ಬೆಳೆಸಿಕೊಂಡು, ಮನಸ್ಸನ್ನು ತರಬೇತಿಗೊಳಿಸಿದಾಗ, ಧ್ಯಾನದಲ್ಲಿ ಭಗವಂತನ ದರ್ಶನವಾಗುತ್ತದೆ. ಇದು ಈ ಶ್ಲೋಕದಲ್ಲಿ ನಾವು ಕಾಣಬಹುದಾದ ಧ್ಯಾನದ ಸಮಗ್ರ ಪ್ರಕ್ರಿಯೆಯ ಸಂಕ್ಷಿಪ್ತ ವಿವರಣೆ.

ಭಾಗವತದ ಮುಂದಿನ ಶ್ಲೋಕಕ್ಕೆ ಹೋಗುವ ಮುನ್ನ ಧ್ಯಾನದ ವಿಷಯದಲ್ಲಿ ಸರ್ವೇಸಾಮಾನ್ಯವಾಗಿ ಬರುವ ಎರಡು ಮುಖ್ಯವಾದ ವಿಷಯವನ್ನು ಇಲ್ಲಿ ನೋಡೋಣ. ಮೊದಲನೆಯದಾಗಿ ಹೆಂಗಸರು ಧ್ಯಾನ ಮಾಡಬಹುದೇ ಎನ್ನುವ ಪ್ರಶ್ನೆ. ಈ ಪ್ರಶ್ನೆಗೆ ನೇರವಾಗಿ ಉತ್ತರಿಸಬೇಕು ಎಂದರೆ ಹೆಂಗಸರಷ್ಟೇ ಅಲ್ಲ, ಎಲ್ಲರೂ ಧ್ಯಾನ ಮಾಡಬಹುದು. ಧ್ಯಾನಕ್ಕೆ ಲಿಂಗ ನಿಶಿದ್ಧವಿಲ್ಲ. ಆದರೆ ಇಲ್ಲಿ ನಾವು ನೋಡಬೇಕಾಗಿರುವುದು ಸಾಮಾಜಿಕವಾಗಿ ಹೆಂಗಸರು ಧ್ಯಾನ ಮಾಡುವುದು ಏಕೆ ಅಷ್ಟೊಂದು ಬಳಕೆಗೆ ಬಂದಿಲ್ಲ ಎನ್ನುವ ವಿಚಾರವನ್ನು. ಸಾಮಾನ್ಯವಾಗಿ ಹೆಣ್ಣಿಗೆ ಸಾಂಸಾರಿಕ ಜೀವನದಲ್ಲಿ ಹೆಚ್ಚಿನ ಜವಾಬ್ದಾರಿ ಇರುತ್ತದೆ. ಹೀಗಿರುವಾಗ ಕುಟುಂಬದ ಲಾಲನೆ-ಪಾಲನೆಯ ಜೊತೆಗೆ ಧ್ಯಾನಾಸಕ್ತಿ ಒಂದಕ್ಕೊಂದು ಹೊಂದಾಣಿಕೆ ಆಗದಿದ್ದರೆ ಅಲ್ಲಿ ವೈರಸ್ಯ ಬರುವ ಸಾಧ್ಯತೆ ಹೆಚ್ಚು. ಅದಕ್ಕೋಸ್ಕರ ಹಿಂದೆ ಸ್ತ್ರೀಯರು ಧ್ಯಾನದಲ್ಲಿ ತಮ್ಮನ್ನು ಹೆಚ್ಚು ತೊಡಗಿಸಿಕೊಳ್ಳಲಿಲ್ಲ.

ಎರಡನೆಯದಾಗಿ ಸ್ನಾನ ಮಾಡಲು ಆಗದೇ ಇದ್ದಾಗ, ರಾತ್ರಿ ಮಲಗುವಾಗ ಧ್ಯಾನ ಮಾಡಬಹುದೇ ಎನ್ನುವ ಪ್ರಶ್ನೆ. ಈ ಪ್ರಶ್ನೆಗೆ ನಾವು ಈ ಹಿಂದೆಯೇ ಉತ್ತರ ಕಂಡುಕೊಂಡಿದ್ದೇವೆ. ಧ್ಯಾನಕ್ಕೆ ಮುಖ್ಯವಾಗಿ ಬೇಕಾಗಿರುವುದು ಮನಃಶುದ್ಧಿ. ಮನಸ್ಸು ಧ್ಯಾನವನ್ನು ಬಯಸುತ್ತಿದೆ ಎಂದರೆ ಅದು ಶುದ್ಧವಾಗಿದೆ ಎಂದರ್ಥ. ಆದ್ದರಿಂದ ಯಾವ ಕಾಲದಲ್ಲಿ ಮನಸ್ಸು ಶ್ರುತಿಗೂಡುತ್ತದೋ ಆಗ ಧ್ಯಾನ ಮಾಡಬಹುದು. ಸ್ನಾನ ಮಾಡಲು ಆಗದಿದ್ದಾಗ ಅಲ್ಲಿ ಮಂತ್ರಸ್ನಾನ ಮಾಡಬಹುದು. ಮಂತ್ರಸ್ನಾನಕ್ಕಾಗಿ ಶಾಸ್ತ್ರಕಾರರು ಈ ಕೆಳಗಿನ ಎರಡು ಮಂತ್ರಗಳನ್ನು ನೀಡಿದ್ದಾರೆ:

**ಅಪವಿತ್ರಃ ಪವಿತ್ರೋವ ಸರ್ವಾವಸ್ಥಾಂ ಗತೋಪಿವಾ |**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ||**

**ಅತಿನೀಲಘನಶ್ಯಾಮಂ ನಲಿನಾಯತಲೋಚನಂ |**
**ಸ್ಮರಾಮಿ ಪುಂಡರೀಕಾಕ್ಷಂ ತೇನ ಸ್ನಾತೋ ಭಾವಾಮ್ಯಹಂ||**

ಇಲ್ಲಿ ಪುಂಡರೀಕಾಕ್ಷನನ್ನು ಸ್ಮರಣೆ ಮಾಡಬೇಕು ಎಂದು ಹೇಳಿದ್ದಾರೆ. ಇದೊಂದು ಭಗವಂತನ ವಿಶೇಷ ನಾಮ. ಪುಂಡರೀಕಾಕ್ಷ ಎಂದರೆ ಕೆಂದಾವರೆಯಂತಹ ಕಣ್ಣುಳ್ಳವನು ಎಂದರ್ಥ. ಭಗವಂತನ ಕಣ್ಣು ಯಾವಾಗಲೂ ಕೆಂದಾವರೆ ಎಸಳಿನಂತೆ ಅರಳಿ ನಳನಳಿಸುತ್ತಿರುತ್ತದೆ. ಸಾಮಾನ್ಯವಾಗಿ ನಮಗೆ ಅತ್ಯಂತ ಸಂತೋಷವಾದಾಗ ನಮ್ಮ ಕಣ್ಣು ಅರಳುತ್ತದೆ. ಆದರೆ ಭಗವಂತ ಸದಾ ಸಂತೋಷದ ಬುಗ್ಗೆ. ಭಗವಂತ ಪ್ರೀತಿಯಿಂದ ಕಣ್ಣರಳಿಸಿ ನನ್ನನ್ನು ನೋಡುತ್ತಿದ್ದಾನೆ, ಅವನ ಕಣ್ಣಿನಿಂದ ಹರಿದುಬರುತ್ತಿರುವ ಅನುಗ್ರಹದ ರಸಧಾರೆಯಲ್ಲಿ ನಾನು ಮೀಯುತ್ತಿದ್ದೇನೆ, ಅವನ ಅನುಗ್ರಹದ ಕೃಪಾದೃಷ್ಟಿ ನನ್ನ ಮೇಲೆ ಹರಿದಿದೆ, ನಾನು ಅದರಲ್ಲಿ ಮಿಂದೆ ಎನ್ನುವ ಅನುಸಂಧಾನ ಶುಚಿ. ಹೀಗೆ ನಾವು ಭಗವಂತನ ಅನುಗ್ರಹದಿಂದ ಒಳಗೂ ಹೊರಗೂ ಮಡಿಯಾಗಿ ಧ್ಯಾನದಲ್ಲಿ ತೊಡಗಬಹುದು.

## ಬ್ರಹ್ಮಾಂಡದಲ್ಲಿ ಭಗವಂತನ ರೂಪಚಿಂತನೆ

**ವಿಶೇಷಸ್ತಸ್ಯ ದೇಹೋSಯಂ ಸ್ಥವಿಷ್ಠಶ್ಚ ಸ್ಥವೀಯಸಾಮ್ ।**
**ಯತ್ರೇದಂ ದೃಶ್ಯತೇ ವಿಶ್ವಂ ಭೂತಂ ಭವ್ಯಂ ಭವಚ್ಚ ಯತ್ ॥೨೪॥**

ಭಗವಂತನ ಸ್ಥೂಲ ರೂಪದ ಉಪಾಸನೆಯನ್ನು ವಿವರಿಸುತ್ತಾ ಶುಕಾಚಾರ್ಯರು ಹೇಳುತ್ತಾರೆ: "ಈ ಬ್ರಹ್ಮಾಂಡ ಆತನ ಅತ್ಯಂತ ದೊಡ್ಡ ಸ್ಥೂಲ ಪ್ರತೀಕ" ಎಂದು. ಇಲ್ಲಿ 'ವಿಶೇಷ' ಎನ್ನುವ ಪದವನ್ನು ಬಳಸಲಾಗಿದೆ. ವೈದಿಕ ಸಂಸ್ಕೃತದಲ್ಲಿ 'ವಿಶೇಷ' ಎಂದರೆ ಭೂಮಿ. ಪಂಚಭೂತಗಳಲ್ಲಿ ವಿಶೇಷವಾಗಿ ಎಲ್ಲಾ ಗುಣಗಳು(ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ) ಅಭಿವ್ಯಕ್ತವಾಗುವುದು ಪೃಥ್ವಿಯಲ್ಲಿ. ಹಾಗಾಗಿ ಭೂಮಿಯನ್ನು 'ವಿಶೇಷ' ಎಂದೂ ಕರೆಯುತ್ತಾರೆ. ಬ್ರಹ್ಮಾಂಡ ಕೂಡಾ ಪಾರ್ಥಿವವಾಗಿರುವುದರಿಂದ ಅದನ್ನೂ ಕೂಡಾ 'ವಿಶೇಷ' ಎಂದು ಕರೆಯುತ್ತಾರೆ. ಕೇವಲ ಭೂಮಿಯಷ್ಟೇ ಅಲ್ಲ, ಇಡೀ ಬ್ರಹ್ಮಾಂಡವೇ ಭಗವಂತನ ಪ್ರತೀಕ. ಮೇಲಿನ ಶ್ಲೋಕದಲ್ಲಿ ಬ್ರಹ್ಮಾಂಡವೇ ಭಗವಂತನ ದೇಹ ಎಂದಿದ್ದಾರೆ. ನಾವು ಸಾಮಾನ್ಯವಾಗಿ ದೇಹ ಮತ್ತು ಶರೀರ ಎನ್ನುವ ಪದವನ್ನು ಒಂದೇ ಅರ್ಥದಲ್ಲಿ ಬಳಸುತ್ತೇವೆ. ಆದರೆ ಈ ಎರಡು ಶಬ್ದಗಳ ನಿರ್ವಚನದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ದೇಹ ಎಂದರೆ 'ಬೆಳೆಯುವಂತಹದ್ದು', ಶರೀರ ಎಂದರೆ 'ಒಂದು ದಿನ ಬಿದ್ದು ಹೋಗುವಂತಹದ್ದು'. ಭಗವಂತನಿಗೆ ನಮ್ಮಂತೆ ಸುಖ-ದುಃಖವನ್ನು ಅನುಭವಿಸುವ ಹಾಗೂ ಒಂದು ದಿನ ಬಿದ್ದುಹೋಗುವ ಶರೀರವಿಲ್ಲ. ಸ್ವರೂಪಭೂತವಾದ ದೇಹವೇ ಆತನ ನಿಜವಾದ ದೇಹ. ಆದ್ದರಿಂದ ಮೇಲಿನ ಶ್ಲೋಕದಲ್ಲಿ ದೇಹ ಎಂದರೆ ಪ್ರತೀಕ ಅಥವಾ ಅಧಿಷ್ಠಾನ ಎಂದರ್ಥ. ಮನೆಯಲ್ಲಿ ಪೂಜಿಸುವ ಶಾಲಗ್ರಾಮವೂ ಭಗವಂತನ ಪ್ರತೀಕ. ಅಣುವಿನಲ್ಲಿ ಅಣುವಾಗಿರುವ, ಜೀವದಲ್ಲಿರುವ ಬಿಂಬರೂಪಿ ಭಗವಂತ ಸೂಕ್ಷ್ಮಾತಿ-ಸೂಕ್ಷ್ಮ ಪ್ರತೀಕವಾದರೆ, ಬ್ರಹ್ಮಾಂಡದಲ್ಲಿರುವ ಭಗವಂತ ಸ್ಥೂಲದಲ್ಲಿ ಸ್ಥೂಲ ಪ್ರತೀಕ. ಇಡೀ ಜೀವಜಾತ ಯಾವ ಬ್ರಹ್ಮಾಂಡದೊಳಗೆ ಹಿಂದೆ ಇತ್ತೋ, ಈಗ ಇದೆಯೋ, ಮುಂದೆ ಇರುತ್ತದೋ ಅಂತಹ ಇಡೀ ಜೀವಜಾತಕ್ಕೆ ಆಸರೆಯಾಗಿರುವ ಈ ಬ್ರಹ್ಮಾಂಡ ಭಗವಂತನ ಅತಿ ದೊಡ್ಡ ಪ್ರತೀಕ. ಇಂತಹ ಭಗವಂತನನ್ನು ಬ್ರಹ್ಮಾಂಡದಲ್ಲಿ ಅಂತರ್ಯಾಮಿಯಾಗಿ ಕಂಡು ಧ್ಯಾನದಲ್ಲಿ ಚಿಂತಿಸಬೇಕು.

ಆಂಡಕೋಶೇ ಶರೀರೇSಸ್ಮಿನ್ ಸಪ್ತಾವರಣಸಂಯುತೇ ।
ವೈರಾಜಃ ಪುರುಷೋ ಯೋSಸೌ ಭಗವಾನ್ ಧಾರಣಾಶ್ರಯಃ ॥೨೫॥

ಪಾತಾಲಮೇತಸ್ಯ ಹಿ ಪಾದಮೂಲಂ ಪಠಂತಿ ಪಾರ್ಷ್ಣಿಪ್ರಪದೇ ರಸಾತಲಮ್ ।
ಮಹಾತಲಂ ವಿಶ್ವಸೃಜಃ ಸುಗುಲ್ಫೌ ತಲಾತಲಂ ವೈ ಪುರುಷಸ್ಯ ಜಂಘೇ ॥೨೬॥

ದ್ವೇ ಜಾನುನೀ ಸುತಲಂ ವಿಶ್ವಮೂರ್ತೇಃ ರೂರುದ್ವಯಂ ವಿತಲಂ ಚಾತಲಂ ಚ ।
ಮಹೀತಲಂ ತಜ್ಜಘನಂ ಮಹೀಪತೇ ನಭಸ್ತಲಂ ನಾಭಿಸರೋ ಗೃಣಂತಿ ॥೨೭॥

ಉರಃಸ್ಥಲಂ ಜ್ಯೋತಿರನೀಕಮಸ್ಯ ಗ್ರೀವಾ ಮಹರ್ವದನಂ ವೈ ಜನೋಽಸ್ಯ ।
ತಪೋ ರರಾಟಿಂ ವಿದುರಾದಿಪುಂಸಃ ಸತ್ಯಂ ತು ಶೀರ್ಷಾಣಿ ಸಹಸ್ರಶೀರ್ಷ್ಣಃ ॥೨೮॥

ಮೊಟ್ಟೆಯ ಆಕಾರದಂತೆ ಹಾಗೂ ಕಮಲದ ಮೊಗ್ಗಿನಂತಿರುವ ಬ್ರಹ್ಮಾಂಡವನ್ನು ಆಂಡಕೋಶ ಎಂದು ಕರೆಯುತ್ತಾರೆ.(ಇತ್ತೀಚೆಗಿನ ಕೋಶಗಳಲ್ಲಿ ಅಂಡಕೋಶ ಎಂದಿದೆ, ಆದರೆ 'ಆಂಡ' ಎನ್ನುವುದು ಪ್ರಾಚೀನ ಶಬ್ದ) ಭಗವಂತನ ನಾಭಿಯಿಂದ ಚಿಮ್ಮಿದ ನಾಭೀಕಮಲವೇ ಈ ಬ್ರಹ್ಮಾಂಡ. ಪಂಚಭೂತಗಳು, ಅಹಂಕಾರತತ್ತ್ವ ಮತ್ತು ಮಹತತ್ತ್ವಗಳೆಂಬ ಏಳು ಆವರಣಗಳು ಈ ಬ್ರಹ್ಮಾಂಡವನ್ನಾವರಿಸಿದೆ. ಅದರಲ್ಲಿ ತುಂಬಿರುವ ಭಗವಂತ ವೈರಾಜ ಪುರುಷ. ಇದೇ ಕಾರಣಕ್ಕೆ ಬ್ರಹ್ಮಾಂಡವನ್ನು ವಿರಾಟ್ ಎಂದೂ ಕರೆಯುತ್ತಾರೆ. ಈ ಬ್ರಹ್ಮಾಂಡದಲ್ಲಿ ತುಂಬಿರುವ ಭಗವಂತನನ್ನು ಹೇಗೆ ಮನಸ್ಸಿನಲ್ಲಿ ನೆಲೆಗೊಳಿಸಬೇಕು ಎನ್ನುವುದನ್ನು ಇಲ್ಲಿ ಶುಕಾಚಾರ್ಯರು ವರ್ಣಿಸಿದ್ದಾರೆ. [ಪುರುಷಸೂಕ್ತದಲ್ಲಿ ಬಂದಿರುವ ಭಗವಂತನ ರೂಪಚಿಂತನೆಯನ್ನೇ ಇಲ್ಲಿ ಭಾಗವತ ವರ್ಣಿಸುವುದನ್ನು ಕಾಣುತ್ತೇವೆ. ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ| ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ|೧೩| ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ | ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾನ್ ಅಕಲ್ಪಯನ್ |೧೪|-ಎನ್ನುವ ಪುರುಷಸೂಕ್ತದ ಮಾತನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು] ಪ್ರಾಚೀನರು ಬ್ರಹ್ಮಾಂಡವನ್ನು ಹದಿನಾಲ್ಕು ವಿಭಾಗವಾಗಿ ವಿಂಗಡಿಸಿದರು. ಅವುಗಳೆಂದರೆ: ಅತಳ, ವಿತಳ, ಸುತಳ, ತಳಾತಳ, ಮಹಾತಳ, ರಸಾತಳ, ಪಾತಾಳ, ಭೂಃ, ಭುವಃ, ಸ್ವಃ, ಮಹಃ, ಜನಃ ತಪಃ, ಮತ್ತು ಸತ್ಯಲೋಕ. ಮಧ್ಯದಲ್ಲಿ ಭೂಮಿ ಹಾಗೂ ಅದರ ಕೆಳಗೆ ಏಳು ಹಾಗೂ ಭೂಮಿ ಸಹಿತವಾಗಿ ಅದರಿಂದ ಮೇಲೆ ಏಳು ಲೋಕಗಳಿರುವ ಈ ಬ್ರಹ್ಮಾಂಡವನ್ನು ಚತುರ್ದಶ ಭುವನ ಎಂದು ಕರೆಯುತ್ತಾರೆ. ಈ ಹದಿನಾಲ್ಕು ಲೋಕಗಳಲ್ಲಿ ಭಗವಂತನ ಅವಯವ ಚಿಂತನೆ ಹೇಗೆ ಮಾಡಬೇಕು ಎನ್ನುವುದನ್ನು ಮೇಲಿನ ಶ್ಲೋಕದಲ್ಲಿ ವರ್ಣಿಸಲಾಗಿದೆ.

ಪಾತಾಳಲೋಕ ಭಗವಂತನ ಪಾದದ ತಳಭಾಗ, ರಸಾತಳ ಲೋಕ ಆತನ ಪಾದದ ಹಿಮ್ಮಡಿ ಮತ್ತು ಮುಂಗಾಲು(ಬೆರಳಿನ ಭಾಗ). ಮಹಾತಳ ಆತನ ಪಾದದ ಮೇಲಿನ ಎರಡು ಗಂಟುಗಳು(ಮಣಿಗಂಟು), ಜಂಘೇ(ಮೀನಖಂಡ, **shanks)**ತಳಾತಳ. ಮೊಣಕಾಲು**(Knees)** ಸುತಳ ಹಾಗೂ ಎರಡು ತೊಡೆಗಳು ವಿತಳ ಮತ್ತು ಅತಳ. ಈ ರೀತಿ ಭಗವಂತನ ಪಾದದಿಂದ ಸೊಂಟದ ತನಕ ಇರತಕ್ಕಂತಹ ಭಾಗ ಕೆಳಗಿನ ಏಳು ಲೋಕಗಳಲ್ಲಿ ತುಂಬಿದೆ ಮತ್ತು ಈ ಲೋಕಗಳು ಭಗವಂತನ ಈ ಅವಯವಗಳಲ್ಲಿ ಆಶ್ರಿತವಾಗಿವೆ ಎಂದು ಚಿಂತನೆ ಮಾಡಬೇಕು.

ಭಗವಂತನ ಸೊಂಟದ ಭಾಗ ಭೂಮಿ, ಭಗವಂತನ ನಾಭಿ ಅಂತರಿಕ್ಷ, ನಾಭಿಯಿಂದ ಮೇಲಿನ ಹೃದಯದ ಭಾಗ ದೇವತೆಗಳ ಲೋಕ(ಸ್ವರ್ಗಲೋಕ), ಎದೆಯಿಂದ ಮೇಲೆ ಕುತ್ತಿಗೆ ತನಕ ಮಹರ್ಲೋಕ, ಕುತ್ತಿಗೆಯಿಂದ ಕಣ್ಣಿನ ತನಕ ಜನರ್ಲೋಕ, ರರಾಟ(ನೆತ್ತಿ/ಹುಬ್ಬು) ಸ್ಥಾನದಲ್ಲಿ ತಪೋಲೋಕ ಮತ್ತು ಸಹಸ್ರಶೀರ್ಷನಾದ ಪುರುಷನ ಶಿರಸ್ಸು ಸತ್ಯಲೋಕದಲ್ಲಿ ತುಂಬಿದೆ. ಈ ರೀತಿ ಇಡೀ ವಿಶ್ವದಲ್ಲಿ ಭಗವಂತನ ಪಾದದಿಂದ ಶಿರಸ್ಸಿನ ತನಕ ತುಂಬಿರುವ ವಿಶ್ವರೂಪದ ಚಿಂತನೆ ಮಾಡಬೇಕು. ಆಯಾ ಲೋಕಗಳು ಭಗವಂತನ ಸ್ವರೂಪದೇಹದ ಆಯಾ ಭಾಗಗಳಿಂದ ಉತ್ಪನ್ನವಾಗಿವೆ ಮತ್ತು ಅದರಲ್ಲಿ ಆಶ್ರಯಿಸಿಕೊಂಡಿವೆ ಎಂದು ಚಿಂತನೆ ಮಾಡಬೇಕು.

ಬ್ರಹ್ಮಾಂಡದಲ್ಲಷ್ಟೇ ಅಲ್ಲದೆ ಪಿಂಡಾಂಡದಲ್ಲಿ ಕೂಡಾ ಭಗವಂತನ ಹದಿನಾಲ್ಕು ಲೋಕಗಳ ಚಿಂತನೆ ಮಾಡಬಹುದು. ಮೂಲಭೂತವಾಗಿ ಹದಿನಾಲ್ಕು ಲೋಕಗಳನ್ನು ಮೂರು ಲೋಕವಾಗಿ ಮತ್ತು ಏಳು ಲೋಕವಾಗಿ ಶಾಸ್ತ್ರಕಾರರು ವಿಭಾಗಮಾಡಿ ಹೇಳುತ್ತಾರೆ. ಭೂಮಿ ಮತ್ತು ಭೂಮಿಯಿಂದ ಕೆಳಗಿನ ಲೋಕಗಳನ್ನು ಒಟ್ಟಿಗೆ ಒಂದು ಲೋಕವಾಗಿ ಕಂಡು ಅದನ್ನು ಭೂಃ ಎಂದು, ನಂತರ ಅಂತರಿಕ್ಷವನ್ನು ಭುವಃ ಎಂದೂ ಮತ್ತು ಅಲ್ಲಿಂದ ಮೇಲಕ್ಕಿರುವ ಐದು ಲೋಕಗಳನ್ನು ಸುವಃ ಎಂದು ಒಟ್ಟಿಗೆ ಮೂರು ವಿಭಾಗ ಮಾಡುತ್ತಾರೆ. ಅದೇ ರೀತಿ ಭೂಮಿ ಹಾಗೂ ಭೂಮಿಯಿಂದ ಕೆಳಗಿನ ಲೋಕಗಳನ್ನು ಒಂದು ಲೋಕವಾಗಿ ಹಾಗೂ ಅದರ ಜೊತೆಗೆ ಮೇಲಿನ ಆರು ಲೋಕಗಳನ್ನು ಸೇರಿಸಿ ಒಟ್ಟಿಗೆ ಏಳು ಲೋಕಗಳಾಗಿ ವಿಭಾಗ ಮಾಡುತ್ತಾರೆ. ಬ್ರಹ್ಮಾಂಡವನ್ನು ಮೂರು ಲೋಕಗಳಾಗಿ ಕಂಡಾಗ ಭಗವಂತನ ಕಾಲಿನಲ್ಲಿ ಭೂಮಿ, ನಾಭಿಯಲ್ಲಿ ಅಂತರಿಕ್ಷ ಹಾಗೂ ಶಿರಸ್ಸಿನಲ್ಲಿ ಸ್ವರ್ಗದ ಚಿಂತನೆ ಮಾಡುತ್ತಾರೆ.

## ಭಗವಂತನ ಮುಖಾರವಿಂದ

**ಛಂದಾಂಸ್ಯನಂತಸ್ಯ ಗಿರೋ ಗೃಣಂತಿ ದಂಷ್ಟ್ರಾರ್ಯಮೇಂದೂಡುಗಣಾ ದ್ವಿಜಾನಿ ।**
**ಹಾಸೋ ಜನೋನ್ಮಾದಕರೀ ಚ ಮಾಯಾ ದುರಂತಸರ್ಗೋ ಯದಪಾಂಗಮೋಕ್ಷಃ ॥೩೧॥**

ಭಗವಂತನ ಮುಖದಲ್ಲೇ ಮೂರು ಲೋಕಗಳ ಚಿಂತನೆಯ ಒಂದು ಕ್ರಮವಿದೆ. ನಮಗೆ ತಿಳಿದಂತೆ ಭೂಸ್ಥಾನ ಅಗ್ನಿಯ ಸ್ಥಾನ, ಅಂತರಿಕ್ಷ ವಾಯುವಿನ ಸ್ಥಾನ ಹಾಗೂ ಸ್ವರ್ಗ ಆದಿತ್ಯನ ಸ್ಥಾನ. ಆದ್ದರಿಂದ ವೇದದಲ್ಲಿ *'ಭೂರ್ಭುವ ಸ್ವಃ'* ಎಂದರೆ ಅಗ್ನಿ-ವಾಯು-ಆದಿತ್ಯ ಎನ್ನುವ ಮೂರು ಪ್ರತೀಕಗಳಿಂದ ಭಗವಂತನ ಉಪಾಸನೆ. ಮುಖದಲ್ಲಿ ಅಗ್ನಿಯ ಸ್ಥಾನ-ಬಾಯಿ, ವಾಯುವಿನ ಸ್ಥಾನ-ಉಸಿರು ಮತ್ತು ಆದಿತ್ಯನ ಸ್ಥಾನ-ಕಣ್ಣು. ಹೀಗೆ ಮುಖದಲ್ಲಿ ಮೂರು ಲೋಕಗಳ ಮತ್ತು ಆ ಮೂರು ಲೋಕಗಳಲ್ಲಿ ತುಂಬಿರುವ ಭಗವಂತನ ಸ್ಥೂಲ ಚಿಂತನೆ ಮಾಡಬಹುದು.

ಈ ಮೇಲಿನ ಶ್ಲೋಕದಲ್ಲಿ ಶುಕಾಚಾರ್ಯರು ಭಗವಂತನ ಮುಖದ ಚಿತ್ರಣ ಕೊಡುತ್ತಾ ಹೇಳುತ್ತಾರೆ: ಸಮಸ್ತ ವೈದಿಕ ವಾಙ್ಮಯಗಳೇ ಆತನ ನುಡಿಮುತ್ತುಗಳು; ಸೂರ್ಯ-ಚಂದ್ರರೇ ಆತನ ಕೋರೆ ದಾಡೆಗಳು; ಅಂತರಿಕ್ಷದಲ್ಲಿರುವ ನಕ್ಷತ್ರಗಳೇ ಆತನ ಹಲ್ಲುಗಳು; ಈ ವಿಶ್ವವನ್ನು ಮರಳುಗೊಳಿಸುವ ಮಾಯೆಯೇ ಆತನ ಮುಗುಳ್ನಗೆ; ಕೊನೆಗಾಣದ ಈ ಸೃಷ್ಟಿಯೇ ಆತನ ಕಣ್ಣನೋಟ" ಎಂದು. ಈ ರೀತಿ ಭಗವಂತನ ವಿಶ್ವರೂಪದ ಚಿತ್ರಣ ಇನ್ನೂ ವಿಸ್ತಾರವಾಗಿದೆ ಆದರೆ ನಮಗೆ ಸ್ಥೂಲವಾಗಿ ಇಷ್ಟು ತಿಳಿದಿದ್ದರೂ ಸಾಕು, ಅದನ್ನೇ ನಾವು ಧ್ಯಾನದಲ್ಲಿ ಕಾಣುವ ಪ್ರಯತ್ನ ಮಾಡಬಹುದು.

ಗಾಯತ್ರಿ ಧ್ಯಾನ ಮಾಡುವವರಿಗೆ ಗಾಯತ್ರೀ ಪ್ರತಿಪಾದ್ಯ ನಾರಾಯಣನನ್ನು ಚಿಂತಿಸುವ ರೂಪದ ವಿವರಣೆ ಹೀಗಿದೆ: "ಉದಯಿಸಿರುತ್ತಿರುವ ಸೂರ್ಯಮಂಡಲದ ಮಧ್ಯದಲ್ಲಿ ಕಮಲದ ಮೇಲೆ ಪದ್ಮಾಸನ ಹಾಕಿ ಕುಳಿತುಕೊಂಡಿರುವವನು,

ತೋಳುಗಳಲ್ಲಿ ತೋಳುಬಳೆ, ಕಿವಿಗಳಲ್ಲಿ ಮೊಸಳೆಯಾಕರದ ಕುಂಡಲಗಳು (ಮಕರ ಕುಂಡಲ), ತಲೆಯ ಮೇಲೆ ಕಿರೀಟ, ಕೊರಳಿನಲ್ಲಿ ಹಾರ ವಿರಾಜಿಸುತ್ತಿದೆ. ಎರಡು ಕೈಗಳಲ್ಲಿ ಶಂಖ-ಚಕ್ರ, ಇನ್ನೆರಡು ಕೈಗಳನ್ನು ತೊಡೆಯಮೇಲಿಟ್ಟಿರುವವನು, ಇಂತಹ ಚಿನ್ನದ ಮೈಬಣ್ಣದ ನಾರಾಯಣನನ್ನು ಧ್ಯಾನಿಸಬೇಕು" ಎನ್ನುತ್ತಾರೆ. ಆದರೆ ಒಮ್ಮೆಗೇ ಇಂತಹ ರೂಪವನ್ನು ಧ್ಯಾನದಲ್ಲಿ ಕಾಣಲು ಸಾಧ್ಯವಾಗದು. ಅದಕ್ಕಾಗಿ ಶುಕಾಚಾರ್ಯರು "***ಸ್ಥೂಲೇ ಭಗವತೋ ರೂಪೇ***" ಎಂದಿದ್ದಾರೆ. ಮೊದಲು ಸೂರ್ಯಮಂಡಲವನ್ನು ಕಣ್ಮುಚ್ಚಿ ನೋಡಿ, ಅದರಲ್ಲಿ ಸೂರ್ಯನಾರಾಯಣನಿದ್ದಾನೆ ಎಂದು ಸ್ಥೂಲ ಪ್ರತೀಕದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಬೇಕು. ನಂತರ ನಿಧಾನವಾಗಿ ಭಗವಂತನ ರೂಪ ಕಾಣಿಸುತ್ತದೆ. ಈ ಹಿಂದೆ ಹೇಳಿದಂತೆ ಭಗವಂತನ ರೂಪವನ್ನು ಧ್ಯಾನ ಮಾಡುವಾಗ ಪೂರ್ಣ ರೂಪವನ್ನು ಧ್ಯಾನಿಸದೇ ಯಾವುದೋ ಒಂದು ಅಂಗದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಬೇಕು.

*॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಪ್ರಥಮೋಽಧ್ಯಾಯಃ ॥*

ಭಾಗವತ ಮಹಾಪುರಾಣದ ಎರಡನೇ ಸ್ಕಂಧದ ಒಂದನೇ ಅಧ್ಯಾಯ ಮುಗಿಯಿತು

*************

# ದ್ವಿತೀಯೋऽಧ್ಯಾಯಃ

## ಸರ್ವಶಬ್ದಗಳಲ್ಲಿ, ಸರ್ವ ನಾದಗಳಲ್ಲಿ ಭಗವಂತನನ್ನು ಕಾಣುವುದು

**ಶ್ರೀಶುಕ ಉವಾಚ--**

ಶಬ್ದಸ್ಯ ಹಿ ಬ್ರಹ್ಮಣ ಏಷ ಪಂಥಾ ಯನ್ನಾಮಭಿರ್ಧ್ಯಾಯತಿ ಧೀರಪಾರ್ಥೈಃ ।
ಪರಿಭ್ರಮಂಸ್ತತ್ರ ನ ವಿಂದತೇऽರ್ಥಾನ್ಮಾಯಾಮಯೇ ವಾಸನಯಾ ಶಯಾನಃ ॥೦೨॥

ಧ್ಯಾನ ಪ್ರಕ್ರಿಯೆಯನ್ನು ವಿವರಿಸುತ್ತಾ ಶುಕಾಚಾರ್ಯರು ಇಲ್ಲಿ ಒಂದು ವಿಶೇಷ ಹಾಗೂ ಅತ್ಯಂತ ಮಹತ್ತರವಾದ ವಿಷಯವನ್ನು ಪರೀಕ್ಷಿತನಿಗೆ ವಿವರಿಸುವುದನ್ನು ಕಾಣುತ್ತೇವೆ. "ಧ್ಯಾನ ಸಾಧನೆ ಮಾಡುತ್ತಾ-ಮಾಡುತ್ತಾ ಮುಂದುವರಿದು ಪ್ರಪಂಚದಲ್ಲಿನ ಎಲ್ಲಾ ಶಬ್ದಗಳಲ್ಲಿ ಭಗವಂತನನ್ನು ಕಾಣಬೇಕು" ಎಂದಿದ್ದಾರೆ ಶುಕಾಚಾರ್ಯರು. ಇಲ್ಲಿ ಶಬ್ದ ಎಂದರೆ ಕೇವಲ ಸಂಸ್ಕೃತ ಶಬ್ದವಷ್ಟೇ ಅಲ್ಲ, ಪ್ರಪಂಚದ ಎಲ್ಲಾ ಭಾಷೆಯ ಎಲ್ಲಾ ಶಬ್ದಗಳು, ಜೊತೆಗೆ ಪ್ರಾಣಿ-ಪಕ್ಷಿಗಳ ಮತ್ತು ಪ್ರಕೃತಿಯ ನಾದ (ಪಕ್ಷಿಗಳ ಚಿಲಿಪಿಲಿ, ಪ್ರಾಣಿಗಳ ಕೂಗು, ನೀರಿನ ಝುಳು-ಝುಳು, ಸಮುದ್ರದ ಮೊರೆತ, ಗಾಳಿಯ ಸುಯಿಲು, ಎಲೆಗಳ ಮರ್ಮರ), ಎಲ್ಲವುದರಲ್ಲೂ ಭಗವಂತನನ್ನು ಕಾಣಬೇಕು. ಇದನ್ನೇ ಐತರೇಯ ಅರಣ್ಯಕದಲ್ಲಿ ಹೀಗೆ ಹೇಳಿದ್ದಾರೆ: ***"ಸರ್ವೇ ಘೋಷಾಃ ಸರ್ವೇ ವೇದಾಃ ಸರ್ವಾಃ ರಚಃ ಏಕೈವ ವ್ಯಾಹೃತಿಃ"*** ಕೇವಲ ಶಬ್ದಗಳಿಗೆ ಮಾತ್ರ ಅರ್ಥವಿರುವುದಲ್ಲ, ನಾದಗಳಿಗೂ ಅರ್ಥವಿದೆ. ನಾದದಿಂದ ಒಂದು ಮಾತಿಗೆ ಹೊಸ ಅರ್ಥ ಬರುತ್ತದೆ. ಪ್ರತೀ ಮಾತಿನಲ್ಲೂ ಒಂದು ಸಂಗೀತವಿದೆ. ನಾದ ಸಂಯೋಜನೆ ಇಲ್ಲದೇ ಭಾವಾಭಿವ್ಯಕ್ತಿ ಆಗುವುದೇ ಇಲ್ಲ. ವಾಸ್ತವವಾಗಿ ಶಬ್ದಗಳಿಗೆ ಅರ್ಥ ಹುಟ್ಟುವುದೇ ನಾದದಿಂದ. ಆದ್ದರಿಂದ ನಾದವೂ ಕೂಡಾ ಒಂದು ಪ್ರತ್ಯೇಕ ಭಾಷೆ. ಹೀಗಾಗಿ ಋಗ್ವೇದ-ಯಜುರ್ವೇದದ ಮಂತ್ರಗಳೇ ಇರುವ ಸಾಮವೇದ, ಅಲ್ಲಿರುವ ನಾದದಿಂದಾಗಿ ಪ್ರತ್ಯೇಕ ವೇದ ಶಾಖೆಯಾಯಿತು. ಅದು ಸಂಗೀತದ ಭಾಷೆಯಲ್ಲಿ ಭಗವಂತನನ್ನು ಸ್ತೋತ್ರ ಮಾಡುವ ವೇದಶಾಖೆ.

ಸಂಗೀತದಲ್ಲಿ ಇಂದು ಅನೇಕ ಸಂಗತಿಗಳು ಮರೆತು ಹೋಗಿವೆ. ಹಿಂದೂಸ್ತಾನಿ ಸಂಗೀತದಲ್ಲಿ ಆಲಾಪ ಮಾಡುವಾಗ 'ನೋಂ-ನೋಂ' ಎನ್ನುತ್ತಾರೆ. ಇದು '*ನಮೋ ನಾರಾಯಣಾಯ*' ಎನ್ನುವುದರ ಸಂಕ್ಷೇಪಪದ**(abbreviation)**. ಇದೇ ರೀತಿ ತಬಲಾ/ಮೃದಂಗ ಬಾರಿಸುವಾಗ ಅದಕ್ಕೆ ಅನುಕರಣೆ ಮಾಡುವ ಅನೇಕ ಧ್ವನಿಗಳಿವೆ. ಉದಾಹರಣೆಗೆ: ಧಿಮಿತ ಧಿಮಿತ ಧಿಮಿ, ಧಿಮಿಕಿಟ ಕಿಟತೊಂ, ತೋಂ ತೋಂ ತರಿಕಿಟ, ತರಿಕಿಟ ಕಿಟತೊಂ..ಇತ್ಯಾದಿ. ಆದರೆ ಈ ಧ್ವನಿಯ ಹಿಂದಿನ ಅರ್ಥ ಏನು ಎನ್ನುವುದು ಇಂದು ಖಚಿತವಾಗಿ ನಮಗೆ ತಿಳಿದಿಲ್ಲ. ಇಲ್ಲಿ ತರಿಕಿಟ ಎನ್ನುವಲ್ಲಿ ಕರಿಕಿಟ ಅಥವಾ ಇನ್ನೇನೋ ಹೇಳುವಂತಿಲ್ಲ. ಏಕೆಂದರೆ ಈ ಎಲ್ಲಾ ಧ್ವನಿಯ ಹಿಂದೆ ಒಂದು ಅಪೂರ್ವವಾದ ಆಧ್ಯಾತ್ಮಿಕ ಅರ್ಥ ಚಿಂತನೆ ಅಡಗಿದೆ.

ವಿಶ್ವದಲ್ಲಿ ವಿರಾಟ್ ಪುರುಷನಾಗಿ ತುಂಬಿರುವ ಭಗವಂತನೇ ಎಲ್ಲಾ ಶಬ್ದಗಳಿಗೂ ಕೊನೇಯ ಆಸರೆ. ಯಾವ ಶಬ್ದವೇ ಇರಲೀ, ಅದು ಅಂತತಃ ಭಗವಂತನ ನಾಮವೇ ಆಗಿರುತ್ತದೆ. ಪ್ರತಿಯೊಂದು ಶಬ್ದದ ಮೂಲತತ್ತ್ವ/ಸಾರ**(essence)** ಆ ಭಗವಂತ. ಉದಾಹರಣೆಗೆ ಆತ್ಮ. ಆತ್ಮ ಎನ್ನುವುದರ ಸ್ಥೂಲ ಅರ್ಥ ದೇಹ. ಆದರೆ ಇನ್ನೂ ಆಳಕ್ಕೆ ಹೋದರೆ ಆತ್ಮ ಎಂದರೆ ಮನಸ್ಸು, ಚಿತ್ತ, ಚೇತನ, ಇತ್ಯಾದಿ. ಆದರೆ ಎಲ್ಲಕ್ಕಿಂತ ಸೂಕ್ಷ್ಮವಾಗಿ ನೋಡಿದರೆ ಆತ್ಮ ಎಂದರೆ ಪರಮಾತ್ಮ. ಇದೇ ರೀತಿ ನಾವು 'ಇವರು ಇಂತವರು' ಎಂದು ಒಬ್ಬ ವ್ಯಕ್ತಿಯ ಶರೀರವನ್ನು ತೋರಿಸುತ್ತೇವೆ. ಆದರೆ ನಾವು ತೋರಿಸುವುದು ಕೇವಲ ಆ ವ್ಯಕ್ತಿಯ ಶರೀರವನ್ನಲ್ಲ; ಶರೀರದೊಳಗಿರುವ ಚೇತನ ಹಾಗೂ ಅಂತತಃ

ಚೇತನದೊಳಗಿರುವ ಬಿಂಬ ರೂಪಿ ಭಗವಂತನನ್ನು. ಹೀಗೆ ಪ್ರತಿಯೊಂದು ಶಬ್ದ ಅಂತತಃ ಭಗವಂತನನ್ನೇ ಹೇಳುತ್ತದೆ. ಆದರೆ ಅದನ್ನು ಸೂಕ್ಷ್ಮವಾಗಿ ಗ್ರಹಿಸುವ ಶಕ್ತಿ ನಮಗೆ ಬೇಕು. ಹೇಗೆ ಪ್ರಹ್ಲಾದ ಕಂಬದೊಳಗೆ ಭಗವಂತನನ್ನು ಕಂಡನೋ ಹಾಗೇ ನಾವೂ ಕೂಡಾ ಪ್ರತೀ ಶಬ್ದ-ನಾದದಲ್ಲಿ ಭಗವಂತನನ್ನು ಕಾಣಬೇಕು.

ಎಲ್ಲಾ ನಾದಗಳೂ ಭಗವಂತನನ್ನು ಹೇಳುತ್ತವೆ ಎನ್ನುವುದು ಒಂದು ರೋಚಕವಾದ ಸಂಗತಿ. ವೇದದಲ್ಲಿ ಉದಾತ್ತ, ಅನುದಾತ್ತ, ಸ್ವರಿತ ಹಾಗೂ ಪ್ರಚಯ ಎನ್ನುವ ನಾಲ್ಕು ಸ್ವರಗಳನ್ನು ಕಾಣುತ್ತೇವೆ(ಸಾಮವೇದದಲ್ಲಿ ಸಪ್ತ ಸ್ವರಗಳಿವೆ). ಈ ನಾಲ್ಕು ಸ್ವರಗಳಿಗೆ ಅದರದ್ದೇ ಆದ ವಿಶೇಷ ಅರ್ಥವಿದೆ. ಅನುದಾತ್ತ ಎಂದರೆ ಸ್ವರವನ್ನು ಕೆಳಕ್ಕೆ ಒತ್ತುಕೊಟ್ಟು ಹೇಳುವುದು. ಹಾಗಾಗಿ ಇದು ದಾರ್ಢ್ಯ(confirmation)ವನ್ನು ಹೇಳುತ್ತದೆ.[ ಉದಾಹರಣೆಗೆ 'ಖಂಡಿತ' ಎನ್ನುವ ಪದ. ಈ ಪದದಲ್ಲಿ 'ಖ' ಅನುದಾತ್ತ ಮತ್ತು ಇದು ನಿಶ್ಚಿತತೆಯನ್ನು ಹೇಳುತ್ತದೆ]. ಉದಾತ್ತದಲ್ಲಿ ಮೇಲಕ್ಕೆ ಒತ್ತುಕೊಡಲಾಗುತ್ತದೆ. ಹಾಗಾಗಿ ಇದು 'ಉಚ್ಚತೆ'ಯನ್ನು ಹೇಳುತ್ತದೆ. ಹೀಗೇ ಸ್ವರಿತ ನೀಚತ್ವವನ್ನೂ ಹಾಗೂ ಪ್ರಚಯ ಯಥಾಸ್ಥಿತಿಯನ್ನೂ ಹೇಳುತ್ತದೆ. ಇಂತಹ ಸ್ವರ ಪ್ರಕ್ರಿಯೆ ಎಲ್ಲಾ ಭಾಷೆಗಳಿಗೂ ಅನ್ವಯ. ಆದರೆ ಇದನ್ನು ವೇದದಲ್ಲಿ ಮಾತ್ರ ಕಡ್ಡಾಯವಾಗಿ ಉಳಿಸಿಕೊಳ್ಳಲಾಗಿದೆ. ಉದಾಹರಣೆಗೆ ಋಗ್ವೇದದ ಮೊದಲ ಮಂತ್ರ "***ಅಗ್ನಿಮೀ"ಳೇ ಪುರೋಹಿತಂ***" ಎನ್ನುವಲ್ಲಿ ಅಗ+ನಿ=ಅಗ್ನಿ. ಅಂದರೆ ಸ್ವತಃ ಚಲಿಸಲಾಗದ ವಸ್ತುವಿಗೆ ಚಲನೆ ಕೊಡುವ ಶಕ್ತಿ. ಇಲ್ಲಿ 'ಅಗ' ಎನ್ನುವಲ್ಲಿ 'ಅ' ಅನುದಾತ್ತವಾಗಿದ್ದು ಅದು 'ಸ್ವತಃ ಚಲಿಸಲಾಗದ್ದು' ಎನ್ನುವುದನ್ನು ಧೃಡೀಕರಿಸುತ್ತದೆ. ಅಂದರೆ 'ನಿಶ್ಚಿತವಾಗಿ ಎಂದೆಂದೂ ಸ್ವತಃ ಚಲಿಸಲಾಗದ್ದು' ಎಂದರ್ಥ. ಇನ್ನು ಚಲನೆ ಕೊಡುವ ಶಕ್ತಿಯನ್ನು ಹೇಳುವ 'ನಿ'ಯಲ್ಲಿ ಬರುವ 'ಇ' ಉದಾತ್ತ. ಇದು ಸ್ವತಃ ಚಲನೆ ಇಲ್ಲದ ವಸ್ತುವಿಗೆ ಚಲನೆ ಕೊಡುವ ಶಕ್ತಿಯ(ಭಗವಂತನ) ಉಚ್ಛತೆಯನ್ನು ಹೇಳುತ್ತದೆ. ಅಂದರೆ-"ಅದು(ಭಗವಂತ) ಬಹಳ ದೊಡ್ಡ(ಉಚ್ಛ) ಸಂಗತಿ ಹಾಗಾಗಿ ಅದು ಚಲಿಸಲಾಗದ ವಸ್ತುವಿಗೂ ಚಲನೆ ಕೊಟ್ಟಿತು" ಎನ್ನುವುದನ್ನು ಹೇಳುತ್ತದೆ. ಇನ್ನು ಮೀ"ಳೇ ಎನ್ನುವಲ್ಲಿ ಬಂದಿರುವ ಸ್ವರಿತ('ಈ') ಹಾಗೂ ಪ್ರಚಯ('ಎ') ಕ್ರಮವಾಗಿ ನೀಚತ್ವ ಮತ್ತು ಯಥಾಸ್ಥಿತಿಯನ್ನು ಹೇಳುತ್ತದೆ. "ಚಲನಶೀಲವಲ್ಲದ ಸಮಸ್ತ ಪ್ರಪಂಚಕ್ಕೆ ಉಚ್ಛನಾದ ನೀನು, ಚಲನೆ ಕೊಟ್ಟೆ. ನಿನ್ನನ್ನು ನಾನು ಸ್ತೋತ್ರ ಮಾಡುತ್ತಿದ್ದೇನೆ. ಏಕೆಂದರೆ ನಿನ್ನ ಮುಂದೆ ನಾನು ಅತ್ಯಂತ ಸಣ್ಣವ(ನೀಚ). ನೀನು ಉಚ್ಛ ಹಾಗೂ ನಿನ್ನ ಮುಂದೆ ನಾನು ಸಣ್ಣ ವಸ್ತು. ಇದು ಯಥಾಸ್ಥಿತಿ ಮತ್ತು ಇದೆಂದೂ ಬದಲಾಗುವುದಿಲ್ಲ". ಇದು ನಾಲ್ಕು ಅಕ್ಷರಗಳಲ್ಲಿ ನಮಗೆ ವೇದ ಸ್ವರದ ಮೂಲಕ ತಿಳಿಸುವ ಅರ್ಥ. ನಾದದಿಂದಲೇ ಮಂತ್ರಕ್ಕೆ ವಿಶೇಷ ಅರ್ಥ ಬರುವುದರಿಂದ ಸರಿಯಾದ ಸ್ವರವನ್ನು ಬಳಸದೇ ವೇದ ಮಂತ್ರ ಪಠಿಸುವಂತಿಲ್ಲ. ಹೀಗೆ ಇಡೀ ವೇದ ಒಂದು ವಿಶೇಷ ಅರ್ಥವನ್ನು ನಾದದ ಮುಖೇನ ನಮಗೆ ನೀಡುತ್ತದೆ.

ಸಂಗೀತಮಯವಾಗಿರುವ ಸಾಮವೇದವನ್ನು ಪಠಿಸುವವರು ನಡುವೆ ಅನೇಕ ಸ್ತೋಭಾಕ್ಷರಗಳನ್ನು ಬಳಸುವುದನ್ನು ಕಾಣುತ್ತೇವೆ. [(ಉದಾಹರಣೆಗೆ ಹಾ..ವು...ಹಾ..ವು)ತೈತ್ತಿರೀಯ ಉಪನಿಷತ್ತಿನ ಭೃಗುವಲ್ಲಿ ಹತ್ತನೇ ಅನುವಾಕ] ಈ ಸ್ತೋಭಾಕ್ಷರದಲ್ಲಿ ಬರುವ 'ಹ'ಕಾರ ವಿಸ್ಮಯ-ಆನಂದ-ವಿಭ್ರಮವನ್ನು ಹೇಳುತ್ತದೆ. ಭಗವಂತ ಅದೆಷ್ಟು ಅಚ್ಚರಿ, ಅದೆಂತಹ ಆನಂದ, ಎಂಥಾ ವಿಸ್ಮಯ.. ಇತ್ಯಾದಿ ಉದ್ಗಾರ ನಾದದಲ್ಲೇ ಬಂದು ಬಿಡುತ್ತದೆ.

ಪ್ರಕೃತಿಯಲ್ಲಿನ ಎಲ್ಲಾ ನಾದಗಳಲ್ಲಿ ಭಗವಂತನನ್ನು ಕಾಣುವುದು ಹೇಗೆ ಎನ್ನುವುದನ್ನು ವಿವರಿಸಲು ಆಚಾರ್ಯ ಮಧ್ವರು ಕೊಟ್ಟ ಒಂದು ಉದಾಹರಣೆಯನ್ನು ನೋಡಿದರೆ, ನಮಗೆ ನಾದದಲ್ಲಿ ಭಗವಂತನನ್ನು ಹೇಗೆ ಕಾಣಬಹುದು ಎನ್ನುವುದು ಕಿಂಚಿತ್ ಅರ್ಥವಾಗಬಹುದು. ನಮಗೆ ತಿಳಿದಂತೆ ಆಗಾಗ ನಮ್ಮ ಮನೆಗಳಲ್ಲಿ ಹಲ್ಲಿ ಲೊಚಗುಟ್ಟುತ್ತಿರುತ್ತದೆ. ಇದನ್ನು ನಾವು ಸೂಕ್ಷ್ಮವಾಗಿ ಗಮನಿಸಿದರೆ, ನಾವೂ ಕೂಡಾ ನಮಗೆ ಬಹಳ ಆಶ್ಚರ್ಯವಾದಾಗ 'ಅದ್ಭುತ' ಎನ್ನುವುದನ್ನು ವ್ಯಕ್ತಪಡಿಸಲು ನಮ್ಮ ಬಾಯಿಯಿಂದ ಹಲ್ಲಿಯಂತೆ ಶಬ್ದ ಮಾಡುತ್ತೇವೆ.

ಈ ರೀತಿ ಸಂಬಂಧ ಕಲ್ಪಿಸಿ ಯೋಚಿಸಿದರೆ: "ಭಗವಂತ ಅದ್ಭುತ" ಎನ್ನುವುದು ಹಲ್ಲಿಯ ನಾದದ ಅರ್ಥ! ಹೀಗೆ ಭಗವಂತನನ್ನು ಹೇಳದೇ ಇರುವ ಒಂದು ಶಬ್ದ, ಒಂದು ನಾದ ಈ ಪ್ರಪಂಚದಲ್ಲಿಲ್ಲ.

ಭಗವಂತ ಎಲ್ಲಾ ಶಬ್ದಗಳಿಂದ ವಾಚ್ಯನಾದವನು. ಏಕೆಂದರೆ ಆತ ಸರ್ವಗುಣಪೂರ್ಣ. ಆದರೆ ಇದನ್ನು ಅರಿಯದೇ ನಾವಿಂದು ಪ್ರತಿಯೊಂದು ಶಬ್ದಗಳನ್ನೂ ಅಪೂರ್ಣ ಅರ್ಥದಲ್ಲಿ ಅಥವಾ ಅಪಾರ್ಥದಲ್ಲಿ ಬಳಸಿಕೊಂಡು ಬದುಕುತ್ತಿದ್ದೇವೆ. ಯಾವ ಶಬ್ದನಿಷ್ಪತ್ತಿಯೂ**(Etymological meaning)** ತಿಳಿಯದೇ, ಕೇವಲ ವ್ಯಾವಹಾರಿಕವಾಗಿ ಶಬ್ದಗಳನ್ನು ಬಳಸುತ್ತಿದ್ದೇವೆ. ಉದಾಹರಣೆಗೆ ಒಂದು ಮಗುವಿಗೆ 'ವಿದ್ಯಾರತ್ನಾಕರ' ಎನ್ನುವ ಹೆಸರಿಡುತ್ತೇವೆ. ಆದರೆ ಆತ ಶುಂಠನಾಗಿ ಬೆಳೆಯುತ್ತಾನೆ. ಅಲ್ಲಿ ವಿದ್ಯೆ ಇಲ್ಲ, ರತ್ನ ಇಲ್ಲ, ಆಕರವೂ ಇಲ್ಲ. ಇಂತಹ ಸಂದರ್ಭದಲ್ಲಿ ಆ ಹೆಸರು ಕೇವಲ ಕರೆದಾಗ ಓಗೊಡಲು ಇರುವ ವ್ಯಾವಹಾರಿಕ ಶಬ್ದವಷ್ಟೇ ಆಗುತ್ತದೆ. ಹೀಗೆ ಲೋಕದ ವಿಷಯದಲ್ಲಿ ವ್ಯರ್ಥವಾಗಿ ಕೇವಲ ಸಂಕೇತವಾದ ಪದ ಭಗವಂತನ ನಾಮವಾದಾಗ ಮಾತ್ರ ಸಾರ್ಥಕವಾಗುತ್ತದೆ. ಕೇವಲ ವ್ಯಾವಹಾರಿಕ ಪ್ರಪಂಚದಲ್ಲಷ್ಟೇ ಅಲ್ಲ, ವೈದಿಕ ವಾಙ್ಮಯದಲ್ಲೂ ಅಷ್ಟೇ. ಉದಾಹರಣೆಗೆ ಯಜ್ಞದಲ್ಲಿ ಆಹುತಿ ಕೊಡುವಾಗ "***ಅಗ್ನಯೇ ಸ್ವಾಹಾ – ಅಗ್ನಯ ಇದಂ ನ ಮಮ; ಇಂದ್ರಾಯ ಸ್ವಾಹಾ – ಇಂದ್ರಾಯ ಇದಂ ನ ಮಮ***" , ಇತ್ಯಾದಿ ಮಂತ್ರ ಹೇಳಿ ಆಹುತಿ ಕೊಡುತ್ತೇವೆ. ಇಲ್ಲಿ ಹೇಳುವ 'ಇಂದ್ರ' ದೇವಲೋಕದ ದೇವೇಂದ್ರ ಎಂದು ತಿಳಿದು ನಾವು ಆಹುತಿ ಕೊಟ್ಟರೆ ಅದು ವ್ಯರ್ಥ! ಏಕೆಂದರೆ 'ಇಂದ್ರ' ಶಬ್ದದ ಅರ್ಥ 'ಸರ್ವಸಮರ್ಥ'. ದೈತ್ಯ-ದಾನವರು ದಾಳಿ ಮಾಡಿದಾಗ ಓಡಿಹೋಗುವ ದೇವೇಂದ್ರ ಸರ್ವಸಮರ್ಥನಲ್ಲ. ಹಾಗಾಗಿ ಈ ಮಂತ್ರದಲ್ಲಿ 'ಇಂದ್ರ' ಎಂದರೆ ಇಂದ್ರನೊಳಗೆ ಅಂತರ್ಯಾಮಿಯಾಗಿ ನಿಯಮಿಸುತ್ತಿರುವ ಭಗವಂತ. ಈ ರೀತಿ ಪ್ರತಿಯೊಂದು ಶಬ್ದದ ಅರ್ಥ ತಿಳಿದು ವೇದಮಂತ್ರವನ್ನು ಹೇಳಿ ಹೋಮ-ಹವನ ಮಾಡಿದಾಗ ಅದು ಸಾರ್ಥಕ. ಪ್ರತಿಯೊಂದು ಶಬ್ದದ ಪೂರ್ಣಾರ್ಥ ಕೇವಲ ಭಗವಂತನಲ್ಲಿ ಕೂಡುತ್ತದೆ ಹೊರತು, ಇನ್ನೆಲ್ಲೂ ಅಲ್ಲ. ಇದಕ್ಕಾಗಿ "***ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ***" ಎಂದಿದ್ದಾರೆ. ನಾವು ಯಾವ ದೇವತೆಗೆ ನಮಸ್ಕಾರ ಮಾಡಿದರೂ ಅದು ಸಲ್ಲುವುದು ಆ ದೇವತೆ ಒಳಗಿರುವ ಭಗವಂತನಿಗೆ. ಇದಕ್ಕೆ ಶಾಸ್ತ್ರಕಾರರು ಕೊಟ್ಟಿರುವ ಉದಾಹರಣೆ ಅದ್ಭುತವಾಗಿದೆ. ***ಆಕಾಶಾತ್ ಪತಿತಂ ತೋಯಂ | ಯಥಾ ಗಚ್ಛತಿ ಸಾಗರಂ |*** ಆಕಾಶದಿಂದ ಮಳೆಯಾಗಿ ಸುರಿಯುವ ನೀರು ತೋಡಲ್ಲೇ ಬೀಳಲೀ, ನದಿಯಲ್ಲೇ ಬೀಳಲೀ, ತೊರೆ, ಹೊನಲು, ಝರಿ, ಎಲ್ಲೇ ಬೀಳಲೀ, ಆದರೆ ಅದು ಕೊನೆಗೆ ಹೋಗಿ ಸೇರಬೇಕಾದ ತಾಣ-ಸಮುದ್ರ. ಇದೇ ರೀತಿ ಮಧ್ಯೆ ಅವಾಂತರ ದೇವತೆಗಳು ಯಾರೇ ಇದ್ದರೂ, ಎಲ್ಲಾ ಸ್ತೋತ್ರಗಳು, ನಮಸ್ಕಾರಗಳು ಕೊನೆಗೆ ಹೋಗಿ ಸೇರಬೇಕಾಗಿರುವುದು ಭಗವಂತನನ್ನು. ಸಂಧ್ಯಾವಂದನೆಯಲ್ಲಿ ಬಳಸುವ ಮಂತ್ರಗಳೂ ಇದನ್ನೇ ಪ್ರತಿಪಾದಿಸುತ್ತವೆ. ಭಾಗವತದಲ್ಲೇ ಹೇಳುವಂತೆ ***ಗುಹಾಶಯಾಯೈವ ನ ದೇಹಮಾನಿನೇ(೪-೪-೨೨).*** ನಾವು ನಮಸ್ಕರಿಸುವುದು ಯಾವುದೇ ದೇಹಾಭಿಮಾನಿಗಲ್ಲ(ಜೀವನಿಗಲ್ಲ), ಬದಲಿಗೆ ಆತನ ಹೃದಯ ಗುಹೆಯಲ್ಲಿರುವ ಭಗವಂತನಿಗೆ. ಹೀಗೆ ನಾವು ಮಾಡುವ ಸ್ತೋತ್ರ, ಆಹುತಿ, ನಮಸ್ಕಾರ ಎಲ್ಲವೂ ಪೂರ್ಣಪ್ರಮಾಣದಲ್ಲಿ ಸಲ್ಲಬೇಕಾಗಿರುವುದು ಆ ನಾರಾಯಣನಿಗೆ. ಇದನ್ನೇ ಬೃಹದಾರಣ್ಯಕ ಉಪನಿಷತ್ತಿನ ಅಂತರ್ಯಾಮಿ ಬ್ರಾಹ್ಮಣ ವಿವರಿಸುತ್ತಾ, ಪ್ರತಿಯೊಂದು ಮಂತ್ರವನ್ನೂ "***ಏಷ ತೇ ಆತ್ಮಾ ಅಂತರ್ಯಾಮಿ ಅಮೃತಃ***" ಎಂದು ಉಪಸಂಹಾರ ಮಾಡುವುದನ್ನು ಕಾಣುತ್ತೇವೆ. ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಅಜ್ಞಾನದ ಬೇಲಿಯಲ್ಲಿ ಸಿಲುಕಿರುವ ಮನುಷ್ಯ ಎಲ್ಲದರೊಳಗೂ ಅಂತರ್ಯಾಮಿಯಾಗಿ ಭಗವಂತನಿದ್ದಾನೆ ಎನ್ನುವ ಅರಿವಿಲ್ಲದೇ, ಯಾವುದ್ಯಾವುದೋ ಕ್ಷುದ್ರ ದೇವತೆಗಳ ಬೆನ್ನು ಹತ್ತುತ್ತಿದ್ದಾನೆ" ಎಂದು.

ಶುಕಾಚಾರ್ಯರು ಹೇಳುತ್ತಾರೆ: "ಪ್ರಕೃತಿಯ ಮೋಹಕ್ಕೊಳಗಾದ ಮನುಷ್ಯ ಕೇವಲ ಪ್ರಾಪಂಚಿಕ ಸಂಸ್ಕಾರದಲ್ಲೇ ಮುಳುಗಿ, ಶಬ್ದಗಳನ್ನು ಅಪಾರ್ಥವಾಗಿಯೋ ಅಥವಾ ಅಪೂರ್ಣ ಅರ್ಥದಲ್ಲೋ ಉಪಯೋಗಿಸುತ್ತಿದ್ದಾನೆ" ಎಂದು. ಹೀಗಾಗಿ ಇಂದು ನಿಜವಾದ ಶಬ್ದಾರ್ಥವನ್ನು ಹೇಳಿದರೆ ಅದನ್ನು ನಂಬುವವರೂ ಇಲ್ಲ! ಇಷ್ಟೇ ಅಲ್ಲದೆ, ಅನೇಕ ಶಬ್ದಗಳ ಅರ್ಥ ಪ್ರಾಪಂಚಿಕವಾಗಿ ಸಂಕುಚಿತವಾಗುತ್ತಿದೆ. ಉದಾಹರಣೆಗೆ 'ಪುರುಷ' ಎನ್ನುವ ಪದ. ಇದರ ಸೂಕ್ಷ್ಮ ಅರ್ಥ 'ಭಗವಂತ' ಎಂದಾದರೂ, ಪ್ರಾಪಂಚಿಕ ಅರ್ಥ ಮಾನವ ಶರೀರದೊಳಗಿರುವ ಜೀವ**(human being)** ಎನ್ನುವುದು. ಆದರೆ ಇಂದು ಪ್ರಾಪಂಚಿಕ ಅರ್ಥವೂ ಸಂಕುಚಿತಗೊಂಡು ಕೇವಲ 'ಗಂಡಸು**(man)**' ಎನ್ನುವ ಅರ್ಥದಲ್ಲಿ ಇದು ಸಾಮಾಜದಲ್ಲಿ ಬಳಕೆಯಲ್ಲಿದೆ. ಇದೇ ರೀತಿ ಅನೇಕ ಪದಗಳ ಅರ್ಥ ಕೂಡಾ ಅಪಾರ್ಥವಾಗಿದೆ. ಉದಾಹರಣೆಗೆ ಗಿರಿ ಮತ್ತು ಪರ್ವತ. ಈ ಎರಡೂ ಪದಗಳನ್ನು ಏಕ ಅರ್ಥದಲ್ಲಿ ಬಳಸಲಾಗುತ್ತಿದೆ. ಆದರೆ ಗಿರಿ ಬೇರೆ, ಪರ್ವತ ಬೇರೆ. ಏಕೆಂದರೆ ಪರ್ವ ಉಳ್ಳದ್ದು ಮಾತ್ರ ಪರ್ವತ**(folded mountain),** ಅದು ಗಿರಿ ಅಲ್ಲ. ಹೀಗೆ ಸಾಮಾಜಿಕ ಪ್ರಭಾವದಿಂದ ಶಬ್ದಗಳು ತಮ್ಮ ಅರ್ಥವ್ಯಾಪ್ತಿಯನ್ನು ಕಳೆದುಕೊಳ್ಳುತ್ತಿವೆ ಮತ್ತು ಅಪಾರ್ಥಗೊಳ್ಳುತ್ತಿವೆ. ಈ ರೀತಿ ಶಬ್ದದ ಅಪೂರ್ಣ-ಅರ್ಥ ಮತ್ತು ಸಂಕುಚಿತ-ಅರ್ಥದೊಂದಿಗೆ ವೇದಾರ್ಥ ಚಿಂತನೆ ಮಾಡಿದಾಗ ಎಲ್ಲವೂ ಅಪಾರ್ಥವಾಗುತ್ತದೆ.

ಎಷ್ಟೋ ಜನ್ಮಗಳ ಪ್ರಾಪಂಚಿಕ ಸಂಸ್ಕಾರದಿಂದಾಗಿ ಬಂದಿರುವ ಅಜ್ಞಾನವೆಂಬ ಮಂಚದಲ್ಲಿ ಮಲಗಿದವನಿಗೆ ಜ್ಞಾನ ಬೇಡವಾಗುತ್ತದೆ. ಇದರಿಂದಾಗಿ 'ಎಲ್ಲಾ ಶಬ್ದಗಳೂ ಭಗವಂತನನ್ನು ಹೇಳುತ್ತದೆ' ಎನ್ನುವ ಸತ್ಯ ತಿಳಿದಾಗ ಆಗುವ ಆನಂದವೂ ಆತನಿಗೆ ಇಲ್ಲವಾಗುತ್ತದೆ. ಆತ ತನ್ನ ಅಜ್ಞಾನದಲ್ಲೇ ಆನಂದ ಪಡುತ್ತಿರುತ್ತಾನೆ. ಇದನ್ನೇ ಪಾಶ್ಚಾತ್ಯರು **'Ignorance is bliss"** ಎಂದು ಕರೆದರು. ಆದರೆ ನಿಜವಾದ ಜ್ಞಾನಿಗೆ ಸರ್ವಶಬ್ದಗಳೂ ಭಗವಂತನನ್ನು ಹೇಳುತ್ತವೆ ಎನ್ನುವ ಸತ್ಯದ ಅರಿವು ಅಮೃತಪಾನದಂತೆ. ಆತನಿಗೆ ಈ ಸತ್ಯದ ಅನುಭವದಿಂದಾಗುವ ಆನಂದ ಅಪರಂಪಾರ. ಈ ಹಂತದಲ್ಲಿ ಶುಕಾಚಾರ್ಯರು ಪರೀಕ್ಷಿತನಿಗೆ ಎಲ್ಲಾ ಶಬ್ದಗಳಲ್ಲಿ, ಎಲ್ಲಾ ನಾದಗಳಲ್ಲಿ ಮತ್ತು ಎಲ್ಲರಲ್ಲೂ ಭಗವಂತನನ್ನು ಕಾಣಬೇಕು ಎನ್ನುವುದನ್ನು ವಿವರಿಸಿ ಹೇಳುತ್ತಿದ್ದಾರೆ.

ಅತಃ ಕವಿರ್ನಾಮಸು ಯಾವದರ್ಥಃ ಸ್ಯಾದಪ್ರಮತ್ತೋ ವ್ಯವಸಾಯಬುದ್ಧಿಃ ।
ಸಿದ್ಧೇSನ್ಯಥಾರ್ಥೇ ನ ಯತೇತ ತತ್ತತ್ ಪರಿಶ್ರಮಂ ತತ್ರ ಸಮೀಕ್ಷಮಾಣಃ ॥೦೩॥

ಎಲ್ಲಾ ಶಬ್ದಗಳಲ್ಲಿ ಕೇವಲ ಭಗವಂತನ ಚಿಂತನೆ ಮಾಡಿದರೆ ಲೋಕ ವ್ಯವಹಾರ ನಡೆಯುವುದು ಹೇಗೆ? ಈ ಪ್ರಶ್ನೆಗೆ ಉತ್ತರಿಸುತ್ತಾ ಶುಕಾಚಾರ್ಯರು ಹೇಳುತ್ತಾರೆ: "ನಮಗೆ ಲೋಕದಲ್ಲಿ ಲೌಕಿಕವಾಗಿ ಎಷ್ಟು ಅನಿವಾರ್ಯವಾಗಿ ಶಬ್ದಗಳನ್ನು ಬಳಸಬೇಕೋ ಅಷ್ಟನ್ನೇ ಬಳಸಬೇಕು" ಎಂದು. ಏಕೆಂದರೆ ಅಮುಖ್ಯ ಅರ್ಥದಲ್ಲಿ ಲೋಕವ್ಯವಹಾರವೂ ನಡೆಯಬೇಕು. ಆದ್ದರಿಂದ ಎಷ್ಟು ಪ್ರಯೋಜನ ಇದೆಯೋ ಅಷ್ಟು ಮಾತ್ರವೇ ಲೌಕಿಕ ಮಾತನ್ನಾಡಬೇಕು. ಉಳಿದ ಎಲ್ಲಾ ಮಾತನ್ನು ಭಗವಂತನ ಪರವಾಗಿ ಚಿಂತನೆ ಮಾಡಬೇಕು. ಪೂರ್ತಿಯಾಗಿ ಭಗವದ್ ಚಿಂತನೆ ಮಾಡಿದರೆ ಲೋಕ ವ್ಯವಹಾರ ನಡೆಯುವುದಿಲ್ಲ. ಉದಾಹರಣೆಗೆ ಹಿಂದೆ ಹೇಳಿದಂತೆ 'ವಿದ್ಯಾರತ್ನಾಕರ' ಎನ್ನುವ ಹೆಸರಿನ ಮಗನನ್ನು ಕರೆಯಲು ತಂದೆ ಆ ಶಬ್ದವನ್ನೇ ಬಳಸಬೇಕು. ಆಗ ಮಗ "ನನ್ನ ತಂದೆ ಭಗವದ್ ಸ್ಮರಣೆ ಮಾಡುತ್ತಿದ್ದಾನೆ " ಎಂದು ಸುಮ್ಮನೆ ಕುಳಿತುಕೊಂಡರೆ ಲೋಕ ವ್ಯವಹಾರ ನಡೆಯುವುದಿಲ್ಲ. ಆತ ತಂದೆ ನನ್ನನ್ನು ಕರೆಯುತ್ತಿದ್ದಾರೆ ಎಂದು ಅದಕ್ಕೆ ಓಗೊಡಲೇಬೇಕು. ಆದರೆ ಇಲ್ಲಿ 'ವಿದ್ಯಾರತ್ನಾಕರ' ಎನ್ನುವ ಪದ ಭಗವಂತನ ಗುಣಗಾನ ಮಾಡುವ ಭಗವಂತನ ಹೆಸರು, ಅದನ್ನು ನಾವು ವ್ಯವಹಾರಕ್ಕಾಗಿ ಬಳಸುತ್ತಿದ್ದೇವೆ ಎನ್ನುವ ಎಚ್ಚರ ಅಗತ್ಯ.

ಸಾಮಾಜಿಕವಾಗಿ ಮಾತ್ರವಲ್ಲ, ವೇದ ಭಾಷೆಯಲ್ಲಿ ಕೂಡಾ ಈ ರೀತಿಯ ಬಳಕೆ ಅನಿವಾರ್ಯ. ಉದಾಹರಣೆಗೆ ವೇದದಲ್ಲಿ "***ವಸಂತೇ ವಸಂತೇ ಜ್ಯೋತಿಷಾ ಯಜೇತಾ***" ಎನ್ನುವ ಮಾತಿದೆ. ಅಂದರೆ "ಪ್ರತಿಯೊಂದು ವಸಂತ ಋತುವಿನಲ್ಲಿ ಜ್ಯೋತಿಷ್ಟೋಮ ಯಾಗದಿಂದ ಭಗವಂತನನ್ನು ಆರಾಧಿಸಬೇಕು" ಎಂದರ್ಥ. ಇದು ಲೌಕಿಕವಾದ ವೇದಾರ್ಥ. ಆದರೆ ಈ ವಾಕ್ಯ ಮುಖ್ಯವಾಗಿ ಭಗವಂತನ ಗುಣಗಾನ ಮಾಡುತ್ತದೆ. ಅದು ಹೇಗೆಂದು ಇಲ್ಲಿ ಬರುವ ಪ್ರತಿಯೊಂದು ಪದವನ್ನೂ ಭಗವಂತನ ಪರ ಅರ್ಥ ಮಾಡಿ ತಿಳಿದುಕೊಳ್ಳಬಹುದು. ಹಾಗೆ ಮಾಡಿದಾಗ: ವಸನ್+ತೇ=ವಸಂತೇ ಅಂದರೆ: ಎಲ್ಲವುದರ ಒಳಗೂ ವಾಸ ಮಾಡುವವನು, ಎಲ್ಲೆಡೆ ತುಂಬಿರುವವನು ಎಂದರ್ಥ. ಅದೇ ರೀತಿ 'ಜ್ಯೋತಿಷಾ'. ಇಲ್ಲಿ ಜ್ಯೋತಿ ಎಂದರೆ ಬೆಳಕು, ಷ-ಕಾರೋ ಪ್ರಾಣೋ ಆತ್ಮಾ. ಅಂದರೆ ಬೆಳಕಿನ ಪುಂಜವಾಗಿ ಎಲ್ಲೆಡೆ ತುಂಬಿರುವವ ಮತ್ತು ಎಲ್ಲರ ಅಂತರ್ಯಾಮಿಯಾಗಿದ್ದು ಪ್ರೇರೇಪಿಸುವವ. ಆದ್ದರಿಂದ ಸ್ವಯಂ ಪ್ರಕಾಶಸ್ವರೂಪನೂ, ಸರ್ವಚೇಷ್ಟಕನೂ ಆದವ ಜ್ಯೋತಿಷಾ. ಇನ್ನು 'ಆಯಜೇತಾ'. ಇಲ್ಲಿ 'ಇತ' ಎಂದರೆ ಪೂಜಿತನಾದವನು. ಆದ್ದರಿಂದ ಆಯಜೇತಾ ಎಂದರೆ: ಎಲ್ಲಾ ಯಜ್ಞಗಳಿಂದ ಪೂಜಿತನಾದವನು ಎಂದರ್ಥ. ಹೀಗೆ ನೋಡಿದಾಗ ಇಡೀ ವಾಕ್ಯ ಭಗವದ್ ಪರವಾಗುತ್ತದೆ. ಆದರೆ ಕೇವಲ ಭಗವದ್ ಪರವಾಗಿ ನೋಡಿದರೆ ವ್ಯವಹಾರ ನಡೆಯುವುದಿಲ್ಲ. ಹಾಗಾಗಿ ವೇದ ಮಂತ್ರದಲ್ಲಿ ವ್ಯವಹಾರ ನಿರ್ವಹಣೆಗೆ ಎಷ್ಟು ಲೌಕಿಕ ಅರ್ಥಬೇಕೋ ಅಷ್ಟು ಲೌಕಿಕ ಅರ್ಥವನ್ನು ಕಾಣಬೇಕು. ಆದರೆ ಮಂತ್ರದ ನಿಜವಾದ ಅರ್ಥ ಭಗವಂತ ಎನ್ನುವುದನ್ನು ಮಾತ್ರ ಮರೆಯಬಾರದು. ಇದು ಭಾಷೆಯ ಮೇಲೆ ಅಧ್ಯಾತ್ಮದ ಅನುಸಂಧಾನ.

ಬ್ರಹ್ಮಾಂಡ ಪುರಾಣದಲ್ಲಿ ಹೇಳುವಂತೆ: ***"ಶಾಸ್ತ್ರೇಷು ಭಾರತಂ ಸಾರಸ್ತತ್ರ ನಾಮಸಹಸ್ರಕಮ್".*** ಅಂದರೆ "ಶಾಸ್ತ್ರಗಳ ಸಾರ ಮಹಾಭಾರತವಾದರೆ, ಭಾರತದ ಸಾರ ವಿಷ್ಣುಸಹಸ್ರನಾಮ". ಈ ವಿಷಯವನ್ನು ಮೇಲ್ನೋಟದಲ್ಲಿ ನೋಡಿದಾಗ ನಮಗೆ ಗೊಂದಲವಾಗುತ್ತದೆ. ಏಕೆಂದರೆ ಮಹಾಭಾರತದಲ್ಲಿರುವುದು ಕೌರವ ಪಾಂಡವರ ಜಗಳದ ಕಥೆ. ಆದರೆ ವಿಷ್ಣು ಸಹಸ್ರನಾಮದಲ್ಲಿ ಅಂತಹ ಯಾವ ಕಥೆಯೂ ಇಲ್ಲ. ಅಲ್ಲಿರುವುದು ಭಗವಂತನ ಸಹಸ್ರ ಗುಣವಾಚಕ ನಾಮಗಳು. ಹೀಗಿರುವಾಗ ಅದು ಭಾರತದ ಸಂಗ್ರಹ(**synopsis**) ಆಗುವುದು ಹೇಗೆ ಎನ್ನುವ ಪ್ರಶ್ನೆ ನಮ್ಮನ್ನು ಕಾಡುತ್ತದೆ. ಈ ಪ್ರಶ್ನೆಗೆ ಉತ್ತರ ರೂಪವಾಗಿಯೇ ಶುಕಾಚಾರ್ಯರು "ಎಲ್ಲಾ ಶಬ್ದಗಳೂ ಭಗವಂತನನ್ನು ಹೇಳುತ್ತವೆ" ಎಂದು ಹೇಳಿರುವುದು. ಈ ಹಿನ್ನೆಲೆಯಲ್ಲಿ ಭಾರತದ ಪ್ರತಿಯೊಂದು ಶ್ಲೋಕಗಳಲ್ಲಿ, ಪ್ರತಿಯೊಂದು ಶಬ್ದಗಳಲ್ಲಿ ಭಗವಂತನನ್ನು ಕಂಡಾಗ ನಮ್ಮ ಪ್ರಶ್ನೆಗೆ ಉತ್ತರ ಸಿಗುತ್ತದೆ. ಭಾರತದಲ್ಲಿ ಒಂದು ಲಕ್ಷ ಶ್ಲೋಕಗಳಿವೆ. ಅಂದರೆ ಮೂವತ್ತೆರಡು ಲಕ್ಷ ಅಕ್ಷರಗಳು. ಈ ಮೂವತ್ತೆರಡು ಲಕ್ಷ ಅಕ್ಷರಗಳೂ ಭಗವಂತನ ನಾಮವನ್ನು ಹೇಳುತ್ತವೆ ಮತ್ತು ಅದರ ಸಾರವನ್ನು ವೇದವ್ಯಾಸರು ನಮಗೆ ವಿಷ್ಣುಸಹಸ್ರನಾಮವಾಗಿ ಕೊಟ್ಟಿದ್ದಾರೆ. ವರಾಹ ಪುರಾಣದಲ್ಲಿ ವೇದವ್ಯಾಸರು ಹೇಳುತ್ತಾರೆ: ***"ಯಾವಂತಿ ಪಟಿಥಾನಿ ತಾವಂತಿ ಹರಿನಾಮಂತಿ ಪಟಿಥಾನಿ ನಾಸಂಶಯಃ-*** ಒಮ್ಮೆ ವೇದವನ್ನು ಓದಿದರೆ ಅದರಲ್ಲಿ ಎಷ್ಟು ಅಕ್ಷರಗಳಿವೆಯೋ ಅಷ್ಟು ಹರಿನಾಮವನ್ನು ನಾವು ಪಠಿಸಿದಂತಾಗುತ್ತದೆ" ಎಂದು. ಆದ್ದರಿಂದ ಪ್ರಾಚೀನರ ಪ್ರಕಾರ ಒಮ್ಮೆ ಋಗ್ವೇದ ಓದಿದರೆ 4 ಲಕ್ಷದ 32 ಸಾವಿರ ಭಗವಂತನ ನಾಮ ಸ್ಮರಣೆ ಮಾಡಿದಂತಾಗುತ್ತದೆ. ಇದು ಎಲ್ಲಾ ಅಕ್ಷರಗಳೂ, ಎಲ್ಲಾ ನಾದಗಳೂ ಭಗವಂತನ ನಾಮ ಎನ್ನುವ ಎಚ್ಚರ. ಉನ್ನತವಾದ ಧ್ಯಾನ ಸ್ಥಿತಿಗೆ ಏರಿದವರಿಗೆ ಇದು ಸಹಜವಾದ ಪ್ರವೃತ್ತಿ. ಏಕೆಂದರೆ ಧ್ಯಾನದಲ್ಲಿ ಯಾವ ಯಜ್ಞ-ಯಾಗ-ಆಹುತಿಗಳೂ ಇಲ್ಲ. ಅಲ್ಲಿ ಕೇವಲ ಭಗವಂತ ಮಾತ್ರ. ಆದರೆ ಧ್ಯಾನದಿಂದ ವ್ಯವಹಾರಕ್ಕಿಳಿದಾಗ ಅಲ್ಲಿ ವ್ಯಾವಹಾರಿಕ ಅರ್ಥವೂ ಬೇಕಾಗುತ್ತದೆ. ಇದು ಭಾಷೆಯ ಬಗ್ಗೆ ನಮಗಿರಬೇಕಾದ ಎಚ್ಚರ. ಹೀಗಾಗಿ ಮಾತನಾಡುವಾಗ ಶಾಸ್ತ್ರೀಯ ಸಂಗತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಮಾತನಾಡಬೇಕು. ಉದಾಹರಣೆಗೆ ನಾವು ಒಬ್ಬ ವ್ಯಕ್ತಿಯನ್ನು ಬಯ್ಯುತ್ತೇವೆ.

ಅಲ್ಲಿ ವ್ಯಾವಹಾರಿಕವಾಗಿ ಆತನನ್ನು ಬೈದರೂ, ಅಂತತಃ ನಾವು ಬಯ್ಯುವುದು ಆ ವ್ಯಕ್ತಿಯನ್ನಲ್ಲ, ಬದಲಿಗೆ ಆ ವ್ಯಕ್ತಿಯೊಳಗಿನ ಭಗವದ್ ತತ್ತ್ವವನ್ನು. ಈ ಎಚ್ಚರದಿಂದ ವ್ಯವಹರಿಸಿದಾಗ ಜೀವನ ಸಾರ್ಥಕ.

ಸಾಮಾನ್ಯವಾಗಿ ಲೌಕಿಕವಾದ ಯಾವುದೋ ಒಂದು ಕೆಲಸಕ್ಕಾಗಿ ನಾವು ಭಾಷೆಯನ್ನು ಬಳಸುತ್ತೇವೆ. ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಒಂದು ವೇಳೆ ಬೇರೆ ವಿಧದಿಂದ ಮಾತು ಬಳಸದೆಯೇ ಆ ಕೆಲಸ ಆಗುವುದಿದ್ದರೆ ಅಂತಹ ಸಂದರ್ಭದಲ್ಲಿ ಲೌಕಿಕ ಅರ್ಥದಲ್ಲಿ ಮಾತನ್ನು ಬಳಸಲೇಬೇಡ" ಎಂದು. "ಭಗವಂತನನ್ನು ಪ್ರತೀ ಶಬ್ದದಿಂದ ಅನುಸಂಧಾನ ಮಾಡಿದಾಗ ಎಲ್ಲಾ ಕೆಲಸವೂ ಆಗುತ್ತದೆ. ಹಾಗಿರುವಾಗ ಲೌಕಿಕ ಅರ್ಥದಲ್ಲಿ ಏಕೆ ಭಾಷೆಯನ್ನು ಬಳಸಬೇಕು" ಎನ್ನುವುದು ಇಲ್ಲಿ ಶುಕಾಚಾರ್ಯರ ಪ್ರಶ್ನೆ. ಇದು ಶುಕಾಚಾರ್ಯರ ನಿಲುವು. ಸಾಮಾನ್ಯರಾದ ನಮಗೆ ಈ ರೀತಿ ಬದುಕುವುದು ಸಾಧ್ಯವಿಲ್ಲ. ಲೌಕಿಕವಾಗಿ ಶಬ್ದ ಬಳಕೆಯಿಂದ ಯಾವುದೇ ಆನಂದವಿಲ್ಲ ಎನ್ನುವುದು ಧ್ಯಾನದ ಸ್ಥಿತಿಯಲ್ಲಿ ನಮಗೆ ಗೋಚರವಾಗುತ್ತದೆ.

**ಚೀರಾಣಿ ಕಿಂ ಪಥಿ ನ ಸಂತಿ ದಿಶಂತಿ ಭಿಕ್ಷಾಂ ನೋ ವಾಂSಘ್ರಿಪಾಃ ಪರಭೃತಃ ಸರಿತೋSಪ್ಯಶುಷ್ಯನ್ ।**
**ರುದ್ಧಾ ಗುಹಾಃ ಕಿಮವಧೂತಸುಹೃನ್ನ ಕೃಷ್ಣಃ ಕಸ್ಮಾದ್ ಭಜಂತಿ ಕವಯೋ ಧನದುರ್ಮದಾಂಧಾನ್ ॥೦೫॥**

ಸಾಮಾನ್ಯವಾಗಿ ನಾವು ಯಾವುದೋ ಒಬ್ಬ ಶ್ರೀಮಂತ ವ್ಯಕ್ತಿ ಅಥವಾ ರಾಜಕೀಯ ವ್ಯಕ್ತಿಯ ಹಿಂದೆ ಹೋಗಿ "ನೀವೇ ದೊಡ್ಡವರು, ನಿಮ್ಮಿಂದ ನನಗೆ ಸಹಾಯವಾಗಬೇಕು" ಎಂದು ಕೇಳಿ ಅವರ ಕಾಲಿಗೆ ಅಡ್ಡ ಬೀಳುತ್ತೇವೆ. ಇದು ಭಾಷೆಯ ಹಾಗೂ ಆ ಭಾಷೆಯಲ್ಲಿ ಬರುವ ಎಲ್ಲಾ ಶಬ್ದಗಳ ದುರುಪಯೋಗ. ಇಲ್ಲಿ ಶುಕಾಚಾರ್ಯರು "ಜನರು ಏಕೆ ಹೀಗೆ ಮಾಡುತ್ತಾರೆ" ಎಂದು ಪ್ರಶ್ನಿಸಿದ್ದಾರೆ. "ಭಗವಂತನನ್ನು ಹೊಗಳಲು ಉಪಯೋಗಿಸುವ ಶಬ್ದಗಳನ್ನು ಏಕೆ ಒಬ್ಬ ಮನುಷ್ಯನನ್ನು ಹೊಗಳಲು ಉಪಯೋಗಿಸಬೇಕು?" ಇದು ಶುಕಾಚಾರ್ಯರ ಪ್ರಶ್ನೆ. ಸಾಮಾನ್ಯವಾಗಿ ಈ ರೀತಿ ಮಾಡಲು ಕಾರಣ- ಯಾವುದೋ ಒಂದು ಲೌಕಿಕ ಲಾಭದ ಆಸೆ. ಶುಕಾಚಾರ್ಯರು ಹೇಳುತ್ತಾರೆ: "ನಮಗೆ ಬೇಕಾಗಿರುವುದು ಮೈಮುಚ್ಚಲು ಒಂದಿಷ್ಟು ಬಟ್ಟೆ, ಹಸಿವು ಪರಿಹಾರಕ್ಕೆ ಒಂದಿಷ್ಟು ಆಹಾರ. ಇದಕ್ಕಾಗಿ ಇನ್ನೊಬ್ಬರ ಮುಂದೇಕೆ ಅಂಗಲಾಚಬೇಕು." ಹಿಮಾಲಯದಂತಹ ಜನ ವಸತಿ ಇಲ್ಲದ ಪ್ರದೇಶದಲ್ಲಿ ವಾಸಿಸುವ ಸಾಧು-ಸಂತರ ಜೀವನ ಹೇಗೆ ಸಾಗುತ್ತದೆ ಎನ್ನುವುದನ್ನು ಶುಕಾಚಾರ್ಯರು ಇಲ್ಲಿ ವಿವರಿಸಿದ್ದಾರೆ. ಕಾಡಿನಲ್ಲಿ ಮರಗಳಿಂದ ಮಾಡಿದ ನಾರಿನ ಉಡುಪು ಹಾಗೂ ತಿಂದು ಮುಗಿಸಲು ಅಸಾಧ್ಯವಾದಷ್ಟು ಹಣ್ಣು ಹಂಪಲು ಪ್ರಕೃತಿದತ್ತವಾಗಿ ಅವರಿಗೆ ದೊರೆಯುತ್ತದೆ. ಇಂತಹ ಸ್ಥಳದಲ್ಲಿ ವಾಸಿಸುವವರು ಎಂದೂ ಯಾವ ಕಾರಣಕ್ಕೂ ಯಾರ ಮುಂದೆಯೂ ಕೈಒಡ್ಡುವುದಿಲ್ಲ.

ಇಲ್ಲಿ ಶುಕಾಚಾರ್ಯರು ಕಾಡಿನಲ್ಲಿ ಹಣ್ಣು ಕೊಡುವ ಮರಗಳನ್ನು 'ಅಘ್ರಿಪಾಃ' ಎಂದು ಕರೆದಿದ್ದಾರೆ. ಅಘ್ರಿಪಾಃ ಎಂದರೆ 'ಕಾಲಿನಿಂದ ನೀರನ್ನು ಕುಡಿದು ತಲೆ ತುಂಬಾ ಹಣ್ಣು ಹೊರುವವುಗಳು' ಎಂದರ್ಥ. ಇದು ಪ್ರಾಚೀನರು ಮರಗಳಿಗೆ ಕೊಟ್ಟ ವಿಶಿಷ್ಠ ಹೆಸರು. ಇಲ್ಲಿ ಕಾಡಿನ ಮರಗಳನ್ನು ಮತ್ತು ನದಿಗಳನ್ನು ಶುಕಾಚಾರ್ಯರು 'ಪರಭೃತಃ' ಎನ್ನುವ ವಿಶೇಷಣ ಬಳಸಿ ಸಂಬೋಧಿಸಿದ್ದಾರೆ. ಪರಭೃತಃ ಎಂದರೆ ಇನ್ನೊಬ್ಬರಿಗೋಸ್ಕರವೇ ಇರುವವುಗಳು ಎಂದರ್ಥ. ಮರ ತನಗೋಸ್ಕರ ಹಣ್ಣು ಬಿಡುವುದಿಲ್ಲ; ನದಿಗೆ ಬಾಯಾರಿಕೆ ಇಲ್ಲ. ಅವು ಯಾವ ಪ್ರತಿಫಲವನ್ನೂ ಅಪೇಕ್ಷಿಸದೇ ಹಣ್ಣು-ನೀರನ್ನು ಕೊಡುತ್ತವೆ. "ಭಗವಂತ ನಮಗಾಗಿ ಇಂತಹ ಮರಗಳನ್ನೂ ನದಿಗಳನ್ನೂ ಸೃಷ್ಟಿ ಮಾಡಿಲ್ಲವೇ?" ಎಂದು ಕೇಳುತ್ತಿದ್ದಾರೆ ಶುಕಾಚಾರ್ಯರು.

ಶುಕಾಚಾರ್ಯರ ಈ ಮೇಲಿನ ಮಾತನ್ನು ಕೇಳುವಾಗ ಆನಂದವೆನಿಸಿದರೂ, ಇಂದು ಈ ರೀತಿ ಬದುಕುವುದು ಕಷ್ಟ. ಆದರೆ ಈ ಮಾತನ್ನು ನಾವು ವಿಶ್ಲೇಷಿಸಿ ನೋಡಿದರೆ ಇಂದಿನ ನಾಗರೀಕತೆಯ ದುರಂತ ಅರ್ಥವಾಗುತ್ತದೆ. ಈ ಪ್ರಪಂಚದಲ್ಲಿ ೮೪ ಲಕ್ಷ ವಿಧದ ಜೀವಜಾತಗಳಿವೆ. ಇವುಗಳಲ್ಲಿ ಮನುಷ್ಯನನ್ನು ಬಿಟ್ಟು ಇತರ ಎಲ್ಲಾ ಜೀವಿಗಳು ಆಹಾರಕ್ಕಾಗಿ ಇನ್ನೊಬ್ಬರ ಮುಂದೆ ಕೈಯೊಡ್ಡುವ ಪ್ರವೃತ್ತಿ ತೋರುವುದಿಲ್ಲ.(ಮನುಷ್ಯ ಸಾಕಿರುವ ಪ್ರಾಣಿಗಳನ್ನು ಹೊರತುಪಡಿಸಿ). ಅವು ಭಗವಂತ ನೈಸರ್ಗಿಕವಾಗಿ ನೀಡಿರುವ ನೀರು-ಆಹಾರವನ್ನು ಸೇವಿಸಿ ಆರೋಗ್ಯವಾಗಿರುತ್ತವೆ. ಇಲ್ಲಿ ನಮಗೆ ಸ್ಪಷ್ಟವಾಗಿ ತಿಳಿಯುವುದೇನೆಂದರೆ, ಇನ್ನೊಬ್ಬರ ಮುಂದೆ ಕೈಯೊಡ್ಡುವಂತೆ ಭಗವಂತ ಜೀವಜಾತದ ಸೃಷ್ಟಿ ಮಾಡಿಲ್ಲ. ಇದು ಮನುಷ್ಯನ ನಾಗರೀಕತೆಯ ಆವಿಷ್ಕಾರ.

ನೀರು-ಆಹಾರ ನೈಸರ್ಗಿಕವಾಗಿ ಸಿಗಬಹುದು ಆದರೆ ಇರುವುದಕ್ಕೊಂದು ಮನೆ ಬೇಡವೇ ಎಂದು ಕೇಳಿದರೆ, ಶುಕಾಚಾರ್ಯರು ಹೇಳುತ್ತಾರೆ: "ಪರ್ವತದಲ್ಲಿರುವ ಗುಹೆಗಳೆಲ್ಲಾ ಮುಚ್ಚಿ ಹೋದವೇನು?" ಎಂದು. ಇದು ನಾಗರೀಕತೆ ಬೆಳೆಯುವ ಮೊದಲು ಮನುಷ್ಯ ಬದುಕುತ್ತಿದ್ದ ರೀತಿ. ಇಂದು ನಾವು ಸಹಜ ಜೀವನವನ್ನು ಮರೆತು ಅಸಹಜವನ್ನೇ ಸಹಜವೆಂದು ತಿಳಿದು ಬದುಕುತ್ತಿದ್ದೇವೆ.

ಲೌಕಿಕ ಸ್ಪರ್ಶ ಬೇಡ ಎಂದು ತನ್ನತ್ತ ಬರುವವರನ್ನು ಕೈಯೆತ್ತಿ ಸಲಹುತ್ತಾನೆ ಆ ಭಗವಂತ. ಆದರೆ ಇಂದು ಜನ ಎಲ್ಲರನ್ನೂ ಸಲಹುವ ಭಗವಂತನೊಬ್ಬನಿದ್ದಾನೆ ಎನ್ನುವುದನ್ನು ಮರೆತು ಬದುಕುತ್ತಿದ್ದಾರೆ. ಭಗವಂತ ಎಲ್ಲವನ್ನೂ ಕೊಟ್ಟಿದ್ದರೂ ಕೂಡಾ ನಾವು ಇನ್ನೊಬ್ಬರ ಮುಂದೆ ಕೈಯೊಡ್ಡುತ್ತಿದ್ದೇವೆ. ಇನ್ನೊಬ್ಬರ ಬಳಿ ಇರುವ ಸಂಪತ್ತು ಅವರ ಸಂಪಾದನೆ ಮತ್ತು ಅದು ಅವರ ಮನೆವಾಳ್ತೆಗೆ ಬೇಕಾಗುತ್ತದೆ. ಹಾಗಾಗಿ ನಾವು ಇನ್ನೊಬ್ಬರ ಮುಂದೆ ಕೈಯೊಡ್ಡುವುದನ್ನು ಬಿಟ್ಟು ನಮಗೆ ಭಗವಂತ ಏನು ಕೊಟ್ಟಿದ್ದಾನೋ ಅದರಲ್ಲಿ ಬದುಕಲು ಕಲಿಯಬೇಕು. ಹಿಂದೆ ಬಾಲ್ಯದಲ್ಲಿ ಕಾಡಿನಲ್ಲಿರುವ ಗುರುಕುಲದಲ್ಲಿ ವಿದ್ಯಾಭ್ಯಾಸ ನಂತರ ಮುಪ್ಪಿನಲ್ಲಿ ವಾನಪ್ರಸ್ಥ ಎನ್ನುವ ಕ್ರಮವಿತ್ತು. ಇದರಿಂದಾಗಿ ಎಲ್ಲವನ್ನೂ ಕಳೆದುಕೊಂಡು ಬದುಕುವ ನಿಸ್ಪೃಹತೆಯ ಪಾಠ ಸಿಗುತ್ತಿತ್ತು. ಆದರೆ ಇಂದು ಮಕ್ಕಳು, ಯುವಕ-ಯುವತಿಯರು, ಮುದುಕರು ಎಲ್ಲರೂ ಪೇಟೆಗೆ ಮರುಳಾಗಿದ್ದಾರೆ. ಇದರಿಂದಾಗಿ ಒಬ್ಬರು ಇನ್ನೊಬ್ಬರಿಗೆ ಭಾರವಾಗಿ ಬದುಕುತ್ತಿದ್ದಾರೆ. ಪೇಟೆಯಲ್ಲಿ ಜನಸಂಖ್ಯಾ ಸ್ಫೋಟವಾಗಿ ಜೀವನದಲ್ಲಿ ಅಸಮತೋಲನ ಉಂಟಾಗುತ್ತಿದೆ, ಅಧ್ಯಾತ್ಮ ನಿಸ್ಪೃಹತೆ ಕಾಣೆಯಾಗುತ್ತಿದೆ. ನಾಗರೀಕತೆಯ ಹೆಸರಿನಲ್ಲಿ ಎಲ್ಲಾ ಜೀವನೌಲ್ಯಗಳೂ ನಾಶವಾಗಿ ಕೇವಲ ಸ್ವಾರ್ಥ ಬೆಳೆಯುತ್ತಿದೆ. ಇದೆಲ್ಲವೂ ಮನುಷ್ಯ ನಾಗರೀಕತೆಯ ಹೆಸರಿನಲ್ಲಿ ತಾನೇ ನಿರ್ಮಿಸಿಕೊಂಡ ಸಮಸ್ಯೆ. ಹೀಗಾಗಿ ಇಂದು ನಾವು ನಾವೇ ನಿರ್ಮಿಸಿರುವ ಬಲೆಯಲ್ಲಿ ಸಿಕ್ಕಿ ಒದ್ದಾಡುವ ಪರಿಸ್ಥಿತಿ ಬಂದಿದೆ. ಇದಕ್ಕಾಗಿ ಶುಕಾಚಾರ್ಯರು ಹೇಳುತ್ತಾರೆ: "ನಿನ್ನ ಸಾಮಾಜಿಕ ಮತ್ತು ಲೌಕಿಕವಾದ ವ್ಯವಹಾರಗಳನ್ನು, ಅಭಿಲಾಷೆಯನ್ನು ಎಷ್ಟು ಸಾಧ್ಯವೋ ಅಷ್ಟು ಕಡಿಮೆ ಮಾಡು" ಎಂದು. ಇಲ್ಲಿ ಎಲ್ಲವನ್ನೂ ಬಿಟ್ಟು ಬಿಡು ಎಂದು ಅವರು ಹೇಳುತ್ತಿಲ್ಲ. ಏಕೆಂದರೆ ನಾವು ಅದನ್ನು ಬಿಡಲಾರದಷ್ಟು ಅಂಟಿಸಿಕೊಂಡಾಗಿದೆ. ಆದ್ದರಿಂದ ಎಷ್ಟು ಸಾಧ್ಯವೋ ಅಷ್ಟು ಕಡಿಮೆ ಮಾಡಬೇಕು, ಅದನ್ನೇ ಸರ್ವಸ್ವ ಎಂದು ಕುಳಿತರೆ ನಮ್ಮ ಬದುಕಿನ ಸಮಸ್ಯೆಗೆ ಪರಿಹಾರವೇ ಇಲ್ಲವಾಗುತ್ತದೆ. ಮಿತಭಾಷಿಯಾಗಿ, ವ್ಯವಹಾರದಲ್ಲಿ ಎಷ್ಟು ಬೇಕೋ ಅಷ್ಟೇ ತೊಡಗಿಸಿಕೊಂಡು, ಭಗವಂತನನ್ನು ಮರೆಯದೇ ಬದುಕಿದಾಗ ಜೀವನ ದುರ್ಭರವಾಗದೆ ಸಹಜ ಸ್ಥಿತಿಯಲ್ಲಿ ನಾವು ಬದುಕಲು ಸಾಧ್ಯವಾಗುತ್ತದೆ.

ಏವಂ ಸ್ವಚಿತ್ತೇ ಸ್ವತ ಏವ ಸಿದ್ಧ ಆತ್ಮಾ ಪ್ರಿಯೋSರ್ಥೋ ಭಗವಾನನಂತಃ ।
ತಂ ನಿರ್ವೃತೋ ನಿಯತಾರ್ಥೋ ಭಜೇತ ಸಂಸಾರಹೇತೂಪರಮಶ್ಚ ಯತ್ರ ॥೦೬॥

ಈ ಹಿಂದೆ ಹೇಳಿದಂತೆ ಇಂದು ನಾವು ಮನೆ-ಸಂಸಾರ ಎಲ್ಲವನ್ನೂ ಸಂಪೂರ್ಣ ತ್ಯಜಿಸಿ ಕಾಡಿಗೆ ಹೋಗಿ ಬದುಕಲು ಸಾಧ್ಯವಿಲ್ಲ. ಆದರೆ ನಾವು ಎಲ್ಲವುದರ ಜೊತೆಗೆ ಇದ್ದೂ ಅದನ್ನು ಅಂಟಿಸಿಕೊಳ್ಳದೇ ಬದುಕುವುದನ್ನು ಕಲಿಯಬೇಕು. ಶ್ರೀಕೃಷ್ಣ ಗೀತೆಯಲ್ಲಿ ಹೇಳಿದಂತೆ: **"ಪದ್ಮಪತ್ರಮಿವಾಂಭಸಾ"-** ತಾವರೆ ಎಲೆ ನೀರಿನಲ್ಲಿರುವಂತೆ- ಜೊತೆಗಿದ್ದರೂ ಅಂಟಿಸಿಕೊಳ್ಳದೇ ಇರುವುದನ್ನು **(Detached attachment)** ನಾವು ಅಭ್ಯಾಸ ಮಾಡಿಕೊಳ್ಳಬೇಕು. ಇದೇ ನಿಜವಾದ ವೈರಾಗ್ಯ. ಈ ರೀತಿ ಮನಸ್ಸಿಗೆ ತರಬೇತಿ ಕೊಟ್ಟಾಗ ಜೀವನದಲ್ಲಿ ಯಶಸ್ವಿಯಾಗಿ ಬದುಕಬಹುದು. ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಈ ಸ್ಥಿತಿಯಲ್ಲಿ ನಾವು ನಿಂತಾಗ ನಮ್ಮ ಚಿತ್ತದಲ್ಲಿ ಭಗವಂತನ ಇರವಿನ ಅರಿವು ಜಾಗೃತಿಗೊಳ್ಳುತ್ತದೆ" ಎಂದು. ಭಗವಂತ ನಮ್ಮೆಲ್ಲರ ಒಳಗೂ-ಹೊರಗೂ ಇದ್ದಾನೆ ನಿಜ, ಆದರೆ ಆ ಅರಿವು ನಮಗಿಲ್ಲ. ಕೇವಲ ಇರವು ಮುಖ್ಯವಲ್ಲ, ಇರವಿನ ಅರಿವೂ ಮುಖ್ಯ. ಅರಿವು ಇಲ್ಲದ ಇರವು ನಮ್ಮಪಾಲಿಗೆ ವ್ಯರ್ಥ.

ಇಲ್ಲಿ ಭಗವಂತನನ್ನು ಆತ್ಮಾ ಎಂದು ಸಂಬೋಧಿಸಿದ್ದಾರೆ. 'ಆತ್ಮಾ' ಎಂದರೆ ಅಂತರ್ಯಾಮಿ ಹಾಗೂ ಅತ್ಯಂತ ಆತ್ಮೀಯ ಎಂದರ್ಥ. ಭಗವಂತ ನಮ್ಮ ಅತ್ಯಂತ ಆತ್ಮೀಯ ಮತ್ತು ಆತ ಎಲ್ಲಾ ಕಾಲದಲ್ಲೂ ನಮ್ಮನ್ನು ಸ್ವೀಕರಿಸಲು ಸಿದ್ಧನಾಗಿರುತ್ತಾನೆ. ಹೀಗಿರುವಾಗ ನಾವು ಯಾರಲ್ಲೋ ಅಂಗಲಾಚುವುದನ್ನು ಬಿಟ್ಟು ಭಗವಂತನ ಅರಿವನ್ನು ಪಡೆದು, "ನನ್ನನ್ನು ಸ್ವೀಕರಿಸು" ಎಂದು ಅವನಲ್ಲಿ ಬೇಡಿಕೊಳ್ಳಬೇಕು. ಭಗವಂತ ನಮಗೆ ಅತ್ಯಂತ ಪ್ರಿಯವಾದ ವಸ್ತು. ಆದರೆ ಆತನ ಪರಿಚಯ ನಮಗಿಲ್ಲದ ಕಾರಣ ನಮಗೆ ಯಾವುದು ಪ್ರಿಯ, ಯಾವುದು ಅಪ್ರಿಯ ಎನ್ನುವುದು ತಿಳಿಯದೇ, ಪ್ರಿಯವಾದುದರ ಅನ್ವೇಷಣೆ ಮಾಡುತ್ತಾ, ದಾರಿ ತಪ್ಪಿ ಯಾರದ್ದೋ ಬೆನ್ನು ಹತ್ತುತ್ತೇವೆ. ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಎಲ್ಲವುದಕ್ಕಿಂತ ಪ್ರಿಯವಾದ ವಸ್ತು ಹಾಗೂ ಜೀವನದ ಕೊನೇಯ ಪುರುಷಾರ್ಥ ಆ ಭಗವಂತ" ಎಂದು. ಭಗವಂತನಿಂದಾಗಿ ಈ ಭೂಮಿಯಲ್ಲಿ ಹುಟ್ಟಿದ ನಮಗೆ ಭಗವಂತನನ್ನು ಸೇರುವುದೇ ಪರಮ ಪುರುಷಾರ್ಥ. ಭಗವಂತ ನಿತ್ಯ-ಸತ್ಯ ಮತ್ತು ಶಾಶ್ವತವಾಗಿ ಎಲ್ಲಾ ಕಡೆ ಇರುವ ಅನಂತ ಸತ್ಯ. ಈ ಸತ್ಯದ ಹಿಂದೆ ನಾವು ಹೋಗಬೇಕು ಎನ್ನುವ ಅರಿವು ನಮಗೆ ಸಹಜವಾಗಿ ಧ್ಯಾನದಲ್ಲಿ ಬರುತ್ತದೆ. ಭಗವಂತನನ್ನು ಸೇರುವ ಉದ್ದೇಶ ನಿಶ್ಚಿತವಾಗಿದ್ದಾಗ ಒಳಗೆ ಆನಂದ ಮತ್ತು ಧೈರ್ಯ ತುಂಬುತ್ತದೆ. ಸಂಸಾರಕ್ಕೆ ಕಾರಣವಾಗಿರುವ ಅಜ್ಞಾನ-ದುಃಖ-ದಾರಿದ್ರ್ಯ ಮುಂತಾದ ಎಲ್ಲಾ ಸಮಸ್ಯೆಗಳಿಗೆ ಕೊನೇ ಉತ್ತರ ಆ ಭಗವಂತ. ಅಂತಹ ಭಗವಂತನಲ್ಲಿ ಮನಸ್ಸನ್ನು ಗಟ್ಟಿಯಾಗಿ ನಿಲ್ಲಿಸಿದಾಗ ಯಾವುದೇ ಉದ್ವೇಗವಿಲ್ಲದೇ ಆನಂದವಾಗಿರಬಹುದು.

## ಸಜ್ಜನರನ್ನು ರಕ್ಷಿಸುವ ಭಗವಂತನೆಂಬ ಆನಂದದ ಕಡಲಿನ ಆಶ್ರಯ

**ಸ ಸರ್ವವಿದ್ ಹೃದ್ಯನುಭೂಶ್ಚ ಸರ್ವ ಆತ್ಮಾ ಯಥಾ ಸುಪ್ತಜನೇಕ್ಷಿತೈಕಃ ।**
**ತಂ ಸತ್ಯ ಮಾನಂದನಿಧಿಂ ಭಜೇತ ಸರ್ವಾತ್ಮನಾSತೋSನ್ಯತ ಆತ್ಮಘಾತಃ ॥೦೭॥**

ಈ ಶ್ಲೋಕದಲ್ಲಿ ಶುಕಾಚಾರ್ಯರು ಭಗವಂತನ ಚಿತ್ರಣ ಕೊಡುತ್ತಾ ಆತನನ್ನು 'ಸರ್ವವಿತ್' ಎಂದು ಕರೆದಿದ್ದಾರೆ. ಮೇಲ್ನೋಟಕ್ಕೆ ಸರ್ವವಿತ್ ಎಂದರೆ ಎಲ್ಲವನ್ನೂ ಬಲ್ಲವನು(ಸರ್ವಜ್ಞ) ಎಂದರ್ಥ. ಆದರೆ ಉಪನಿಷತ್ತಿನಲ್ಲಿ ಹೇಳುವಂತೆ: ***ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ । ಮುಂಡಕ ೧.೧.೯ ।*** ಇಲ್ಲಿ ಭಗವಂತನನ್ನು ಸರ್ವಜ್ಞ ಮತ್ತು ಸರ್ವವಿತ್ ಎಂದು ಬೇರೆ ಬೇರೆಯಾಗಿ ಹೇಳಿದ್ದಾರೆ. ಈ ಹಿನ್ನಲೆಯಲ್ಲಿ ನೋಡಿದಾಗ ಸರ್ವವಿತ್ ಎಂದರೆ ಕೇವಲ ಸರ್ವಜ್ಞ ಅಲ್ಲ. ಸರ್ವಂ ವಿದಂತಿ-ಸರ್ವವಿತ್. ಏನನ್ನು ಪಡೆಯಬೇಕೋ ಅದೆಲ್ಲವನ್ನೂ ಪಡೆದವನು(ಆಪ್ತಕಾಮ) ಮತ್ತು ಎಲ್ಲವನ್ನೂ ಬಲ್ಲ ಭಗವಂತ ಸರ್ವವಿತ್. ಇಂತಹ ಭಗವಂತ ಎಲ್ಲಿದ್ದಾನೆ ಎಂದರೆ ಶುಕಾಚಾರ್ಯರು ಹೇಳುತ್ತಾರೆ: "ಆತ ನಿಮ್ಮ ಹೃದಯ ಕಮಲದಲ್ಲೇ ಇದ್ದಾನೆ" ಎಂದು. ಈ ಕುರಿತ ಸುಂದರ ವಿವರಣೆ ಮುಂದೆ ಭಾಗವತದಲ್ಲೇ

ಬರುತ್ತದೆ. *ತಸ್ಯಾವಿಜ್ಞಾತನಾಮಾSSಸೀತ್ ಸಖಾSವಿಜ್ಞಾತಚೇಷ್ಟಿತಃ ।ಭಾಗವತ-೪-೨೫-೧೦ ।* ಈ ದೇಹದೊಳಗೆ ಒಬ್ಬ ಜೀವನಿದ್ದಾನೆ ಮತ್ತು ಸದಾ ಅವನೊಂದಿಗಿರುವ ಒಬ್ಬ ಗೆಳೆಯನಿದ್ದಾನೆ. ಆದರೆ ಆ ಗೆಳೆಯನ ಹೆಸರೇನು, ಆತ ಏನನ್ನು ಮಾಡುತ್ತಿದ್ದಾನೆ ಎನ್ನುವುದು ಜೀವನಿಗೆ ತಿಳಿದಿಲ್ಲ! ಇದನ್ನೇ ಉಪನಿಷತ್ತಿನಲ್ಲಿ "*ದ್ವಾ ಸುಪರ್ಣಾ ಸಯುಜಾ ಸಖಾಯಾ । ಮುಂಡಕ ೩-೧-೧ ।* ಎಂದಿದ್ದಾರೆ. *ಹೃದಿ ಹ್ಯೇಷ ಆತ್ಮಾ । ಪಟ್ ಪ್ರಶ್ನ ೩.೫ ।* ನಮ್ಮ ಜೀವ ಇರುವುದೂ ಹೃದಯದಲ್ಲಿ, ಭಗವಂತ ಇರುವುದೂ ಹೃದಯದಲ್ಲಿ. ನಮ್ಮ ಆತ್ಮದ ಅತ್ಯಂತ ಆತ್ಮೀಯ ಗೆಳೆಯನಾಗಿ ಪಕ್ಕದಲ್ಲೇ ಭಗವಂತನಿದ್ದಾನೆ. ಆದರೆ ನಮಗೆ ಆತನ ಪರಿಚಯವೇ ಇಲ್ಲ. ಹಾಗಾಗಿ ನಮ್ಮ ಪಾಲಿಗೆ ಆತ ಇದ್ದೂ ಇಲ್ಲವಾಗಿದ್ದಾನೆ. ಇದಕ್ಕಾಗಿ ಇಲ್ಲಿ ಶುಕಾಚಾರ್ಯರು "ಭಗವಂತ ನಿಮ್ಮ ಹೃದಯ ಕಮಲದಲ್ಲೇ ಇದ್ದಾನೆ, ಅವನನ್ನು ಇನ್ನೆಲ್ಲೋ ಹುಡುಕಬೇಡಿ"ಎಂದಿದ್ದಾರೆ.

ಈ ಶ್ಲೋಕದಲ್ಲಿ ಶುಕಾಚಾರ್ಯರು ಭಗವಂತನನ್ನು 'ಅನುಭೂಃ' ಎಂದಿದ್ದಾರೆ. ಅನುಭೂಃ ಎಂದರೆ ತನ್ನ ಇಚ್ಛೆಗನುಗುಣವಾಗಿ ತಾನಿರುವವ. ಇಚ್ಛಾಮಾತ್ರದಿಂದಲೇ ಸೃಷ್ಟಿ-ಸ್ಥಿತಿ-ಸಂಹಾರ ಮಾಡಬಲ್ಲ ಭಗವಂತ ತಾನು ಬಯಸಿದ ಅನಂತ ರೂಪ ತೊಡಬಲ್ಲ. ಇಂತಹ ಭಗವಂತನನ್ನು ಶುಕಾಚಾರ್ಯರು 'ಸರ್ವಃ' ಎಂದು ಸಂಬೋಧಿಸಿದ್ದಾರೆ. ಸರ್ವಃ ಪದದ ವಿವರಣೆ ಗೀತೆಯಲ್ಲಿ ಬರುತ್ತದೆ. ಅಲ್ಲಿ ಅರ್ಜುನ *ಸರ್ವಂ ಸಮಾಪ್ನೋಷಿ ತತೋSಸಿ ಸರ್ವಃ* ಎಂದಿದ್ದಾನೆ. [ಭಗವದ್ಗೀತಾ-೧೧-೪೦]. ಎಲ್ಲಾ ಕಡೆ ವ್ಯಾಪಿಸಿರುವ, ಎಲ್ಲಾ ಗುಣಗಳಿಂದ ಪೂರ್ಣನಾದ, ಸರ್ವಕರ್ತ, ಸರ್ವಗತ, ಸರ್ವಸಮರ್ಥ ಭಗವಂತ 'ಸರ್ವಃ'. ಇಂತಹ ಭಗವಂತ ನಮ್ಮೆಲ್ಲರ ಹೃದಯದಲ್ಲಿ ಹೇಗಿದ್ದಾನೆ ಎನ್ನುವುದನ್ನು ವಿವರಿಸುತ್ತಾ ಶುಕಾಚಾರ್ಯರು ಇಲ್ಲಿ ಬಹಳ ಸುಂದರವಾದ ಮಾತೊಂದನ್ನು ಹೇಳುತ್ತಾರೆ. ಹೇಗೆ ಎಲ್ಲರೂ ಮಲಗಿರುವ ಮನೆಯೊಂದನ್ನು ಒಬ್ಬ ಕಾವಲುಗಾರ ಸದಾ ಎಚ್ಚರವಾಗಿದ್ದು ಕಾಯುತ್ತಿರುತ್ತಾನೋ ಹಾಗೇ, ನಿದ್ರೆಯಲ್ಲಿರುವ ಅನಂತ ಜೀವರಾಶಿಯನ್ನು ಪ್ರಾಣದೇವರ ಅಂತರ್ಯಾಮಿಯಾಗಿ ನಿಂತು ಭಗವಂತ ಕಾಪಾಡುತ್ತಿದ್ದಾನೆ. ನಾವು ನಿದ್ರಿಸಿದಾಗ ನಮ್ಮೆಲ್ಲಾ ಇಂದ್ರಿಯಾಭಿಮಾನಿ ದೇವತೆಗಳು ನಿದ್ರಿಸಬಹುದು. ಆದರೆ ಸದಾ ಎಚ್ಚರವಾಗಿದ್ದು ನಾವು ಉಸಿರಾಡುವಂತೆ ಮಾಡುವವನು 'ಪ್ರಾಣ'. ಇಂತಹ ಪ್ರಾಣದೇವರ ಅಂತರ್ಯಾಮಿಯಾಗಿರುವ ಭಗವಂತ ಎಲ್ಲಾ ಸತ್ಯಗಳಿಗೂ ಮಿಗಿಲಾದ ನಿರ್ದುಷ್ಟವಾದ ಸತ್ಯ. "ಯಾವ ದೋಷದ ಸ್ಪರ್ಶವೂ ಇಲ್ಲದ, ಎಲ್ಲಾ ಸದ್ಗುಣಗಳಿಂದ ಭರಿತನಾದ, ಸದಾ ಸಜ್ಜನರನ್ನು ರಕ್ಷಿಸುವ ಭಗವಂತನೆಂಬ ಆನಂದದ ಕಡಲಿನ ಆಶ್ರಯ ಪಡೆ" ಎಂದಿದ್ದಾರೆ ಶುಕಾಚಾರ್ಯರು.

"ಎಲ್ಲಾ ಬಗೆಯಿಂದಲೂ ತ್ರಿಕರ್ಣದಿಂದ(ಮನಸ್ಸು-ಮಾತು-ಕೃತಿಯಿಂದ), ಎಲ್ಲಾ ಅವಸ್ಥೆಗಳಲ್ಲಿ(ಎಚ್ಚರ-ಕನಸು-ನಿದ್ರೆ) ಭಗವಂತನೆಂಬ ಸತ್ಯದ ಬೆನ್ನುಹತ್ತು. ಇಲ್ಲದಿದ್ದರೆ ಆತ್ಮನಾಶವನ್ನು ಹೊಂದುತ್ತೀಯ" ಎಂದು ಎಚ್ಚರಿಸಿದ್ದಾರೆ ಶುಕಾಚಾರ್ಯರು. ಇಲ್ಲಿ ಹೇಳಲಾದ 'ಆತ್ಮಘಾತ' ಎನ್ನುವ ಪದಕ್ಕೆ ನಾಲ್ಕು ಅರ್ಥಗಳಿವೆ. ಈ ಹಿಂದೆ ಹೇಳಿದಂತೆ ಆತ್ಮ ಎನ್ನುವ ಪದಕ್ಕೆ ದೇಹ, ಮನಸ್ಸು, ಜೀವ ಮತ್ತು ಪರಮಾತ್ಮ ಎನ್ನುವ ನಾಲ್ಕು ಅರ್ಥಗಳಿವೆ. ಮನುಷ್ಯ ಜನ್ಮ ಬಂದಾಗಲೂ ಭಗವಂತನ ಸ್ಮರಣೆ ಮಾಡದೇ ಇದ್ದರೆ ಆ ದೇಹ ವ್ಯರ್ಥವಾಗುತ್ತದೆ. ಇದು ದೇಹನಾಶ . ಭಗವಂತ ಕರುಣಿಸಿರುವ ಚಿಂತನಾಶೀಲ ಮನಸ್ಸಿನಲ್ಲಿ ಭಗವಂತನ ಸ್ಮರಣೆ ಮಾಡದೇ ಹೋದರೆ ಅದರಿಂದ ಮನಸ್ಸಿನ ಮತ್ತು ಬುದ್ಧಿಯನಾಶವಾಗಿ ಆತ್ಮ ಉದ್ದಾರದ ಮಾರ್ಗದಲ್ಲಿ ಸಾಗದೇ ಅಧಃಪಾತವನ್ನು ಹೊಂದುತ್ತದೆ. [*ಬುದ್ಧಿನಾಶಾದ್ ವಿನಶ್ಯತಿ॥ಭಗವದ್ಗೀತಾ-೨-೬೩॥*]. ಇದರಿಂದಾಗಿ ನಾವು ಭಗವಂತನನ್ನು ನಿರಾಕರಣೆ ಮಾಡಿಕೊಂಡು ಬದುಕುತ್ತೇವೆ ಮತ್ತು ಅದರಿಂದಾಗಿ ನಮ್ಮ ಪಾಲಿಗೆ ಭಗವಂತ ಇಲ್ಲವಾಗುತ್ತಾನೆ.

# ಧ್ಯಾನದಲ್ಲಿ ಕಾಣುವ ಭಗವಂತನ ಮುಖದಲ್ಲಿನ ಉತ್ಕೃಷ್ಟವಾದ ಮಂದಹಾಸ

ಅದೀನಲೀಲಾಹಸಿತೇಕ್ಷಣೋಲ್ಲಸದ್ ಭ್ರೂ ಭಂಗಸಂಸೂಚಿತಭೂರ್ಯನುಗ್ರಹಮ್ ।
ಈಕ್ಷೇತ ಚಿಂತಾಮಯಮೇನಮೀಶ್ವರಂ ಯಾವನ್ಮನೋ ಧಾರಣಯಾSವತಿಷ್ಠತೇ ॥೧೩॥

ಈ ಶ್ಲೋಕದಲ್ಲಿ ಶುಕಾಚಾರ್ಯರು ಹಿಂದೆ ವಿವರಿಸಿದ ಧ್ಯಾನ ಪ್ರಕ್ರಿಯೆಯನ್ನು ಮತ್ತೆ ಇನ್ನೊಂದು ರೀತಿಯಲ್ಲಿ ವಿವರಿಸುತ್ತಾ ಹೇಳುತ್ತಾರೆ: "ಭಗವಂತನ ಮುಖದಲ್ಲಿ ಉತ್ಕೃಷ್ಟವಾದ ಮಂದಹಾಸವನ್ನು ಧ್ಯಾನಮಾಡು" ಎಂದು. ಮುಖಕ್ಕೆ ಕಳೆಯೇ ಮಂದಹಾಸ. ಇಂತಹ ಮಂದಹಾಸದಲ್ಲಿ ಅತ್ಯಂತ ಶ್ರೇಷ್ಠ ಮಂದಹಾಸ ಆ ಭಗವಂತನ ಮಂದಹಾಸ. "ಅಂತಹ ಮಂದಹಾಸಬೀರುವ ಭಗವಂತನನ್ನು ಧ್ಯಾನದಲ್ಲಿ ಕಾಣು" ಎಂದಿದ್ದಾರೆ ಶುಕಾಚಾರ್ಯರು. "ಭಗವಂತ ಮುಗುಳ್ನಗುತ್ತಿದ್ದಾನೆ, ಆತ ತನ್ನ ಕರುಣಾಪೂರ್ಣ ಅರಳುಗಣ್ಣಿನಿಂದ ನನ್ನನ್ನು ನೋಡುತ್ತಿದ್ದಾನೆ, ಆತನ ಅನುಗ್ರಹದ ವೃಷ್ಟಿ ನನ್ನ ಮೇಲಾಗುತ್ತಿದೆ" ಎಂದು ಅಂತರಂಗದಲ್ಲಿ ಭಗವಂತನನ್ನು ಧ್ಯಾನ ಮಾಡಬೇಕು.
ಇಲ್ಲಿ ಭಗವಂತನನ್ನು 'ಚಿಂತಾಮಯ' ಎಂದು ಸಂಬೋಧಿಸಿದ್ದಾರೆ. ಇದು ಇಂದು ಲೋಕದಲ್ಲಿ ಬಳಕೆಯಲ್ಲಿಲ್ಲದ ಪದ. ಶಾಸ್ತ್ರೀಯವಾಗಿ ಚಿಂತಾಮಯ ಎಂದರೆ ಬೇಡಿದ್ದನ್ನು ಕೊಡುವ ಕರುಣಾಳು ಎಂದರ್ಥ. "ನಾನಿರುವಾಗ ನಿನಗೇಕೆ ಚಿಂತೆ" ಎಂದು ಮಂದಹಾಸ ಬೀರುತ್ತಾ, ಪ್ರೀತಿತುಂಬಿದ, ಬಿಲ್ಲಿನಂತೆ ಬಗ್ಗಿರುವ ಸುಂದರವಾದ ಹುಬ್ಬಿರುವ, ಅರಳುಗಣ್ಣಿನಿಂದ ಭಗವಂತ ನನ್ನನ್ನು ನೋಡುತ್ತಿದ್ದಾನೆ ಎಂದು ಆ ಕರುಣಾಮೂರ್ತಿ ಭಗವಂತನನ್ನು ಧ್ಯಾನದಲ್ಲಿ ಕಾಣಬೇಕು. "ಈ ರೀತಿ ಆನಂದದ ಅಭಿವ್ಯಕ್ತಿ ಮಾಡುವಂತಹ ಅರಳುಗಣ್ಣಿನ ಆ ಮಂದಹಾಸ ಎಷ್ಟು ಹೊತ್ತು ಕಾಣುತ್ತದೋ ಅಷ್ಟುಹೊತ್ತು ನೋಡಿ ಆನಂದಪಡು" ಎಂದಿದ್ದಾರೆ ಶುಕಾಚಾರ್ಯರು. ಧ್ಯಾನದಲ್ಲಿ ನಿರಂತರ ಪ್ರಯತ್ನ ಮಾಡಿದರೆ ಈ ರೀತಿಯ ಅಪೂರ್ವ ಅನುಭವವನ್ನು ಪಡೆಯುವುದು ಸಾಧ್ಯ. ಒಮ್ಮೆ ಧ್ಯಾನದಲ್ಲಿ ಭಗವಂತನ ಸುಂದರಮೂರ್ತಿಯನ್ನು ಕಂಡರೆ ಆನಂತರ ಜಗತ್ತಿನಲ್ಲಿ ಯಾವುದೂ ಅದಕ್ಕಿಂತ ಸುಂದರ ಅನಿಸುವುದೇ ಇಲ್ಲ. ಇದರಿಂದಾಗಿ ಪ್ರಾಪಂಚಿಕ ಸೆಳೆತ ಕಡಿಮೆಯಾಗುತ್ತದೆ. ಕಣ್ಮುಚ್ಚಿ ಕುಳಿತ ತಕ್ಷಣ ಭಗವಂತನ ರೂಪ ಕಾಣುತ್ತದೆ ಎಂದು ಹೇಳಲು ಸಾಧ್ಯವಿಲ್ಲ, ಕಾಣಿಸಿದರೂ ಅದು ಸಮಗ್ರವಾಗಿ ಇಡೀ ದಿನ ಕಾಣಲು ಸಾಧ್ಯವಿಲ್ಲ. ಅಪರೋಕ್ಷಜ್ಞಾನಿಗಳು ಆತ್ಮಸ್ವರೂಪದಿಂದ ಭಗವಂತನನ್ನು ಕಾಣುವಾಗಲೂ ಸಹ, ಎಲ್ಲೋ ಒಮ್ಮೆ ಮಿಂಚಿನಂತೆ ಕಾಣಿಸಿ ಕಣ್ಮರೆಯಾಗುತ್ತಾನೆ ಆ ಭಗವಂತ. ಆದರೆ ಒಮ್ಮೆ ಕಂಡ ನೆನಪು ಇಡೀ ಜನ್ಮಕ್ಕೆ ಸಾಕು.

ಯಾವನ್ನ ಜಾಯೇತ ಪರಾವರೇSಸ್ಮಿನ್ವಿಶ್ವೇಶ್ವರೇ ದ್ರಷ್ಟರಿ ಭಕ್ತಿಯೋಗಃ ।
ತಾವತ್ಸ್ಥವೀಯಃ ಪುರುಷಸ್ಯ ರೂಪಂ ಕ್ರಿಯಾವಸಾನೇ ಪ್ರಯತಃ ಸ್ಮರೇತ ॥೧೪॥

ಭಗವಂತನನ್ನು ಧ್ಯಾನ ಮಾಡಬೇಕಾದರೆ ಕೇವಲ ಪಾಂಡಿತ್ಯ ಸಾಲದು. ಧ್ಯಾನಕ್ಕೆ ಬಹಳ ಮುಖ್ಯವಾದುದು ಜ್ಞಾನದ ಜೊತೆಗೆ ಶರಣಾಗತಿ**(Submission).** ಭಕ್ತಿ ಇಲ್ಲದ ಪಾಂಡಿತ್ಯದಿಂದ ಧ್ಯಾನ ಅಸಾಧ್ಯ. ಎಲ್ಲವನ್ನೂ ಕಾಣಬಲ್ಲ ಭಗವಂತ ನಮ್ಮೊಳಗಿನ ಅಹಂಕಾರವನ್ನೂ ಕಾಣಬಲ್ಲ. ಹಾಗಾಗಿ ಎಲ್ಲಿಯ ತನಕ ನಾವು ಅಹಂಕಾರದಿಂದ ಈಚೆ ಬರುವುದಿಲ್ಲವೋ, ಅಲ್ಲಿಯ ತನಕ ಭಗವಂತನ ದರ್ಶನ ಸಾಧ್ಯವಿಲ್ಲ. ವೇದದಲ್ಲಿ ಹೇಳುವಂತೆ: ***"ತಮೇವಂ ವಿದ್ವಾನ್ ಅಮೃತ ಇಹಭವತಿ".*** ಅಂದರೆ- ಭಗವಂತನಲ್ಲಿ ಭಕ್ತಿ ಮಾಡಬೇಕಾದರೆ ಜ್ಞಾನ ಬೇಕು, ಆತ ಜ್ಞಾನಿಗಳಿಗೆ ಮಾತ್ರ

ಕಾಣಿಸಿಕೊಳ್ಳುತ್ತಾನೆ. ಇದೇ ಮಾತನ್ನು ಶ್ರೀಕೃಷ್ಣ ಗೀತೆಯಲ್ಲಿ ಹೀಗೆ ಹೇಳಿದ್ದಾನೆ: *ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥ಭಗವದ್ಗೀತಾ-೪-೩೭॥* ಅಂದರೆ: ಅರಿವಿನ ಬೆಂಕಿ ಎಲ್ಲಾ ಕರ್ಮಗಳನ್ನೂ ಸುಟ್ಟುಬಿಡುತ್ತದೆ. ಆದರೆ *"ಭಕ್ತ್ಯಾ ತು ಅನನ್ಯಯಾ ಶಕ್ಯಃ" ॥ಭಗವದ್ಗೀತಾ-೧೧-೫೪॥* ಅಂದರೆ: ಭಕ್ತಿಗೆ ಪೂರಕವಾದ ಜ್ಞಾನ ಮಾತ್ರ ಭಗವಂತನ ಅರಿವಿಗೆ ಕಾರಣವಾಗುತ್ತದೆ.

ಮೇಲಿನ ಶ್ಲೋಕದಲ್ಲಿ ಶುಕಾಚಾರ್ಯರು "ಪರಾವರನಾದ ಭಗವಂತನಲ್ಲಿ ಭಕ್ತಿ ಬರಲಿಲ್ಲ ಎಂದರೆ ನಮ್ಮ ಜ್ಞಾನದಲ್ಲಿ ದೋಷವಿದೆ ಎಂದು ತಿಳಿಯಬೇಕು" ಎಂದಿದ್ದಾರೆ. ಇಲ್ಲಿ 'ಪರಾವರ' ಎಂದರೆ ಎಲ್ಲಾ ತತ್ತ್ವಗಳಿಗೂ ಹಿರಿಯ ತತ್ತ್ವ ಎಂದರ್ಥ. ನಾವು ಜಗತ್ತಿನ ಯಾವುದೋ ಮೂಲೆಯಲ್ಲಿರುವ ಒಂದು ಅಣುಕಣ. ಈ ಜಗತ್ತಿನಲ್ಲಿ ನಮಗಿಂತ ದೊಡ್ಡ ತತ್ತ್ವಗಳು ಬಹಳಷ್ಟಿವೆ. ಆದರೆ ಭಗವಂತನ ಮುಂದೆ ಇತರ ಎಲ್ಲಾ ತತ್ತ್ವಗಳೂ ಸಣ್ಣವು. ಹಾಗಾಗಿ ಅಂತಹ ಭಗವಂತನ ಮೇಲೆ ನಮಗೆ ಭಕ್ತಿ ಬರಲಿಲ್ಲ ಎಂದರೆ ನಮಗೆ ಸರಿಯಾಗಿ ಭಗವಂತನ ಅರಿವೇ ಬರಲಿಲ್ಲ ಎಂದರ್ಥ. ಭಗವಂತ ಇಡೀ ವಿಶ್ವಕ್ಕೆ ಸ್ವಾಮಿ. ಅಷ್ಟೇ ಅಲ್ಲ, ಪ್ರತಿಯೊಂದು ಜೀವರೊಳಗೆ ಅಂತರ್ಯಾಮಿಯಾಗಿ ಇರತಕ್ಕವನು ಆತ. ಇಂತಹ ಬ್ರಹ್ಮ-ವಾಯುವಿಗೂ ನಿಯಾಮಕನಾಗಿರುವ ಭಗವಂತನಲ್ಲಿ ಪೂರ್ಣಪ್ರಮಾಣದಲ್ಲಿ ಭಕ್ತಿ ಬರಲಿಲ್ಲ ಎಂದರೆ ಕಣ್ಮುಚ್ಚಿ ಆತನನ್ನು ಧ್ಯಾನದಲ್ಲಿ ಕಾಣಲು ಸಾಧ್ಯವಿಲ್ಲ.

ಮಾನಸ ಪೂಜೆ ಸಾಧ್ಯವಾಗುವ ತನಕ ಬಾಹ್ಯಕ್ರಿಯೆಗಳಿಂದ ಭಗವಂತನನ್ನು ಅರ್ಚಿಸಬೇಕು. ಹೀಗೆ ಮಾಡುತ್ತಾ ಮುಂದುವರಿದಾಗ ಅದು ಮನಸ್ಸಿನ ಮೇಲೆ ಪ್ರಭಾವಬೀರುತ್ತದೆ. ಇದರಿಂದ ಅಹಂಕಾರ ಕಡಿಮೆಯಾಗಿ ಧ್ಯಾನದ ಮಾರ್ಗ ಸುಗಮವಾಗುತ್ತದೆ. ಬಾಹ್ಯ ಪೂಜೆಯನ್ನು ನಿರಂತರ ಮಾಡಿ "ನನ್ನ ಅಂತರಂಗದಲ್ಲಿ ಕಾಣಿಸಿಕೋ" ಎಂದು ಭಗವಂತನಲ್ಲಿ ಪ್ರಾರ್ಥಿಸಬೇಕು. ಪ್ರತಿಯೊಂದು ಆಚರಣೆಯ ಕೊನೆಯಲ್ಲಿ ಎಲ್ಲವುದರಲ್ಲೂ ಭಗವಂತನಿದ್ದಾನೆ ಎನ್ನುವುದನ್ನು ನೆನಪಿಸಿಕೊಳ್ಳಬೇಕು. ನಾನು ಪೂಜಿಸುತ್ತಿರುವುದು ಕೇವಲ ಪ್ರತಿಮೆಯನ್ನಲ್ಲ, ಬದಲಿಗೆ ಆ ಪ್ರತಿಮೆಯ ಅಂತರ್ಯಾಮಿಯಾಗಿರುವ ಭಗವಂತನನ್ನು ಎನ್ನುವ ಅನುಸಂಧಾನ ನಮ್ಮ ಕ್ರಿಯೆಯಲ್ಲಿರಬೇಕು. ನಾವು ಮಾಡುವ ಪೂಜೆಯ ಪ್ರತಿಯೊಂದು ಹಂತದಲ್ಲಿ ಭಗವಂತನನ್ನು ಅನುಸಂಧಾನ ಮಾಡುವುದು ಕಷ್ಟವಾದಾಗ, ಪೂಜೆಯ ಕೊನೆಗೆ "ಇದು ಎಲ್ಲವುದರ ಒಳಗೂ-ಹೊರಗೂ ತುಂಬಿರುವ ಆತನಿಗೆ ಅರ್ಪಿತವಾಗಿ ಆತ ಪ್ರಸನ್ನನಾಗಲಿ" ಎಂದು ಭಗವಂತನಿಗೆ ಅರ್ಪಿಸಬೇಕು. [ಇದಕ್ಕಾಗಿಯೇ ಪ್ರತಿಯೊಂದು ಪೂಜೆಯ ಕೊನೆಗೆ ಕೃಷ್ಣಾರ್ಪಣಮಸ್ತು ಹೇಳಲಾಗುತ್ತದೆ].

## ಪ್ರಾಣೋತ್ಕ್ರಮಣ ಕಾಲದಲ್ಲಿನ ಭಗವಂತನ ಧ್ಯಾನ

ಇಲ್ಲಿ ಮುಖ್ಯವಾಗಿ ಪರೀಕ್ಷಿತರಾಜನಿಗೆ ಬೇಕಾಗಿರುವುದು ಪ್ರಾಣೋತ್ಕ್ರಮಣ ಕಾಲದಲ್ಲಿ ಹೇಗೆ ಧ್ಯಾನ ಮಾಡಬೇಕು ಎನ್ನುವ ವಿಚಾರ. ಸಾಮಾನ್ಯವಾಗಿ ಪ್ರಜ್ಞೆ ಸರಿ ಇರುವ ಮನುಷ್ಯನಿಗೆ ಸಾವಿನ[ಸಹಜ ಮರಣ] ಸುಮಾರು ಒಂದು ದಿನದ ಮೊದಲು ಸಾವಿನ ಸಂಕೇತ ಸಿಗುತ್ತದೆ. ಕೆಲವರು ಇದನ್ನು ಇನ್ನೊಬ್ಬರ ಬಳಿ ಹೇಳಿಕೊಳ್ಳುತ್ತಾರೆ, ಇನ್ನು ಕೆಲವರು ಬಹಿರಂಗಗೊಳಿಸುವುದಿಲ್ಲ. ಮತ್ತೆ ಕೆಲವರಿಗೆ ಈ ಸೂಚನೆಯನ್ನು ಅರ್ಥ ಮಾಡಿಕೊಳ್ಳುವ ಶಕ್ತಿ ಇರುವುದಿಲ್ಲ. ಅಧ್ಯಾತ್ಮದಲ್ಲಿ ನಿರಂತರ ಪ್ರಯತ್ನ ಮಾಡುವವರು(ಯತಿಗಳು), ಫಲಕಾಮನೆಯನ್ನು ತೊರೆದು ನಿಷ್ಕಾಮನೆಯಿಂದ ಭಗವಂತನನ್ನು ಆರಾಧಿಸುವವರು, ಅದರಲ್ಲೂ ಮುಖ್ಯವಾಗಿ ಸ್ವಇಚ್ಛೆಯಿಂದ ದೇಹತ್ಯಾಗ ಮಾಡಬಯಸುವ ಸಾಧಕರು ಕೊನೆಗಾಲದಲ್ಲಿ ಹೇಗೆ ಧ್ಯಾನ ಮಾಡಬೇಕು ಎನ್ನುವುದನ್ನು ಶುಕಾಚಾರ್ಯರು ಇಲ್ಲಿ ವಿವರಿಸುವುದನ್ನು ಕಾಣುತ್ತೇವೆ.

ಸ್ಥಿರಂ ಸುಖಂ ಚಾಸನಮಾಸ್ಥಿತೋ ಯತಿರ್ಯದಾ ಜಿಹಾಸುರಿಮಮಂಗ ಲೋಕಮ್ ।
ಕಾಲೇ ಚ ದೇಶೇ ಚ ಮನೋ ನ ಸಜ್ಜೇತ್ ಪ್ರಾಣಾನ್ ನಿಯಚ್ಛೇನ್ಮನಸಾ ಜಿತಾಸುಃ ॥೧೬॥
ಮನಶ್ಚ ಬುದ್ಧ್ಯಾSಮಲಯಾ ನಿಯಮ್ಯ ಕ್ಷೇತ್ರಜ್ಞ ಏತಾಂ ನಿನಯೇತ್ ತಮಾತ್ಮನಿ ।
ಆತ್ಮಾನಮಾತ್ಮನ್ಯವರುಧ್ಯ ಧೀರೋ ಲಬ್ಧೋಪಶಾಂತಿರ್ವಿರಮೇತ ಕೃತ್ಯಾತ್ ॥೧೭॥

"ಬುದ್ಧಿಪೂರ್ವಕವಾಗಿ ದೇಹತ್ಯಾಗ ಮಾಡುವವರು ಭದ್ರವಾದ ಆಸನದಲ್ಲಿ ಚಲನೆ ಇಲ್ಲದೆ ನಿಶ್ಚಲವಾಗಿ ಕುಳಿತುಕೊಂಡು ದೇಶ-ಕಾಲದ ಬಗ್ಗೆ ಯೋಚನೆ ಮಾಡದೇ ಧ್ಯಾನಕ್ಕೆ ತೊಡಗಬೇಕು" ಎಂದಿದ್ದಾರೆ ಶುಕಾಚಾರ್ಯರು. ಇದು ಬಹಳ ಮುಖ್ಯವಾದ ವಿಚಾರ. ನಮ್ಮಲ್ಲಿ ಕೆಲವರಿಗೆ ಒಂದು ತಪ್ಪು ಕಲ್ಪನೆ ಇದೆ. ಅದೇನೆಂದರೆ ಉತ್ತರಾಯಣದಲ್ಲಿ ಅದರಲ್ಲೂ ಹಗಲಲಿ ಸತ್ತರೆ ಮಾತ್ರ ಮೋಕ್ಷ ಎಂದು. ಇದು ಭೀಷ್ಮಾಚಾರ್ಯರ ಕಥೆಯನ್ನು ಕೇಳಿ ಬಂದಿರುವ ತಪ್ಪು ತಿಳುವಳಿಕೆ. ಉತ್ತರಾಯಣದಲ್ಲಿ ಸತ್ತವರೆಲ್ಲಾ ಮೋಕ್ಷಕ್ಕೆ ಹೋಗುವುದಿಲ್ಲ. ಮೋಕ್ಷ ಯೋಗ್ಯರು ಯಾವಾಗ ಸತ್ತರೂ ಮೋಕ್ಷವನ್ನು ಸೇರುತ್ತಾರೆ. ಶಾಸ್ತ್ರದಲ್ಲಿ ಬರುವ ಉತ್ತರಾಯಣ, ಶುಕ್ಲಪಕ್ಷ, ಇತ್ಯಾದಿ ಉಲ್ಲೇಖಗಳು ನಾವು ಹೋಗಿ ಸೇರುವ ದೇವತೆಗಳ ಉಲ್ಲೇಖವಾಗಿದೆ. ಇನ್ನು ಪುರಾಣದಲ್ಲಿ ಪ್ರಯಾಗ-ತ್ರಿವೇಣಿ ಸಂಗಮದಲ್ಲಿ ಸತ್ತರೆ ಮೋಕ್ಷ ಎನ್ನುವ ಮಾತಿದೆ. ಇದು ಆ ಕ್ಷೇತ್ರ ಎಷ್ಟು ಪವಿತ್ರ ಎನ್ನುವುದನ್ನು ಸೂಚಿಸುತ್ತದೆ. ಅಲ್ಲಿ ಸ್ನಾನ ಮಾಡುವುದರಿಂದ ಕ್ರಮೇಣ ಮನಃಶುದ್ಧಿಯಾಗಿ, ಜ್ಞಾನವೃದ್ಧಿಯಾಗಿ ಮೋಕ್ಷಕ್ಕೆ ಹೋಗಬಹುದೇ ಹೊರತು, ಗಂಗೆಗೆ ಹಾರಿದರೆ ಮೋಕ್ಷ ಸಿಗುವುದಿಲ್ಲ. ಹೀಗಾಗಿ ಇಲ್ಲಿ ಮುಖ್ಯವಾಗಿ ಶುಕಾಚಾರ್ಯರು "ಪ್ರಾಣೋತ್ಕ್ರಮಣ ಕಾಲದಲ್ಲಿ, ದೇಹತ್ಯಾಗ ಮಾಡುವಾಗ ದೇಶ-ಕಾಲದ ಬಗ್ಗೆ ಯೋಚಿಸಲೇ ಬೇಡ" ಎಂದಿದ್ದಾರೆ. '*ತದೇವ ಲಗ್ನಂ, ಸುದಿನಂ ತದೇವ*' ಯಾವ ದೇಶದಲ್ಲಿ, ಯಾವ ಕಾಲದಲ್ಲಿ ಭಗವಂತನ ಸ್ಮರಣೆ ಬಂತೋ ಅದೇ ಪುಣ್ಯಕಾಲ, ಅದೇ ಪುಣ್ಯದೇಶ. ಭಗವಂತನ ಸ್ಮರಣೆ ಇಲ್ಲದೆ ಯಾವ-ದೇಶ ಕಾಲದಲ್ಲಿ ಸತ್ತರೂ ಉಪಯೋಗವಿಲ್ಲ. ಹೀಗಾಗಿ ನಮ್ಮ ಚಿಂತನೆ ಕೇವಲ ಭಗವಂತನ ಕುರಿತಾಗಿರಲಿ, ದೇಶ-ಕಾಲದಲ್ಲಿ ಬೇಡ.

ಮೊತ್ತಮೊದಲು ಪ್ರಾಣಾಯಾಮದಿಂದ ಉಸಿರನ್ನು ಗೆದ್ದು, ಪ್ರಾಣದೇವರಲ್ಲಿ ಮನಸ್ಸನ್ನು ನಿಲ್ಲಿಸಿ, ಪ್ರಾಣಾಂತರ್ಗತ ಭಗವಂತನನ್ನು ಧ್ಯಾನ ಮಾಡಬೇಕು. ಪ್ರಾಣದೇವರ ಅನುಗ್ರಹದಿಂದ ಇಂದ್ರಿಯಾಭಿಮಾನಿ ದೇವತೆಗಳನ್ನು ಮನೋಭಿಮಾನಿ ದೇವತೆಗಳ ಅಧೀನವಾಗಿ(ಲಯ ಚಿಂತನೆ) ಧ್ಯಾನ ಮಾಡಬೇಕು. [ಇಂದ್ರಿಯಾಭಿಮಾನಿ ದೇವತೆಗಳು ಯಾರು ಎನ್ನುವ ವಿವರಣೆ ಮುಂದೆ ಭಾಗವತದಲ್ಲೇ ಬರುತ್ತದೆ. ಹದಿನೆಂಟನೇ ಕಕ್ಷ್ಯೆಯಿಂದ ಎಂಟನೇ ಕಕ್ಷ್ಯೆಯ ಇಂದ್ರನ ತನಕ ಎಲ್ಲಾ ದೇವತೆಗಳು ನಮ್ಮ ಇಂದ್ರಿಯಾಭಿಮಾನಿಗಳು. ಲಯ ಚಿಂತನೆಯ ಕುರಿತು ಈಗಾಗಲೇ ಒಂದನೇ ಸ್ಕಂಧದಲ್ಲಿ ವಿವರಿಸಲಾಗಿದೆ ೧-೧೫-೧೦]. ಇಂದ್ರಿಯಾಭಿಮಾನಿ ದೇವತೆಗಳು ಮನೋಮಯಕೋಶದ ದೇವತೆಗಳಾದ ಗರುಡ-ಶೇಷ-ರುದ್ರರ ಅಧೀನವಾಗಿ ಪ್ರಾಣಮಯಕೋಶವನ್ನು ನಿಯಂತ್ರಿಸುತ್ತಾರೆ ಎಂದು ಚಿಂತನೆ ಮಾಡಬೇಕು. ನಂತರ ಮನೋಮಯಕೋಶದ ದೇವತೆಗಳನ್ನು ಬುದ್ಧಿಯ ಅಭಿಮಾನಿನಿಯರಾದ ಸರಸ್ವತಿ-ಭಾರತಿಯರ ಅಧೀನವಾಗಿ ಮತ್ತು ಬುದ್ಧಿಯ ಅಭಿಮಾನಿಯರು ವಿಜ್ಞಾನ ಮತ್ತು ಆನಂದಮಯಕೋಶದ ಅಭಿಮಾನಿಯರಾದ ಬ್ರಹ್ಮ-ವಾಯುವಿನ ಅಧೀನ ಎಂದು ತಾರತಮ್ಯ(portfolio)

ಚಿಂತನೆ ಮಾಡಬೇಕು. ಕೊನೆಯಲ್ಲಿ ಎಲ್ಲಾ ದೇವತೆಗಳು ಜೀವಸ್ವರೂಪದಲ್ಲಿರುವ ಕ್ಷೇತ್ರಜ್ಞನಾದ ಭಗವಂತನ ಅಧೀನ ಎಂದು ಚಿಂತನೆ ಮಾಡಬೇಕು. ಜೀವಸ್ವರೂಪದಲ್ಲಿ ಅಣೋರಣೀಯನಾಗಿರುವ ಕ್ಷೇತ್ರಜ್ಞನಾದ ಭಗವಂತ ಪಿಂಡಾಂಡದಲ್ಲಿರುವ ಭಗವಂತನ ಸ್ವರೂಪ. ಪಿಂಡಾಂಡದಲ್ಲಿರುವ ಭಗವಂತ ಬ್ರಹ್ಮಾಂಡದಲ್ಲಿರುವ ಭಗವಂತನ ಸ್ವರೂಪ. ಬ್ರಹ್ಮಾಂಡದಲ್ಲಿರುವ ಭಗವಂತ ಸರ್ವಗತನಾದ ಭಗವಂತನ ಸ್ವರೂಪ ಎಂದು ಐಕ್ಯಚಿಂತನೆ ಮಾಡಬೇಕು. ಈ ರೀತಿ ಚಿಂತನೆ ಮಾಡುತ್ತಾ ಜೀವ ದೇಹದಿಂದ ಮೇಲಕ್ಕೆ ಹೋಗಬೇಕು.

ನ ಯತ್ರ ಕಾಲೋಽನಿಮಿಷಾಂ ಪರಃ ಪ್ರಭುಃ ಕುತೋ ನು ದೇವಾ ಜಗತಾಂ ಯ ಈಶಿರೇ ।
ನ ಯತ್ರ ಸತ್ತ್ವಂ ನ ರಜಸ್ತಮಶ್ಚ ನ ವೈ ವಿಕಾರೋ ನ ಮಹಾನ್ ಪ್ರಧಾನಮ್ ॥೧೮॥

"ಯಾವ ತತ್ತ್ವವನ್ನು ನಾವು ಧ್ಯಾನದಲ್ಲಿ ಚಿಂತನೆ ಮಾಡುತ್ತೇವೋ ಆ ತತ್ತ್ವದ ಮೇಲೆ ಕಾಲದ ಪ್ರಭಾವ ನಡೆಯದು" ಎಂದಿದ್ದಾರೆ ಶುಕಾಚಾರ್ಯರು. ಇಲ್ಲಿ ಕಾಲ ಎಂದರೆ ಜಡವಾದ ಸಮಯ ಅಲ್ಲ. ಕಾಲ ಎನ್ನುವುದಕ್ಕೆ ಸಂಸ್ಕೃತದಲ್ಲಿ ಅನೇಕ ಅರ್ಥಗಳಿವೆ. ***ಯಸ್ಯ ಕರಾಲೋಽಲಂ ಚಕ್ರಂ ಕಾಲಃ.*** ಜಗತ್ತನ್ನು ಸಂಹಾರ ಮಾಡತಕ್ಕಂತಹ ತಮೋಮಾನಿನಿ ದುರ್ಗೆ ಕಾಲ. [ಇದು ಶ್ರೀಲಕ್ಷ್ಮಿಯ ಶ್ರೀ-ಭೂ-ದುರ್ಗ ರೂಪದಲ್ಲಿನ ದುರ್ಗಾರೂಪ]. ದುರ್ಗೆಯ ನಂತರ ಬ್ರಹ್ಮ-ವಾಯು ಕಾಲ ಶಬ್ದ ವಾಚ್ಯರು. ನಂತರ ರುದ್ರದೇವರು ಕಾಲ ಶಬ್ದ ವಾಚ್ಯರು. ಅದೇ ರೀತಿ ಇಂದ್ರ-ಯಮ ಮತ್ತು ಕೊನೆಯದಾಗಿ ಶನಿ ಕಾಲ ಶಬ್ದವಾಚ್ಯ. ಎಲ್ಲರಿಗೂ ಕಾಲನಾದ ಭಗವಂತನ ಮೇಲೆ ಇತರ ಯಾವುದೇ ಕಾಲ ಪ್ರಭಾವಬೀರಲಾರದು. "ಹೀಗಿರುವಾಗ ಉಳಿದ ದೇವತೆಗಳ ಮಾತೇನು" ಎಂದು ಪ್ರಶ್ನಿಸಿದ್ದಾರೆ ಶುಕಾಚಾರ್ಯರು. ಹೀಗೆ ತ್ರೈಗುಣ್ಯಮಾನಿನಿಯಾದ ಶ್ರೀಲಕ್ಷ್ಮಿ, ಬ್ರಹ್ಮ-ವಾಯು, ಎಲ್ಲಾ ದೇವತೆಗಳೂ ಕೂಡಾ ಭಗವಂತನ ನಿಯಂತ್ರಣಕ್ಕೆ ಒಳಪಟ್ಟಿದ್ದಾರೆ.

ಪ್ರತಿಯೊಬ್ಬ ಜೀವನೂ ತ್ರಿಗುಣಗಳ ನಿಯಂತ್ರಣಕ್ಕೆ ಒಳಪಟ್ಟಿದ್ದಾನೆ. ನಮ್ಮ ಎಲ್ಲಾ ಪ್ರವೃತ್ತಿಯ ಹಿಂದೆ ತ್ರಿಗುಣದ ಪ್ರಭಾವವಿರುತ್ತದೆ. ತ್ರೈಗುಣ್ಯವನ್ನು ಮೀರಿ ನಿಲ್ಲುವುದು ಕೇವಲ ಮುಕ್ತರಿಗೆ ಮಾತ್ರ ಸಾಧ್ಯ. ಭಗವಂತ ತ್ರೈಗುಣ್ಯ ವರ್ಜಿತ. ಆತ ಕತ್ತಲಿಲ್ಲದ ಬೆಳಕು, ನಿದ್ದೆ ಇಲ್ಲದ ಎಚ್ಚರ. ಭಗವಂತ ಅಪ್ರಾಕೃತ ಸ್ವರೂಪ. ಇಂತಹ ಭಗವಂತನನ್ನು ತಿಳಿದಾಗ ಈ ಪ್ರಪಂಚದಲ್ಲಿನ ಎಲ್ಲಾ ಆನಂದಗಳೂ ಕ್ಷುಲ್ಲಕವಾಗಿಬಿಡುತ್ತದೆ. ಇದನ್ನೇ ಆಚಾರ್ಯ ಮಧ್ವರು "*ತ್ರಿಗುಣಾತೀತ ವಿದಾರಕ-ಪರಿತೋ ತೇಹಿಸುಭಕ್ತಿಂ*" ಎಂದು ಹಾಡಿದ್ದಾರೆ. "ತ್ರಿಗುಣಾತೀತನಾದ ನೀನು ತ್ರೈಗುಣ್ಯಮಯವಾಗಿರುವ ಈ ಜಗತ್ತಿನ ಧಾರಕ. ನನಗೆ ನಿನ್ನ ಭಕ್ತಿಯನ್ನು ಕೊಡು. ಇನ್ನ್ಯಾವುದರ ಬಗೆಗೂ ಆಸಕ್ತಿ ಬೇಡ" ಎನ್ನುವುದು ನಮ್ಮ ಉಪಾಸನೆಯ ನಿಲುವಾಗಿರಬೇಕು. ತ್ರಿಗುಣಾತ್ಮಕವಾಗಿರುವ ಎಲ್ಲಾ ವಿಷಯಭೋಗಗಳೂ ಕೂಡಾ ದುಃಖದಿಂದ ಮಿಶ್ರಿತವಾದುದು. ನಮ್ಮ ಸ್ವರೂಪ ಎಷ್ಟು ಪ್ರಮಾಣದಲ್ಲಿ ಆನಂದವನ್ನು ಅನುಭವಿಸಬಹುದೋ ಅಷ್ಟು ಪೂರ್ಣಪ್ರಮಾಣದ ಆನಂದ ಸಿಗುವುದು ತ್ರೈಗುಣ್ಯವರ್ಜಿತವಾದ ತತ್ತ್ವವನ್ನು ನೋಡಿದಾಗ.

ನಾಭ್ಯಾಂ ಸ್ಥಿತಂ ಹೃದ್ಯವರೋಪ್ಯ ತಸ್ಮಾದುದಾನಗತ್ಯೋರಸಿ ತಂ ನಯೇನ್ಮುನಿಃ ।
ತತೋಽನುಸಂಧಾಯ ಧಿಯಾ ಮನಸ್ವೀ ಸ್ವತಾಲುಮೂಲಂ ಶನಕೈರ್ನಯೇತ ॥೨೦॥

ತಸ್ಮಾದ್ ಭ್ರುವೋರಂತರಮುನ್ನಯೇತ ನಿರುದ್ಧಸಪ್ತಾಶ್ವಪ ಥೋSನಪೇಕ್ಷಃ ।
ಸ್ಥಿತ್ವಾ ಮುಹೂರ್ತಾರ್ಧಮಕುಂಠದೃಷ್ಟಿರ್ನಿರ್ಭಿದ್ಯ ಮೂರ್ಧನ್ ವಿಸೃಜೇತ್ ಪರಂ ಗತಃ ॥೨೨॥

ಸ್ವ-ಇಚ್ಛೆಯಿಂದ ಪ್ರಾಣತ್ಯಾಗ ಮಾಡುವಾಗ ಜೀವವನ್ನು ಹೇಗೆ ದೇಹದಿಂದ ಹೊರ ಕಳುಹಿಸುವುದು ಎನ್ನುವುದನ್ನು ಇಲ್ಲಿ ಶುಕಾಚಾರ್ಯರು ವರ್ಣಿಸಿರುವುದನ್ನು ಕಾಣುತ್ತೇವೆ. [ಈ ರೀತಿ ಪ್ರಾಣತ್ಯಾಗ ಮಾಡುವ ಯತಿಗಳು ಇಂದಿಗೂ ಹಿಮಾಲದಲ್ಲಿದ್ದಾರೆ. ಇಂತಹ ಯತಿಗಳ ದೇಹತ್ಯಾಗವನ್ನು ಕಣ್ಣಾರೆ ಕಂಡ ವಿವರಣೆಯನ್ನು **"ಲಿವಿಂಗ್ ವಿತ್ ಹಿಮಾಲಯನ್ ಮಾಸ್ಟರ್ಸ್"** ಎನ್ನುವ ಪುಸ್ತಕದಲ್ಲಿ ಸ್ವಾಮಿರಾಮ್ ಅವರು ಸುಂದರವಾಗಿ ವರ್ಣಿಸಿರುವುದನ್ನು ಕಾಣುತ್ತೇವೆ. ಇದೊಂದು ಓದಲೇ ಬೇಕಾದ ಉತ್ತಮ ಪುಸ್ತಕ]. ಮೊದಲು ಮೂಲಾಧಾರದಿಂದ ಪ್ರಾಣಶಕ್ತಿಯನ್ನು ಊರ್ಧ್ವಮುಖಗೊಳಿಸಿ ನಾಭಿಯಲ್ಲಿ ತಂದು ನಿಲ್ಲಿಸಬೇಕು. ನಂತರ ನಾಭಿಯಿಂದ ಅದನ್ನು ಅನಾಹತಚಕ್ರಕ್ಕೆ ತಂದು ಅಲ್ಲಿಂದ ಸುಷುಮ್ನಾ ನಾಡಿಯ ಮುಖೇನ ಹೃತ್ಕಮಲದಲ್ಲಿ ತಂದು ನಿಲ್ಲಿಸಬೇಕು. ನಮಗೆ ತಿಳಿದಂತೆ ಹೃತ್ಕಮಲದಲ್ಲಿ ಜೀವನಿದ್ದಾನೆ ಮತ್ತು ಭಗವಂತನಿದ್ದಾನೆ. ಇದು ಎಲ್ಲಾ ಚಟುವಟಿಕೆಗಳ ಕೇಂದ್ರಸ್ಥಾನ. ಇಲ್ಲಿಂದ ಪ್ರಾಣಶಕ್ತಿಯನ್ನು ಭಗವಂತ ಮತ್ತು ಜೀವನ ಜೊತೆಗೆ ಮೇಲಕ್ಕೆ ಕಳುಹಿಸಬೇಕು. ಹೀಗೆ ಮಾಡುವಾಗ ಹೃದಯದಲ್ಲಿರುವ ಪ್ರಾಣದೇವರ ಮತ್ತು ಭಗವಂತನ ಅನುಸಂಧಾನ ಗಟ್ಟಿಯಾಗಿರಬೇಕು ಮತ್ತು ಅವರ ರಕ್ಷೆಯಲ್ಲಿರುವ ಜೀವಸ್ವರೂಪದ ಚಿಂತನೆ ಮಾಡಬೇಕು. ಈ ಹಂತದಲ್ಲಿ ಜೀವಸ್ವರೂಪವನ್ನು ಪಾಂಚಭೌತಿಕ ದೇಹದಿಂದ ಸ್ಪಷ್ಟವಾಗಿ ಗುರುತಿಸಿಕೊಳ್ಳಬೇಕು. "ಈ ಸ್ಥಿತಿಯಲ್ಲಿ ಮನಸ್ಸು ದೃಢವಾಗಿರಲಿ" ಎಂದು ಇಲ್ಲಿ ಶುಕಾಚಾರ್ಯರು ಎಚ್ಚರಿಸಿರುವುದನ್ನು ಕಾಣುತ್ತೇವೆ. ಏಕೆಂದರೆ ಇಲ್ಲಿಂದ ಮೇಲೆ ಜೀವ ಹೊರಹೋಗಲು ಅನೇಕ ಮಾರ್ಗಗಳಿವೆ. ರೋಮಕೂಪವಿರಬಹುದು ಅಥವಾ ಬಾಯಿ, ಕಣ್ಣು, ಮೂಗು, ಕಿವಿಗಳಿರಬಹುದು. ಈ ಯಾವುದೇ ದ್ವಾರದ ಮುಖೇನ ಪ್ರಾಣಶಕ್ತಿ ನುಣುಚಿಕೊಳ್ಳದಂತೆ ಎಚ್ಚರಿಕೆವಹಿಸಬೇಕು. ಹೃತ್ಕಮಲದಿಂದ ಮೇಲಕ್ಕೆ ಪ್ರಾಣಶಕ್ತಿಯನ್ನು ಕೊಂಡೊಯ್ದು ಸ್ವಪ್ನದ ಕೇಂದ್ರಸ್ಥಾನವಾದ ವಿಶುದ್ಧಿಚಕ್ರದಲ್ಲಿ ನಿಲ್ಲಿಸಬೇಕು. ಇಲ್ಲಿಂದ ಮೇಲಿನ ಪಯಣ ಅತ್ಯಂತ ಕ್ಲಿಷ್ಟ. ಇಲ್ಲಿ ಪ್ರತೀ ಹೆಜ್ಜೆಹೆಜ್ಜೆಗೂ ಎಚ್ಚರ ಅಗತ್ಯ. ವಿಶುದ್ಧಿಚಕ್ರದಿಂದ ಬ್ರಹ್ಮನಾಡಿಯ ಮುಖೇನ ಭ್ರೂಮಧ್ಯಕ್ಕೆ ಬರಬೇಕು. "ಈ ಹಂತದಲ್ಲಿ ಎಲ್ಲಾ ಐಹಿಕ ಕಾಮನೆಗಳನ್ನು ತ್ಯಜಿಸಿ ಅದರ ಮುಖೇನ ಇಲ್ಲಿರುವ ಎಲ್ಲಾ ಏಳು ಕುದುರೆಗಳ ಬಾಗಿಲುಗಳನ್ನು(೨ ಕಿವಿ, ೨ ಮೂಗಿನ ದ್ವಾರ, ೨ ಕಣ್ಣು ಹಾಗೂ ಬಾಯಿ) ಮುಚ್ಚು" ಎಂದಿದ್ದಾರೆ ಶುಕಾಚಾರ್ಯರು. ಇಲ್ಲಿ ಬುದ್ಧಿ ಕುಸಿಯದಂತೆ ಎಚ್ಚರವಹಿಸಿ ಸದಾ ಭಗವಂತನನ್ನು ನೆನೆಯುತ್ತಾ ಸ್ವಲ್ಪಕಾಲ ಜೀವವನ್ನು ಅಲ್ಲೇ ನಿಲ್ಲಿಸಿ ಅದನ್ನು ಮತ್ತೆ ಊರ್ಧ್ವಕ್ಕೆ ಹೋಗಲು ಅಣಿಗೊಳಿಸಬೇಕು. ನಂತರ ಸಹಸ್ರಾರವನ್ನು ಭೇದಿಸಿ ಬ್ರಹ್ಮನಾಡಿಯಿಂದ ಜೀವ ಹೊರಹೋಗಬೇಕು. ಇದು ನಮ್ಮ ದೇಹದಲ್ಲಿರುವ ಶಕ್ತಿಕೇಂದ್ರಗಳ ಮೂಲಕ ಪ್ರಾಣಶಕ್ತಿಯನ್ನು ಊರ್ಧ್ವಮುಖಗೊಳಿಸಿ, ಊರ್ಧ್ವಮುಖವಾದ ಪ್ರಾಣಶಕ್ತಿಯ ಜೊತೆಗೆ ಜೀವವನ್ನು ಬ್ರಹ್ಮನಾಡಿಯಲ್ಲಿ ಹೊರಕ್ಕೆ ಕಳುಹಿಸುವ ಒಂದು ಅದ್ಭುತ ಪ್ರಕ್ರಿಯೆ. [ಈ ರೀತಿಯ ಹಠಯೋಗ ಕಠಿಣ ಸಾಧನವಾಗಿರುವುದರಿಂದ ಪ್ರಾಚೀನರು ಅದಕ್ಕೆ ಪೂರಕವಾದ ಅತ್ಯಂತ ಸರಳ ವಿಧಾನವನ್ನು ತಮ್ಮ ದೈನಂದಿನ ಜೀವನದಲ್ಲಿ ತೊಡಗಿಸಿಕೊಂಡಿದ್ದರು. ಇದಕ್ಕೆ ಉತ್ತಮ ಉದಾಹರಣೆ ಊರ್ಧ್ವಪುಂಡ್ರ ಧಾರಣೆ. ಜೀವದ ಊರ್ಧ್ವಮುಖ ಗತಿಗೆ ಸಂಬಂಧಪಟ್ಟ ಈ ಆಚರಣೆ ಪೂರ್ಣ ಪ್ರಮಾಣದಲ್ಲಿ ದೇಹದಲ್ಲಿರುವ ಶಕ್ತಿ ಕೇಂದ್ರಗಳನ್ನು

ಜಾಗೃತಿಗೊಳಿಸುವ ಒಂದು ಸರಳವಾದ ಬಾಹ್ಯ ವಿಧಾನ]. ಶುಕಾಚಾರ್ಯರು ಇಲ್ಲಿ ವಿವರಿಸಿರುವ ಅಂತ್ಯಕಾಲದ ಅನುಸಂಧಾನ ಮತ್ತು ಜೀವದಗತಿ ಇಷ್ಟು ಸ್ಪಷ್ಟವಾಗಿ ಇನ್ನೆಲ್ಲೂ ಕಾಣಸಿಗುವುದಿಲ್ಲ. ಇದು ಭಾಗವತದಲ್ಲಿ ಬಂದಿರುವ ಅದ್ಭುತ ವಿವರಣೆ.

## ಮೋಕ್ಷ ಮಾರ್ಗದ ನಡುವಿನ ನಿಲುದಾಣಗಳು

ಯದಿ ಪ್ರಯಾಸ್ಯತ್ಯಥ ಪಾರಮೇಷ್ಠ್ಯಂ ವೈಹಾಯಸಾನಾಮುತ ಯದ್ ವಿಹಾರಮ್ ।
ಅಷ್ಟಾಧಿಪತ್ಯಂ ಗುಣಸನ್ನಿವಾಯೇ ಸಹೈವ ಗಚ್ಛೇನ್ಮನಸೇಂದ್ರಿಯೈಶ್ಚ ॥೨೨॥

ದೇಹತ್ಯಾಗ ಮಾಡಿದ ಅಪರೋಕ್ಷ ಜ್ಞಾನಿ ನೇರವಾಗಿ ಮೋಕ್ಷಕ್ಕೆ ಹೋಗುವುದಿಲ್ಲ. ಮೋಕ್ಷಕ್ಕೆ ಹೋಗಲು ಒಂದು ಅವಧಿ ಇದೆ. ದೇಹತ್ಯಾಗ ಮಾಡಿದ ಮೇಲೆ ಮೋಕ್ಷಕ್ಕೆ ಹೋಗುವ ತನಕ ಜೀವ ಬೇರೆ-ಬೇರೆ ಸ್ಥಾನಗಳಲ್ಲಿರುತ್ತಾನೆ. ಆ ಸ್ಥಾನಗಳೆಂದರೆ ಸ್ವರ್ಗಲೋಕದ ಆನಂತರ ಇರುವ, ದೇವತೆಗಳ ವಿಹಾರತಾಣವಾಗಿರುವ- ಮಹರ್ಲೋಕ, ಜನರ್ಲೋಕ, ತಪರ್ಲೋಕ ಮತ್ತು ಸತ್ಯಲೋಕ. ತಮ್ಮ ಯೋಗ್ಯತೆಗನುಗುಣವಾಗಿ ಬೇರೆಬೇರೆ ಲೋಕಗಳಲ್ಲಿ ಬ್ರಹ್ಮಕಲ್ಪದ ಅವಸಾನದ ತನಕ ಇದ್ದು, ಕೊನೆಗೆ ಚತುರ್ಮುಖ ಬ್ರಹ್ಮನೊಂದಿಗೆ ಜೀವ ಮೋಕ್ಷವನ್ನು ಸೇರುತ್ತಾನೆ. ಈ ಲೋಕವನ್ನು ಸೇರಿದ ಜೀವನಿಗೆ ಮತ್ತೆ ಮರುಹುಟ್ಟಿಲ್ಲ. ಈ ಲೋಕಗಳಲ್ಲದೆ ಪುಣ್ಯಫಲದಿಂದ ಸ್ವರ್ಗಲೋಕವನ್ನು ಸೇರಿದ ಜೀವನಿಗೆ ಪುನರ್ಜನ್ಮವಿರುತ್ತದೆ. ಆತ ಮತ್ತೆ ಮೋಕ್ಷ ಸಾಧನೆ ಮಾಡಬೇಕಾಗುತ್ತದೆ.

ಮೇಲಿನ ಶ್ಲೋಕದಲ್ಲಿ 'ಅಷ್ಟಾಧಿಪತ್ಯಂ' ಎಂದರೆ ಅಷ್ಟದಿಕ್ಪಾಲಕರ ಆಡಳಿತಕ್ಕೊಳಪಟ್ಟ ಸ್ವರ್ಗಲೋಕ ಎನ್ನುವುದು ಒಂದು ಅರ್ಥವಾದರೆ, ಅಷ್ಟಸಿದ್ಧಿ ಪಡೆದವರ ಸ್ಥಾನವಾದ ಮೋಕ್ಷ ಎನ್ನುವುದು ಇನ್ನೊಂದು ಅರ್ಥ. [ಅಷ್ಟಸಿದ್ಧಿಯ ಬಗ್ಗೆ ಮುಂದೆ ಭಾಗವತದಲ್ಲೇ ವಿವರಣೆ ಬರುತ್ತದೆ. ಸಂಕ್ಷಿಪ್ತವಾಗಿ ಅಷ್ಟಸಿದ್ಧಿಯ ಬಗ್ಗೆ ಹೇಳಬೇಕೆಂದರೆ: ಅಣಿಮಾ - ದೇಹವನ್ನು ಅತಿ ಚಿಕ್ಕ (ಅಣುವಿಗಿಂತ ಅಣು) ಗಾತ್ರಕ್ಕೆ ಇಳಿಸುವದು; ಲಘಿಮಾ - ಹತ್ತಿಯಂತೆ ಹಗುರಾಗುವುದು; ಮಹಿಮಾ - ದೇಹವನ್ನು ಅತಿ ದೊಡ್ಡ ಗಾತ್ರಕ್ಕೆ ಹೆಚ್ಚಿಸುವುದು; ಗರಿಮಾ - ಬೆಟ್ಟದಷ್ಟು ಭಾರವಾಗಿರುವುದು; ಪ್ರಾಪ್ತಿ – ಎಲ್ಲಿಗೆ ಹೋಗಬೇಕೆಂದು ಇಚ್ಛೆಯಾಯಿತೋ ಆ ಕ್ಷಣ ಅಲ್ಲಿಗೆ ಹೋಗುವುದು; ಪ್ರಾಕಾಮ್ಯ – ನಾವು ಇಷ್ಟಪಟ್ಟ ವಸ್ತು ನಾವಿದ್ದಲ್ಲಿಗೆ ಬರುವುದು; ಈಶಿತ್ವ – ಏನನ್ನೂ ಮಾಡುವ ತಾಕತ್ತು; ವಶಿತ್ವ – ಯಾರನ್ನು ಬೇಕಾದರೂ ತನ್ನ ಅಧೀನಕ್ಕೆ ತೆಗೆದುಕೊಳ್ಳುವುದು].

ಸಾವಿನ ಆನಂತರ ಮತ್ತು ಮೋಕ್ಷ ಸಿದ್ಧಿಯ ಮೊದಲು ಜೀವ ಯಾವ ಇಂದ್ರಿಯವನ್ನು ಹೊಂದಿರುತ್ತಾನೆ ? ಸ್ವರೂಪಭೂತವಾದ ಇಂದ್ರಿಯವೋ ಅಥವಾ ಪಾಂಚಭೌತಿಕ ಇಂದ್ರಿಯವೋ? ಈ ಪ್ರಶ್ನೆಗೆ ಉತ್ತರಿಸುತ್ತಾ ಶುಕಾಚಾರ್ಯರು ಹೇಳುತ್ತಾರೆ: ಜೀವ ತನ್ನ ಇಂದ್ರಿಯ ಮತ್ತು ಮನಸ್ಸಿನೊಂದಿಗೇ ದೇಹದಿಂದ ಹೊರ ಹೋಗುತ್ತದೆ. ಹೊರತು ಇಂದ್ರಿಯವನ್ನು ಬಿಟ್ಟು ಹೋಗುವುದಿಲ್ಲ. ಮೋಕ್ಷಕ್ಕೆ ಹೋಗುವ ತನಕವೂ ಈ ಇಂದ್ರಿಯಗಳು ಆತನ ಜೊತೆಗಿರುತ್ತವೆ. ಮೋಕ್ಷದ ತನಕ ಚರಮಶರೀರ ನಾಶವಾದರೂ ಕೂಡಾ ಆತನ ಲಿಂಗಶರೀರ ಮತ್ತು ಇಂದ್ರಿಯ ಆತನ ಜೊತೆಗೇ ಇರುತ್ತವೆ.

**ಯೋಗೇಶ್ವರಾಣಾಂ ಗತಿಮಾಮನಂತಿ ಬಹಿಸ್ತ್ರಿಲೋಕ್ಯಾಃ ಪವನಾಂತರಾತ್ಮಾ ।**
**ನ ಕರ್ಮಭಿಸ್ತಾಂ ಗತಿಮಾಪ್ನುವಂತಿ ವಿದ್ಯಾತಪೋಯೋಗಸಮಾಧಿಭಾಜಾಮ್ ॥೨೪॥**

ಭಗವಂತನ ಅಪರೋಕ್ಷದಿಂದ ಬಹಳ ಎತ್ತರಕ್ಕೇರಿದ ಜ್ಞಾನಿಗಳು ಮೋಕ್ಷಕ್ಕೆ ಮೊದಲು ಭೂಮಿ, ಅಂತರಿಕ್ಷ ಮತ್ತು ಸ್ವರ್ಗದಿಂದಾಚೆಗಿನ ಲೋಕಗಳಲ್ಲಿರುತ್ತಾರೆ. ಈ ಲೋಕಗಳಿಗೆ ಕೇವಲ ಮೋಕ್ಷಯೋಗ್ಯರಿಗೆ ಮಾತ್ರ ಪ್ರವೇಶ ಮತ್ತು ಇವು ನಮ್ಮ ಕಣ್ಣಿಗೆ ಕಾಣುವ ಲೋಕಗಳಲ್ಲ. ಹೇಗೆ ವಾತಾವರಣದಲ್ಲಿರುವ ಲಕ್ಷೋಪಲಕ್ಷ ಜೀವಗಳು ನಮಗೆ ಕಾಣುವುದಿಲ್ಲವೋ ಹಾಗೇ, ಈ ಲೋಕಗಳು ನಮ್ಮ ಸ್ಥೂಲವಾದ ಕಣ್ಣಿಗೆ  ಕಾಣುವುದಿಲ್ಲ. ಪುರಾಣದಲ್ಲಿ ಹೇಳುವಂತೆ ಭೂಮಿಯಲ್ಲೇ  ಎಷ್ಟೋ  ಭಾಗ ನಮ್ಮ ಕಣ್ಣಿಗೆ ಕಾಣುವುದಿಲ್ಲ. ಸಪ್ತಸಾಗರದಲ್ಲಿ ಕೊನೆಯಸಾಗರ ಈ ಭೂಭಾಗದಲ್ಲೇ ಇದ್ದರೂ ಕೂಡಾ,  ಅದು ನಮಗೆ ಕಾಣದು ಎನ್ನುತ್ತಾರೆ ಶಾಸ್ತ್ರಕಾರರು. ಅದನ್ನು ಜ್ಞಾನದಿಂದ ಒಳಗಣ್ಣು ತೆರೆದ ಅಪರೋಕ್ಷ ಜ್ಞಾನಿಗಳಷ್ಟೇ ಕಾಣಬಲ್ಲರು. ಹೀಗಾಗಿ ಭೂಮಿಯಿಂದ ಮೇಲೆ ಹೋದಂತೆ ಒಂದಕ್ಕಿಂತ ಒಂದು ಸೂಕ್ಷ್ಮವಾಗಿರುವ ಲೋಕಗಳಿವೆ. ಮೊದಲು ಅಂತರಿಕ್ಷ. ಅಂತರಿಕ್ಷಕ್ಕಿಂತ ಸೂಕ್ಷ್ಮ-ಸ್ವರ್ಗ; ಸ್ವರ್ಗಕ್ಕಿಂತ ಸೂಕ್ಷ್ಮ-ಮಹರ್ಲೋಕ; ಮಹರ್ಲೋಕಕ್ಕಿಂತಲೂ ಸೂಕ್ಷ್ಮಲೋಕ-ಜನರ್ಲೋಕ; ಜನರ್ಲೋಕಕ್ಕಿಂತ ಸೂಕ್ಷ್ಮ-ತಪರ್ಲೋಕ; ತಪರ್ಲೋಕಕ್ಕಿಂತ ಸೂಕ್ಷ್ಮ-ಸತ್ಯಲೋಕ. ಉಪನಿಷತ್ತಿನಲ್ಲಿ ಹೇಳುವಂತೆ ಸತ್ಯವನ್ನು ಕಾಣಲು ಸೂಕ್ಷ್ಮವಾದ ಕಣ್ಣು, ಸೂಕ್ಷ್ಮವಾದ ಬುದ್ಧಿ ಬೇಕು. ನಮ್ಮ ಸ್ಥೂಲ ಕಣ್ಣಿಗೆ, ಸ್ಥೂಲ ಬುದ್ಧಿಗೆ ಯಾವುದೂ ಕಾಣದು, ಯಾವುದೂ ತಿಳಿಯದು. ಈ ಪ್ರಪಂಚದಲ್ಲಿ ಸ್ಥೂಲವಾಗಿರುವ ಭಾಗ ನೂರನೇ ಒಂದು  ಭಾಗಕ್ಕಿಂತಲೂ ಕಡಿಮೆ.  ಇಂತಹ ಸೂಕ್ಷ್ಮ ಪ್ರಪಂಚವನ್ನು ನಾವು ಸ್ಥೂಲ ಇಂದ್ರಿಯಗಳಿಂದ ಗ್ರಹಿಸುವುದು ಸಾಧ್ಯವಿಲ್ಲ. ಅದು ಯಾವ ಭೂತಗನ್ನಡಿಗೂ  ಕಾಣದು.

ಶುಕಾಚಾರ್ಯರು ಹೇಳುತ್ತಾರೆ: ಕರ್ಮ, ಯಜ್ಞ-ಯಾಗ, ಇತ್ಯಾದಿಯಿಂದ ಹೆಚ್ಚೆಂದರೆ ಸ್ವರ್ಗದ ತನಕ ಹೋಗಬಹುದು, ಆದರೆ ಸ್ವರ್ಗದಿಂದಾಚೆಗೆ ಹೋಗಬೇಕಾದರೆ ಜ್ಞಾನಯೋಗ ಬೇಕು ಎಂದು. ಅವು ಕೇವಲ ಅಪರೋಕ್ಷ ಜ್ಞಾನಿಗಳು ಕಾಣಬಹುದಾದ ಮತ್ತು ಅನುಭವಿಸಬಹುದಾದ ಲೋಕಗಳು.  ಇಲ್ಲಿ ಶುಕಾಚಾರ್ಯರು "ಅಪರೋಕ್ಷ ಜ್ಞಾನಿಗಳು ಹೋಗಿ ಸೇರುವ ತಾಣ  ಪವನಾಂತರಾತ್ಮಾ" ಎಂದಿದ್ದಾರೆ. ಪವನಾಂತರಾತ್ಮಾ ಎಂದರೆ ಎಲ್ಲರ ಒಳಗೂ ಅಂತರ್ಯಾಮಿಯಾಗಿರುವ ಪವನನ ಲೋಕವಾದ ಸತ್ಯಲೋಕ ಎನ್ನುವುದು ಒಂದು ಅರ್ಥವಾದರೆ, ಪವನನ ಅಂತರಾತ್ಮನಾದ ಭಗವಂತನ ಲೋಕ(ಮೋಕ್ಷ) ಎನ್ನುವುದು ಇನ್ನೊಂದು ಅರ್ಥ. ಇವೇ ಯೋಗೇಶ್ವರರ ಎರಡು ಲೋಕಗಳು. ಜ್ಞಾನಯೋಗದಲ್ಲಿ ಬಹಳ ಎತ್ತರಕ್ಕೇರಿದವರು ಮಾತ್ರ ಈ ಲೋಕಗಳಿಗೆ ಪ್ರವೇಶ ಪಡೆಯಬಲ್ಲರು.

'ಪವನಾಂತರಾತ್ಮಾ' ಎನ್ನುವುದನ್ನು ಆಚಾರ್ಯ ಮಧ್ವರು "*ಪವನಃ ಅಂತರಾತ್ಮಾ*" ಎಂದು ವಿವರಿಸಿದ್ದಾರೆ. ಅಂದರೆ ಪ್ರಾಣದೇವರು ಮತ್ತು ಬ್ರಹ್ಮದೇವರು ಪ್ರತಿಯೊಂದು ಜೀವಸ್ವರೂಪದೊಳಗೂ ಅಂತರ್ಯಾಮಿಯಾಗಿದ್ದಾರೆ ಎಂದರ್ಥ. [ಈ ವಿಷಯವನ್ನು ಸರಿಯಾಗಿ ಅರಿಯದೇ, ದಾಸ ಸಾಹಿತ್ಯವನ್ನೂ ತಪ್ಪಾಗಿ ಅರ್ಥೈಸಿ,  ಪ್ರಾಣದೇವರಿಗೆ ಜೀವ ಸ್ವರೂಪದೊಳಗೆ ಪ್ರವೇಶವಿಲ್ಲ ಎಂದು ಇತ್ತೀಚೆಗಿನ ಕೆಲವು ಪುಸ್ತಕಗಳಲ್ಲಿ ಹೇಳಲಾಗಿದೆ. ಆದರೆ ಅದು ತಪ್ಪು ತಿಳುವಳಿಕೆ]. ಪ್ರಾಣದೇವರು ಭಗವಂತನೊಂದಿಗೆ ನಮ್ಮ ಆತ್ಮಸ್ವರೂಪದೊಳಗಿದ್ದು  ನಮ್ಮನ್ನು ನಿಯಂತ್ರಿಸುತ್ತಿರುತ್ತಾರೆ. ಹೀಗಾಗಿ ಜ್ಞಾನಿಗಳು ಮೊದಲು ಹೋಗಿ

ಸೇರುವುದು ಪವನನ ಲೋಕವನ್ನು. ಅಲ್ಲಿಂದ ಚತುರ್ಮುಖ ಆತನನ್ನು ಭಗವಂತನ ಬಳಿಗೆ ಕರೆದುಕೊಂಡು ಹೋಗುತ್ತಾನೆ. ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಸ್ವರ್ಗಲೋಕದಿಂದ ಆಚೆಗಿನ ಲೋಕಗಳು ಕೇವಲ ವಿದ್ಯೆ, ತಪಸ್ಸು, ಯೋಗ ಮತ್ತು ಸಮಾಧಿ ಇದ್ದವರಿಗೆ ಮಾತ್ರ ದಕ್ಕುವ ಲೋಕಗಳು" ಎಂದು. ವಿದ್ಯೆ ಎಂದರೆ ಶಾಸ್ತ್ರದಿಂದ ತತ್ತ್ವವನ್ನು ಯಥಾರ್ಥವಾಗಿ ತಿಳಿಯುವುದು; ತಪಸ್ಸು ಎಂದರೆ ತಿಳಿದಿರುವ ವಿಷಯದ ನಿರಂತರ ಮನನ; ಯೋಗ ಎಂದರೆ ಭಗವಂತನಲ್ಲಿ ಭಕ್ತಿಯೋಗ ಮತ್ತು ಸಮಾಧಿ ಎಂದರೆ ಭಗವಂತನನ್ನು ಸದಾ ಕಾಣುವ ಅಂತರ್ದೃಷ್ಟಿ. ಆದರೆ ಇಲ್ಲಿ ಹೇಳಿದ ವಿದ್ಯೆ, ತಪಸ್ಸು, ಯೋಗ ಮತ್ತು ಸಮಾಧಿ ಎನ್ನುವುದಕ್ಕೆ ಇದಲ್ಲದೆ ಇನ್ನೊಂದು ಅಪೂರ್ವ ಅರ್ಥವಿದೆ. ಈ ಕುರಿತ ವಿವರಣೆಯನ್ನು ಭಾಗವತದ ಏಕಾದಶ ಸ್ಕಂಧದಲ್ಲಿ ಕಾಣಬಹುದು. ಅಲ್ಲಿ ಬಂದಿರುವ ವಿವರಣೆಯನ್ನು ಸಂಕ್ಷಿಪ್ತವಾಗಿ ಹೇಳಬೇಕೆಂದರೆ: ಸಾಧಕರಲ್ಲಿ ಐದು ವಿಧ. ಮಹಾಜ್ಞಾನಿ, ಜ್ಞಾನಿ, ತಪಸ್ವಿ, ಯೋಗಿ ಮತ್ತು ಪಾದಯೋಗಿ. ಜ್ಞಾನಿಗಳಲ್ಲಿ ಅತ್ಯಂತ ಕೆಳಗಿನ ಸ್ಥರದಲ್ಲಿರುವವರು ಪಾದಯೋಗಿಗಳು. ಅವರಿಗಿಂತ ಎತ್ತರದಲ್ಲಿ ಕ್ರಮವಾಗಿ ಯೋಗಿಗಳು, ತಪಸ್ವಿಗಳು ಮತ್ತು ಜ್ಞಾನಿಗಳಿದ್ದಾರೆ. ಮಹಾಜ್ಞಾನಿಗಳು ಎಲ್ಲರಿಗಿಂತ ಎತ್ತರದಲ್ಲಿರುವವರು. ಇವರೆಲ್ಲರಿಗೂ ಸಮಾಧಿ ಬೇಕೇ ಬೇಕು. ಸಮಾಧಿ ಇಲ್ಲದೆ ಈ ಮಟ್ಟಕ್ಕೆ ಏರಲು ಸಾಧ್ಯವಿಲ್ಲ. ಈ ಹಿಂದೆ ಧ್ಯಾನ ಪ್ರಕ್ರಿಯೆಯಲ್ಲಿ ವಿಶ್ಲೇಷಿಸಿದಂತೆ: ಅಪರೋಕ್ಷ ಜ್ಞಾನಿಗಳಿಗೂ ಕೂಡಾ ನಿರಂತರ ನೇರ ಭಗವಂತನ ದರ್ಶನ ಸಾಧ್ಯವಿಲ್ಲ. ಇದನ್ನು ವಿವರಿಸುತ್ತಾ ಆಚಾರ್ಯ ಮಧ್ವರು ಹೇಳುತ್ತಾರೆ: ಪಾದಯೋಗಿಗಳಿಗೆ ನಾಲ್ಕನೇ ಒಂದು ಮಾತ್ರಾಕಾಲ ಭಗವಂತನ ನೇರ ದರ್ಶನ ಸಾಧ್ಯ ಎಂದು. [ಇದಕ್ಕಾಗಿ ಅವರನ್ನು ಪಾದಯೋಗಿಗಳು ಎನ್ನುತ್ತಾರೆ. ಒಂದು ಮಾತ್ರಾಕಾಲ ಎಂದರೆ ಒಂದು ಅಕ್ಷರವನ್ನು(ಉದಾಹರಣೆಗೆ 'ಅ') ಉಚ್ಛಾರ ಮಾಡುವಷ್ಟು ಕಾಲ]. ಇವರು ಮೋಕ್ಷಕ್ಕೆ ಮೊದಲು ಮಹಾರ್ಲೋಕಕ್ಕೆ ಹೋಗುತ್ತಾರೆ. ಇನ್ನು ಯೋಗಿಗಳು. ಇವರಿಗೆ ಭಗವಂತನ ನೇರ ದರ್ಶನ ಒಂದು ಮಾತ್ರಾಕಾಲ ಸಾಧ್ಯ ಮತ್ತು ಇವರು ಜನರ್ಲೋಕವನ್ನು ಪಡೆಯುತ್ತಾರೆ. ಯೋಗಿಗಳ ನಂತರ ತಪಸ್ವಿಗಳು. ಅವರಿಗೆ ಆರು ಮಾತ್ರಾಕಾಲ ಭಗವಂತನ ನೇರ ದರ್ಶನ ಸಾಧ್ಯ ಹಾಗೂ ಅವರು ತಪರ್ಲೋಕವನ್ನು ಪಡೆಯುತ್ತಾರೆ. ತಪಸ್ವಿಗಳಿಗಿಂತ ಎತ್ತರದಲ್ಲಿರುವ ಜ್ಞಾನಯೋಗಿಗಳಿಗೆ ಒಂದು ಮಹೂರ್ತಾಕಾಲ ಅಂದರೆ ನಲವತ್ತೆಂಟು ನಿಮಿಷಗಳ ಕಾಲ ಭಗವಂತನ ದರ್ಶನವಾಗುತ್ತದೆ ಮತ್ತು ಅವರು ಸತ್ಯಲೋಕವನ್ನು ಪಡೆಯುತ್ತಾರೆ. ಎಲ್ಲರಿಂದಲೂ ಅಧಿಕ ಸಮಯ, ತಾಸುಗಟ್ಟಲೆ ಭಗವಂತನನ್ನು ನೇರ ನೋಡಬಲ್ಲ ಮಹಾಜ್ಞಾನಿಗಳು ನೇರವಾಗಿ ಮೋಕ್ಷಸ್ಥಾನಕ್ಕೆ ಹೋಗಬಲ್ಲರು. ಇವರೆಲ್ಲರೂ ತಮಗೆ ಬೇಕೆನಿಸಿದಾಗ ಸಮಾಧಿ ಸ್ಥಿತಿಯಲ್ಲಿರಬಲ್ಲರು. ಅಪರೋಕ್ಷಜ್ಞಾನಿಗಳು ಈ ಎತ್ತರಕ್ಕೆ ಹೋಗುವ ದಾರಿಯನ್ನು ಇಲ್ಲಿ ಶುಕಾಚಾರ್ಯರು ಪರೀಕ್ಷಿತನ ಮುಂದೆ ತೆರೆದಿಡುವುದನ್ನು ಮುಂದಿನ ಶ್ಲೋಕಗಳಲ್ಲಿ ಕಾಣಬಹುದು.

## ಮೋಕ್ಷ ಯಾನದ ಮೂರು ಮಾರ್ಗಗಳು

**ವೈಶ್ವಾನರಂ ಯಾತಿ ವಿಹಾಯಸಾ ಗತಃ ಸುಷುಮ್ನಯಾ ಬ್ರಹ್ಮಪಥೇನ ಶೋಚಿಷಾ ।**
**ವಿಧೂತಕಲ್ಕೋSಥ ಹರೇರುದಸ್ತಾತ್ಪ್ರಯಾತಿ ಚಕ್ರಂ ನೃಪ ಶೈಂಶುಮಾರಮ್ ॥೨೪॥**

ಈ ದೇಹದಿಂದ ಮೇಲೆ ನೆಗೆದ ಜೀವ ಯಾವ ಮಾರ್ಗದ ಮುಖೇನ ಪಯಣಿಸುತ್ತಾನೆ ಎನ್ನುವುದನ್ನು ಇಲ್ಲಿ ಶುಕಾಚಾರ್ಯರು ವಿವರಿಸಿರುವುದನ್ನು ಕಾಣುತ್ತೇವೆ. ಶಾಸ್ತ್ರಗಳಲ್ಲಿ ದೇವಯಾನ ಮತ್ತು ಪಿತೃಯಾನ ಎನ್ನುವ

ಎರಡು ಮಾರ್ಗಗಳನ್ನು ಹೇಳಿದರೆ, ಇಲ್ಲಿ ಶುಕಾಚಾರ್ಯರು ದೇವಯಾನದಲ್ಲಿನ ಬ್ರಹ್ಮಯಾನದ ಕುರಿತು ಹೇಳುವುದನ್ನು ಕಾಣುತ್ತೇವೆ. ಈ ಯಾವುದೇ ಮಾರ್ಗದ ಮುಖೇನ ಹೋದರೂ ಕೂಡಾ, ಹೋಗಲೇ ಬೇಕಾದ ನಡುವಿನ ಒಂದು ತಾಣವಿದೆ. ಅದೇ ವೈಶ್ವಾನರಲೋಕ. ಮೋಕ್ಷವನ್ನು ಸೇರಬೇಕಾದ ಜೀವ ದೇಹದಲ್ಲಿರುವ ಸುಷುಮ್ನಾ ನಾಡಿಯ ಮುಖೇನ ಪಯಣಿಸಿ, ಸಹಸ್ರಾರದ ಬಾಗಿಲನ್ನು ತೆರೆದು ಹೊರಹೋಗುತ್ತದೆ. ನಮ್ಮ ದೇಹದ ಎಡಭಾಗದಲ್ಲಿ ಐವತ್ತು ಮತ್ತು ಬಲಭಾಗದಲ್ಲಿ ಐವತ್ತು ಮುಖ್ಯ ನಾಡಿಗಳಿವೆ. ನಡುವಿನಲ್ಲಿ ಹೃದಯದಿಂದ ಮೇಲೆ ಹೋಗುವ ಸುಷುಮ್ನಾ ಅಥವಾ ಬ್ರಹ್ಮನಾಡಿ ಇದೆ. ಅದರ ತುದಿ ನಮ್ಮ ನೆತ್ತಿಯಲ್ಲಿದೆ. ಅದನ್ನೇ ಸಹಸ್ರಾರ ಎನ್ನುತ್ತಾರೆ. ಈ ನಾಡಿಯ ಮೂಲಕ, ಸಹಸ್ರಾರದಿಂದ ಜೀವ ದೇಹದಿಂದ ಹೊರ ಹೋದರೆ, ಆ ಜೀವ ಮತ್ತೆ ಮರಳಿ ಹುಟ್ಟುವುದಿಲ್ಲ. ಇದು ಜೀವ ಹುಟ್ಟು ಸಾವಿನ ಚಕ್ರದಿಂದ ಕಳಚಿಕೊಂಡು ಮೋಕ್ಷವನ್ನು ಸೇರುವ ಮಾರ್ಗ. ದೇಹದ ಎಡ ಮತ್ತು ಬಲಭಾಗದಲ್ಲಿರುವ ನಾಡಿಗಳಿಗೆ ಕವಲಾಗಿ ಸೂಕ್ಷ್ಮವಾಗಿರುವ ೭೨ ಸಾವಿರ(೩೬+೩೬) ನಾಡಿಗಳಿವೆ. ಇಷ್ಟೇ ಅಲ್ಲದೆ ಈ ಕವಲು ನಾಡಿಗಳಿಗೂ ಅವಾಂತರ ನಾಡಿಗಳಿದ್ದು, ಉಪನಿಷತ್ತಿನಲ್ಲಿ ಹೇಳುವಂತೆ ಒಟ್ಟು ೭೨ ಕೋಟಿ, ೭೨ ಲಕ್ಷದ ೭೨ಸಾವಿರ ನಾಡಿಗಳು ನಮ್ಮ ದೇಹದಲ್ಲಿವೆ. ಇವು ಅತ್ಯಂತ ಸೂಕ್ಷ್ಮಾತಿ ಸೂಕ್ಷ್ಮ ನಾಡಿಗಳಾಗಿದ್ದು, ಎಲ್ಲವೂ ಕಣ್ಣಿಗೆ ಕಾಣಿಸಲಾರವು. ಈ ಎಲ್ಲಾ ನಾಡಿಗಳಿಗಿಂತ ಸೂಕ್ಷ್ಮವಾದುದು ಜೀವ. ಆದ್ದರಿಂದ ಜೀವ ದೇಹದಿಂದ ಹೊರಹೋಗಲು ಈ ಯಾವುದೇ ನಾಡಿಯನ್ನು ಬಳಸಬಹುದಾದರೂ ಕೂಡಾ, ಭಗವಂತನನ್ನು ಸೇರುವ ಬೆಳಕಿನ ಮಾರ್ಗ ಸುಷುಮ್ನಾ. ಈ ಮಾರ್ಗದಲ್ಲಿ ಸುಷುಮ್ನಾ ಕಿರಣದ ಬೆಳಕು ತುಂಬಿರುತ್ತದೆ. ಈ ಬೆಳಕಿನಿಂದಾಗಿ ಜೀವ ಸಹಸ್ರಾರದ ಬಾಗಿಲನ್ನು ತೆರೆದು ಹೊರಹೋಗಲು ಸಾಧ್ಯವಾಗುತ್ತದೆ. [ಈ ಮಾರ್ಗವಲ್ಲದೆ ಇತರ ಎಲ್ಲಾ ಮಾರ್ಗಗಳೂ ಭಯಂಕರವಾದ ಗುಹೆಯಲ್ಲಿನ ಕತ್ತಲೆಯ ಪಯಣ(**balck tunnel**)]. ಸಹಸ್ರಾರದಿಂದ ಹೊರ ಬಂದ ಜೀವ ನಿರಂತರ ಬೆಳಕಿನ ಹಾದಿಯಲ್ಲಿ ಸಾಗುತ್ತಾನೆ. ದೇಹದಿಂದ ಹೊರಬಂದ ತಕ್ಷಣ ವೈಶ್ವಾನರಲೋಕವನ್ನು ಜೀವ ಸೇರುವುದಿಲ್ಲ. ಅದಕ್ಕೂ ಮೊದಲು ಅನೇಕ ನಿಲುದಾಣಗಳಿವೆ. ಈ ಕುರಿತ ವಿವರಣೆಯನ್ನು ಶುಕಾಚಾರ್ಯರು ಇಲ್ಲಿ ನೀಡಿಲ್ಲವಾದರೂ ಕೂಡಾ, ಇದನ್ನು ಶ್ರೀಕೃಷ್ಣ ಗೀತೆಯಲ್ಲಿ ವಿವರಿಸಿರುವುದನ್ನು ಕಾಣುತ್ತೇವೆ. *ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ॥೮-೨೪॥* ದೇಹದಿಂದ ಹೊರಬಂದ ಮೋಕ್ಷಯೋಗ್ಯ ಜೀವವನ್ನು ಮೊದಲು ಸ್ವಾಗತಿಸುವವರು ಪ್ರಧಾನ ಅಗ್ನಿಯ ಮಕ್ಕಳಾದ ಅಗ್ನಿ ಮತ್ತು ಜ್ಯೋತಿ(ಅರ್ಚಿರ್ಲೋಕ). ಈ ದೇವತೆಗಳು ಜೀವನನ್ನು ಸತ್ಕರಿಸಿ ಮುಂದಕ್ಕೆ ಕಳುಹಿಸುತ್ತಾರೆ. ನಂತರ ಜೀವನನ್ನು ಬೆಳಕಿನ ಮತ್ತು ಮಧ್ಯಾಹ್ನದ ದೇವತೆಗಳು ಸ್ವಾಗತಿಸುತ್ತಾರೆ. ಈ ನಿಜವಾದ ಬೆಳಕಿನ ಅನುಭವದೊಂದಿಗೆ ಜೀವ ಮುಂದೆ ಸಾಗಿ ಶುಕ್ಲಪಕ್ಷದ ಮತ್ತು ಹುಣ್ಣಿಮೆಯ ದೇವತೆಯನ್ನು ತಲುಪುತ್ತಾನೆ. ಆನಂತರ ಸಂಕ್ರಮಣದ, ಉತ್ತರಾಯಣದ ದೇವತೆ ಜೊತೆಗೆ, ಉತ್ತರಾಯಣದ ಆರು ತಿಂಗಳ ದೇವತೆಗಳು ಜೀವನನ್ನು ಮುಂದಕ್ಕೆ ಕಳುಹಿಸುತ್ತಾರೆ. ಮುಂದೆ ಸಂವತ್ಸರಾಭಿಮಾನಿ ದೇವತೆ, ಮಿಂಚಿನ ದೇವತೆ, ವರುಣ, ದಕ್ಷಪ್ರಜಾಪತಿ, ಹೀಗೆ ಈ ಎಲ್ಲಾ ದೇವತೆಗಳ ಲೋಕದ ಮುಖೇನ ಸೂರ್ಯಲೋಕವನ್ನು ಜೀವ ಸೇರುತ್ತಾನೆ. ಆನಂತರ ಸೂರ್ಯಲೋಕದಿಂದ ಚಂದ್ರಲೋಕವನ್ನು ತಲುಪಿ, ಅಲ್ಲಿಂದ ವೈಶ್ವಾನರಲೋಕಕ್ಕೆ ಜೀವ ಪ್ರವೇಶಿಸುತ್ತಾನೆ. ವೈಶ್ವಾನರಲೋಕದಲ್ಲಿ ಜೀವ ತನ್ನೆಲ್ಲಾ ಕೊಳೆಗಳನ್ನು ತೊಳೆದುಕೊಂಡು ಪುಟಕ್ಕಿಟ್ಟ ಚಿನ್ನದಂತೆ ಸ್ವಚ್ಛಗೊಳ್ಳುತ್ತಾನೆ. [ಕೆಲವು ಜೀವರಿಗೆ ಈ ಸ್ವಚ್ಛತೆ ಸೂರ್ಯಲೋಕದಲ್ಲಾದರೆ ಇನ್ನು ಕೆಲವರಿಗೆ ವೈಶ್ವಾನರಲೋಕದಲ್ಲಾಗುತ್ತದೆ]. ಈ ರೀತಿ ಸ್ವಚ್ಛಗೊಂಡ ಜೀವ ವೈಶ್ವಾನರಲೋಕದಿಂದ ಶಿಂಶುಮಾರ

ಲೋಕವನ್ನು ಸೇರುತ್ತಾನೆ. ಶಿಂಶುಮಾರ ಎನ್ನುವುದು ಭಗವಂತನ ಒಂದು ರೂಪ. ಇದು ಧ್ರುವಲೋಕದಲ್ಲಿರುವ ಇಡೀ ಪ್ರಪಂಚದ ಕೇಂದ್ರಬಿಂದು(ನಾಭಿಸ್ಥಾನ). ಈ ಕೇಂದ್ರದಿಂದ ಪ್ರಪಂಚವನ್ನು ನಿಯಂತ್ರಿಸುವ ಭಗವಂತನ ಇನ್ನೊಂದು ಹೆಸರು 'ಕಿಮ್ಸು‌_ಗ್ನ'. ಶಿಂಶುಮಾರ ಅಥವಾ ಕಿಮ್ಸು‌_ಗ್ನ ಎನ್ನುವ ಭಗವಂತನ ನಾಮಗಳಿಗೆ ಎಲ್ಲೂ ನಿರ್ವಚನ ಕಾಣಸಿಗುವುದಿಲ್ಲ. ಇದೊಂದು ರಹಸ್ಯವಾದ ನಾಮ. 'ಶಿಂಶು' ಎಂದರೆ ಲೋಕ ಕಂಟಕರು. ಅಂತಹ ಲೋಕಕಂಟಕರನ್ನು ಸಂಹಾರ ಮಾಡುವ ಭಗವಂತ ಶಿಂಶುಮಾರ ಅಥವಾ ಕಿಮ್ಸು‌_ಗ್ನ. [ಭಗವಂತನ ಈ ನಾಮವನ್ನು ಇತ್ತೀಚೆಗಿನ ಪುಸ್ತಕಗಳಲ್ಲಿ ಶಿಶುಮಾರ ಎಂದಿದ್ದಾರೆ. ಆದರೆ ಪ್ರಾಚೀನ ಗ್ರಂಥಗಳಲ್ಲಿ ಶಿಂಶುಮಾರ ಎಂದಿರುವುದನ್ನು ಕಾಣುತ್ತೇವೆ].

ಯೋSಂತಃ ಪಚತಿ ಭೂತಾನಾಂ ಯಸ್ತಪತ್ಯಂಡಮಧ್ಯಗಃ ।
ಸೋSಗ್ನಿ ರ್ವೈಶ್ವಾನರೋ ಮಾರ್ಗೋ ದೇವಾನಾಂ ಪಿತೃಣಾಂ ಮುನೇಃ ॥೨೪॥

ಮೇಲೆ ವಿವರಿಸಿರುವ ವೈಶ್ವಾನರ ಲೋಕದ ಕುರಿತು ಈ ಶ್ಲೋಕದಲ್ಲಿ ವಿವರಿಸಲಾಗಿದೆ. ಪ್ರತಿಯೊಬ್ಬ ಜೀವನೊಳಗಿದ್ದು ಆತ ಸೇವಿಸಿದ ಆಹಾರವನ್ನು ಪಚನ ಮಾಡಿ, ಅವನ ಜೀವನ ನಿರ್ವಹಣೆಗೆ ಸಹಾಯವಾಗಿರುವ ವೈಶ್ವಾನರನೇ ಈ ಬ್ರಹ್ಮಾಂಡ ಮಧ್ಯದಲ್ಲಿ ಬೆಳಕಾಗಿ ನಿಂತಿದ್ದಾನೆ. ದೇವಯಾನದಲ್ಲಿ ಹೋಗುವವರು, ಪಿತೃಯಾನದಲ್ಲಿ ಹೋಗುವವರು, ಬ್ರಹ್ಮಯಾನದಲ್ಲಿ ಹೋಗುವವರು, ಎಲ್ಲರೂ ಈ ವೈಶ್ವಾನರ ಲೋಕಕ್ಕೆ ಹೋಗಿಯೇ ಮೋಕ್ಷವನ್ನು ಸೇರಬೇಕು. ಆದ್ದರಿಂದ ಮೋಕ್ಷ ಮಾರ್ಗದಲ್ಲಿ ವೈಶ್ವಾನರಲೋಕ ಬಹಳ ಮುಖ್ಯವಾದ ತಾಣ(Station).

ದೇವಯಾನಂ ಪಿಂಗಲಾಭಿರಹಾ ನ್ಯೇತಿ ಶತಾಯುಷಾ ।
ರಾತ್ರೀರಿಡಾಭಿಃ ಪಿತೃಣಾಂ ವಿಷುವತ್ತಾಂ ಸುಷುಮ್ನಯಾ ॥೨೭॥

ಈ ಶ್ಲೋಕ ಇಂದಿನ ಹೆಚ್ಚಿನ ಪುಸ್ತಕಗಳಲ್ಲಿ ಬಿಟ್ಟು ಹೋಗಿದೆ. ಮೇಲ್ನೋಟಕ್ಕೆ ಯಾವ ಅರ್ಥವನ್ನೂ ಸರಿಯಾಗಿ ಈ ಶ್ಲೋಕ ಹೇಳದೇ ಇರುವುದೇ ಇದಕ್ಕೆ ಕಾರಣವಾಗಿರಬಹುದು. ಸಂಸ್ಕೃತದ ಮೇಲ್ನೋಟದ ಸಹಜ ಅರ್ಥವನ್ನು ತೆಗೆದುಕೊಂಡು ನೋಡಿದರೆ, ಈ ಶ್ಲೋಕ ಅಸಂಗತವಾದ ಅರ್ಥವನ್ನು ಹೇಳುತ್ತದೆ. ಅದೇನೆಂದರೆ: "ನೂರು ವರ್ಷ ಬದುಕಿದವನು ದೇವಯಾನದಲ್ಲಿ ಹೋಗುತ್ತಾನೆ; ಪಿಂಗಲಾ ನಾಡಿಗಳಿಂದ ಹೋದವನು ಹಗಲುಗಳನ್ನು ಸೇರುತ್ತಾನೆ; ಇಡಾ ನಾಡಿಗಳಿಂದ ಹೋದವನು ರಾತ್ರಿಗಳನ್ನು ಸೇರುತ್ತಾನೆ; ಸುಷುಮ್ನಾದಿಂದ ಹೋದವನು ವಿಷುವತ್ತೆ(ಸಂಕ್ರಮಣದ ಸ್ಥಿತಿ)ಯನ್ನು ಸೇರುತ್ತಾನೆ". ಈ ಮೇಲ್ನೋಟದ ಅರ್ಥ ಯಾವ ಸಂದೇಶವನ್ನೂ ತಿಳಿಸಿ ಹೇಳುವುದಿಲ್ಲ. ಇಲ್ಲಿ ಹಗಲುಗಳು, ರಾತ್ರಿಗಳು, ಪಿಂಗಲಾ ನಾಡಿಗಳು, ಇಡಾ ನಾಡಿಗಳು, ವಿಷುವತ್ತೆ, ಇತ್ಯಾದಿ ಶಬ್ದಗಳು ಏನನ್ನು ಹೇಳುತ್ತವೆ ಎನ್ನುವುದು ನಿಗೂಢ. ಆದರೆ ಈ ಎಲ್ಲಾ ಸಮಸ್ಯೆಗಳನ್ನು ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ, ಪ್ರಾಚೀನ ಗ್ರಂಥಗಳ ಪ್ರಮಾಣದ ಸಂವಾದವನ್ನು ಕೊಟ್ಟು, ಅತ್ಯದ್ಭುತವಾಗಿ ಈ ಕೆಳಗಿನಂತೆ ಬಿಡಿಸಿ ಹೇಳಿರುವುದನ್ನು ಕಾಣುತ್ತೇವೆ:

*ದಕ್ಷಿಣಾಃ ಪಿಂಗಲಾಃ ಸರ್ವಾ ಇಡಾ ವಾಮಾಃ ಪ್ರಕೀರ್ತಿತಾಃ ।*
*ನಾಡ್ಯೋಽಥ ಮಧ್ಯಮಾ ಪ್ರೋಕ್ತಾ ಸುಷುಮ್ನಾ ವೇದಪಾರಗೈಃ ॥  ಇತಿ ಭಾಗವತ ತಂತ್ರೇ ।*

*ದೇವಯಾನಸ್ಯ ಮಾರ್ಗಸ್ಥಾ ಅಹಃಶಬ್ದಾಭಿಸಂಜ್ಞಿತಾಃ ।*
*ಪಿತೃಯಾನಸ್ಯ ಮಾರ್ಗಸ್ಥಾ ರಾತ್ರಿಶಬ್ದಾಹ್ವಯಾ ಮತಾಃ । ಇತಿ ಬೃಹತ್ತಂತ್ರೇ ।*
*ಶತಾಯುರ್ಮರಣಂ ಚೈವ ಕಾಲಿಕಂ ಪರಮಾವೃತ್ತಿಃ ।*
*ಇತ್ಯಭಿಧಾನೇ । ಪಿಂಗಲಾಭಿಃ ಶತಾಯುಷಾ ಅಹಃಸಂಜ್ಞಂ ಪಿತೃಯಾನಂ ।*
*ವಿಷುವತ್ತಾ ಬ್ರಹ್ಮಯಾನೋ ವಿಶೇಷೇಣ ಸುಖಂ ಯತಃ ।*
*ಪಿಂಗಲಾ ದೇವಯಾನಂ ಸ್ಯಾತ್ ಪಿಂಗಾಖ್ಯಸುಖದಂ ಯತಃ ।*
*ಇಡಾಽನ್ನದಾನಾತ್ ಪಿತೃಣಾಮೇವಂ ಮಾರ್ಗಾಃ ಪ್ರಕೀರ್ತಿತಾಃ । ಇತಿ ಬ್ರಹ್ಮತರ್ಕೇ ।*

ಇಲ್ಲಿ ಪಿಂಗಲಾ ನಾಡಿಗಳು ಎಂದರೆ ದೇಹದ ಬಲಭಾಗದಲ್ಲಿರುವ ನಾಡಿಗಳು ಎಂದರ್ಥ. ಅದೇ ರೀತಿ ಇಡಾ ನಾಡಿಗಳು ಎಂದರೆ ಎಡಬದಿಯ ನಾಡಿಗಳು. ದೇಹದ ಬಲಬದಿಯ ನಾಡಿಗಳಿಂದ ಜೀವ ಉತ್ಕ್ರಮಣವಾಗುವುದು ದೇವಯಾನ ಮತ್ತು ಎಡಬದಿಯ ನಾಡಿಗಳಿಂದ ಉತ್ಕ್ರಮಣವಾಗುವುದು ಪಿತೃಯಾನ. ಇದಲ್ಲದೆ ಈ ಹಿಂದೆ ಹೇಳಿದಂತೆ ನಡುವಿನ ಸುಷುಮ್ನಾದ ಮೂಲಕ ಸಹಸ್ರಾರದಿಂದ ದೇಹ ಉತ್ಕ್ರಮಣವಾಗುವುದು ಬ್ರಹ್ಮಯಾನ. ದೇವಯಾನದಲ್ಲಿ ಹೋದವರು ಹಗಲುಗಳನ್ನು ಸೇರುತ್ತಾರೆ ಎಂದರೆ-ಬೆಳಕಿನ ದಾರಿಯಲ್ಲಿರುವ ಎಲ್ಲಾ ದೇವತೆಗಳನ್ನು ಹೋಗಿ ಸೇರುತ್ತಾರೆ ಎಂದರ್ಥ. ಈ ಹಿಂದೆ ಹೇಳಿದಂತೆ: ಅಗ್ನಿ, ಜ್ಯೋತಿ,  ಆತಿವಾಹಿಕ ವಾಯು, ಹಗಲಿನ ದೇವತೆ, ಶುಕ್ಲಪಕ್ಷದ ದೇವತೆ, ಪೂರ್ಣಿಮೆಯ ದೇವತೆ, ಉತ್ತರಾಯಣದ ದೇವತೆ, ಸಂವತ್ಸರದ ದೇವತೆ, ಮಿಂಚಿನ ದೇವತೆ, ವರುಣ, ದಕ್ಷಪ್ರಜಾಪತಿ, ಸೂರ್ಯ, ಚಂದ್ರ, ವೈಶ್ವಾನರ, ಇಂದ್ರ, ಧ್ರುವ, ಭಾರತಿ ಮತ್ತು ಮುಖ್ಯಪ್ರಾಣ-ಇವರೆಲ್ಲರೂ ಬೆಳಕಿನ ದಾರಿಯ ದೇವತೆಗಳು. ಇದೇ ರೀತಿ ರಾತ್ರಿಗಳನ್ನು ಹೋಗಿ ಸೇರುತ್ತಾರೆ ಎಂದರೆ ಕತ್ತಲಿನ ಮಾರ್ಗದ ದೇವತೆಗಳನ್ನು ಹೋಗಿ ಸೇರುತ್ತಾರೆ ಎಂದರ್ಥ.

ಈ ಶ್ಲೋಕದಲ್ಲಿ ಬಳಸಿರುವ ‘ಶತಾಯುಷಾ’ ಪದದ ಅರ್ಥ ‘ನೂರುವರ್ಷ ಆಯುಸ್ಸು’ ಎಂದಲ್ಲ. ಒಬ್ಬ ವ್ಯಕ್ತಿ ಎಷ್ಟು ಕಾಲ ಬದುಕಬೇಕೋ ಅಷ್ಟುಕಾಲ ಬದುಕಿ ಸಾಯುವುದನ್ನು ಇಲ್ಲಿ ‘ಶತಾಯುಷಾ’ ಎಂದಿದ್ದಾರೆ. ಮಧ್ಯದಲ್ಲಿ ಯಾವುದೋ ದುರಂತದಿಂದ ಸಾಯದೇ, ಬದುಕಬೇಕಾದಷ್ಟು ದಿನಗಳನ್ನು ಪೂರ್ಣ ಅನುಭವಿಸಿ ಸಾಯುವುದು ಕಾಲಿಕ ಮರಣ.

ಇಲ್ಲಿ ‘ವಿಷುವತ್ತಾ’ ಎಂದರೆ  ‘ಬ್ರಹ್ಮಯಾನ’ ಎಂದರ್ಥ. ವಿಶಿಷ್ಟವಾದ ಸುಖವನ್ನು ಕೊಡುವ ನೇರ ಮೋಕ್ಷದ ದಾರಿ ‘ವಿಷುವತ್ತಾ’ .  ಇದೇ ರೀತಿ ಪಿಂಗಲಾ ಎಂದರೆ ‘***ಪಿಂಗಾಖ್ಯಸುಖದಂ ಯತಃ***’-ನಮ್ಮಲ್ಲಿ ಆನಂದದ ಬಲವನ್ನು ತುಂಬಿಸುವ ನಾಡಿ-ಪಿಂಗಲಾ. ಹಾಗೇ ಇಡಾ ಎಂದರೆ ಭೋಗಪ್ರದವಾದ ನಾಡಿ ಎಂದರ್ಥ. ಒಟ್ಟಿನಲ್ಲಿ ಹೇಳಬೇಕೆಂದರೆ ಈ ಶ್ಲೋಕ ಮೂರು ವಿಧದ ಯಾನವನ್ನು ವಿವರಿಸುವ ಅದ್ಭುತ ಶ್ಲೋಕ. ಇಲ್ಲಿ ನಮಗೆ ಒಂದು ಹೊಸ ವಿಷಯ ತಿಳಿಯುತ್ತದೆ. ಅದೇನೆಂದರೆ: ಸಾಮಾನ್ಯವಾಗಿ ಜ್ಞಾನಿಗಳು ದೇವಯಾನದಲ್ಲೂ ಹಾಗೂ ಅಜ್ಞಾನಿಗಳು ಪಿತೃಯಾನದಲ್ಲೂ ಹೋಗುತ್ತಾರೆ ಎನ್ನುವುದು ನಂಬಿಕೆ. ಆದರೆ ಇಲ್ಲಿ ಕೆಲವೊಮ್ಮೆ ಪಿತೃಯಾನದಲ್ಲಿ ಕೂಡಾ ಜ್ಞಾನಿಗಳು ಹೋಗುತ್ತಾರೆ ಎನ್ನುವ ವಿಷಯ ತಿಳಿಯುತ್ತದೆ.

ತದ್ವಿಶ್ವನಾಭಿಂ ತ್ವಭಿಪದ್ಯ ವಿಷ್ಣೋರಣೀಯಸಾ ವಿರಜೇನಾತ್ಮನೈಕಮ್ ।
ನಮಸ್ಕೃತಂ ಬ್ರಹ್ಮವಿದಾಮುಪೈತಿ ಕಲ್ಪಾಯುಷೋ ವಿಬುಧಾ ಯದ್ ರಮಂತೇ ॥೨೮॥

ಈ ಶ್ಲೋಕ ವೈಶ್ವಾನರ ಲೋಕದ ನಂತರದ ಸ್ಥಿತಿಯನ್ನು ವಿವರಿಸುತ್ತದೆ. ವೈಶ್ವಾನರಲೋಕದ ನಂತರ, ಸಮಸ್ತ ಜಗತ್ತಿಗೂ ಕೇಂದ್ರಬಿಂದು ಮತ್ತು ಆಧಾರವಾಗಿರುವ ಭಗವಂತನ ಶಿಂಶುಮಾರ ರೂಪವನ್ನು ಕಂಡು, ಇಷ್ಟು ಕಾಲ ತನ್ನನ್ನು ಧಾರಣೆ ಮಾಡಿದ ಆ ವಿಶ್ವಶಕ್ತಿಗೆ ಕೃತಜ್ಞತೆ ಸಲ್ಲಿಸಿ, ಆತನ ಅನುಮತಿ-ಮಾರ್ಗದರ್ಶನದಂತೆ ಮುಂದೆ ಸಾಗುತ್ತಾನೆ ಜೀವ. ಈ ಹಂತದಲ್ಲಿ ಸೃಷ್ಟವಾದ ಪ್ರಪಂಚದಲ್ಲೇ ಅತ್ಯಂತ ಸೂಕ್ಷ್ಮಲೋಕವಾದ ಸತ್ಯಲೋಕವನ್ನು ಸೇರಲು ಬೇಕಾದ ಅತ್ಯಂತ ಸೂಕ್ಷ್ಮಸ್ಥಿತಿಯನ್ನು ಜೀವ ಹೊಂದಿರುತ್ತಾನೆ. ಇಲ್ಲಿ ಶುಕಾಚಾರ್ಯರು "ಕಲ್ಪ ಜೀವಿಗಳಾಗಿರುವ ಜ್ಞಾನಿಗಳು ಇರತಕ್ಕಂತಹ ಲೋಕದತ್ತ ಜೀವ ಪಯಣಿಸುತ್ತಾನೆ" ಎಂದಿದ್ದಾರೆ. ಇದರರ್ಥ ಸ್ವರ್ಗದಿಂದ ಮೇಲಿರುವ ಲೋಕಗಳು. ಅಂದರೆ ಮಹರ್ಲೋಕ, ಜನರ್ಲೋಕ, ತಪರ್ಲೋಕ, ಸತ್ಯಲೋಕ. ಈ ಗುಂಪಿಗೆ ಸ್ವರ್ಗಲೋಕ ಸೇರಿಲ್ಲ. ಏಕೆಂದರೆ ಅಲ್ಲಿ ಕಲ್ಪಜೀವಿಗಳು ಇರಲು ಸಾಧ್ಯವಿಲ್ಲ. ಕಾರಣವೇನೆಂದರೆ ಸ್ವರ್ಗದ ಆಯುಸ್ಸು ಕೇವಲ ಒಂದು ಮನ್ವಂತರಕಾಲ. ಒಂದು ಮನ್ವಂತರದ ಇಂದ್ರ ಇನ್ನೊಂದು ಮನ್ವಂತರದಲ್ಲಿರುವುದಿಲ್ಲ. ಹೀಗಾಗಿ ಸ್ವರ್ಗದಲ್ಲಿರುವವರ ಅವಧಿ ಹೆಚ್ಚೆಂದರೆ ಒಂದು ಮನ್ವಂತರ ಕಾಲ ಮಾತ್ರ. ಅಂದರೆ ೩೦ ಕೋಟಿ ೮೫ ಲಕ್ಷದ ೭೦ ಸಾವಿರ ವರ್ಷಗಳು. ಸ್ವರ್ಗವನ್ನು ದಾಟಿ ಧ್ರುವಲೋಕದಲ್ಲಿ ಶಿಂಶುಮಾರನನ್ನು ಕಂಡು, ಮಹರ್ಲೋಕದತ್ತ ಪಯಣಿಸುವ ಜೀವ, ಮಹರ್ಲೋಕದಲ್ಲಿ ಹೆಚ್ಚೆಂದರೆ ಒಂದು ದಿನಕಲ್ಪದಷ್ಟು ಕಾಲ ಇರಬಹುದು. ಅಂದರೆ ೧೪ ಮನ್ವಂತರಗಳ ಕಾಲ ಅಥವಾ ೪೩೨ ಕೋಟಿ ವರ್ಷಗಳಷ್ಟು ಕಾಲ . ಆದರೆ ಸತ್ಯಲೋಕದ ಆಯಸ್ಸು ಬ್ರಹ್ಮದೇವರ ಒಂದು ಕಲ್ಪ. ಅಂದರೆ ೩೧ ಸಾವಿರದ ೧೦೪ ಸಾವಿರ ಕೋಟಿ ವರ್ಷ. ಇದನ್ನು 'ಪರಕಾಲ' ಎನ್ನುತ್ತಾರೆ. ಇದು ಬ್ರಹ್ಮದೇವರ ನೂರು ವರ್ಷ. ಇಷ್ಟು ಕಾಲದ ನಂತರ ಈ ಸೃಷ್ಟಿ ನಾಶವಾಗುತ್ತದೆ. ಮತ್ತೆ ಮರಳಿ ಸೃಷ್ಟಿ ನಿರ್ಮಾಣವಾಗಲು ಇನ್ನೊಂದು ಪರಕಾಲ ಬೇಕು. ನಮಗೆ ಈ ಕಾಲದ ಅಳತೆಯನ್ನು ಗ್ರಹಿಸಲು ಸಾಧ್ಯವಾಗದಿದ್ದರೂ ಕೂಡಾ, ಬ್ರಹ್ಮದೇವರಿಗೆ ಇದು ನೂರು ವರ್ಷವಿದ್ದಂತೆ ಮತ್ತು ಭಗವಂತನಿಗೆ ಇದೊಂದು ಕ್ಷಣವಿದ್ದಂತೆ.

ನ ಯತ್ರ ಶೋಕೋ ನ ಜರಾ ನ ಮೃತ್ಯುರ್ನಾರ್ತಿರ್ನ ಚೋದ್ವೇಗ ಋತೇ ಕುತಶ್ಚಿತ್ ।
ಯಚ್ಚಿತ್ತತೋದಃ ಕ್ರಿಯಯಾSನಿದಂವಿದಾಂ ದುರಂತದುಃಖಪ್ರಭವಾನುದರ್ಶನಾತ್ ॥೩೦॥

ಇಲ್ಲಿ ಶುಕಾಚಾರ್ಯರು ಸತ್ಯಲೋಕದ ವರ್ಣನೆ ಮಾಡಿರುವುದನ್ನು ಕಾಣುತ್ತೇವೆ. ಸತ್ಯಲೋಕವನ್ನು 'ದ್ವೈಪರಾರ್ಧ್ಯಂ' ಎನ್ನುತ್ತಾರೆ. ಅಂದರೆ ಪರಕಾಲದಷ್ಟು ಆಯುಸ್ಸು ಇರುವ ಲೋಕ ಎಂದರ್ಥ. ಈ ಶ್ಲೋಕದಲ್ಲಿ ಸತ್ಯಲೋಕವನ್ನು 'ಋತಲೋಕ' ಎಂದು ಕರೆದಿದ್ದಾರೆ. [ಸತ್ಯ ಮತ್ತು ಋತ ಈ ಎರಡು ಪದಗಳನ್ನು ಒಟ್ಟಿಗೆ ಪ್ರಯೋಗ ಮಾಡಿದಾಗ ಋತ ಅಂದರೆ ಯಥಾರ್ಥದ ಅರಿವು, ಸತ್ಯ ಎಂದರೆ ಅರಿತ ಯಥಾರ್ಥದ ನಡೆ-ನುಡಿ ಎನ್ನುವ ಬೇರೆಬೇರೆ ಅರ್ಥವನ್ನು ಕೊಟ್ಟರೂ ಕೂಡಾ, ಇನ್ನೊಂದು ರೀತಿಯಲ್ಲಿ ಋತ ಎನ್ನುವುದು ಸತ್ಯದ ಪರ್ಯಾಯ ಶಬ್ದ. ಹೀಗಾಗಿ ಇಲ್ಲಿ ಋತಲೋಕ ಎಂದರೆ ಸತ್ಯಲೋಕ].

ಸೃಷ್ಟಿಯಾದ ಲೋಕಗಳಲ್ಲಿ ಮೋಕ್ಷಕ್ಕೆ ಅತ್ಯಂತ ಸದೃಶವಾದ ಲೋಕವೆಂದರೆ ಅದು ಸತ್ಯಲೋಕ. ಇಂತಹ ಸತ್ಯಲೋಕದಲ್ಲಿ ಇರತಕ್ಕಂತಹ ಜೀವಗಳಿಗೆ ದುಃಖವಿಲ್ಲ, ಮುಪ್ಪಿಲ್ಲ, ರೋಗ-ರುಜಿನಗಳಿಲ್ಲ. ಅತೃಪ್ತಿಯ ಭಾವನೆ ಇಲ್ಲ, ಉದ್ವೇಗವಿಲ್ಲ ಮತ್ತು ಸಾವಿಲ್ಲ. [ಇಲ್ಲಿ ಸಾವಿಲ್ಲ ಎನ್ನುವುದು ಸಾಪೇಕ್ಷ. ಏಕೆಂದರೆ ೩೧ ಸಾವಿರದ ೧೦೪ ಸಾವಿರ ಕೋಟಿ ವರ್ಷಗಳ ನಂತರ ಸತ್ಯಲೋಕ ಕೂಡಾ ನಾಶವಾಗುತ್ತದೆ ಮತ್ತು ಸತ್ಯಲೋಕದಿಂದ ಜೀವಗಳು ತಮ್ಮ ಲಿಂಗ ಶರೀರವನ್ನು ತ್ಯಜಿಸಿ ಮೋಕ್ಷವನ್ನು ಸೇರುತ್ತವೆ]. ಸ್ವರ್ಗದಿಂದಾಚೆಗಿನ ಎಲ್ಲಾ ಲೋಕಗಳಲ್ಲಿಯೂ ಈ ಸ್ಥಿತಿ ಇದ್ದರೂ ಕೂಡಾ, ಇವೆಲ್ಲವುದರ ಪರಾಕಾಷ್ಠೆ ಸತ್ಯಲೋಕದಲ್ಲಿರುತ್ತದೆ. ಇಂತಹ ಸತ್ಯಲೋಕದಲ್ಲಿ ಜೀವನ್ಮುಕ್ತರು ಪರಕಾಲದ ಕೊನೆಯ ತನಕ ಇದ್ದು, ನಂತರ ಮಹಾಪ್ರಳಯದ ಕಾಲದಲ್ಲಿ ಚತುರ್ಮುಖನೊಂದಿಗೆ ಮೋಕ್ಷದಲ್ಲಿ ಭಗವಂತನನ್ನು ಹೋಗಿ ಸೇರುತ್ತಾರೆ.

ಸತ್ಯಲೋಕದಲ್ಲಿಲ್ಲದ ಮಾನಸಿಕ ಉದ್ವೇಗವನ್ನು ನಾವು ಲೌಕಿಕವಾಗಿ ದಿನನಿತ್ಯ ಅನುಭವಿಸುತ್ತೇವೆ. ನಮ್ಮ ಮನಸ್ಸಿನಲ್ಲಿ ಅತೃಪ್ತಿ ಮನೆ ಮಾಡಿರುತ್ತದೆ. ಇದಕ್ಕೆ ಮುಖ್ಯ ಕಾರಣ ಭಗವಂತನ ಅರಿವಿಲ್ಲದೇ ಇರುವ ಅಜ್ಞಾನ. ಏನನ್ನೋ ಗಳಿಸಬೇಕು ಎಂದು ಏನೇನನ್ನೋ ಮಾಡಿ, ಸುಖವನ್ನರಸುತ್ತಾ, ದುಃಖದತ್ತ ಪಯಣಿಸುತ್ತಿರುತ್ತೇವೆ ನಾವು! ಸುಖದ ಮೂಲ ಭಗವಂತ ಎನ್ನುವ ಸತ್ಯವನ್ನು ಅರಿಯದೇ ಇರುವುದೇ ನಮ್ಮೆಲ್ಲಾ ದುಃಖಗಳಿಗೆ ಮೂಲಕಾರಣ. ಆದರೆ ಸತ್ಯಲೋಕವನ್ನು ಸೇರುವ ಜೀವನ್ಮುಕ್ತ- 'ಭಗವಂತನೊಬ್ಬನೇ ನಿತ್ಯಸತ್ಯ' ಎನ್ನುವುದನ್ನು ಅರಿತು, ಪ್ರತಿಯೊಂದು ಕ್ಷಣವೂ ಆನಂದದ ಕಡಲಲ್ಲಿ ತೇಲಾಡುತ್ತಿರುತ್ತಾನೆ. ಅವನಿಗೆ ಯಾವ ಮಾನಸಿಕ ಗೊಂದಲ-ಉದ್ವೇಗಳೂ ಇರುವುದಿಲ್ಲ.

ಮಹರ್ಲೋಕದಿಂದ ಸತ್ಯಲೋಕದ ತನಕ ಇರುವ ಜೀವನ್ಮುಕ್ತರು ಯಾವಯಾವ ಸ್ಥಿತಿಯಲ್ಲಿ ಹೋಗಿ ಭಗವಂತನನ್ನು ನೋಡುತ್ತಾರೆ ಎನ್ನುವುದನ್ನು ಶುಕಾಚಾರ್ಯರು ಮುಂದೆ ವಿವರಿಸುವುದನ್ನು ಕಾಣುತ್ತೇವೆ.

## ಮೋಕ್ಷ ಮಾರ್ಗದಲ್ಲಿ ಭಗವಂತನ ವಿವಿಧ ರೂಪಗಳ ದರ್ಶನ

**ತತೋ ವಿಶೇಷಂ ಪ್ರತಿಪದ್ಯ ನಿರ್ಭಯಸ್ತೇನಾತ್ಮನಾSಪೋSನಲಮೂರ್ಧ್ನಿಚ ತ್ವರನ್ ।**
**ಜ್ಯೋತಿರ್ಮಯೋ ವಾಯುಮುಪೇತ್ಯ ಕಾಲೇ ವಾಯ್ವಾತ್ಮನಾ ಖಂ ಬೃಹದಾತ್ಮಲಿಂಗಮ್ ॥೩೦॥**

"ಮೋಕ್ಷ ಮಾರ್ಗದಲ್ಲಿ ಜೀವ ಮೊದಲು 'ವಿಶೇಷ'ವನ್ನು ಹೋಗಿ ಸೇರುತ್ತಾನೆ" ಎಂದಿದ್ದಾರೆ ಶುಕಾಚಾರ್ಯರು. ಈ ಹಿಂದೆ ಹೇಳಿದಂತೆ(ಎರಡನೇ ಸ್ಕಂಧದ ಮೊದಲ ಅಧ್ಯಾಯದ ೨೪ನೇ ಶ್ಲೋಕದಲ್ಲಿ): ಪಂಚಭೂತಗಳಲ್ಲಿ ಶಬ್ದ-ಸ್ಪರ್ಶ-ರೂಪ-ರಸ-ಗಂಧ ಈ ಎಲ್ಲಾ ಗುಣಗಳು ಎಲ್ಲಿ ಸಮಾವೇಶಗೊಳ್ಳುತ್ತವೋ ಅದು 'ವಿಶೇಷ'. ಅಂದರೆ: ಪಂಚಭೂತಗಳಲ್ಲಿ ಅತ್ಯಂತ ಸ್ಥೂಲವಾದ ಮಣ್ಣಿನಲ್ಲಿ ಸನ್ನಿಹಿತನಾದ ಭಗವಂತನ ಅನಿರುದ್ಧ ರೂಪ 'ವಿಶೇಷ'. ಅನಿರುದ್ಧನಿಗೆ ಎರಡು ರೂಪಗಳು. ಒಂದು ಪ್ರಥ್ವಿಗತವಾದ ರೂಪ ಹಾಗೂ ಇನ್ನೊಂದು ನೀರಿನಲ್ಲಿರುವ ರೂಪ. ಈ ಹಿಂದೆ ಒಂದನೇ ಸ್ಕಂಧದಲ್ಲಿ ವಿವರಿಸಿದಂತೆ(ಲಯ ಚಿಂತನೆ ೧-೧೫-೧೦) ಎಲ್ಲಾ ದೇವತೆಗಳು ಬ್ರಹ್ಮ ದೇವರಲ್ಲಿ ಹೋಗಿ ಸೇರುತ್ತಾರೆ. ಇಂತಹ ಬ್ರಹ್ಮದೇವರ ಜೊತೆಗೆ ಜೀವರು ಮೋಕ್ಷ ಮಾರ್ಗದಲ್ಲಿ ಮುಂದೆ ಸಾಗುತ್ತಿರುತ್ತಾರೆ. ಹೀಗೆ ಸಾಗುವಾಗ ಮೊದಲು ಸಿಗುವಂತಹದ್ದು ಅನ್ನಮಯರೂಪನಾದ ಭಗವಂತನ ಅನಿರುದ್ಧ ರೂಪ. ಈ ಅನ್ನಮಯರೂಪನಾದ ಭಗವಂತನೊಂದಿಗೆ ಕೂಡಿಕೊಂಡು ಜೀವ ಮುಂದೆ ನೀರಿನಲ್ಲಿರುವ ಭಗವಂತನ ರೂಪವನ್ನು ಸೇರುತ್ತಾನೆ. ಪ್ರಥಿವಿಯಲ್ಲಿರುವ ಭಗವಂತನ ರೂಪ ಜಲದಲ್ಲಿರುವ ಭಗವಂತನ ರೂಪದಲ್ಲಿ ಐಕ್ಯವಾಗುತ್ತದೆ. ಜಲದಲ್ಲಿರುವ ಭಗವಂತನ ರೂಪದಿಂದ ಮುಂದೆ ಹೋದಾಗ ಅಗ್ನಿಯಲ್ಲಿರುವ ಪ್ರಾಣಮಯ ರೂಪ ಕಾಣುತ್ತದೆ. ಇದು ಭಗವಂತನ

ಪ್ರದ್ಯುಮ್ನರೂಪ. ಈ ಪ್ರದ್ಯುಮ್ನನಿಗೆ ಮೂರು ರೂಪಗಳು. ಅಗ್ನಿಯಲ್ಲಿರುವ ಪ್ರಾಣಮಯರೂಪ, ಗಾಳಿಯಲ್ಲಿರುವ ಪ್ರಾಣಮಯರೂಪ ಮತ್ತು ಆಕಾಶದಲ್ಲಿರುವ ಪ್ರಾಣಮಯ ರೂಪ. ಅಗ್ನಿಯಲ್ಲಿರುವ ಭಗವಂತನ ಪ್ರಾಣಮಯ ರೂಪದೊಂದಿಗೆ ಮುನ್ನಡೆಯುವ ಜೀವನಿಗೆ ಗಾಳಿಯಲ್ಲಿರುವ ಪ್ರಾಣಮಯ ರೂಪದ ದರ್ಶನವಾಗುತ್ತದೆ. ಗಾಳಿಯಲ್ಲಿರುವ ಪ್ರಾಣಮಯ ರೂಪ ಆಕಾಶದಲ್ಲಿರುವ ಪ್ರಾಣಮಯ-ಪ್ರದ್ಯುಮ್ನರೂಪದಲ್ಲಿ ಲಯಹೊಂದುತ್ತದೆ.

ಘ್ರಾಣೇನ ಗಂಧಂ ರಸನೇನ ವೈ ರಸಂ ರೂಪಂ ತು ಚ ದೃಷ್ಟ್ಯಾ ಸ್ಪರ್ಶಂ ತ್ವಚೈವ ।
ಶ್ರೋತ್ರೇಣ ಚೋಪೇತ್ಯ ನಭೋಗುಣಂ ತತ್ ಪ್ರಾಯೇಣ ನಾವೃತ್ತಿಮುಪೈತಿ ಯೋಗೀ ॥೩೧॥

ಹೀಗೆ ಪಂಚಭೂತಗಳಲ್ಲಿ ನಿಯಾಮಕನಾದ ಭಗವಂತನ ಒಂದು ರೂಪ ಇನ್ನೊಂದು ರೂಪದಲ್ಲಿ ಐಕ್ಯಹೊಂದಿ ಮುಂದೆ ಸಾಗುವಾಗ, ಸಮನಾಂತರವಾಗಿ ಏನಾಗುತ್ತದೆ ಎನ್ನುವುದನ್ನು ಶುಕಾಚಾರ್ಯರು ಈ ಶ್ಲೋಕದಲ್ಲಿ ವಿವರಿಸಿದ್ದಾರೆ. ಜೀವ ಪ್ರಥಿವಿಯಲ್ಲಿರುವ ಭಗವಂತನನ್ನು ಸೇರಿದಾಗ ಅಲ್ಲಿ ಘ್ರಾಣೇಂದ್ರಿಯದಲ್ಲಿನ ಗಂಧ ನಿಯಾಮಕ ಭಗವಂತ 'ವಿಶೇಷ'ನೊಂದಿಗೆ ಸೇರುತ್ತಾನೆ. ನಂತರ ನೀರಿನಲ್ಲಿರುವ ಭಗವಂತನನ್ನು ಸೇರಿದಾಗ ಅಲ್ಲಿ ರಸೇನ್ದ್ರಿಯದಲ್ಲಿನ 'ರಸ' ನಿಯಾಮಕ ಭಗವಂತ ಐಕ್ಯನಾಗುತ್ತಾನೆ. ಮುಂದೆ ಅಗ್ನಿಯಲ್ಲಿರುವ ಭಗವಂತನ ಪ್ರಾಣಮಯ ರೂಪವನ್ನು ಸೇರಿದಾಗ ಅಲ್ಲಿ ಕಣ್ಣಿನಲ್ಲಿರುವ 'ರೂಪ' ನಿಯಾಮಕನಾದ ಭಗವಂತ ಐಕ್ಯನಾಗುತ್ತಾನೆ. ಆನಂತರ ಗಾಳಿಯಲ್ಲಿರುವ ಭಗವಂತನ ಪ್ರಾಣಮಯ ರೂಪವನ್ನು ಸೇರಿದಾಗ ಅಲ್ಲಿ ತ್ವಚೆಯಲ್ಲಿನ 'ಸ್ಪರ್ಶ' ನಿಯಾಮಕನಾದ ಭಗವಂತ ಐಕ್ಯನಾಗುತ್ತಾನೆ. ಮುಂದೆ ಆಕಾಶದಲ್ಲಿರುವ ಭಗವಂತನ ಪ್ರಾಣಮಯ ರೂಪವನ್ನು ಸೇರಿದಾಗ ಅಲ್ಲಿ ಕಿವಿಯಲ್ಲಿನ 'ಶಬ್ದ' ನಿಯಾಮಕ ಭಗವಂತನ ರೂಪ ಐಕ್ಯವಾಗುತ್ತದೆ. ಹೀಗೆ ಪಂಚಭೂತಗಳನ್ನು ದಾಟಿ, ಪಂಚಭೂತಗಳಲ್ಲಿ ಇರತಕ್ಕಂತಹ, ಪಂಚತನ್ಮಾತ್ರೆಗಳಲ್ಲಿರುವ ಭಗವಂತ ಹಾಗೂ ಪಂಚಜ್ಞಾನೇಂದ್ರಿಯಗಳಲ್ಲಿ ಇರತಕ್ಕಂತಹ ಭಗವಂತನ ರೂಪಗಳು ಎಕೀಭೂತವಾಗಿ, ಅವನೊಂದಿಗೆ ಆಕಾಶಗತನಾದ ಭಗವಂತನ ತನಕ ಹೋದ ಜೀವ ಪ್ರಾಯಃ ಮರಳಿ ಬರುವುದಿಲ್ಲ.

ಇಲ್ಲಿ "ಪ್ರಾಯಃ ಮರಳಿ ಬರುವುದಿಲ್ಲ" ಎಂದಿದ್ದಾರೆ ಶುಕಾಚಾರ್ಯರು. ಏಕೆ ಹೀಗೆ ಹೇಳಿದ್ದಾರೆ ಎಂದರೆ: ನಮಗೆ ತಿಳಿದಂತೆ ಜೀವದ ಜೊತೆಗೆ ಪ್ರಾಣ-ಭಾರತಿಯರು, ಶಿವ-ಪಾರ್ವತಿಯರು ಎಲ್ಲರೂ ಇರುತ್ತಾರೆ. ಇವರೆಲ್ಲರೂ ಮರಳಿ ಬರುತ್ತಾರೆ. ಏಕೆಂದರೆ ಮುಂದಿನ ಕಲ್ಪದಲ್ಲಿ ಪ್ರಾಣದೇವರು ಬ್ರಹ್ಮಪದವಿಯನ್ನೂ, ಶಿವ ಶೇಷ ಪದವಿಯನ್ನು ಅಲಂಕರಿಸಿ ಭಗವಂತನ ಸೃಷ್ಟಿ ಕಾರ್ಯದಲ್ಲಿ ಭಾಗಿಯಾಗುತ್ತಾರೆ. ಈ ರೀತಿ ಮುಂದಿನ ಪದವಿಯನ್ನು ಹೊಂದುವ ಹೊಣೆಗಾರಿಕೆ ಉಳ್ಳವರನ್ನು ಬಿಟ್ಟರೆ, ಉಳಿದವರು ಯಾರೂ ಇಲ್ಲಿಯ ತನಕ ಹೋಗಿ ಮರಳಿ ಬರುವ ಪ್ರಶ್ನೆಯೇ ಇಲ್ಲ. ಈ ಶ್ಲೋಕದಲ್ಲಿನ ಇನ್ನೊಂದು ಮುಖವನ್ನು ನೋಡಿದರೆ: ಈ ಸ್ಥಿತಿಯಲ್ಲಿ ಜೀವ ಅನ್ನಮಯಕೋಶ ಮತ್ತು ಪ್ರಾಣಮಯಕೋಶವನ್ನು ಕಳಚಿಕೊಳ್ಳುತ್ತಾನೆ. ಹಾಗಾಗಿ ಆತ ತನ್ನೆಲ್ಲಾ ಇಂದ್ರಿಯಗಳಿಂದ ಕಳಚಿಕೊಂಡು ನೇರವಾಗಿ ಸ್ವರೂಪಭೂತವಾದ ಇಂದ್ರಿಯಗಳಿಂದ ಎಲ್ಲವನ್ನೂ ಗ್ರಹಿಸುವಂತಾಗುತ್ತದೆ. ಹಾಗಾಗಿ ಈ ಹಂತದಲ್ಲಿ ಜೀವನಿಗೆ ಸ್ವರೂಪದಿಂದಲೇ ಎಲ್ಲಾ ವಿಷಯಾನುಭವಗಳಾಗುತ್ತವೆ.

ಸ ಭೂತಸೂಕ್ಷ್ಮೇಂದ್ರಿಯಸನ್ನಿಕರ್ಷಾತ್ ಸನಾತನೋಽಸೌ ಭಗವಾನನಾದಿಃ ।
ಮನೋಮಯಂ ದೇವಮಯಂ ವಿಕಾರ್ಯಂ ಸಂಸಾದ್ಯ ಮತ್ಯಾ ಸಹ ತೇನ ಯಾತಿ ॥೩೨॥

ಈ ಹಂತದಲ್ಲಿ ಪಂಚಭೂತಗಳು, ಪಂಚಜ್ಞಾನೇಂದ್ರಿಯಗಳು, ಪಂಚತನ್ಮಾತ್ರೆಗಳು ಈ ಎಲ್ಲವುದರ ಅಭಿಮಾನಿ ದೇವತೆಗಳು ಅಂತರ್ಭಾವವಾಗಿ ಭಗವಂತನಲ್ಲಿ ಸೇರಿದ್ದಾರೆ. ಇವರೆಲ್ಲರ ಜೊತೆಗೆ 'ಜೀವರು' ಮೋಕ್ಷ ಮಾರ್ಗದಲ್ಲಿ ಮುನ್ನೆಡೆಯುತ್ತಾ, ಆಕಾಶದಲ್ಲಿರುವ ಪ್ರದ್ಯುಮ್ನನ ಪ್ರಾಣಮಯ ರೂಪದಲ್ಲಿ ಸೇರಿದ್ದಾರೆ. ಇಲ್ಲಿ ಶುಕಾಚಾರ್ಯರು "ಭಗವಂತನ ಈ ರೂಪ ಸನಾತನ ಹಾಗೂ ಅನಾಧಿ" ಎಂದಿದ್ದಾರೆ. ಮೇಲ್ನೋಟಕ್ಕೆ ಅನಾಧಿ ಮತ್ತು ಸನಾತನ ಎನ್ನುವ ಎರಡೂ ಪದಗಳು ಒಂದೇ ಅರ್ಥವನ್ನು ಕೊಡುತ್ತವೆ ಎನಿಸಿದರೂ ಕೂಡಾ, ಇಲ್ಲಿನ ಪ್ರಯೋಗವನ್ನು ನೋಡಿದಾಗ ಸನಾತನ ಎನ್ನುವ ಪದಕ್ಕೆ ಭಿನ್ನ ಅರ್ಥವಿದೆ ಎನ್ನುವುದು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದರೆ 'ನಾತನ' ಎಂದರೆ 'ನಾದನ', ಅಂದರೆ 'ಶಬ್ದ' ಎಂದರ್ಥ. [ತೃತಿಯೇ ಅತಿಶಯೋ ಎನ್ನುವ ವ್ಯಾಕರಣ ನಿಯಮದಂತೆ ನಾತನ=ನಾದನ] ಆದ್ದರಿಂದ ಸನಾತನ ಎಂದರೆ ಶಬ್ದದಿಂದ ಕೂಡಿದ ಆಕಾಶಗತನಾಗಿರುವ ಪ್ರಾಣಮಯ ನಾಮಕ ಭಗವಂತ. ಭಗವಂತನ ಈ ಪ್ರದ್ಯುಮ್ನ ರೂಪದೊಂದಿಗೆ ಮುಂದೆ ಸಾಗುವ ಜೀವರು ಮುಂದೆ ಮನಸ್ಸಿನ ನಿಯಾಮಕನಾಗಿರುವ ಸಂಕರ್ಷಣ ರೂಪವನ್ನು ಹೊಂದುತ್ತಾರೆ.

ಸಂಕರ್ಷಣನಿಗೆ ಮೂರು ರೂಪಗಳು. ಮನಸ್ಸು-ಬುದ್ಧಿ-ಅಹಂಕಾರ. ಈ ಮೂರು ತತ್ವಗಳಲ್ಲಿ ಮೂರು ರೂಪದಲ್ಲಿರುವ ಭಗವಂತನನ್ನು ಇಲ್ಲಿ ಶುಕಾಚಾರ್ಯರು 'ದೇವಮಯ' ಎಂದು ಕರೆದಿದ್ದಾರೆ. ಏಕೆಂದರೆ ಮನಸ್ಸನ್ನು ನಿಯಂತ್ರಿಸತಕ್ಕಂತಹ ಶಿವನಲ್ಲಿರುವ ಭಗವಂತನ ರೂಪವೇ ಇಂದ್ರಾದಿ ಸಮಸ್ತ ದೇವತೆಗಳನ್ನು ಎತ್ತರಕ್ಕೇರಿಸುವ ರೂಪ. ಇದು ಮನಸ್ಸಿನ ಪ್ರೇರಕರಾದ ರುದ್ರದೇವರ ಒಳಗಿರುವ, ಎಲ್ಲಾ ದೇವತೆಗಳಿಗೂ ಪ್ರಾಧಾನ್ಯವನ್ನು ಕೊಡುವ, ದೇವತೆಗಳನ್ನು ಎತ್ತರಕ್ಕೆ ಕರ್ಷಣೆ ಮಾಡುವ ರೂಪ.

**ವಿಜ್ಞಾನತತ್ತ್ವಂ ಗುಣಸನ್ನಿರೋಧಂ ತೇನಾತ್ಮನಾSSತ್ಮಾನಮುಪೈತಿ ಶಾಂತಿಮ್ ।**
**ಆನಂದಮಾನಂದಮಯೋSವಸಾನೇ ಸರ್ವಾತ್ಮಕೇ ಬ್ರಹ್ಮಣಿ ವಾಸುದೇವೇ ॥೩೪॥**

ಮನಸ್ಸು-ಬುದ್ಧಿ-ಅಹಂಕಾರದಿಂದಾಚೆಗೆ ಚಿತ್ತ ಮತ್ತು ಚೇತನವಿದೆ. ಚಿತ್ತ ನಮ್ಮ ಅನುಭವಗಳ- ನೆನಪಿನ ಸಂಗ್ರಹ ಸ್ಥಾನ (ವಿಜ್ಞಾನಮಯಕೋಶ). ಈ ಚಿತ್ತದಲ್ಲಿ ಭಗವಂತ ವಾಸುದೇವ ರೂಪನಾಗಿದ್ದಾನೆ. ಇದು ಯಾವ ಗುಣಗಳ ಸ್ಪರ್ಶವೂ ಇಲ್ಲದ ನಿರ್ಗುಣರೂಪ. ಭಗವಂತನ ಅನಿರುದ್ಧ, ಪ್ರದ್ಯುಮ್ನ ಮತ್ತು ಸಂಕರ್ಷಣ ರೂಪಗಳು ಸೃಷ್ಟಿ-ಸ್ಥಿತಿ-ಸಂಹಾರಕ್ಕಾಗಿ ಸತ್ವ-ರಜಸ್ಸು-ತಮೋಗುಣಗಳನ್ನು ಬಳಸುವ ರೂಪವಾದರೆ, ವಾಸುದೇವ ರೂಪ ಈ ತ್ರಿಗುಣಗಳಿಂದಾಚೆಗಿನ ಮೋಕ್ಷವನ್ನು ಕರುಣಿಸುವ ರೂಪ. ಇಂತಹ ವಿಜ್ಞಾನಮಯ ರೂಪವನ್ನು ಕಂಡ ಜೀವರು ಮುಂದೆ ಚೇತನ ನಿಯಾಮಕ ಭಗವಂತನ ಆನಂದಮಯರೂಪವನ್ನು ಕಾಣುತ್ತಾರೆ. ಈ ಆನಂದಮಯ ಕೋಶದಲ್ಲಿ ಆನಂದದ ಪರಾಕಾಷ್ಠೆಯಲ್ಲಿ ಶ್ರೀಲಕ್ಷ್ಮಿ ಇದ್ದಾಳೆ. ಈ ಶ್ರಿತತ್ತ್ವದ ಜೊತೆಗೆ ಜೀವರು ಚೇತನದ ನಿಯಾಮಕನಾದ ಭಗವಂತನ ನಾರಾಯಣ ರೂಪದ ದರ್ಶನ ಪಡೆಯುತ್ತಾರೆ. ಈ ದರ್ಶನದ ನಂತರ ಎಲ್ಲಾ ಜೀವರು ಮುಕ್ತ ನಿಯಾಮಕ ವಾಸುದೇವ ರೂಪದ ಅಧೀನದಲ್ಲಿ ಸದಾ ಕಾಲ ಮೋಕ್ಷದಲ್ಲಿರುತ್ತಾರೆ.

ಈ ಮೇಲೆ ವಿವರಿಸಿದ ಮೋಕ್ಷ ಮಾರ್ಗದಲ್ಲಿನ ಭಗವಂತನ ವಿವಿಧ ರೂಪದ ದರ್ಶನವನ್ನು ತೈತ್ತಿರೀಯ ಉಪನಿಷತ್ತು ಈ ರೀತಿ ವರ್ಣಿಸುತ್ತದೆ: *ಏತಮನ್ನಮಯಾತ್ಮಾನಮುಪಸಂಕ್ರಮ್ಯ। ಏತಂ ಪ್ರಾಣಮಯಾತ್ಮಾನಮುಪಸಂಕ್ರಮ್ಯ ।*

*ಏತಂ ಮನೋಮಯಾತ್ಮಾನಮುಪಸಂಕ್ರಮ್ಯ । ಏತಂ ವಿಜ್ಞಾನಮಯಾತ್ಮಾನಮುಪಸಂಕ್ರಮ್ಯ । ಏತಮಾನಂದಮಯಾತ್ಮಾನಮುಪಸಂಕ್ರಮ್ಯ । **(ಭೃಗುವಲ್ಲಿ-ಹತ್ತನೇ ಅನುವಾಕ).***

ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "*ಏತಾಂ ಗತಿಂ ಭಾಗವತೋ ಗತೋ ಯಃ ಸ ವೈ ಪುನರ್ನೇಹ ವಿಷಜ್ಜತೇSಙ್ಗ*" ಎಂದು. ಅಂದರೆ: ಈ ಸ್ಥಿತಿಯನ್ನು ಪಡೆದ ಜೀವನಿಗೆ ಸಂಸಾರದ ಲವಲೇಶವಿರುವುದಿಲ್ಲ. ಆತ ಸದಾ ವಾಸುದೇವನ ಜೊತೆಗೆ ವಾಸಮಾಡುತ್ತಾನೆ. ಸಂಸಾರದಲ್ಲಿ ಮುಚ್ಚಿಕೊಂಡು, ಮೋಕ್ಷದಲ್ಲಿ ತನ್ನನ್ನು ತಾನು ಬಿಚ್ಚಿ ಬೆಳಗಿಸಿ ತೋರುವ ರೂಪ-ಭಗವಂತನ ವಾಸುದೇವ ರೂಪ. ಇಂತಹ ವಾಸುದೇವ ರೂಪದ ಸಾಕ್ಷಾತ್ ಸಾನಿಧ್ಯದಲ್ಲಿರುವ ಜೀವ ಎಂದೂ ಮರಳಿ ಸಂಸಾರಕ್ಕೆ ಬರಬೇಕೆಂದು ಅಪೇಕ್ಷಿಸುವುದಿಲ್ಲ.

## ಭಾಗವತದ ರಚನೆ ಮತ್ತು ಅದರ ಮಹತ್ವ

**ನ ಹ್ಯತೋSನ್ಯಃ ಶಿವಃ ಪಂಥಾ ವಿಶ್ರುತಃ ಸಂಸೃತಾವಿಹ ।**
**ವಾಸುದೇವೇ ಭಗವತಿ ಭಕ್ತಿಯೋಗೋ ಯತೋ ಭವೇತ್ ॥೩೩॥**

ಮೋಕ್ಷ ಮಾರ್ಗವನ್ನು ವಿವರಿಸಿದ ಶುಕಾಚಾರ್ಯರು ಹೇಳುತ್ತಾರೆ: "ಈ ಅದ್ಭುತ ಅರಿವನ್ನು ಕೊಡುವುದಕ್ಕಾಗಿಯೇ ವೇದವ್ಯಾಸರು ಭಾಗವತ ರಚಿಸಿದರು" ಎಂದು. ಭಾಗವತವನ್ನು ಬಿಟ್ಟು ಅದಕ್ಕಿಂತ ಒಳ್ಳೆಯ ಅಧ್ಯಾತ್ಮ ಮಾರ್ಗದರ್ಶಿ ಇನ್ನೊಂದಿಲ್ಲ. ಇದನ್ನು ಮೂಲದಲ್ಲಿ ಸ್ವಯಂ ಭಗವಂತನೇ ಚತುರ್ಮುಖನಿಗೆ ಉಪದೇಶ ಮಾಡಿದ. ಆನಂತರ ಆತ ವೇದವ್ಯಾಸರ ರೂಪದಲ್ಲಿ ಭಾಗವತವನ್ನು ಶುಕಾಚಾರ್ಯರಿಗೆ ಉಪದೇಶಿಸಿದ. ಭಗವಂತನನ್ನು ಸೇರುವ ಮೋಕ್ಷ ಮಾರ್ಗವನ್ನು ಇಷ್ಟು ಸ್ಪಷ್ಟವಾಗಿ ಇತರ ಯಾವುದೇ ಗ್ರಂಥ ವಿವರಿಸುವುದಿಲ್ಲ. ಭಗವಂತನನ್ನು ಬಿಟ್ಟು ಉಳಿದ ಎಲ್ಲಾ ವಿಷಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರಿಗೆ(ಸಂಸೃತಾ), ಸಂಸಾರವೇ ಸರ್ವಸ್ವ ಎಂದು ನಂಬುವವರಿಗೂ ಕೂಡಾ ಅರಿವನ್ನು ಕೊಡುವ ಗ್ರಂಥ ಈ ಭಾಗವತ. ಇದು ಸಮಸ್ತ ವೇದದ ಸಾರವಾಗಿರುವುದರಿಂದ ಶ್ರೇಷ್ಠ ಗ್ರಂಥ ಎನಿಸಿದೆ.

**ಭಗವಾನ್ ಬ್ರಹ್ಮ ಕಾರ್ತ್ಸ್ನ್ಯೇನ ತ್ರಿರನ್ವೀಕ್ಷ್ಯ ಮನೀಷಯಾ ।**
**ತದ್ಧಿ ಹ್ಯಪಶ್ಯತ್ ಕೂಟಸ್ಥೇ ರತಿರಾತ್ಮನ್ ಯತೋ ಭವೇತ್ ॥೩೪॥**

"ಲೋಕಕ್ಕೆ ಮಾರ್ಗದರ್ಶನ ನೀಡಲು ಮೂರು ಬಾರಿ ಸಮಸ್ತ ವೇದ-ವಾಙ್ಮಯವನ್ನು ಅತ್ಯಂತ ಒಳನೋಟದಿಂದ ಚಿಂತನ-ಮಂಥನ ಮಾಡಿ ವ್ಯಾಸರು ನನಗೆ ಉಪದೇಶ ಮಾಡಿದರು" ಎನ್ನುತ್ತಾರೆ ಶುಕಾಚಾರ್ಯರು. ಇಲ್ಲಿ ಮೂರು ಬಾರಿ ಎಂದು ಹೇಳುವುದಕ್ಕೆ ಒಂದು ವಿಶೇಷ ಕಾರಣವಿದೆ. ಅದೇನೆಂದರೆ ವೇದಕ್ಕೆ ಸಹಜವಾಗಿ ಕಡಿಮೆ ಎಂದರೆ ಮೂರು ಅರ್ಥಗಳಿವೆ. ಲೌಕಿಕವಾಗಿ ಮಾತನಾಡುವಾಗ ಒಂದಕ್ಕಿಂತ ಹೆಚ್ಚು ಅರ್ಥದಲ್ಲಿ ವಾಕ್ಯ ಪ್ರಯೋಗ ಮಾಡಿದರೆ ಅದು ದೋಷವಾಗುತ್ತದೆ. ಆದರೆ ವೇದದಲ್ಲಿ ಮೂರು ಆಯಾಮದಲ್ಲಿ ಅರ್ಥವನ್ನು ಹೇಳಬೇಕು ಎನ್ನುವ ಉದ್ದೇಶದಿಂದಲೇ ಆ ರೀತಿಯ ರಚನೆ ಮಾಡಲಾಗಿದೆ. ಇದು ವ್ಯವಹಾರಕ್ಕಿಂತ ಅತೀತವಾದ ವಿಚಾರ. ಇಲ್ಲಿ ಅನೇಕ ಅರ್ಥದಲ್ಲಿ ತಾತ್ಪರ್ಯವಿರುವುದರಿಂದ ಇದು ದೋಷವಾಗುವುದಿಲ್ಲ. ಅನೇಕ ಆಯಾಮದಲ್ಲಿ ಅರ್ಥವನ್ನು ಹೇಳಬೇಕು ಎನ್ನುವುದೇ ವೇದದ ಉದ್ದೇಶ. ಇಂದಿನ ಶಾಲೆಗಳಲ್ಲಿ ತರಗತಿಗೊಂದು ಪಠ್ಯವಾದರೆ ಅಧ್ಯಾತ್ಮದಲ್ಲಿ ಎಲ್ಲಾ

ತರಗತಿಗೂ ಒಂದೇ ಪಠ್ಯ. ಅಲ್ಲಿ ಬೇರೆಬೇರೆ ಮಟ್ಟದಲ್ಲಿ ಬೇರೆಬೇರೆ ಆಯಾಮದಲ್ಲಿ ವೇದಾಧ್ಯಯನ ನಡೆಯುತ್ತದೆ. ಇದಕ್ಕೆ ಉತ್ತಮ ಉದಾಹರಣೆ ಈ ಹಿಂದೆ ವಿವರಿಸಿದ 'ಆತ್ಮಾ' ಎನ್ನುವ ಪದ. ವೇದಾಧ್ಯಯನ ಆರಂಭಿಸುವಾಗ ಆತ್ಮಾ ಎನ್ನುವ ಪದಕ್ಕೆ ವಿದ್ಯಾರ್ಥಿ ಕೇವಲ ಶರೀರ ಎನ್ನುವ ಅರ್ಥವನ್ನು ಕಂಡುಕೊಳ್ಳುತ್ತಾನೆ. ಆನಂತರ ಆತ್ಮಾ ಎಂದರೆ ಕೇವಲ ಶರೀರವಷ್ಟೇ ಅಲ್ಲಾ, ಹೃದಯ ಕೂಡಾ ಆತ್ಮಾ ಎನ್ನುವುದು ಆತನಿಗೆ ತಿಳಿಯುತ್ತದೆ. ಹೀಗೆ ವಿದ್ಯಾಭ್ಯಾಸ ಮುಂದುವರಿದಾಗ ಹಂತ ಹಂತವಾಗಿ ಆತನಿಗೆ ಆತ್ಮಾ ಎಂದರೆ ಮನಸ್ಸು, ಆತ್ಮಾ ಎಂದರೆ ಜೀವ, ಆತ್ಮಾ ಎಂದರೆ ಪರಮಾತ್ಮಾ ಎನ್ನುವುದು ತಿಳಿಯುತ್ತದೆ. ಈ ರೀತಿ ಒಂದೇ ವೇದಮಂತ್ರಕ್ಕೆ ಹಂತಹಂತವಾಗಿ ಅನೇಕ ಆಯಾಮದಲ್ಲಿ ಅರ್ಥವನ್ನು ತಿಳಿಯುತ್ತಾ ವಿದ್ಯಾರ್ಥಿ ಎತ್ತರಕ್ಕೇರುತ್ತಾನೆ. ಓದುವ ಪುಸ್ತಕ ಒಂದೇ ಆದರೂ ಕೂಡಾ, ಅಲ್ಲಿ ವಿವಿಧ ಹಂತದಲ್ಲಿ ಎತ್ತರದ ಜ್ಞಾನ ಅಡಗಿರುವುದನ್ನು ತಿಳಿಯುತ್ತಾ ಮುಂದೆ ಸಾಗುವುದು ವೇದಾಂತ ವಿದ್ಯೆಯ ಕ್ರಮ. [ಹೇಗೆ ವೇದ ಮಂತ್ರ ಅನೇಕ ಆಯಾಮದಲ್ಲಿ ತೆರೆದುಕೊಳ್ಳುತ್ತದೆ ಎನ್ನುವುದನ್ನು ನಾವು ಈ ಹಿಂದೆ ನೋಡಿದ್ದೇವೆ]

ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ನಿರ್ವಿಕಾರನಾದ ಭಗವಂತನಲ್ಲಿ ವಿಕಾರಕ್ಕೊಳಪಡುವ ಮನಸ್ಸು ನೆಲೆ ನಿಲ್ಲಲು ಸಾಧ್ಯವಾಗುವ ಒಂದು ವಾಙ್ಮಯವನ್ನು ಕೊಡಬೇಕಾದರೆ, ವೇದವ್ಯಾಸರು ಸಮಸ್ತ ವೇದವನ್ನು ಮೂರು ಬಾರಿ ಚಿಂತನೆ ಮಾಡಿದರು" ಎಂದು. ಇದರರ್ಥ ವೇದವ್ಯಾಸರು ಅಷ್ಟೊಂದು ಕಷ್ಟಪಟ್ಟರು ಎಂದಲ್ಲ. ಎಲ್ಲರೂ ಎಷ್ಟು ಸಾಧನೆ ಮಾಡಬೇಕು ಎನ್ನುವುದನ್ನು ಭಗವಂತ ವೇದವ್ಯಾಸ ರೂಪದಲ್ಲಿ ತೋರಿಸಿದ ಬಗೆ ಇದು. "ಹೀಗೆ ಸ್ವಯಂ ಭಗವಂತನೇ ಹೇಳಿದ, ವೇದಮೂಲವಾಗಿರುವ, ಸಮಸ್ತ ವೇದಗಳ ಸಾರಭೂತವಾಗಿರುವ, ಆಕಾಶದಂತೆ ಎಲ್ಲಾಕಡೆ ತುಂಬಿ ನಿರ್ವಿಕಾರನಾಗಿರುವ(ಸಾಮಾನ್ಯಪ್ರಜ್ಞೆಗೆ ಗೋಚರನಾಗದ) ಭಗವಂತನಲ್ಲಿ ಆಸಕ್ತಿ ಮೂಡಿಸುವ ಭಾಗವತವನ್ನು ನನ್ನ ತಂದೆ ನನಗೆ ಕರುಣಿಸಿದರು" ಎಂದು ಪುನರುಚ್ಛರಿಸಿದ್ದಾರೆ ಶುಕಾಚಾರ್ಯರು.

ಭಗವಾನ್ ಸರ್ವಭೂತೇಷು ಲಕ್ಷಿತಶ್ಚಾತ್ಮನಾ ಹರಿಃ ।
ದೃಶ್ಯೈರ್ಬುದ್ಧ್ಯಾದಿಭಿರ್ದ್ರಷ್ಟಾ ಲಕ್ಷಣೈರನುಮಾಪಕೈಃ ॥೩೮॥

ಭಾಗವತ ಗ್ರಂಥದ ವಿಶೇಷವನ್ನು ಶುಕಾಚಾರ್ಯರು ಇಲ್ಲಿ ಮತ್ತೊಮ್ಮೆ ವಿವರಿಸಿದ್ದಾರೆ. ಭಗವಂತನನ್ನು ಕೇವಲ ಯುಕ್ತಿ**(Logic)**ಯಿಂದ ತಿಳಿಯುವುದು ಸಾಧ್ಯವಿಲ್ಲವಾದರೂ ಕೂಡಾ, ಅನುಭವದಿಂದ ಕೂಡಿದ ಯುಕ್ತಿಯಿಂದ ಭಗವಂತನನ್ನು ತಿಳಿಯಬಹುದು ಎಂದು ಭಾಗವತ ಹೇಳುತ್ತದೆ. ಪ್ರತಿಯೊಬ್ಬ ಜೀವನೂ ಕೂಡಾ ತನ್ನೊಳಗಿರುವ ಭಗವಂತನನ್ನು ಗುರುತಿಸಬಹುದು ಎನ್ನುವ ಭರವಸೆಯನ್ನು ಭಾಗವತ ನೀಡುತ್ತದೆ. "ಭಗವಂತನನ್ನು ನೀವು ನಿಮ್ಮೊಳಗೇ ಗುರುತಿಸಿಕೊಳ್ಳಬಹುದು" ಎಂದು ವೇದವ್ಯಾಸ ರೂಪದಲ್ಲಿ ಸ್ವಯಂ ಭಗವಂತನೇ ಹೇಳಿದ್ದಾನೆ. ಭಗವಂತನ ಅಸ್ತಿತ್ವದ ಚಿಂತನಾಕ್ರಮವನ್ನು ಹೇಗೆ ಭಾಗವತ ನಮಗೆ ನೀಡುತ್ತದೆ ಎನ್ನುವುದನ್ನು ಇಲ್ಲಿ ಶುಕಾಚಾರ್ಯರು ವಿವರಿಸಿರುವುದನ್ನು ಕಾಣುತ್ತೇವೆ. ಜ್ಞಾನ/ಅಜ್ಞಾನ-ಇಚ್ಛೆ-ಪ್ರಯತ್ನ-ಸುಖ/ದುಃಖ ಇವು ಪ್ರತಿಯೊಂದು ಚೇತನವೂ ಅನುಭವಿಸುವ ಸಂಗತಿಗಳು. ಇವೆಲ್ಲವೂ ನಮ್ಮಲ್ಲೇ ಇದ್ದರೂ ಕೂಡಾ, ಇವು ನಮ್ಮ ಅಧೀನವಾಗಿಲ್ಲ ಎಂದು ಚಿಂತಿಸುವಂತೆ ಮಾಡುತ್ತದೆ ಭಾಗವತ. ಉದಾಹರಣೆಗೆ ನಾವು ಸುಖ ಪಡಬೇಕೆಂದು ಇಚ್ಛೆ ಪಡುತ್ತೇವೆ, ಆದರೆ ದುಃಖ ಸರಮಾಲೆಯಾಗಿ ಬರುತ್ತದೆ. ನಮ್ಮ ಇಚ್ಛೆಯ ಹಿಡಿತ/ನಿಯಂತ್ರಣ ನಮ್ಮಲ್ಲಿಲ್ಲ. ನಾವು ಗೆಲ್ಲಲು ಪ್ರಯತ್ನಿಸುತ್ತೇವೆ, ಆದರೆ ಸೋಲುತ್ತೇವೆ. ಇವೆಲ್ಲವೂ ಪ್ರತಿಯೊಬ್ಬರಿಗೂ ಜೀವನದಲ್ಲಿ ಅನುಭವಕ್ಕೆ ಬರುವ ಸಂಗತಿ. ಇದರಿಂದ ಸ್ಪಷ್ಟವಾಗಿ ನಮಗೆ ತಿಳಿಯುವುದು ಏನೆಂದರೆ: ನಮ್ಮಲ್ಲಿ ಜ್ಞಾನ/ಅಜ್ಞಾನ-ಇಚ್ಛೆ-ಪ್ರಯತ್ನ-ಸುಖ/ದುಃಖ

ಎಲ್ಲವೂ ಇದೆ, ಆದರೆ ನಾವು ಅದರ ಒಡೆಯರಲ್ಲ ಎನ್ನುವುದು. ಈ ಅನುಭವದ ಯುಕ್ತಿಯಿಂದ ನಾವು ನೋಡಿದಾಗ ಇವೆಲ್ಲವನ್ನೂ ನಿಯಂತ್ರಿಸುವ ಪರಶಕ್ತಿಯೊಂದಿದೆ ಎನ್ನುವುದು ತಿಳಿಯುತ್ತದೆ. "ನನ್ನಲ್ಲಿ ಇಚ್ಛೆ ಇದೆ, ಪ್ರಯತ್ನವಿದೆ, ಜ್ಞಾನವಿದೆ. ಇವೆಲ್ಲಾ ಇದ್ದರೂ ಕೂಡಾ ಇದರ ಒಡೆತನ ನನ್ನಲ್ಲಿ ಏಕಿಲ್ಲಾ" ಎಂದು ನಾವು ಚಿಂತನೆ ಮಾಡಬೇಕು. ಕೇನೋಪನಿಷತ್ತಿನಲ್ಲಿ ಹೇಳುವಂತೆ: *ಕೇನೇಷಿತಂ ಪತತಿ ಪ್ರೇಷಿತಂ ಮನಃ ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ । ಕೇನೇಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥೧-೧॥* ಅಧ್ಯಾತ್ಮ ಚಿಂತನೆಯ ಮೂಲಭೂತ ಉಪಕ್ರಮವಿದು. ನಮ್ಮ ಮನಸ್ಸು ಯಾವುದ್ಯಾವುದೋ ವಿಷಯಗಳ ಕಡೆಗೆ ಹರಿಯುತ್ತದೆ. ಕೆಲವನ್ನು ಗ್ರಹಿಸುತ್ತದೆ, ಇನ್ನು ಕೆಲವನ್ನು ಗ್ರಹಿಸುವುದಿಲ್ಲ; ಕೆಲವನ್ನು ಬಯಸುತ್ತದೆ, ಇನ್ನು ಕೆಲವನ್ನು ಬಯಸುವುದಿಲ್ಲ; ಕೆಲವನ್ನು ಮರೆಯುತ್ತದೆ, ಇನ್ನು ಕೆಲವನ್ನು ಮರೆಯುವುದಿಲ್ಲ. ವಿಷಯ ಗ್ರಹಣ ಮಾಡಬೇಕು ಎಂದರೆ ಮಾಡಲು ಆಗುವುದಿಲ್ಲ, ಮಾಡಬಾರದು ಎಂದರೆ ಮಾಡುತ್ತದೆ; ಮರೆತುಬಿಡು ಎಂದರೆ ಮರೆಯುವುದಿಲ್ಲಾ, ನೆನಪಿನಲ್ಲಿಟ್ಟುಕೋ ಎಂದರೆ ಮರೆತುಬಿಡುತ್ತದೆ! ಇಂತಹ ಮನಸ್ಸೆಂಬ ಒಂದು ವಿಶಿಷ್ಠ ಯಂತ್ರ ನಮ್ಮೊಳಗೆ ಕಾರ್ಯ ನಿರ್ವಹಿಸುತ್ತಿರುತ್ತದೆ. ಅದನ್ನು ಯಾರೋ ನಿಯಂತ್ರಿಸುತ್ತಿರುತ್ತಾರೆ. ಇನ್ನು ನಮ್ಮ ಉಸಿರು. ತಾಯಿಯ ಹೊಟ್ಟೆಯಲ್ಲಿದ್ದಾಗ ನಾವು ಮೂಗಿನಿಂದ ಉಸಿರಾಡುತ್ತಿರಲಿಲ್ಲ, ಆದರೆ ಈ ಭೂಮಿಗೆ ಬಿದ್ದ ತಕ್ಷಣ ಉಸಿರು ಆರಂಭವಾಯಿತು. ಈ ಉಸಿರು ಎಂದು ನಿಲ್ಲುತ್ತದೆ ಎನ್ನುವುದು ನಮಗೆ ತಿಳಿದಿಲ್ಲ, ಅದರ ನಿಯಂತ್ರಣ ನಮ್ಮ ಕೈಯಲ್ಲಿಲ್ಲ. ಇದೇ ರೀತಿ ನಮ್ಮ ಮಾತು, ನಮ್ಮ ದೃಷ್ಟಿ(ಕಣ್ಣು) ಇತ್ಯಾದಿ. ಎಲ್ಲವೂ ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿರುತ್ತದೆ. ಈ ವ್ಯವಸ್ಥೆಯ ಹಿಂದಿನ ಶಕ್ತಿ ಯಾವುದು ಎನ್ನುವುದಕ್ಕೆ ಇಂದಿನ ವಿಜ್ಞಾನದಲ್ಲಿ ಉತ್ತರವಿಲ್ಲ. ಆದರೆ ಇವೆಲ್ಲವುದಕ್ಕೂ ಉತ್ತರವಾಗಿರುವ ಭಗವಂತನನ್ನು ಭಾಗವತ ನಮ್ಮ ಮುಂದೆ ತೆರೆದಿಡುತ್ತದೆ. ಋಗ್ವೇದದಲ್ಲಿ ಹೇಳುವಂತೆ: **ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ**॥೧೦.೦೮೨.೦೩॥ ಎಲ್ಲಾ ಪ್ರಶ್ನೆಗಳಿಗೂ ಕೊನೇಯ ಉತ್ತರ ಹಾಗೂ ಎಲ್ಲರಿಗೂ ಕೊನೇಯ ತನಕ ಪ್ರಶ್ನೆಯೇ ಆಗಿರುವವ ಯಾರೋ ಅವನೇ ಭಗವಂತ. ಮನುಷ್ಯ ತನ್ನನ್ನು ತಾನು ವಿಶ್ಲೇಷಣೆ ಮಾಡಿಕೊಂಡಾಗ, ಅಲ್ಲಿ ಬರುವ ಎಲ್ಲಾ ಪ್ರಶ್ನೆಗಳಿಗೆ ಉತ್ತರರೂಪವಾಗಿ ಸಿಗುವಂತಹ ವಸ್ತುವನ್ನು ವೇದವ್ಯಾಸರು ಭಾಗವತ ರೂಪದಲ್ಲಿ ಶುಕಾಚಾರ್ಯರಿಗೆ ನೀಡಿದರು. ಇದು ನಮ್ಮೊಳಗಿರುವ ಅಂತರ್ಯಾಮಿ ಭಗವಂತನ ಅರಿವು ಕೊಡುವ ಶ್ರೇಷ್ಠ ಗ್ರಂಥವಾಗಿರುವುದರಿಂದ, ಶುಕಾಚಾರ್ಯರು ಇದನ್ನು ಪರೀಕ್ಷಿತನಿಗೆ ಉಪದೇಶಿಸಲು ಆಯ್ಕೆ ಮಾಡಿಕೊಂಡರು.

ತಸ್ಮಾತ್ ಸರ್ವಾತ್ಮನಾ ರಾಜನ್ ಹರಿಃ ಸರ್ವತ್ರ ಸರ್ವದಾ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯೋ ಭಗವಾನ್ನೃಣಾಮ್ ॥೩೬॥

ಈ ಅಧ್ಯಾಯದ ಪ್ರಾರಂಭದಲ್ಲಿ ಹೇಳಿರುವ ಮಾತನ್ನು ಶುಕಾಚಾರ್ಯರು ಇಲ್ಲಿ ಉಪಸಂಹಾರ ಮಾಡುತ್ತಿದ್ದಾರೆ. ನಾವು ಎಲ್ಲಾ ಕಾಲದಲ್ಲಿ, ಎಲ್ಲಾ ದೇಶದಲ್ಲಿ, ಎಲ್ಲಾ ಬಗೆಯಿಂದ ಮಾಡಬೇಕಾಗಿರುವುದು ಏನೆಂದರೆ: ಸದಾ ಭಗವಂತನ ಬಗೆಗೆ ಕೇಳುವುದು(ತಿಳಿದವರಿಂದ/ಗುರುಮುಖದಿಂದ), ಸದಾ ಭಗವಂತನ ಸ್ಮರಣೆ ಮಾಡುವುದು ಹಾಗೂ ನಮ್ಮಲ್ಲಿರುವ ಜ್ಞಾನವನ್ನು ಶಿಷ್ಯರಿಗೆ ಕೊಡುವುದು.

ಜೀವನದ ದೊಡ್ಡ ತಪಸ್ಸು ಎಂದರೆ ನಿರಂತರ ಅಧ್ಯಯನ; ಆ ಅಧ್ಯಯನ ಮಾಡಿ ನಾವು ಏನನ್ನು ಜೀರ್ಣಿಸಿಕೊಂಡಿದ್ದೇವೋ, ಅದನ್ನು ಇನ್ನೊಬ್ಬರಿಗೆ ಕೊಡಬೇಕು. ನಾವು ಗಳಿಸಿದ ಜ್ಞಾನವನ್ನು ಇನ್ನೊಬ್ಬರಿಗೆ ಕೊಡದೇ ಬದುಕುವುದು ಲೋಭತನವಾಗುತ್ತದೆ. ಜ್ಞಾನಲೋಭ ಧನಲೋಭಕ್ಕಿಂತ ಕೆಟ್ಟದ್ದು. ಜ್ಞಾನಿಗಳು ತಮ್ಮೊಳಗಿರುವ

ಜ್ಞಾನವನ್ನು ಸಮಾಜಕ್ಕೆ ಕೊಡದೇ ಇದ್ದರೆ, ಸಮಾಜ ಆ ಜ್ಞಾನದಿಂದ ವಂಚಿತವಾಗಿ ಅಜ್ಞಾನದ ದಾರಿದ್ರ್ಯದಲ್ಲಿ ಮುಳುಗುತ್ತದೆ. ಹೀಗಾಗಿ ಮೊದಲು ಕೇಳಬೇಕು, ಕೇಳಿದ್ದನ್ನು ತಿಳಿದುಕೊಳ್ಳಬೇಕು ಮತ್ತು ತಿಳಿದುಕೊಂಡಿದ್ದನ್ನು ಸಮಾಜಕ್ಕೆ ಹಂಚಬೇಕು.

ಜ್ಞಾನವನ್ನು ಹಂಚಬೇಕು ಎಂದು ಹೇಳಿದಾಗ ನಮಗೊಂದು ಸಮಸ್ಯೆ ಬರುತ್ತದೆ. ಬ್ರಹ್ಮಸೂತ್ರದಲ್ಲಿ ವೇದವ್ಯಾಸರು ಹೇಳಿರುವಂತೆ: ***ಓಂ ಅನಾಮಿಷ್ಕುರ್ವನ್ನನ್ವಯಾತ್ ಓಂ ॥೪೯-೪೮೨॥*** ಅಂದರೆ: ಜ್ಞಾನ ಎಲ್ಲಿ ದುರುಪಯೋಗವಾಗುವ ಸಾಧ್ಯತೆ ಇದೆಯೋ ಅಲ್ಲಿ ಅದನ್ನು ಆವಿಷ್ಕಾರ ಮಾಡಬಾರದು. ಇದನ್ನೇ ಶ್ರೀಕೃಷ್ಣ ಗೀತೆಯಲ್ಲಿ ಹೀಗೆ ಹೇಳಿದ್ದಾನೆ: ***ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ । ನಚಾಶುಶ್ರೂಷವೇ ವಾಚ್ಯಂ ನಚ ಮಾಂ ಯೋSಭ್ಯಸೂಯತಿ ॥೧೮-೬೭॥*** ಅಂದರೆ: "ಇದನ್ನು ನೇಮದ ನಿಷ್ಠೆ ಇರದವರಿಗೆ ಹೇಳಬೇಡ. ಭಕ್ತಿ ಇರದವನಿಗೆ ಎಂದೂ ಹೇಳಬೇಡ. ಕೇಳುವಾಸೆ ಇರದವನಿಗೂ ಹೇಳಬೇಡ. ನನ್ನ ಬಗೆಗೆ ಕಿಚ್ಚು ಪಡುವವನಿಗಂತೂ ಹೇಳಲೇಬೇಡ" ಎಂದರ್ಥ. ಈ ಎಲ್ಲಾ ವಿಷಯವನ್ನು ಕೇಳಿದಾಗ ಜ್ಞಾನವನ್ನು ಯಾರಿಗೆ ಹೇಳಬೇಕು ಮತ್ತು ಯಾರಿಗೆ ಹೇಳಬಾರದು ಎನ್ನುವ ಸಮಸ್ಯೆ ಎದುರಾಗುತ್ತದೆ. ಈ ಎಲ್ಲಾ ಕಾರಣದಿಂದ ಒಂದು ಕಾಲದಲ್ಲಿ ವೇದಾಂತವನ್ನು ಸಾರ್ವಜನಿಕವಾಗಿ ಬಿಚ್ಚಿಡಬಾರದು, ಅದನ್ನು ರಹಸ್ಯವಾಗಿಡಬೇಕು ಎನ್ನುವ ಅಭಿಪ್ರಾಯ ಹೆಚ್ಚಾಗಿ ಬೆಳೆಯಿತು. ಇದರ ಪರಿಣಾಮ: ಕಾಲಕ್ರಮೇಣ ಮುಚ್ಚಿಟ್ಟ ಜ್ಞಾನವನ್ನು ತೆರೆಯುವವರೇ ಇಲ್ಲವಾಯಿತು. ಇಂದು ಆಧ್ಯಾತ್ಮಿಕ ಗ್ರಂಥಗಳಿಗೆ ಆರತಿ ಮಾಡಿ ಕುಂಕುಮ ಹಚ್ಚಿ ಮುಚ್ಚಿಡುವವರೇ ಹೆಚ್ಚಾಗಿದ್ದಾರೆ. ಈ ಕಾರಣದಿಂದ ನಾವು ಮುಚ್ಚಿಟ್ಟ ಈ ಅಮೂಲ್ಯ ಜ್ಞಾನವನ್ನು ತೆರೆದು ಆಯ್ಕೆ ಮಾಡಿ ಕೊಡುವ ಕೆಲಸ ಮಾಡಬೇಕಾಗಿದೆ.

ಜ್ಞಾನವನ್ನು ಯಾರಿಗೆ ಕೊಡಬೇಕು ಮತ್ತು ಯಾರಿಗೆ ಕೊಡಬಾರದು ಎನ್ನುವುದನ್ನು ವಿದ್ಯಾದೇವತೆ ಜ್ಞಾನಿಯಲ್ಲಿ ಹೇಳಿದ ಮಾತಿನಿಂದ ತಿಳಿಯಬಹುದು. ಆಕೆ ಹೇಳುತ್ತಾಳೆ: ***ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾಮ್ ಸೇವಧಿಸ್ತೇ'ಹಮಸ್ಮಿ.*** "ನಾನು ನಿನ್ನ ನಿಧಿ, ನಿನ್ನಲ್ಲಿರುವ ಈ ಕೊಪ್ಪರಿಗೆಯನ್ನು ಎಲ್ಲೆಲ್ಲೋ ಚೆಲ್ಲಿ ಹಾಳು ಮಾಡಬೇಡ" ***ಅನಾರ್ಯಕಾಯ ಅನೃತವೇ ಶಠಾಯ ಮಾಸ್ಮಭ್ರೂಯಾಃ ಋಜವೇ ಬ್ರೂಹಿನಿತ್ಯಂ.*** "ಇನ್ನೊಬ್ಬರಿಗೆ ಟೋಪಿ ಹಾಕುವುದಕ್ಕಾಗಿಯೇ ವೇದಾಂತ ವಿದ್ಯೆಯನ್ನು ಕಲಿಯಬಯಸುವ ದುರ್ಜನರಿಗೆ; ನೇರ ನಡೆ-ನುಡಿ ಇಲ್ಲದ, ಇನ್ನೊಬ್ಬರಿಗೆ ಮೋಸಮಾಡುವುದಕ್ಕಾಗಿ ವೇದಾಂತ ಕಲಿಯಬಯಸುವವರಿಗೆ; ಯಾವ ಸತ್ಯವನ್ನೂ ಒಪ್ಪದ, ಅಸಭ್ಯ-ಅಪ್ರಮಾಣಿಕ ಮೊಂಡರಿಗೆ ವಿದ್ಯೆಯನ್ನು ಕೊಡಬೇಡ. ಕೇವಲ ಪ್ರಾಮಾಣಿಕರಿಗೆ ಮತ್ತು ತಿಳಿಯಬೇಕು ಎನ್ನುವ ಕಳಕಳಿ ಉಳ್ಳವರಿಗೆ ಅಧ್ಯಾತ್ಮ ವಿದ್ಯೆಯನ್ನು ಕೊಡು" ಎಂದು. ಇದರಿಂದ ನಮಗೆ ತಿಳಿಯುವುದೇನೆಂದರೆ: ಭಗವಂತನ ಬಗೆಗೆ ಯಾರೂ ಕೇಳಬಾರದು ಎನ್ನುವ ನಿಯಮವಿಲ್ಲ. ಮಾನವ ಜನ್ಮ ಇರುವುದೇ ಭಗವಂತನ ಅರಿವಿಗಾಗಿ. ಹೀಗಾಗಿ ಗಂಡಸು-ಹೆಂಗಸು, ಬ್ರಾಹ್ಮಣ-ಕ್ಷತ್ರೀಯ ಎನ್ನುವ ಭೇದ ಎಣಿಸದೇ, ಯಾರಿಗೆ ಭಗವಂತನನ್ನು ತಿಳಿಯಬೇಕು ಎನ್ನುವ ಕಳಕಳಿ ಇದೆ ಅವರಿಗೆ ಜ್ಞಾನ ದಾನ ಮಾಡಬೇಕು.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ದ್ವಿತೀಯೋSಧ್ಯಾಯಃ ॥

ಭಾಗವತ ಮಹಾಪುರಾಣದ ಎರಡನೇ ಸ್ಕಂಧದ ಎರಡನೇ ಅಧ್ಯಾಯ ಮುಗಿಯಿತು

*********

# ತೃತಿಯೋSಧ್ಯಾಯಃ

## ಐಹಿಕ ಕಾಮನೆಗಳ ಸಿದ್ಧ್ಯಾರ್ಥಕ್ಕಾಗಿ ದೇವತೆಗಳ ಅಂತರ್ಯಾಮಿ ಭಗವಂತನ ಚಿಂತನೆ

ಸಾವನ್ನು ಎದುರು ನೋಡುತ್ತಿರುವ ಪರೀಕ್ಷಿತನೊಂದಿಗೆ ಕುಳಿತು ಶುಕಾಚಾರ್ಯರಿಂದ ಭಾಗವತ ಉಪದೇಶವನ್ನು ಕೇಳುತ್ತಿರುವ ನಿಮಗೆ ಈ ಹಂತದಲ್ಲಿ ಒಂದು ಪ್ರಶ್ನೆ ಬರಬಹುದು. ಅದೇನೆಂದರೆ: "ಪರೀಕ್ಷಿತ ಇನ್ನು ಏಳು ದಿನಗಳಲ್ಲಿ ದೇಹತ್ಯಾಗ ಮಾಡಿ ಹೊರಟು ಹೋಗುತ್ತಾನೆ, ಆದ್ದರಿಂದ ಆತನಿಗೆ ಯಾವುದೇ ಐಹಿಕ ಕಾಮನೆಗಳಿಲ್ಲ. ಆದರೆ ಐಹಿಕ ಕಾಮನೆಗಳೊಂದಿಗೆ ಬದುಕಬೇಕು ಎಂದುಕೊಂಡಿರುವ ನಮಗೆ ಶುಕಾಚಾರ್ಯರ ಸಂದೇಶವೇನು" ಎಂದು. ಬನ್ನಿ, ಈ ನಮ್ಮ ಪ್ರಶ್ನೆಗೆ ಶುಕಾಚಾರ್ಯರ ಉತ್ತರವೇನೆಂದು ಅವರ ಬಾಯಿಂದಲೇ ಕೇಳೋಣ.

**ಶ್ರೀಶುಕ ಉವಾಚ--**

ಬ್ರಹ್ಮವರ್ಚಸಕಾಮಸ್ತು ಯಜೇತ ಬ್ರಹ್ಮಣಸ್ಪತಿಮ್ ।
ಇಂದ್ರಮಿಂದ್ರಿಯಕಾಮಸ್ತು ಪ್ರಜಾಕಾಮಃ ಪ್ರಜಾಪತೀನ್ ॥೦೨॥

ಇಲ್ಲಿ ಶುಕಾಚಾರ್ಯರು ಕಾಮನೆಗಳಲ್ಲಿ ಒಳ್ಳೆಯ ಕಾಮನೆಗಳ ಕುರಿತು ಹೇಳುವುದನ್ನು ಕಾಣುತ್ತೇವೆ. ನಾವು ಯಾವುದನ್ನೂ ಬಯಸಲೇಬಾರದು ಎಂದೇನೂ ಇಲ್ಲ. ಕಾಮನೆಗಳಲ್ಲಿ ಒಳ್ಳೆಯ ಕಾಮನೆಗಳೂ ಇವೆ. ಹಾಗಾಗಿ ಅಂತಹ ಒಳ್ಳೆಯ ಕಾಮನೆಗಳಲ್ಲಿ ಬ್ರಹ್ಮವರ್ಚಸ್ಸು, ಇಂದ್ರಿಯಪಾತವ ಮತ್ತು ಪ್ರಜಾಕಾಮದ ಕುರಿತು ಈ ಶ್ಲೋಕದಲ್ಲಿ ಶುಕಾಚಾರ್ಯರು ವಿವರಿಸುವುದನ್ನು ಕಾಣುತ್ತೇವೆ.

ಇಂದ್ರಿಯನಿಗ್ರಹ ಮಾಡಿ, ವೇದದ ಮೂಲಕ ಭಗವಂತನ ಅರಿವನ್ನು ಪಡೆದಾಗ, ಸಹಜವಾಗಿ ಮುಖದಲ್ಲಿ ತೇಜಸ್ಸು ಮೂಡುತ್ತದೆ. ಇದನ್ನು ಬ್ರಹ್ಮವರ್ಚಸ್ಸು ಎನ್ನುತ್ತಾರೆ. ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಈ ರೀತಿ ವೇದದ ರಹಸ್ಯವನ್ನು ತಿಳಿದು, ಬ್ರಹ್ಮವರ್ಚಸ್ವಿಯಾಗಬೇಕು ಎನ್ನುವ ಕಾಮನೆ ಉಳ್ಳವರು ಬೃಹಸ್ಪತಿಯ ಅನುಗ್ರಹ ಪಡೆಯಬೇಕು" ಎಂದು. ಸ್ಥೂಲವಾಗಿ ನೋಡಿದರೆ ಬೃಹಸ್ಪತಿ ಎಂದರೆ ದೇವತೆಗಳ ಗುರು, ನಮ್ಮ ಬುದ್ಧಿಯ ದೇವತೆ. ಆದರೆ ಸೂಕ್ಷ್ಮವಾಗಿ ನೋಡಿದರೆ ಬೃಹಸ್ಪತಿ ಎಂದರೆ ಬೃಹತೀ-ಪತಿ. ಅಂದರೆ ವೇದಮಾನಿನಿ ಭಾರತೀ-ಪತಿ. ಹಾಗಾಗಿ ವೇದ ನಮಗೆ ಅರ್ಥವಾಗಿ ನಾವು ಬ್ರಹ್ಮವರ್ಚಸ್ವಿಯಾಗಬೇಕು ಎಂದರೆ ವಿಜ್ಞಾನಮಯಕೋಶದ ನಿಯಾಮಕರಾದ ಬ್ರಹ್ಮ-ವಾಯುವಿನ ಅನುಗ್ರಹ ಪಡೆಯಬೇಕು. ಬ್ರಹ್ಮಾಂಡದಲ್ಲಿ ವಿಜ್ಞಾನಮಯಕೋಶದ ನಿಯಾಮಕ ಚತುರ್ಮುಖ ಬ್ರಹ್ಮನಾದರೆ, ಪಿಂಡಾಂಡದಲ್ಲಿ ಪ್ರಾಣದೇವರು ವಿಜ್ಞಾನಮಯಕೋಶದ ನಿಯಾಮಕರು. ಹೀಗಾಗಿ ವಿದ್ಯಾದೇವತೆ ನಮಗೆ ಒಲಿಯಬೇಕಾದರೆ ಮತ್ತು ನಮ್ಮ ವಿಜ್ಞಾನಮಯಕೋಶ ತೆರೆದುಕೊಳ್ಳಬೇಕಾದರೆ ನಾವು ಭಾರತೀ-ಪತಿ ಮುಖ್ಯಪ್ರಾಣನಿಗೆ ಹಾಗೂ ಆತನ ಅಂತರ್ಗತ ಮತ್ತು ಅತ್ಯಂತ ಶ್ರೇಷ್ಠನಾದ, ಸರ್ವದೇವತೆಗಳ ಒಡೆಯನಾದ ಭಗವಂತನಿಗೆ ಶರಣಾಗಬೇಕು.

'ಇಂದ್ರಿಯಪಾತವ' ಇನ್ನೊಂದು ಉತ್ತಮವಾದ ಬಯಕೆ. ನಮ್ಮ ಕಣ್ಣು-ಕಿವಿ ಇತ್ಯಾದಿ ಇಂದ್ರಿಯಗಳು ಚೆನ್ನಾಗಿರಬೇಕು ಎನ್ನುವ ಬಯಕೆಯೇ ಇಂದ್ರಿಯಪಾತವ. ನಾನು ಬೇರೆಬೇರೆ ಪುಣ್ಯಕ್ಷೇತ್ರಗಳಿಗೆ ಹೋಗಬೇಕು, ಆ ಕ್ಷೇತ್ರಗಳಲ್ಲಿನ

ಭಗವಂತನ ಮೂರ್ತಿಯನ್ನು ಕಣ್ಣಾರೆ ನೋಡಬೇಕು; ವೇದ ಉಪನಿಷತ್ತುಗಳನ್ನು ಓದಬೇಕು; ಜ್ಞಾನಿಗಳ ಮಾತನ್ನು ಕೇಳಬೇಕು; ಒಳ್ಳೆಯ ಮಾತನ್ನಾಡಬೇಕು; ಇತ್ಯಾದಿ ಬಯಕೆಗಳು ಶ್ರೇಷ್ಠ ಬಯಕೆಗಳು. ಈ ರೀತಿಯ ಬಯಕೆಯನ್ನು ವ್ಯಕ್ತಪಡಿಸುವುದನ್ನು ನಾವು ಶಾಂತಿಮಂತ್ರದ ಪ್ರಾರ್ಥನೆಯಲ್ಲಿ ಕಾಣುತ್ತೇವೆ. *ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ, ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿರ್ವ್ಯಶೇಮ ದೇವಹಿತಂಯದಾಯುಃ ॥* ಇದು ಅಧ್ಯಯನಕ್ಕೆ ಮೊದಲು ಗುರು-ಶಿಷ್ಯರು ಪೂಜಾರ್ಹರಾದ ತಮ್ಮ ಇಂದ್ರಿಯಾಭಿಮಾನಿ ದೇವತೆಗಳಲ್ಲಿ ಮಾಡುವ ಪ್ರಾರ್ಥನೆ. ಅವರು ಹೇಳುತ್ತಾರೆ: "ನೀವು ನಮ್ಮ ಕಿವಿ ಒಳ್ಳೆಯದನ್ನು ಕೇಳುವಂತೆ, ನಮ್ಮ ಕಣ್ಣು ಒಳ್ಳೆಯದನ್ನು ನೋಡುವಂತೆ ಅನುಗ್ರಹಿಸಿ; ನಾವು ಬದುಕ್ಕಿದ್ದಾಗ ನಮಗೆ ಆರೋಗ್ಯವಂತ ಮತ್ತು ಗಟ್ಟಿಮುಟ್ಟಾದ ಇಂದ್ರಿಯ ಮತ್ತು ಶರೀರವನ್ನು ಕೊಡಿ" ಎಂದು. ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಇಂತಹ ಇಂದ್ರಿಯಪಾತವ ಪಡೆಯಲು ಇಂದ್ರನನ್ನು ಪ್ರಾರ್ಥಿಸಿ" ಎಂದು. ನಮಗೆ ತಿಳಿದಂತೆ ನಮ್ಮ ಬಾಹ್ಯೇನ್ದ್ರಿಯಗಳ ಅಭಿಮಾನಿ ದೇವತೆಗಳಲ್ಲಿ ಹಿರಿಯ ದೇವೇಂದ್ರ. ಹೀಗಾಗಿ ಇಂದ್ರಿಯಪಾತವ ಬೇಕು ಎಂದರೆ ಇಂದ್ರಿಯಾಭಿಮಾನಿಗಳಲ್ಲೇ ಶ್ರೇಷ್ಠನಾದ ಇಂದ್ರನ ಉಪಾಸನೆ ಮಾಡಬೇಕು. ಇಲ್ಲಿ ಇಂದ್ರ ಎಂದರೆ ಕೇವಲ ಇಂದ್ರನಲ್ಲ. ಆಚಾರ್ಯ ಮಧ್ವರು ತೈತ್ತಿರೀಯ ಭಾಷ್ಯದಲ್ಲಿ ಹೇಳುವಂತೆ: '*ಪ್ರದ್ಯುಮ್ನಂಚ ಇಂದ್ರ ನಾಮಕಃ*'. ಆದ್ದರಿಂದ ಇಲ್ಲಿ 'ಇಂದ್ರ' ಎಂದರೆ ದೇವೇಂದ್ರ ಹಾಗೂ ಆತನ ಅಂತರ್ಗತನಾದ ಭಗವಂತ.

ಇಂದ್ರಿಯ ಕಾಮನೆ ಎನ್ನುವಲ್ಲಿ ಮತ್ತೊಂದು ವಿಶಿಷ್ಟವಾದ ಕಾಮನೆ ಪ್ರಜಾಕಾಮನೆ. ನಾವು ಮಾಡಿದ ಅಧ್ಯಯನವನ್ನು ಮುಂದುವರಿಸಿಕೊಂಡು ಹೋಗುವ ಒಂದು ತಲೆಮಾರು ಬೇಕು ಎಂದು ಬಯಸುವುದು ಪ್ರಜಾಕಾಮ. ಅದು ಮಗನಾಗಿರಬಹುದು, ಮಗಳಾಗಿರಬಹುದು ಅಥವಾ ಶಿಷ್ಯ/ವಿದ್ಯಾರ್ಥಿಯಾಗಿರಬಹುದು. ಪ್ರಜಾಸಂತತಿಯ ಬೆಳವಣಿಗೆಗೆ ಕಾರಣೀಭೂತರು ಒಂಬತ್ತು ಮಂದಿ ಪ್ರಜಾಪತಿಗಳು. ಇವರಲ್ಲಿ ಹಿರಿಯ ಹತ್ತನೇ ಕಕ್ಷ್ಯದಲ್ಲಿರುವ ಧಕ್ಷ. ನಂತರ ಹದಿನೈದನೇ ಕಕ್ಷ್ಯದಲ್ಲಿರುವ ಭೃಗು ಮತ್ತು ಹದಿನಾರನೇ ಕಕ್ಷ್ಯೆಯಲ್ಲಿರುವ ಸಪ್ತರ್ಷಿಗಳು(ಕಾಶ್ಯಪ, ಅತ್ರಿ, ವಸಿಷ್ಠ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ಭಾರದ್ವಾಜ). ಈ ನವ ಪ್ರಜಾಪತಿಗಳು ಇಡೀ ಪ್ರಪಂಚದ ಸಂತತಿಯ ಮೂಲಪುರುಷರು ಅಥವಾ ಆದಿಮಾನವರು. ಇಷ್ಟೇ ಅಲ್ಲದೆ ದಕ್ಷಪ್ರಜಾಪತಿ ನಮ್ಮ ಜನನೇಂದ್ರಿಯದ ಅಭಿಮಾನಿ ದೇವತೆ ಕೂಡಾ ಹೌದು. ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಪ್ರಜಾಕಾಮಕ್ಕಾಗಿ ಪ್ರಜಾಪತಿಯರನ್ನು ಪೂಜೆಮಾಡು" ಎಂದು. ಪ್ರಜಾಪತಿಗಳು ಒಂಬತ್ತಾದರೂ ಕೂಡಾ, ಮುಖ್ಯ ಪ್ರಜಾಪತಿ ಬ್ರಹ್ಮ-ವಾಯು ಹಾಗೂ ಮಹಾಪ್ರಜಾಪತಿ ಆ ಭಗವಂತ. ಹಾಗಾಗಿ ಪ್ರಜಾಕಾಮ ಸಿಧ್ಯಾರ್ಥಕ್ಕಾಗಿ ಈ ಎಲ್ಲಾ ನವ ಪ್ರಜಾಪತಿಗಳಲ್ಲಿ ಭಗವಂತನನ್ನು ಕಂಡು ಆರಾಧನೆ ಮಾಡಬೇಕು.

ದೇವೀಂ ಮಾಯಾಂ ತು ಶ್ರೀಕಾಮಃ ತೇಜಸ್ಕಾಮೋ ವಿಭಾವಸುಮ್ ।
ವಸುಕಾಮೋ ವಸೂನ್ ರುದ್ರಾನ್ ವೀರ್ಯಕಾಮಸ್ತು ವೀರ್ಯದಾನ್ ॥೦೩॥

ಮುಂದುವರಿದು ಶುಕಾಚಾರ್ಯರು ಹೇಳುತ್ತಾರೆ: "ಜೀವನದಲ್ಲಿ ಉನ್ನತಿಕೆಯನ್ನು ಪಡೆಯಲು ಮಾಯಾ-ದೇವಿ ಶ್ರೀಲಕ್ಷ್ಮಿಯನ್ನು ಆರಾಧಿಸು" ಎಂದು. ಇಲ್ಲಿ ಉನ್ನತಿಕೆ ಎಂದರೆ ಅದು ಜ್ಞಾನದ ಉನ್ನತಿಕೆ ಇರಬಹುದು, ಸಂಪತ್ತಿನಲ್ಲಿ ಉನ್ನತಿಕೆ ಇರಬಹುದು ಅಥವಾ ಇತರೆ ಯಾವುದೇ ಉನ್ನತಿಕೆ ಇರಬಹುದು. ಒಟ್ಟಿನಲ್ಲಿ ಸಮೃದ್ಧಿಯನ್ನು ಪಡೆಯಲು ಲಕ್ಷ್ಮಿಯ ಉಪಾಸನೆ ಜೊತೆಗೆ ಲಕ್ಷ್ಮೀಪತಿ ನಾರಾಯಣನ ಉಪಾಸನೆ ಮಾಡಬೇಕು.

ಮಹಾತೇಜಸ್ವಿಯಾಗಬೇಕು ಎಂದರೆ ಅಗ್ನಿಯನ್ನು ಆರಾಧಿಸಬೇಕು. ಅಗ್ನಿ, ಅಗ್ನಿಯಲ್ಲಿ ಪ್ರಾಣಾಗ್ನಿ ಮತ್ತು ಪ್ರಾಣಾಗ್ನಿಯಲ್ಲಿ ಅಗ್ನಿನಾರಾಯಣನನ್ನು ಆರಾಧಿಸುವುದರಿಂದ ತೇಜಸ್ವೀ ಎಂದು ಖ್ಯಾತಿಗಳಿಸಬಹುದು. ಇನ್ನು ಜ್ಞಾನ ಕಾರ್ಯಕ್ಕೆ, ವಿದ್ಯಾರ್ಥಿ ಸೇವೆ ಇತ್ಯಾದಿ ಪುಣ್ಯಕಾರ್ಯಕ್ಕೆ ದುಡ್ಡು ಬೇಕು ಎನ್ನುವ ಕಾಮನೆ ಇದ್ದರೆ, ಅದಕ್ಕೆ ವಸುಗಳನ್ನು ಆರಾಧನೆ ಮಾಡಬೇಕು. ವಸುಗಳು ಒಟ್ಟಿಗೆ ಎಂಟು ಮಂದಿ. ಅವರೆಂದರೆ: ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸು ಮತ್ತು ವಿಭಾವಸು(ದ್ಯುವಸು). ಇವರಲ್ಲಿ ಅಗ್ನಿಯೇ ಪ್ರಧಾನ ವಸು. ಈತನಿಗೆ ಅನೇಕ ನಾಮಗಳು: ವಿಭಾವಸು, ವೈಶ್ವಾನರ, ವಹ್ನಿ, ಜಾತವೇದ, ಹುತಾಶನ, ಪಾವಕ, ಅನಲ, ದಹನ, ಇತ್ಯಾದಿ.

ಪೌರುಷ ಅಥವಾ ಪರಾಕ್ರಮಕ್ಕಾಗಿ ರುದ್ರರನ್ನು ಆರಾಧನೆ ಮಾಡಬೇಕು. ರುದ್ರರು ಒಟ್ಟಿಗೆ ಹನ್ನೊಂದು ಮಂದಿ. ಅವರಲ್ಲಿ ಶಿವ ಪ್ರಧಾನ ರುದ್ರ. ದುಷ್ಟರನ್ನು ಬಗ್ಗುಬಡಿಯುವ ಶೌರ್ಯವನ್ನು ಕೊಡುವ ವಿಶೇಷ ಶಕ್ತಿ ರುದ್ರ ಶಕ್ತಿ. ರುದ್ರನಲ್ಲಿ ಪ್ರಾಣಶಕ್ತಿಯನ್ನೂ, ನರಸಿಂಹನನ್ನೂ ಮತ್ತು ಪ್ರಳಯಕಾಲದಲ್ಲಿ ಎಲ್ಲವನ್ನೂ ಸುಡುವ ಸಂಕರ್ಷಣನನ್ನೂ ಉಪಾಸನೆ ಮಾಡುವುದರಿಂದ ಇಂತಹ ಪೌರುಷ ಸಿಗುತ್ತದೆ.

ಆಧಿಪತ್ಯಕಾಮಃ ಸರ್ವೇಷಾಂ ಯಜೇತ ಪರಮೇಷ್ಠಿನಮ್ ॥೦೬॥

ಎಲ್ಲರನ್ನೂ ಆಳುವ ತಾಕತ್ತು, ಜನಾಂಗದ ನಾಯಕನಾಗಬೇಕು ಎನ್ನುವ ಅಪೇಕ್ಷೆ ಉಳ್ಳವನು ಎಲ್ಲಾ ದೇವತೆಗಳ ಅಧಿಪತಿಯಾದ ಚತುರ್ಮುಖ ಬ್ರಹ್ಮನ ಅಂತರ್ಗತನಾದ ಭಗವಂತನ ಉಪಾಸನೆ ಮಾಡಬೇಕು. [ಎಲ್ಲಾ ಸಂದರ್ಭದಲ್ಲೂ ನಾವು ನೆನಪಿಡಬೇಕಾಗಿರುವುದು ಏನೆಂದರೆ- ಆರಾಧನೆ ಮಾಡಿದ ತಕ್ಷಣ ಅಪೇಕ್ಷೆ ಈಡೇರುವುದಿಲ್ಲ. ಅದಕ್ಕೆ ಕಾಲ ಪಕ್ವವಾಗಬೇಕು. ಆಗ ಯೋಗ್ಯತೆಗೆ ತಕ್ಕಂತೆ ಫಲ ಸಿಗುತ್ತದೆ]

ವಿದ್ಯಾಕಾಮಸ್ತು ಗಿರಿಶಂ ದಾಂಪತ್ಯಾರ್ಥ ಉಮಾಂ ಸತೀಮ್ ॥೦೭॥

ವಿದ್ಯೆ ಬೇಕು ಎನ್ನುವ ಅಪೇಕ್ಷೆ ಉಳ್ಳವನು ಗಿರೀಶನನ್ನು ಆರಾಧಿಸಬೇಕು. ಗಿರೀಶ ಎಂದರೆ ಶಿವ. ಉಪನಿಷತ್ತಿನಲ್ಲಿ ಹೇಳುವಂತೆ ನಮ್ಮ ದೇಹದಲ್ಲಿ ಮುಖ್ಯವಾಗಿ ಐದು ಗಿರಿಗಳಿವೆ. ಅವುಗಳೆಂದರೆ: ಚಕ್ಷು, ಶ್ರೋತ್ರಂ, ಮನೋ, ವಾಕ್, ಪ್ರಾಣ. ಇವು ನಮ್ಮ ಜ್ಞಾನ ಸಾಧನಗಳು. ಶಾಸ್ತ್ರಗಳಲ್ಲಿ ಹೇಳುವಂತೆ ದೃಷ್ಟವ್ಯಃ, ಶ್ರೋತವ್ಯಃ, ಮಂತವ್ಯಃ. ಇವು ಜ್ಞಾನದ ಮೂರು ಬಾಗಿಲುಗಳು. ನೋಡಿ-ಕೇಳಿ-ಮನನಮಾಡಿ ತಿಳಿಯುವುದು, ತಿಳಿದದ್ದನ್ನು ಇನ್ನೊಬ್ಬರಿಗೆ ಹೇಳುವುದು. ಇವೆಲ್ಲವನ್ನೂ ಮಾಡಲು ಬದುಕಿರಬೇಕು. ಅದಕ್ಕೆ ಪ್ರಾಣ(ಉಸಿರು) ಬೇಕು. ಇಂತಹ ವಿಶಿಷ್ಟವಾದ ಐದು ಗಿರಿಗಳಲ್ಲಿರುವ ಶಿವ ಗಿರೀಶ. ಸದ್ಯೋಜಾತ, ವಾಮದೇವ, ತತ್ಪುರುಷ, ಅಘೋರ ಮತ್ತು ಈಶಾನ ಇವು ಶಿವನ ಐದು ರೂಪಗಳು. ಇಂತಹ ಶಿವನನ್ನು ಮತ್ತು ಆತನ ಅಂತರ್ಯಾಮಿ ಭಗವಂತನನ್ನು ಆರಾಧಿಸುವುದರಿಂದ ವಿದ್ಯೆಯ ಅಪೇಕ್ಷೆ ಕೈಗೂಡುತ್ತದೆ.

ಮದುವೆ ಆಗುವುದಕ್ಕೋಸ್ಕರ ಮತ್ತು ಮದುವೆಯಾದಮೇಲೆ ಅನ್ಯೋನ್ಯ ದಾಂಪತ್ಯ ಪಡೆಯಲು ಶಿವಪತ್ನಿ ಉಮೆ(ಸತೀ)ಯನ್ನು ಆರಾಧಿಸಬೇಕು. ನಮಗೆ ತಿಳಿದಂತೆ ದಾಂಪತ್ಯದಲ್ಲಿ ವಿರಸ ನಮ್ಮ ಇಡೀ ಜೀವನದ ಸಾಧನೆಯನ್ನು ಮಣ್ಣುಪಾಲು ಮಾಡಬಹುದು. ಒಬ್ಬನ ಸಾಧನೆಗೆ ಇನ್ನೊಬ್ಬರು ಪೂರಕವಾಗಿಲ್ಲದೇ ಇದ್ದರೆ ಜೀವನ ನಿತ್ಯ ನರಕವಾಗುತ್ತದೆ. ಈ ರೀತಿ ಆಗದೇ, ದಾಂಪತ್ಯದಲ್ಲಿ ಸಾಮರಸ್ಯ ಇರಬೇಕು ಎನ್ನುವ ಅಪೇಕ್ಷೆ ಉಳ್ಳವರು

ಉಮೆಯ ಆರಾಧನೆ ಮಾಡಬೇಕು. ಇಲ್ಲಿ ಪಾರ್ವತಿಯ ಉಮೆ ಮತ್ತು ಸತೀ ಎನ್ನುವ ಎರಡು ನಾಮಗಳ ಉಲ್ಲೇಖವನ್ನು ಕಾಣುತ್ತೇವೆ. ಇದು ದಾಂಪತ್ಯದ ಅನ್ಯೋನ್ಯತೆಯ ಶ್ರೇಷ್ಠ ಉದಾಹರಣೆ. ಪಾರ್ವತಿ(ಸತೀ) ದಕ್ಷ ಪ್ರಜಾಪತಿಯ ಮಗಳು. ಒಮ್ಮೆ ದಕ್ಷ ತಾನು ಮಾಡಿದ ಯಜ್ಞದಲ್ಲಿ ಶಿವನನ್ನು ಆಮಂತ್ರಿಸದೇ ಅವಮಾನ ಮಾಡಿದಾಗ, ಅದನ್ನು ಸಹಿಸದ ಸತೀ ಯೋಗಾಗ್ನಿಯಲ್ಲಿ ತನ್ನ ದೇಹತ್ಯಾಗ ಮಾಡುತ್ತಾಳೆ. ನಂತರ ತಾನು ಯಾರನ್ನು ವರಿಸಿದ್ದಳೋ ಆತನನ್ನೇ ಮದುವೆಯಾಗಬೇಕು ಎಂದು ಬಯಸಿ, ಮತ್ತೊಂದು ರೂಪದಲ್ಲಿ ಪರ್ವತರಾಜನ ಮಗಳಾಗಿ(ಉಮೆ) ಬಂದು, ತಪಸ್ಸು ಮಾಡಿ ಶಿವನನ್ನು ವರಿಸುತ್ತಾಳೆ. ಈ ರೀತಿಯ ಅನ್ಯೋನ್ಯತೆ ಪತಿ-ಪತ್ನಿಯಲ್ಲಿರಬೇಕಾದರೆ ಪಾರ್ವತಿಯ ಉಪಾಸನೆ ಮಾಡಬೇಕು. ಇಷ್ಟೇ ಅಲ್ಲದೆ ಮದುವೆ ಆಗದೇ ಇದ್ದಾಗ, ಮದುವೆಯಾಗಲು ಪಾರ್ವತಿ ಆರಾಧನೆ ಮಾಡಬೇಕು. ಇದಕ್ಕಾಗಿ ಜೋತಿಷಿಗಳು ಮದುವೆಯಾಗದೇ ಇದ್ದವರಿಗೆ ಈ ಕೆಳಗಿನ ಸ್ವಯಂವರ ಪಾರ್ವತೀ ಮಂತ್ರವನ್ನು ಜಪಿಸುವಂತೆ ಹೇಳುತ್ತಾರೆ. **[*ಓಂ ಹ್ರೀಂ ಯೋಗಿನಿ ಯೋಗಿನಿ ಯೋಗೇಶ್ವರಿ ಯೋಗಭಯಂಕರಿ ಸಕಲ ಸ್ಥಾವರ ಜಂಗಮಸ್ಯ ಮುಖ ಹೃದಯಂ, ಮಮ-ವಶಂ-ಆಕರ್ಷಯ ಆಕರ್ಷಯ ಸ್ವಾಹಾ ॥ ಸ್ವಯಂವರ ಪಾರ್ವತ್ಯೈ ನಮಃ ॥*]**

**ಧರ್ಮಾರ್ಥಮುತ್ತಮಶ್ಲೋಕಂ ತಂತುಂ ತನ್ವನ್ ಪಿತೃನ್ ಯಜೇತ್ ॥೦೮॥**

ಜೀವನದಲ್ಲಿ ಧರ್ಮಕ್ಕೆ ಚ್ಯುತಿ ಆಗದಂತೆ ನಡೆದುಕೊಳ್ಳಬೇಕು ಎನ್ನುವ ಕಾಮನೆ ಉಳ್ಳವರು ಜಗತ್ತಿನ ಧಾರಕ ಶಕ್ತಿಯಾದ ಭಗವಂತನ ಆರಾಧನೆ ಮಾಡಬೇಕು. ಎಲ್ಲರೂ ಬದುಕಬೇಕು ಹಾಗೂ ಎಲ್ಲರೊಂದಿಗೆ ನಾನೂ ಬದುಕಬೇಕು ಎನ್ನುವುದು ಧರ್ಮ. ಇನ್ನೊಬ್ಬರಿಗೆ ತೊಂದರೆಯಾಗದಂತೆ ಬದುಕುವುದು, ಎಲ್ಲರೂ ಒಂದಾಗಿ ಉನ್ನತಿಕೆಯನ್ನು ಸಾಧಿಸುವುದು-ಧರ್ಮ. ಪದ್ಮಾಪುರಾಣದಲ್ಲಿ ಹೇಳುವಂತೆ: ***ಸ್ಮರ್ತವ್ಯ ಸತತಂ ವಿಷ್ಣುಃ ವಿಸ್ಮರ್ತವ್ಯೋ ನಜಾನಚಿತ್ ಸರ್ವೇ ವಿಧಿ ನಿಷೇಧಾಸ್ಯುಃ ಏತಯೋರ್ ಏವ ಕಿಂಕರಃ.*** ಯಾವ ಕ್ರಿಯೆ ಭಗವಂತನ ಸ್ಮರಣೆಗೆ ಪೂರಕವಾಗುತ್ತದೋ ಅದು ಧರ್ಮ. ಭಗವಂತನನ್ನು ಮರೆತು ನಡೆಯುವ ನಡೆ ಅಧರ್ಮ. ಧರ್ಮದ ಅರಿವು ಬರಲು ಜಗತ್ತಿನ ಧಾರಕ ಶಕ್ತಿಯಾದ ನಾರಾಯಣನನ್ನು ಆರಾಧಿಸಬೇಕು.

ಧರ್ಮದ ನಡೆಯಲ್ಲಿ ನಡೆಯುವಂತಾಗಲು, ಧರ್ಮದ ಪರಂಪರೆಯ ವಂಶ ಮುಂದುವರಿಕೆಗಾಗಿ ಪಿತೃದೇವತೆಗಳನ್ನು ಅವರ ಅಂತರ್ಯಾಮಿ ಭಗವಂತನ ಚಿಂತನೆಯೊಂದಿಗೆ ಆರಾಧನೆ ಮಾಡಬೇಕು.

**ಗ್ರಾಮಕಾಮೋ ಯಜೇತ್ ಸೋಮಮಕಾಮಃ ಪುರುಷಂ ಪುಮಾನ್ ॥೦೯॥**

ಗ್ರಾಮ್ಯಸುಖಕ್ಕಾಗಿ(ವಂಶಾಭಿವೃದ್ಧಿಗೆ ಪೂರಕವಾದ ಲೈಂಗಿಕ ಸ್ವಾಸ್ಥ್ಯ/ಸುಖಕ್ಕಾಗಿ) ಸೋಮನ ಆರಾಧನೆ ಮಾಡಬೇಕು. ಸೋಮ ಎಂದರೆ ಚಂದ್ರ. ***ಸೋಮೋ ಪವಮಾನೋ ದೇವತಾ***-ಚಂದ್ರನ ಅಂತರ್ಯಾಮಿ ಪವಮಾನ. ಪವಮಾನನ ಅಂತರ್ಯಾಮಿ ಭಗವಂತ. ಸೋಮನ ಅಂತರ್ಯಾಮಿ ಭಗವಂತನನ್ನು ಧನ್ವಂತರಿಯಲ್ಲಿ ಹೀಗೆ ವರ್ಣಿಸಿದ್ದಾರೆ: ***ಚಂದ್ರೌಘಕಾಂತಿಂ ಅಮೃತೋರು ಕರೈರ್ಜಗಂತಿ ಸಂಜೀವಯಂತಂ ಅಮಿತಾತ್ಮ ಸುಖಂ ಪರೇಶಮ್। ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ ಶೀತಾಂಶು ಮಂಡಲಗತಂ ಸ್ಮರತಾತ್ಮ ಸಂಸ್ಥಮ್॥೩॥*** ಗ್ರಾಮ್ಯಕಾಮ ಇಷ್ಟಾರ್ಥಸಿದ್ಧಿಗಾಗಿ ಸೋಮನೊಳಗೆ ಸೋಮನಾಗಿರುವ ಪ್ರಾಣ-ನಾರಾಯಣರ ಆರಾಧನೆ ಮಾಡಬೇಕು. ಇದೇ

ರೀತಿ ದೇವರ ಅನುಗ್ರಹ ಪ್ರಾಪ್ತಿಗಾಗಿ ಭಗವಂತನ ಪುರುಷ ರೂಪವನ್ನು(ಪುರುಷಸೂಕ್ತ ಪ್ರತಿಪಾದ್ಯನಾದ ಭಗವಂತನನ್ನು) ಆರಾಧಿಸಬೇಕು.

ಇಲ್ಲಿಯ ತನಕ ನಾವು ಶುಕಾಚಾರ್ಯರಿಂದ ಹೇಗೆ ಬೇರೆಬೇರೆ ದೇವತೆಗಳ ಪ್ರತೀಕದ ಮೂಲಕ ಭಗವಂತನನ್ನು ಆರಾಧಿಸಿ ನಮ್ಮ ಬಯಕೆಗಳನ್ನು ಈಡೇರಿಸಿಕೊಳ್ಳಬಹುದು ಎನ್ನುವುದನ್ನು ನೋಡಿದೆವು. ಈ ಹಂತದಲ್ಲಿ ನಮಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೆ: "ಬೇರೆಬೇರೆ ಬಯಕೆಗಳ ಈಡೇರಿಕೆಗೆ ಬೇರೆಬೇರೆ ದೇವತೆಗಳ ಮೂಲಕವೇ ಹೋಗಬೇಕೇ? ಭಗವಂತನನ್ನೇ ಕೇಳಿಕೊಂಡರೆ ಸಾಲದೇ" ಎಂದು. ಈ ಪ್ರಶ್ನೆಗೆ ಉತ್ತರ ತಿಳಿಯಬೇಕಾದರೆ ವಿಶ್ವನಿಯಾಮಕ ಭಗವಂತನ ವ್ಯವಸ್ಥೆಯ ತಿಳುವಳಿಕೆ ನಮಗಿರಬೇಕು. ಪ್ರಪಂಚದಲ್ಲಿ ಲೌಕಿಕವಾಗಿ ಹೇಗೆ ಆಡಳಿತ ವ್ಯವಸ್ಥೆ ಇರುತ್ತದೋ ಹಾಗೇ, ಶಾಸ್ತ್ರೀಯವಾಗಿ ವಿಶ್ವದಲ್ಲಿ ಒಂದೊಂದು ವಿಭಾಗದ ನಿರ್ವಹಣೆಗಾಗಿ ಒಂದೊಂದು ದೇವತೆಯನ್ನು ಭಗವಂತ ನಿಯಮಿಸಿದ್ದಾನೆ. ಆದ್ದರಿಂದ ನಾವು ಆಯಾ ವಿಭಾಗದ ದೇವತೆಗಳ ಮುಖೇನವೇ ದೇವರನ್ನು ತಲುಪಬೇಕು.  ದೇವತೆಗಳೇ ಭಗವಂತನ ಪರಿವಾರ. ಆ ಪರಿವಾರ ಸಮೇತನಾದ ಭಗವಂತನ ವೈಭವವನ್ನು ನಾವು ಏಕದೇವ ನಿಷ್ಠೆಯಿಂದ, ಅಂತರ್ಯಾಮಿ ಚಿಂತನೆಯಿಂದ ಅನುಸಂಧಾನ ಮಾಡಬೇಕು. ಪರಿವಾರವನ್ನು ನಿರಾಕರಣೆ ಮಾಡಿ ಭಗವಂತನನ್ನು ನೇರ ಅನುಸಂಧಾನ ಮಾಡಿದರೆ ಅದನ್ನು ಭಗವಂತ ಸ್ವೀಕರಿಸಲಾರ. [ಇದಕ್ಕೆ ಅಪವಾದ ಎಂದರೆ ಜ್ಞಾನದಲ್ಲಿ ಎತ್ತರಕ್ಕೇರಿದ ಸಾಧಕರು. ಅವರಿಗೆ ಭಗವಂತನ ಪರಿವಾರದ ಪೂರ್ಣ ಅರಿವಿರುತ್ತದೆ. ಈ ಅರಿವಿನೊಂದಿಗೆ ಅವರು ನೇರ ಭಗವಂತನೊಂದಿಗೆ ಸಂವಹನ ಮಾಡಬಲ್ಲರು]. ಈ ಎಲ್ಲಾ ಕಾರಣಕ್ಕಾಗಿ ಶುಕಾಚಾರ್ಯರು ಭಗವಂತನ ಪರಿವಾರದ ಜೊತೆಗೆ ಅದರ ಒಳಗಿರುವ ಭಗವದ್ ಶಕ್ತಿಯನ್ನು ಉಪಾಸನೆ ಮಾಡು ಎಂದಿದ್ದಾರೆ.

**ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ ।**
**ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್ ॥೧೦॥**

ಭಕ್ತಿಯಲ್ಲಿ ಅತ್ಯಂತ ಶ್ರೇಷ್ಠಭಕ್ತಿ ಎಂದರೆ ಯಾವುದೇ ಕಾಮನೆ ಇಲ್ಲದೆ ದೇವರನ್ನು ಆರಾಧಿಸುವುದು(ಅಕಾಮಃ). ಏಕೆಂದರೆ ಒಂದು ವಸ್ತುವನ್ನು ಬಯಸಿ ದೇವರನ್ನು ಆರಾಧಿಸುವಾಗ, ಅದರಿಂದ ಮುಂದೆ ಒಳಿತಾಗುತ್ತದೋ ಅಥವಾ ಕೆಡುಕಾಗುತ್ತದೋ ಎನ್ನುವ ಜ್ಞಾನ ನಮಗಿರುವುದಿಲ್ಲ. ಇದರಿಂದಾಗಿ ನಾವು ಬಯಸಿ ಪಡೆದ ವಸ್ತುವಿನಿಂದಲೇ ನಮಗೆ ಕೆಟ್ಟದ್ದಾಗುವ ಸಾಧ್ಯತೆಗಳಿವೆ. ಇಷ್ಟೇ ಅಲ್ಲದೆ ನಾವು ಯಾವುದೋ ಒಂದನ್ನು ಅಪೇಕ್ಷಿಸಿ ದೇವರನ್ನು ಆರಾಧಿಸಿದರೆ ಆತ ಅದಷ್ಟನ್ನೇ ಕೊಡುತ್ತಾನೆ. ಏನನ್ನೂ ಬಯಸದೇ ಆರಾಧಿಸಿದರೆ ಆತ ನಮಗೆ ಏನೇನು ಅಗತ್ಯವೋ ಅವೆಲ್ಲವನ್ನೂ ಕೊಡುತ್ತಾನೆ.

ಸರ್ವಕಾಮ ಎಂದರೆ ಲೌಕಿಕ ಉದ್ದೇಶಕ್ಕಾಗಿ ಎಲ್ಲವನ್ನೂ ಬಯಸುವವನು. ಮೋಕ್ಷಕಾಮ ಎಂದರೆ ಮೋಕ್ಷವನ್ನು ಬಯಸಿ ಭಗವಂತನನ್ನು ಆರಾಧಿಸುವವನು. ಅಕಾಮ ಎಂದರೆ ಎಲ್ಲವನ್ನೂ ಭಗವಂತನಿಗಾಗಿ ಮಾಡುತ್ತಿರುವವನು. ಈತ ಮೋಕ್ಷವನ್ನು ಕೂಡಾ ಬಯಸುವುದಿಲ್ಲ. ತೀವ್ರ ಭಕ್ತಿ ಉಳ್ಳ ಮತ್ತು ಬಹಳ ಎತ್ತರಕ್ಕೇರಿದ ಜ್ಞಾನಿಗಳು ಈ ಮೇಲಿನ ಯಾವುದೇ ಗುಂಪಿಗೆ ಸೇರಿದ್ದರೂ ಕೂಡಾ, ದೇವತೆಗಳ ಮುಖೇನ  ಭಗವಂತನನ್ನು ಆರಾಧಿಸದೇ ನೇರವಾಗಿ ಭಗವಂತನಲ್ಲೇ ಶರಣಾಗಿ ಎಲ್ಲವನ್ನೂ ಪಡೆಯಬಲ್ಲರು. ಇವರು ಭಗವಂತನ ಸಮಸ್ತ ಪರಿವಾರದ ಎಚ್ಚರದೊಂದಿಗೆ

ನೇರವಾಗಿ ಪುರುಷಸೂಕ್ತ ಪ್ರತಿಪಾದ್ಯ ಹಾಗೂ ವೇದ ಪ್ರದಿಪಾದ್ಯ ಭಗವಂತನನ್ನು ಆರಾಧಿಸುವುದರಿಂದ ಎಲ್ಲವನ್ನೂ ಪಡೆದುಕೊಳ್ಳುತ್ತಾರೆ.

ಈ ಹಿಂದೆ ಧರ್ಮವನ್ನು ಬಯಸುವವನು ನಾರಾಯಣನನ್ನು ಉಪಾಸನೆ ಮಾಡಬೇಕು ಎಂದು ಹೇಳಿದ್ದನ್ನು ನೋಡಿದ್ದೇವೆ. ಹಿಂದೆ ಹೇಳಿದ ನಾರಾಯಣನ ಉಪಾಸನೆ ಮತ್ತು ಈ ಮೇಲಿನ ಶ್ಲೋಕದಲ್ಲಿನ ಭಗವಂತನ ಉಪಾಸನೆಯ ವಿವರಣೆಗೆ ಪೂರಕವಾಗಿ ಆಚಾರ್ಯ ಮಧ್ವರು ಸ್ಕಾಂದ ಪುರಾಣದಲ್ಲಿನ ಒಂದು ಪ್ರಮಾಣ ಶ್ಲೋಕವನ್ನು ನೀಡಿದ್ದಾರೆ. ***ಅಕಾಮೋ ಧರ್ಮಕಾಮೋ ವಾ ಮೋಕ್ಷಕಾಮೋಽಪಿ ಯೋ ಭವೇತ್ । ಅಥವಾ ಸರ್ವಕಾಮೋ ಯಃ ಸ ವಿಷ್ಣುಂ ಪುರುಷಂ ಯಜೇತ್ । ಇತಿ ಸ್ಕಾಂದೇ*** । ಧರ್ಮ-ಮೋಕ್ಷಗಳಿಗೆ ನೇರವಾಗಿ ಭಗವಂತನನ್ನೇ ಉಪಾಸನೆ ಮಾಡಬೇಕು. ಅರ್ಥ-ಕಾಮಗಳಿಗೆ ಇತರ ದೇವತೆಗಳನ್ನು ಅಂತರ್ಯಾಮಿ ಭಗವಂತನ ಎಚ್ಚರದಿಂದ ಉಪಾಸನೆ ಮಾಡಬಹುದು. ಜ್ಞಾನದಲ್ಲಿ ಎತ್ತರಕ್ಕೇರಿದವರು ಅರ್ಥ-ಕಾಮಗಳಿಗೂ ನೇರವಾಗಿ ಭಗವಂತನ ಉಪಾಸನೆ ಮಾಡಬಹುದು.

ಇಲ್ಲಿ ಶುಕಾಚಾರ್ಯರು ಪರೀಕ್ಷಿತನಿಗೆ ಐಹಿಕ ಉಪಾಸನೆಯಿಂದ ಮೋಕ್ಷಸಾಧನೆಯವರೆಗೆ ಎಲ್ಲವನ್ನೂ ಸಂಕ್ಷಿಪ್ತವಾಗಿ, ಸಾರರೂಪದಲ್ಲಿ ವಿವರಿಸಿರುವುದನ್ನು ಕಾಣುತ್ತೇವೆ. ಇದು ಪ್ರಾಚೀನರ ಕ್ರಮ. ***"ಸಂಕ್ಷೇಪ ವಿಸ್ತರಾಭ್ಯಾಂ ಪ್ರವದಂತಿ ಮನೀಶಿಣಃ"*** ಎನ್ನುವ ಮಾತೊಂದಿದೆ. ಯಾವಾಗಲೂ ಒಮ್ಮೆಗೇ ವಿಸ್ತಾರವಾಗಿ ಹೇಳಬಾರದು. ಮೊದಲು ಸಂಕ್ಷಿಪ್ತವಾಗಿ ಹೇಳಬೇಕು. ಇದು ಶ್ರೋತೃಗಳ ಗಮನವನ್ನು ಕೇಂದ್ರೀಕರಿಸುವ ಒಂದು ಮನಃಶಾಸ್ತ್ರ.

ಈ ಹಂತದಲ್ಲಿ ನೈಮಿಶಾರಣ್ಯದಲ್ಲಿ ಭಾಗವತವನ್ನು ಶೌನಕಾದಿಗಳಿಗೆ ಹೇಳುತ್ತಿರುವ ಉಗ್ರಶ್ರವಸ್ಸು ಹೇಳುತ್ತಾರೆ: "ಸಂಕ್ಷಿಪ್ತವಾಗಿ ಎಲ್ಲವನ್ನೂ ಹೇಳಿದ ಶುಕಾಚಾರ್ಯರು, ನೀನಂತೂ ಭಾಗವತ ಪ್ರಧಾನ, ನಿನಗೆ ಭಗವದನುಗ್ರಹವಿದೆ, ಹಾಗಾಗಿ ನಿನ್ನ ದಾರಿ ಸುಗಮ" ಎಂದು ಪರೀಕ್ಷಿತನಿಗೆ ಹೇಳಿ, ತಮ್ಮ ಉಪದೇಶವನ್ನು ನಿಲ್ಲಿಸಿ ಬಿಡುತ್ತಾರೆ" ಎಂದು.

ಆಯುರ್ಹರತಿ ವೈ ಪುಂಸಾಂ ಉದ್ಯನ್ನಸ್ತಂ ಚ ಯನ್ನಸೌ ।
ತಸ್ಯರ್ತೇ ಯಃ ಕ್ಷಣೋ ನೀತ ಉತ್ತಮಶ್ಲೋಕವಾರ್ತಯಾ ॥೧೭॥

ಉಗ್ರಶ್ರವಸ್ಸಿನ ಮಾತನ್ನು ಕೇಳಿದ ಶೌನಕರು ತಾವಿನ್ನೂ ಅನೇಕ ಅಪೂರ್ವ ವಿಚಾರವನ್ನು ಭಾಗವತದಿಂದ ತಿಳಿಯಬೇಕೆಂದು ಅಪೇಕ್ಷಿಸುತ್ತಾ ಒಂದು ಕಾವ್ಯಮಯವಾದ ಸುಂದರವಾದ ಮಾತನ್ನು ಹೇಳುವುದನ್ನು ಈ ಶ್ಲೋಕದಲ್ಲಿ ಕಾಣುತ್ತೇವೆ.

ಯಾವುದು ನಿತ್ಯ ನಡೆಯುತ್ತದೋ ಅದೆಲ್ಲವೂ ನಮಗೆ ಅಭ್ಯಾಸವಾಗಿ ಹೋಗುತ್ತದೆ ಮತ್ತು ಕ್ರಮೇಣ ಅದನ್ನು ನಾವು ಯಾಂತ್ರಿಕವಾಗಿ ನೋಡಲಾರಂಭಿಸುತ್ತೇವೆ. ಚಿಕ್ಕ ವಯಸ್ಸಿನಲ್ಲಿ ನಮ್ಮ ತಂದೆ-ತಾಯಿ ಹೇಳಿ ಕೊಟ್ಟಂತೆ ನಾವು ಅನೇಕ ಅನುಷ್ಠಾನಗಳನ್ನು ಮಾಡಿಕೊಂಡು ಬಂದಿರುತ್ತೇವೆ. ಆದರೆ ಆ ಆಚಾರದ ಹಿಂದಿನ ವಿಜ್ಞಾನವೇನು ಎನ್ನುವುದನ್ನು ನಾವೆಂದೂ ಯೋಚಿಸಿರುವುದಿಲ್ಲ. ಇದರಿಂದಾಗಿ ನಮ್ಮೆಲ್ಲಾ ಅನುಷ್ಠಾನಗಳೂ ಯಾಂತ್ರಿಕವಾಗುತ್ತಾ ಹೋಗುತ್ತವೆ. ಪ್ರಕೃತಿಯಲ್ಲಿ ನಡೆಯುವ ಒಂದೊಂದು ಕ್ರಿಯೆಯ ಹಿಂದೆ ನಾವು ಕಲಿಯಬೇಕಾದ ಪಾಠ ಅನೇಕ. ಸೂಕ್ಷ್ಮವಾಗಿ ನೋಡಿದಾಗ ಮಾತ್ರ ಅದು ನಮಗೆ ತಿಳಿಯುತ್ತದೆ. ಉದಾಹರಣೆಗೆ ಸೂರ್ಯೋದಯ-ಸೂರ್ಯಾಸ್ತ ಇದು ನಿತ್ಯ ನಮ್ಮ ಕಣ್ಣಮುಂದೆ ನಡೆಯುವ ಕ್ರಿಯೆ. ಇದು ನಮಗೆ ಸರ್ವೇ ಸಾಮಾನ್ಯ ವಿಷಯ. ಇದರ ಬಗ್ಗೆ ನಾವೆಂದೂ ಆಳವಾಗಿ ಚಿಂತಿಸಿರುವುದಿಲ್ಲ. ಆದರೆ ಈ ವಿಷಯವನ್ನು ಸೂಕ್ಷ್ಮವಾಗಿ ನೋಡಿದರೆ ಇದರಲ್ಲಿ ಅನೇಕ ವಿಷಯಗಳು

ಅಡಗಿರುವುದು ತಿಳಿಯುತ್ತದೆ. ಸೂರ್ಯನಿಗೆ ಪ್ರಸಿದ್ಧವಾದ ಹೆಸರು ಆದಿತ್ಯ. ಈ ಆದಿತ್ಯ ಪದದ ಅರ್ಥ ಅತ್ಯಂತ ಅಪೂರ್ವ. ***ಆದತ್ತೇ ಇತೀ ಆದಿತ್ಯಃ.*** ಅಂದರೆ ಸೆಳೆದುಕೊಳ್ಳುವವನು, ಸ್ವೀಕರಿಸುವವನು ಅಥವಾ ಬದುಕನ್ನು ಕೊಡುವವನು ಎಂದರ್ಥ. ನೆಲದಲ್ಲಿರುವ ನೀರನ್ನು ಸೂರ್ಯ ಆವಿಯಾಗಿಸಿ ಸ್ವೀಕಾರ ಮಾಡುತ್ತಾನೆ ಮತ್ತು ಅದರಿಂದ ಇಳೆಗೆ ಮಳೆ ಕೊಟ್ಟು ನಮಗೆ ಬದುಕನ್ನು ನೀಡುತ್ತಾನೆ. ***ಆದಿತ್ಯಾತ್ ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಾಃ ಪ್ರಜಾಃ.*** ಮಳೆ ಕೊಟ್ಟು, ಅನ್ನ(ಆಹಾರ) ಕೊಟ್ಟು, ಬದುಕನ್ನು ಕೊಡುವವನು ಆದಿತ್ಯ. ಇವೆಲ್ಲವುದರ ಜೊತೆಗೆ ಒಂದು ಸೂರ್ಯೋದಯದಿಂದ ಇನ್ನೊಂದು ಸೂರ್ಯೋದಯದ ನಡುವೆ ಆತ ನಮ್ಮ ಆಯುಸ್ಸಿನ ಇಪ್ಪತ್ನಾಲ್ಕು ಗಂಟೆಗಳನ್ನೂ ಕೂಡಾ ಹೀರಿ, ನಮ್ಮನ್ನು ಇಪ್ಪತ್ನಾಲ್ಕು ಗಂಟೆಗಳಷ್ಟು ಕಾಲ ಸಾವಿಗೆ ಸಮೀಪ ಮಾಡುತ್ತಾನೆ. ಇದು ಸೂರ್ಯೋದಯ ಅಥವಾ ಸೂರ್ಯಾಸ್ತದಲ್ಲಿ ನಾವು ತಿಳಿಯಬೇಕಾದ ಪಾಠ. ಇದೇ ವಿಚಾರವನ್ನು ಇಲ್ಲಿ ಶೌನಕರು ಉಗ್ರಶ್ರವಸ್ಸರಲ್ಲಿ ಹೇಳುತ್ತಿದ್ದಾರೆ: "ಪ್ರತಿಯೊಂದು ಸೂರ್ಯೋದಯವಾದಾಗಲೂ ನಾವು ನಮ್ಮ ಅಪೂರ್ವವಾದ ಸಮಯವನ್ನು ವ್ಯರ್ಥವಾಗಿ ಕಳೆದುಕೊಳ್ಳುತ್ತಿದ್ದೇವೆ ಎನ್ನುವ ಅರಿವು ಮೂಡುತ್ತದೆ. ಕಳೆದುಹೋದ ಕಾಲವನ್ನು ಮರಳಿ ಪಡೆಯಲು ಸಾಧ್ಯವಿಲ್ಲ ನಿಜ, ಆದರೆ ಉಳಿದ ಕಾಲವನ್ನು ಆ ಸರ್ವೋತ್ತಮ ತತ್ತ್ವ ಭಗವಂತನ ಬಗೆಗೆ ತಿಳಿಯುವುದರಲ್ಲಿ ಕಳೆದು ಉಳಿದಿರುವ ಆಯುಸ್ಸಿನ ಪ್ರತೀ ಕ್ಷಣವನ್ನೂ ಸಾರ್ಥಕಪಡಿಸಿಕೊಳ್ಳಬೇಕು ಎನ್ನುವುದು ನಮ್ಮ ಇಚ್ಛೆ. ಹೀಗಾಗಿ ನೀವು ನಿಮ್ಮ ಉಪದೇಶವನ್ನು ನಿಲ್ಲಿಸದೇ ಮುಂದುವರಿಸಬೇಕು" ಎಂದು ಶೌನಕರು ಪ್ರಾರ್ಥಿಸುತ್ತಾರೆ.

ತರವಃ ಕಿಂ ನ ಜೀವಂತಿ ಭಸ್ತ್ರಾಃ ಕಿಂ ನ ಶ್ವಸಂತ್ಯುತ ।
ನ ಖಾದಂತಿ ನ ಮೇಹಂತಿ ಕಿಂ ಗ್ರಾಮಪಶವೋSಪರೇ ॥೧೮॥

ಕೇವಲ ಬದುಕುವುದು ಒಂದು ಸಾಧನೆ ಅಲ್ಲ. ಕಾಡಿನಲ್ಲಿರುವ ಮರಗಳೂ ನೂರಾರು ವರ್ಷ ಬದುಕುತ್ತವೆ. ಮನುಷ್ಯರಾಗಿ ಹುಟ್ಟಿದ ನಮಗೆ ಆ ಭಗವಂತ ಪೂರ್ಣತೆಯನ್ನು ಪಡೆದ ಶರೀರವನ್ನು ಕೊಟ್ಟಿದ್ದಾನೆ. ಇಂತಹ ಶರೀರವನ್ನು ಕೇವಲ ಉಸಿರಾಡುತ್ತಾ ಬದುಕುವುದಕ್ಕೆ ಉಪಯೋಗಿಸುವುದು ಬಸ್ತ್ರಾದಂತೆ ವ್ಯರ್ಥ. [ಬಸ್ತ್ರಾ ಎಂದರೆ ಕುಲುಮೆಯಲ್ಲಿ ಇದ್ದಿಲು ಹಾಕಿ ಗಾಳಿ ಊದುವ ಯಂತ್ರ. ಇದನ್ನು ಕಮ್ಮಾರರು ಕಬ್ಬಿಣ ಕಾಯಿಸಲು ಬಳಸುತ್ತಾರೆ]. ಅಮೂಲ್ಯವಾದ ನಮ್ಮ ಆಯುಸ್ಸನ್ನು ಕೇವಲ ತಿನ್ನುವುದು, ಕುಡಿಯುವುದು, ಮೈಥುನ ಇತ್ಯಾದಿಯಲ್ಲಿ ಕಳೆಯಬಾರದು. ಏಕೆಂದರೆ ಬೀದಿಯಲ್ಲಿರುವ ನಾಯಿ ಕೂಡಾ ಈ ಎಲ್ಲವನ್ನೂ ಮಾಡುತ್ತದೆ. ಮನುಷ್ಯರಾಗಿ ಮನೋಮಯ ಮತ್ತು ವಿಜ್ಞಾನಮಯಕೋಶವನ್ನು ಭಗವಂತನಿಂದ ಉಡುಗೊರೆಯಾಗಿ ಪಡೆದ ನಾವು, ಅದನ್ನು ಉಪಯೋಗಿಸಿಕೊಂಡು ಮೇಲೇರುವುದನ್ನು ಕಲಿಯಬೇಕು. [ಇಲ್ಲಿ ಮರವನ್ನು ಉಲ್ಲೇಖ ಮಾಡಲಾಗಿದೆ. ಇದರರ್ಥ ಮರ ಆಧ್ಯಾತ್ಮಿಕ ಚಿಂತನೆ ಮಾಡಿ ಎತ್ತರಕ್ಕೇರುವ ಸಾಧ್ಯತೆ ಇಲ್ಲಾ ಎಂದೇ ಹೊರತು, ಮರದ ಜೀವನವೇ ವ್ಯರ್ಥ ಎಂದಲ್ಲ. ಏಕೆಂದರೆ ಮರ ಅನೇಕ ಮೃಗ ಪಕ್ಷಿಗಳಿಗೆ ಆಶ್ರಯ ನೀಡುತ್ತದೆ; ನಮಗೆ ಬೇಕಾದ ಆಮ್ಲಜನಕವನ್ನು ಕೊಡುತ್ತದೆ; ಹಣ್ಣು-ಹಂಪಲನ್ನು ನೀಡುತ್ತದೆ. ಆದರೆ ಅದಕ್ಕೆ ನಮ್ಮಂತೆ ಭಗವಂತನ ಕುರಿತು ಅರಿತು ಮೇಲೇರಲು ಬೇಕಾದ ಶರೀರವಿಲ್ಲ ಅಷ್ಟೇ. ಇದೇ ರೀತಿ ಬಸ್ತ್ರಾ. ಬಸ್ತ್ರಾದಿಂದ ನಮಗೆ ಉಪಯೋಗವಿದೆ ಆದರೆ ಬಸ್ತ್ರಾ ಜಡ. ಅದಕ್ಕೆ ನಮ್ಮಂತೆ ಜ್ಞಾನ ಸಾಧನೆ ಸಾಧ್ಯವಿಲ್ಲ. ]

ಶ್ವವಿಡ್ವರಾಹೋಷ್ಟ್ರಖರೈಃ ಸ ತುಲ್ಯಃ ಪುರುಷಃ ಪಶುಃ ।
ನ ಯತ್ಕರ್ಣಪಥೋಪೇತೋ ಜಾತು ನಾಮ ಗದಾಗ್ರಜಃ ॥೧೯॥

ಯಾರು ಚಿಂತನೆಗೆ ತನ್ನನ್ನು ಒಡ್ಡಿಕೊಳ್ಳುವುದಿಲ್ಲ, ಚಿಂತನೆಯಿಂದ ಭಗವಂತನೆಂಬ ಅಪೂರ್ವ ಸತ್ಯವನ್ನು ತಿಳಿಯುವ ಪ್ರಯತ್ನ ಮಾಡುವುದಿಲ್ಲ, ಅವರು ಬೀದಿಯಲ್ಲಿ ತಿರುಗುವ ಹಂದಿ-ನಾಯಿ-ಕತ್ತೆಗಳಿಗಿಂತ ಬೇರೆಯಾದ ಜೀವ ಎನಿಸುವುದಿಲ್ಲ. "ಮನುಷ್ಯರಾಗಿ ಹುಟ್ಟಿದ ನಾವು ಮನುಷ್ಯ ಎನ್ನುವುದಕ್ಕೆ ಸಾರ್ಥಕವಾಗುವ ರೀತಿಯಲ್ಲಿ ಬದುಕನ್ನು ಬದುಕಬೇಕು. ಹೀಗಾಗಿ ಶುಕಾಚಾರ್ಯರು ಪರೀಕ್ಷಿತನಿಗೆ ಮುಂದೆ ಏನು ಹೇಳಿದರು ಎನ್ನುವುದನ್ನು ನಮಗೆ ತಿಳಿಸಿ ಹೇಳಿ" ಎಂದು ಶೌನಕರು ಉಗ್ರಶ್ರವಸ್ಸಿನಲ್ಲಿ ಕೇಳಿಕೊಳ್ಳುತ್ತಾರೆ. "ಬಾಲ್ಯದಲ್ಲೇ ಆಟವಾಡಲು ಕೃಷ್ಣನ ವಿಗ್ರಹವನ್ನು ಕೇಳುತ್ತಿದ್ದವ ಪರೀಕ್ಷಿತ. ಎಲ್ಲವನ್ನೂ ಬಿಟ್ಟು ಭಗವಂತನ ಬೆನ್ನು ಹತ್ತಿದ ಮಹಾಜ್ಞಾನಿ ಶುಕಾಚಾರ್ಯರು. ಇಂತಹ ಇಬ್ಬರು ಸೇರಿದಾಗ ನಡೆದ ಸಂಭಾಷಣೆಯನ್ನು ನಿರಂತರ ಕೇಳಿ ಜೀವನ ಸಾರ್ಥಕ ಮಾಡಿಕೊಳ್ಳಬೇಕು ಎನ್ನುವುದು ನಮ್ಮ ಅಭಿಲಾಷೆ. ಹಾಗಾಗಿ ಶುಕಾಚಾರ್ಯರ ಉಪದೇಶದ ಮುಂದಿನ ಭಾಗವನ್ನು ನಮಗೆ ವಿವರಿಸಿ ಹೇಳಿ" ಎಂದು ಕೇಳುತ್ತಾರೆ ಶೌನಕರು.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ತೃತಿಯೋSಧ್ಯಾಯಃ ॥**

ಭಾಗವತ ಮಹಾಪುರಾಣದ ಎರಡನೇ ಸ್ಕಂಧದ ಮೂರನೇ ಅಧ್ಯಾಯ ಮುಗಿಯಿತು

*********

# ಚತುರ್ಥೋಽಧ್ಯಾಯಃ

## ಉಪದೇಶ ಮುಂದುವರಿಸುವಂತೆ ಶುಕಾಚಾರ್ಯರಲ್ಲಿ ಪರೀಕ್ಷಿತನ ಪ್ರಾರ್ಥನೆ

ನೈಮಿಶಾರಣ್ಯದಲ್ಲಿ ಶೌನಕಾದಿಗಳಿಗೆ ಭಾಗವತ ಪ್ರವಚನ ಮಾಡುತ್ತಿರುವ ಉಗ್ರಶ್ರವಸ್ಸು, ಶೌನಕಾದಿಗಳು ತೋರಿದ ಆಸಕ್ತಿಯನ್ನು ನೋಡಿ ಹೇಳುತ್ತಾರೆ: "ನೀವು ಏನು ಹೇಳಿದಿರೋ ಅದೇ ಮಾತನ್ನು ಪರೀಕ್ಷಿತ ಶುಕಾಚಾರ್ಯರಲ್ಲಿ ಹೇಳಿದ" ಎಂದು. ಈ ಹಿಂದೆ ಹೇಳಿದಂತೆ- ಶುಕಾಚಾರ್ಯರು ಎಲ್ಲವನ್ನೂ ಸಂಕ್ಷಿಪ್ತವಾಗಿ ಹೇಳಿ ಒಂದು ವಿರಾಮ(**Pause**) ಕೊಡುತ್ತಾರೆ. ಆಗ ಪರೀಕ್ಷಿತ "ಇನ್ನೂ ಈ ಕುರಿತು ವಿವರವಾಗಿ ಹೇಳಿ" ಎಂದು ಕೇಳಿಕೊಳ್ಳುತ್ತಾನೆ. ಈ ಹಿಂದೆ ಭಗವಂತನನ್ನು '*ವಿಜ್ಞಾನತತ್ತ್ವಂ ಗುಣಸನ್ನಿರೋಧಂ*' ಎಂದು ವರ್ಣಿಸಿದ್ದರು. ಅಂದರೆ ಆತ ಎಲ್ಲಾ ಗುಣಗಳಿಂದ ಅತೀತ. ಹೀಗಿರುವಾಗ ಆತ ತ್ರಿಗುಣವನ್ನು ಬಳಸಿಕೊಂಡು ಸೃಷ್ಟಿ-ಸ್ಥಿತಿ-ಸಂಹಾರವನ್ನು ಏಕೆ ಮಾಡುತ್ತಾನೆ? ಈ ವಿಶ್ವದ ರಚನೆ ಏಕಾಯಿತು? ನಾವೆಲ್ಲರೂ ಈ ವಿಶ್ವದಲ್ಲಿ ಏಕೆ ಹುಟ್ಟಿದೆವು? ನಮ್ಮನ್ನು ಈ ಭೂಮಿಯಲ್ಲಿ ಹುಟ್ಟಿಸುವುದರಿಂದ ಭಗವಂತನಿಗೇನು ಉಪಯೋಗ? ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರ ತಿಳಿಸಿ ಎಂದು ಪರೀಕ್ಷಿತ ಶುಕಾಚಾರ್ಯರಲ್ಲಿ ಕೇಳಿಕೊಳ್ಳುತ್ತಾನೆ.

## ಪರೀಕ್ಷಿತನ ಮನಃಸ್ಥಿತಿ

**ಸೂತ ಉವಾಚ--**

ಆತ್ಮಜಾಯಾತ್ಮಜಾಗಾರ ಪಶುದ್ರವಿಣಬಂಧುಷು ।
ರಾಜ್ಯೇ ಚಾವಿಕಲೇ ನಿತ್ಯಂನಿರೂಢಾಂ ಮಮತಾಂ ಜಹೌ ॥೦೨॥

ಪರೀಕ್ಷಿತ ಈ ರೀತಿ ಪ್ರಶ್ನೆ ಮಾಡುವಾಗ ಆತನ ಮನಃಸ್ಥಿತಿ ಹೇಗಿತ್ತು ಎನ್ನುವುದನ್ನು ಇಲ್ಲಿ ಸೂತರು ವಿವರಿಸುವುದನ್ನು ಕಾಣುತ್ತೇವೆ. "ಆತ ತನ್ನ ದೇಹ, ಪತ್ನಿ, ಮಕ್ಕಳು, ಮನೆ, ಪಶು, ಸಂಪತ್ತು, ಬಂಧುಗಳು, ದೇಶ, ಎಲ್ಲವುದರ ಮೋಹ ತೊರೆದು ನಿರ್ಮಲ ಮನಸ್ಕನಾಗಿದ್ದ" ಎನ್ನುತ್ತಾರೆ ಸೂತರು(ಉಗ್ರಶ್ರವಸ್ಸು). ಈ ಮಾತನ್ನು ಕೇಳಿದಾಗ ನಮಗೊಂದು ಸಂಶಯ ಬರುತ್ತದೆ. ಅದೇನೆಂದರೆ ಈ ಹಿಂದೆ ಒಂದನೇ ಸ್ಕಂಧದಲ್ಲಿ, ಶುಕಾಚಾರ್ಯರ ಆಗಮನಕ್ಕೂ ಮೊದಲು ಆತ ಎಲ್ಲಾ ಮೋಹವನ್ನು ತೊರೆದು ಗಂಗಾ ನದಿ ತೀರಕ್ಕೆ ಬಂದಿದ್ದ ಎಂದು ಹೇಳಲಾಗಿದೆ.[ *ಮುನಿವ್ರತೋ ಮುಕ್ತಸಮಸ್ತಸಂಗಃ*-೦೧-೧೯-೦೭]. ಹಾಗಾಗಿ ಪುನಃ ಇಲ್ಲಿ ಶುಕಾಚಾರ್ಯರ ಉಪದೇಶ ಕೇಳಿದ ಮೇಲೆ *ನಿರೂಢಾಂ ಮಮತಾಂ ಜಹೌ* ಎಂದು ಏಕೆ ಹೇಳಿದರು ಎನ್ನುವುದು ನಮಗೆ ತಿಳಿಯುವುದಿಲ್ಲ. ಈ ನಮ್ಮ ಗೊಂದಲ ಪರಿಹರಿಸುತ್ತಾ ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಹೇಳುತ್ತಾರೆ: "*ಅನ್ಯೇಷಾಂ ನಿತ್ಯಂ ನಿರೂಢಾಂ ತದಾ ವಿಶೇಷತೋ ಜಹೌ*" ಎಂದು. ಅಂದರೆ ಬೇರೆಯವರಿಂದ ಎಂದೂ ಬಿಡಲಾಗದಂತಹ ಮಮತೆಯನ್ನು ಪರೀಕ್ಷಿತ ಮೊದಲೇ ಬಿಟ್ಟಿದ್ದರಿಂದ ಆತನಲ್ಲಿ ಯಾವುದೇ ಮೋಹದ ಲವಲೇಶ ಇರಲಿಲ್ಲ ಎನ್ನುವುದು ಮೇಲಿನ ಶ್ಲೋಕದ ತಾತ್ಪರ್ಯ.

ಸಂಸ್ಥಾಂ ವಿಜ್ಞಾಯ ಸನ್ನ್ಯಸ್ಯ ಕರ್ಮ ತ್ರೈವರ್ಗಿಕಂ ಚ ಯತ್ ।
ವಾಸುದೇವೇ ಭಗವತಿ ಸ್ವಾತ್ಮಭಾವಂ ದೃಢಂ ಗತಃ ॥೦೪॥

"ತನ್ನ ಸಾವಿನ ವಿಷಯದಲ್ಲಿ ಸ್ಪಷ್ಟವಾದ ಅರಿವನ್ನು ಹೊಂದಿದ್ದ ಪರೀಕ್ಷಿತ, ತ್ರಿವರ್ಗ(ಐಹಿಕ ಧರ್ಮ-ಅರ್ಥ-ಕಾಮ)ವನ್ನು ಬಿಟ್ಟು, ಸಮಸ್ತ ಗುಣಪೂರ್ಣನಾಗಿರುವ ವಾಸುದೇವನೇ ತನ್ನ 'ಆತ್ಮ' ಎಂದು ಗಟ್ಟಿಯಾಗಿ ತಿಳಿದುಕೊಂಡ" ಎನ್ನುತ್ತಾರೆ ಸೂತರು. ಇಲ್ಲಿ "ಪರೀಕ್ಷಿತ ತನ್ನ ಆತ್ಮ ವಾಸುದೇವ ಎಂದು ದೃಢವಾಗಿ ತಿಳಿದುಕೊಂಡ" ಎಂದಿದ್ದಾರೆ. ಈ ಮಾತು ನಮಗೆ ಪೂರ್ಣ ಅರ್ಥವಾಗಬೇಕಾದರೆ ನಾವು ಆತ್ಮ ಪದದ ಮೂಲಾರ್ಥವೇನೆಂದು ತಿಳಿಯಬೇಕು. *ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ಭಗವದ್ಗೀತಾ- ೭-೧೯॥* ವಾಸುದೇವನೇ ಸರ್ವ, ಆತನೇ ನಿಜವಾದ ಆತ್ಮ ಎನ್ನುತ್ತದೆ ಗೀತೆ. ಆತ್ಮ ಎನ್ನುವ ಪದದ ಅರ್ಥವನ್ನು ಭಾರತ ಹೀಗೆ ವರ್ಣಿಸುತ್ತದೆ: *'ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ| ಯಚ್ಚಾಸ್ಯ ಸನ್ತತೋ ಭಾವಸ್ತಸ್ಮಾದಾತ್ಮೇತಿ ಭಣ್ಯತೇ' ಇತಿ|* ಅಂದರೆ ಎಲ್ಲವನ್ನೂ ಪಡೆದವನು ಆತ್ಮ. ವಾಮನ ಪುರಾಣದಲ್ಲಿ ಹೇಳುವಂತೆ: *ಆಪ್ತೇಃ ಸರ್ವಗುಣಾನಾಂ ಯ ಆತ್ಮಣಾಮತಯಾ ಹರಿಂ । ಉಪಾಸ್ತೇ ನಿತ್ಯಶೋ ವಿದ್ವಾನ್ ಆಪ್ತಕಾಮಸ್ತದಾ ಭವೇತ್ ॥* ಸರ್ವಗುಣಪೂರ್ಣನಾದ ಭಗವಂತ ಆತ್ಮ. ಅವನ ಮುಂದೆ ನಾವೆಲ್ಲರೂ ಅನಾತ್ಮರು. [ಜಡದೊಂದಿಗೆ ಹೋಲಿಸಿದಾಗ ನಾವು ಆತ್ಮರು. ಆದರೆ ನಮಗಿಂತ ದೊಡ್ಡ ಆತ್ಮ ಆ ಪರಮಾತ್ಮ]. ಹೀಗಾಗಿ ಆತ್ಮಾ ಎಂದರೆ ಸರ್ವಗುಣಪೂರ್ಣ, ಸರ್ವಾಂತರ್ಯಾಮಿ. *ಏಷ ತೇ ಆತ್ಮಾ ಅಂತರ್ಯಾಮಿ ಅಮೃತಃ.* ನಮ್ಮೊಳಗಿದ್ದು ನಮ್ಮನ್ನು ನಿಯಮಿಸುವ ಭಗವಂತ ಆತ್ಮ. ಇದನ್ನೇ ಬ್ರಹ್ಮಸೂತ್ರದಲ್ಲಿ ಹೀಗೆ ಹೇಳಿದ್ದಾರೆ : *"ಓಂ ಆತ್ಮೇತಿ ತೋಪಗಚ್ಛಂತಿ ಗ್ರಾಹಯಂತಿ ಚ ಓಂ ॥ ೩-೪೮೭ ॥"* ಒಟ್ಟನಲ್ಲಿ ಹೇಳಬೇಕೆಂದರೆ: ಸಚ್ಚಿದಾನಂದಸ್ವರೂಪನಾದ ಭಗವಂತನೇ ಸರ್ವಗುಣಪೂರ್ಣ. ಆತನೇ ನಮ್ಮೆಲ್ಲರ ಅಂತರ್ಯಾಮಿ. ಆದ್ದರಿಂದ ಅವನೇ ನಮ್ಮ ಸ್ವಾಮಿ ಎನ್ನುವ ಭಾವನೆ ಹೊಂದುವುದೇ ಆತ್ಮಜ್ಞಾನವನ್ನು ಹೊಂದುವುದು. ಇದನ್ನೇ ಗೀತೆಯಲ್ಲಿ *ವಾಸುದೇವಂ ಸರ್ವಂ* ಎಂದಿದ್ದಾರೆ. ಸರ್ವಂ ಎಂದರೆ ಪರಿಪೂರ್ಣ ವಸ್ತು. ಭಗವಂತನೊಬ್ಬನೇ ಪರಿಪೂರ್ಣ, ಉಳಿದಿದ್ದೆಲ್ಲವೂ ಅಪೂರ್ಣ. ಹೀಗೆ ಪರೀಕ್ಷಿತ ಸರ್ವಾಂತರ್ಯಾಮಿಯೂ, ಸರ್ವಗುಣಪೂರ್ಣನೂ ಆದ ಭಗವಂತನೊಬ್ಬನೇ ತನ್ನ ಆತ್ಮ ಎಂದು ಗಟ್ಟಿಯಾಗಿ ನಂಬಿದ. "ಭಗವಂತನೇ ಆತ್ಮ, ಅವನ ಅನಂತರ ಕೆಳಗಿನ ಮಟ್ಟದಲ್ಲಿ ಉಳಿದವರಿದ್ದಾರೆ. ಹೀಗಾಗಿ ಭಗವಂತನೇ ನನಗೆ ಸ್ವಾಮಿ, ಅವನೇ ನಿಯಾಮಕ, ಅವನಲ್ಲಿ ನಾನು ಶರಣುಹೋಗಿದ್ದೇನೆ. ಅವನನ್ನು ಬಿಟ್ಟು ಇನ್ನೇನನ್ನೂ ನಾನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ" ಎಂದು ತೀರ್ಮಾನ ಮಾಡಿದ ಪರೀಕ್ಷಿತ, ಭಗವಂತನ ಕುರಿತು ಇನ್ನೂ ಹೆಚ್ಚಿಗೆ ಹೇಳಿ ಎಂದು ಶುಕಾಚಾರ್ಯರಲ್ಲಿ ಪ್ರಾರ್ಥಿಸುತ್ತಾನೆ.

ಪರೀಕ್ಷಿತನ ಪ್ರಾರ್ಥನೆಯನ್ನು ಕೇಳಿದ ಶುಕಾಚಾರ್ಯರು ಹೇಳುತ್ತಾರೆ: "ಈ ಉಪದೇಶದ ಹಿಂದೆ ದೊಡ್ಡ ಇತಿಹಾಸವಿದೆ. ಮೊಟ್ಟಮೊದಲು ಸೃಷ್ಟಿಯ ಆದಿಯಲ್ಲಿ ಭಾಗವತದ ಪ್ರಮೇಯವನ್ನು ಸ್ವಯಂ ನಾರಾಯಣ ಚತುರ್ಮುಖನಿಗೆ ಉಪದೇಶಿಸಿದ. ಅನಂತರ ನಾರದರ ನಿವೇದನೆಯಂತೆ, ಸಮಸ್ತ ಮನುಕುಲದ ಉದ್ಧಾರಕ್ಕಾಗಿ ಭಗವಾನ್ ವೇದವ್ಯಾಸರು ಭಾಗವತ ರಚನೆ ಮಾಡಿದರು. ಹೀಗೆ ವೇದವ್ಯಾಸರಿಂದ ನನಗೆ ಹರಿದು ಬಂದ ಜ್ಞಾನವನ್ನು ನಾನು ನಿನಗೆ ನೀಡುತ್ತಿದ್ದೇನೆ" ಎಂದು. ಹೀಗೆ ಒಂದು ದೃಷ್ಟಿಯಿಂದ ಸೃಷ್ಟಿಯ ಆದಿಯಿಂದ ಬೆಳೆದುಬಂದ ಜ್ಞಾನ ಪರಂಪರೆ ಅತ್ಯಂತ ಮಹತ್ವದ್ದು ಮತ್ತು ಪುರಾತನವಾದದ್ದು. ಭಗವಂತನಿಂದ ಬಂದ ಹಾಗೂ ಭಗವಂತನ ಬಗೆಗಿನ ಜ್ಞಾನವಾದುದರಿಂದ ಇದು ಭಾಗವತ. "ಅತ್ಯಂತ ರಹಸ್ಯವಾದ ಈ ಜ್ಞಾನ ಪರಂಪರೆಯನ್ನು ನನ್ನ ತಂದೆಯಾದ

ವೇದವ್ಯಾಸರಿಂದ ಕೇಳಿದ್ದೇನೆ. ಅದನ್ನೇ ವಿಸ್ತಾರವಾಗಿ ನಿನಗೆ ಹೇಳುತ್ತೇನೆ. ಹೇಳುವ ಮೊದಲು ನಾವೆಲ್ಲರೂ ಆ ಭಗವಂತನನ್ನು ಧ್ಯಾನ ಮಾಡೋಣ. ನಮ್ಮ ಮನಸ್ಸು ಆ ಭಗವಂತನಲ್ಲಿ ಶ್ರುತಿಗೂಡಲಿ" ಎಂದು ಹೇಳಿ ಪುನಃ ವಿಸ್ತಾರವಾಗಿ ಮಂಗಳಾಚರಣೆ ಮಾಡುತ್ತಾರೆ ಶುಕಾಚಾರ್ಯರು.

## ಉಪದೇಶ ಮುಂದುವರಿಸುವ ಮುನ್ನ ಶುಕಮುನಿಗಳಿಂದ ಮಂಗಳಾಚರಣೆ

**ಶ್ರೀಶುಕ ಉವಾಚ--**

**ನಮಃ ಪರಸ್ಮೈ ಪುರುಷಾಯ ಭೂಯಸೇ ಸದುದ್ಭವಸ್ಥಾನನಿರೋಧಲೀಲಯಾ ।**

**ಗೃಹೀತಶಕ್ತಿತ್ರಿತಯಾಯ ದೇಹಿನಾಮಂಧರ್ುವಾಯಾನುಪಲಭ್ಯವರ್ತ್ಮನೇ ॥೧೨॥**

ಮಂಗಳಾಚರಣೆ ಮಾಡುತ್ತಾ ಶುಕಮುನಿಗಳು ಹೇಳುತ್ತಾರೆ: "ಯಾರನ್ನು ಉಪಾಸನೆ ಮಾಡಿದರೆ ಎಲ್ಲವನ್ನೂ ಪಡೆಯಬಹುದೋ ಆ ಪರಮ ಪುರುಷ ಭಗವಂತನಿಗೆ ನಮಸ್ಕಾರ. ಈ ಸತ್ಯವಾದ(ಸತ್) ಪ್ರಪಂಚದ ಉದ್ಭವ-ಸ್ಥಾನ-ನಿರೋಧ ಅಥವಾ ಸೃಷ್ಟಿ-ಸ್ಥಿತಿ-ಸಂಹಾರ ಯಾರಿಗೆ ಒಂದು ಲೀಲೆಯೋ ಅವನಿಗೆ ನಮಸ್ಕಾರ" ಎಂದು. ಹೀಗೆ ಹೇಳುವಾಗ ಇಲ್ಲಿ "ಭಗವಂತ ಇದ್ದದ್ದನ್ನು ಸೃಷ್ಟಿ ಮಾಡಿದ" ಎಂದು ಒಂದು ಮುಖ್ಯವಾದ ಮಾತನ್ನು ಹೇಳುವುದನ್ನು ಕಾಣುತ್ತೇವೆ. ಈ ಮಾತು ಕೆಲವರಿಗೆ ಗೊಂದಲವನ್ನುಂಟುಮಾಡುತ್ತದೆ. ಈ ಮಾತನ್ನು ನಾವು ಅರ್ಥ ಮಾಡಿಕೊಳ್ಳಬೇಕಾದರೆ ನಮಗೆ 'ಸೃಷ್ಟಿ' ಎನ್ನುವ ಪದದ ಅರ್ಥ ಏನು ಎನ್ನುವುದು ತಿಳಿದಿರಬೇಕು. ಸೃಷ್ಟಿ ಎಂದರೆ ಇಲ್ಲದ್ದು ಉಂಟಾಗುವುದಲ್ಲ, ಬದಲಿಗೆ ಇರುವ ವಸ್ತುವಿಗೆ ಆಕಾರ ಬರುವುದು. ಕುಂಬಾರನಿಂದ ಮಡಿಕೆ ಸೃಷ್ಟಿಯಾಯಿತು ಎಂದರೆ ಅಲ್ಲಿ ಮಣ್ಣು-ನೀರು ಎಲ್ಲವೂ ಇತ್ತು. ಇದ್ದ ವಸ್ತುಗಳೇ ಸೇರಿ ಅದರಿಂದ ಹೊಸದೊಂದು ಆಕಾರ ನಿರ್ಮಾಣವಾಯಿತು ಅಷ್ಟೇ. ಇದೇ ರೀತಿ ಭಗವಂತ ಇರುವ ವಸ್ತುವಿಗೆ ಆಕಾರ ಕೊಟ್ಟು, ಈ ನಾಮಾತ್ಮಕ ಮತ್ತು ರೂಪಾತ್ಮಕ ಪ್ರಪಂಚವನ್ನು ನಿರ್ಮಾಣ ಮಾಡುತ್ತಾನೆ. ಹೀಗಾಗಿ ಈ ಪ್ರಪಂಚ ಸತ್. ಅಂದರೆ ಇತ್ತು, ಇದ್ದದ್ದಕ್ಕೇ ಒಂದು ಆಕಾರ ಬಂತು. ಪ್ರಪಂಚವನ್ನು ಸೂಕ್ಷ್ಮವಾಗಿ ನೋಡಿದರೆ ಈ ಸತ್ಯ ನಮಗೆ ತಿಳಿಯುತ್ತದೆ. ಉದಾಹರಣೆಗೆ ಹುಟ್ಟುವುದು ಎಂದರೆ ಅಲ್ಲಿ ಕಾಣುವ ಒಂದು ಶರೀರ ಬರುವುದು. ಅದೇ ರೀತಿ ಸಾಯುವುದು ಎಂದರೆ ಕಾಣುವ ಶರೀರ ಹೋಗುವುದು. ಮೂಲತಃ ಜೀವಕ್ಕೆ ಹುಟ್ಟೂ ಇಲ್ಲಾ, ಸಾವೂ ಇಲ್ಲಾ. ಅದು ಅನಾದಿನಿತ್ಯ. ಇದೇ ರೀತಿ ಪ್ರಳಯ ಕಾಲದಲ್ಲಿ ಭೂಮಿ ಸಿಡಿದು ನಾಶವಾಯಿತು ಎಂದರೆ ಕಣ್ಣಿಗೆ ಕಾಣುವ ಭೂಮಿ ಸಿಡಿದು ಕಣ್ಣಿಗೆ-ಕಾಣದ ಅಣು-ಕಣವಾಗಿ ವಾತಾವರಣದಲ್ಲಿ ಪರಮಾಣು ಸಮುದ್ರವಾಗಿರುವುದೇ ಹೊರತು ಇಲ್ಲವಾಗುವುದಲ್ಲ.

ಈ ಶ್ಲೋಕದಲ್ಲಿ 'ಗೃಹೀತಶಕ್ತಿತ್ರಿತಯಾಯ' ಎನ್ನುವಲ್ಲಿ ಸೃಷ್ಟಿ-ಸ್ಥಿತಿ-ಸಂಹಾರ ಮಾಡುವುದಕ್ಕಾಗಿ ಭಗವಂತ ಮೂರು ಶಕ್ತಿಗಳನ್ನು ಪ್ರಪಂಚದಿಂದ ತೆಗೆದುಕೊಳ್ಳುತ್ತಾನೆ ಎಂದು ಹೇಳಿದಂತೆ ಕಾಣುತ್ತದೆ. ಆದರೆ ಇಲ್ಲಿ ಹೇಳುವುದು ಅದನ್ನಲ್ಲ. ಏಕೆಂದರೆ ಪ್ರಕಾಶಸಂಹಿತಾದಲ್ಲಿ ಹೀಗೆ ಹೇಳಿದ್ದಾರೆ:

ಗೃಹೀತಶಕ್ತಿತ್ರಿತಯಾಯಯೇತಿ ।

**ಇಚ್ಛಾ ಜ್ಞಾನಂ ಕ್ರಿಯಾ ಚೇತಿ ನಿತ್ಯಾಃ ಶಕ್ತಯ ಈಶಿತುಃ ।**

**ಸ್ವರೂಪಭೂತಾ ಅಪಿತು ಭೇದವದ್ ವ್ಯಾವಹಾರಿಕಾಃ ॥**

**-ಇತಿ ಪ್ರಕಾಶಸಂಹಿತಾವಚನಾನ್ನಿತ್ಯ ಗೃಹೀತಶಕ್ತಿತ್ವಮೇವ ।**

ಭಗವಂತ ತನ್ನಲ್ಲಿರುವ ಮೂರು ನಿತ್ಯಶಕ್ತಿಗಳಿಂದ ಎಲ್ಲವನ್ನೂ ಮಾಡುತ್ತಾನೆ. ಅವುಗಳೆಂದರೆ: ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ. ಯಾವುದೇ ಒಂದು ಕ್ರಿಯೆ ಆಗಬೇಕಾದರೆ ಬೇಕಾಗಿರುವ ಮೂಲಭೂತ ಆಂತರಿಕ ಶಕ್ತಿಗಳಿವು. ಇವು ಭಗವಂತನ ಸ್ವರೂಪಭೂತ ಶಕ್ತಿಗಳು. [ಸತ್ವ-ರಜಸ್ಸು-ತಮಸ್ಸು ಬಾಹ್ಯ ಶಕ್ತಿಗಳು. ಇವು ಒಮ್ಮೊಮ್ಮೆ ಶಕ್ತಿಗಳಾಗಿರದೇ ಅಶಕ್ತಿಯಾಗಿ ನಮ್ಮ ದೌರ್ಬಲ್ಯಕ್ಕೆ ಕಾರಣವಾಗುತ್ತವೆ]. ಹೀಗೆ ಭಗವಂತನ ಸ್ವರೂಪಭೂತವಾಗಿರುವ ಮೂರು ಶಕ್ತಿಗಳಿಂದಲೇ ಸೃಷ್ಟಿ-ಸ್ಥಿತಿ-ಸಂಹಾರ ನಡೆಯುತ್ತದೆ. ಪ್ರಾಪಂಚಿಕವಾಗಿ ನೋಡಿದರೂ ಕೂಡಾ ನಮಗೆ ಈ ವಿಷಯ ಸ್ಪಷ್ಟವಾಗಿ ತಿಳಿಯುತ್ತದೆ. ಉದಾಹರಣೆಗೆ ಮಡಕೆಯನ್ನು ಒಬ್ಬ ಕುಂಬಾರ ಮಾಡಬೇಕಾದರೆ ಆ ಮಡಕೆಯನ್ನು ಯಾವ ಮಣ್ಣಿನಿಂದ ಮಾಡಬೇಕು, ಎಷ್ಟು ನೀರು ಹಾಕಬೇಕು, ಎಷ್ಟು ಹದ ಮಾಡಬೇಕು, ಹೇಗೆ ಆಕಾರ ಕೊಡಬೇಕು, ಇತ್ಯಾದಿ ಜ್ಞಾನ ಬೇಕು. ಕೇವಲ ಜ್ಞಾನ ಇದ್ದರೆ ಸಾಲದು, ಮಾಡಬೇಕು ಎನ್ನುವ ಇಚ್ಛೆ ಇರಬೇಕು ಮತ್ತು ಬಾಹ್ಯ ಪರಿಕರಗಳನ್ನು ಬಳಸಿ ಮಾಡಬೇಕು. ಹೀಗೆ ಯಾವುದೇ ಒಂದು ವಸ್ತು ನಿರ್ಮಾಣವಾಗಬೇಕಾದರೆ ಅಲ್ಲಿ ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಗಳು ಮೂಲಭೂತ ಶಕ್ತಿಗಳಾಗಿರುತ್ತವೆ. ಇವು ಮೊಟ್ಟಮೊದಲು ಸೃಷ್ಟಿಯ ಹಿನ್ನೆಲೆಯಲ್ಲಿ ಭಗವಂತನಲ್ಲಿರುವ ಶಕ್ತಿಗಳು. ಭಗವಂತನ ಜ್ಞಾನವೇ ಆತನ ಇಚ್ಛೆ, ಆತನ ಇಚ್ಛೆಯೇ ಆತನ ಕ್ರಿಯೆ, ಆತನ ಕ್ರಿಯೆಯೇ ಆತನ ಜ್ಞಾನ. ಇನ್ನು ಈ ಶ್ಲೋಕದಲ್ಲಿ 'ಗ್ರಹೀತ' ಎನ್ನುವ ಪದ ಬಳಕೆ ಏಕೆ ಮಾಡಿದರು ಎನ್ನುವುದು ಪ್ರಶ್ನೆ. ಗ್ರಹೀತ ಎಂದರೆ ಇಲ್ಲದೇ ಇರುವುದಲ್ಲ, ಇದ್ದ ಶಕ್ತಿಯನ್ನು ಬೇಕಾದಾಗ ಬಳಸುವುದು. ಭಗವಂತನಲ್ಲಿ ಈ ಎಲ್ಲಾ ಶಕ್ತಿಗಳೂ ಸದಾ ಇರುತ್ತವೆ. ಆದರೆ ಅಭಿವ್ಯಕ್ತಿ ಮಾತ್ರ ಯಾವಾಗ ಬೇಕೋ ಆವಾಗ ಎನ್ನುವುದನ್ನು 'ಗ್ರಹೀತ' ಪದ ಸೂಚಿಸುತ್ತದೆ.

ಭಗವಂತನ ಕುರಿತು ಹೇಳಿದಾಗ ಎಲ್ಲರಲ್ಲೂ ಮೂಡುವ ಸರ್ವೇ ಸಾಮಾನ್ಯ ಪ್ರಶ್ನೆ- "ಇಂತಹ ಪರಮ ಪುರುಷ ಭಗವಂತ ಎಲ್ಲಿದ್ದಾನೆ" ಎನ್ನುವುದು. ಈ ಪ್ರಶ್ನೆಗೆ ಉತ್ತರಿಸುತ್ತಾ ಶುಕಾಚಾರ್ಯರು ಹೇಳುತ್ತಾರೆ: "ಆತ ನಮ್ಮೊಳಗೇ ಸ್ಥಿರವಾಗಿದ್ದಾನೆ" ಎಂದು. ಆತ ನಮ್ಮೊಳಗೆ ಇರುವುದರಿಂದಲೇ ನಮಗೆ ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಗಳಿರುವುದು. ದೀಪದ ಅಡಿಯಲ್ಲಿರುವುದು ಹೇಗೆ ಕಾಣುವುದಿಲ್ಲವೋ ಹಾಗೇ ಭಗವಂತ ಬಹಳ ಹತ್ತಿರವಿದ್ದರೂ ಕೂಡಾ, ಅವನನ್ನು ಹೋಗಿ ಸೇರುವ ದಾರಿ ನಮಗೆ ಕಾಣುವುದಿಲ್ಲ. ಹೀಗಾಗಿ ನಮ್ಮ ಹತ್ತಿರವೇ ಇರುವ ಭಗವಂತನನ್ನು ನಾವು ಎಲ್ಲೆಲ್ಲೋ ಹುಡುಕಾಡುತ್ತಿರುತ್ತೇವೆ. ಇದು ಹೇಗೆಂದರೆ: ಮನೆಯೊಂದರಲ್ಲಿ ಎಲ್ಲಾ ವಿದ್ಯುತ್ ದೀಪಗಳಿದ್ದು, ಅದರ ಮುಖ್ಯ ಒತ್ತುಗುಂಡಿ(**Main Switch**) ತಿಳಿಯದೇ ಕತ್ತಲಲ್ಲಿ ಒದ್ದಾಡಿದಂತೆ. ಒಮ್ಮೆ ಆ ಒತ್ತುಗುಂಡಿ ಸಿಕ್ಕರೆ ಎಲ್ಲವೂ ಸುಲಭ. ಆದರೆ ಈ ಒತ್ತುಗುಂಡಿ(**Switch**) ಸಿಗುವ ತನಕ ಒದ್ದಾಟ. ಅಧ್ಯಾತ್ಮ ಸಾಧನೆ ಎನ್ನುವುದು ಬೆಳಕಿನ ಒತ್ತುಗುಂಡಿಯನ್ನು ಹುಡುಕಿದಂತೆ-ಭಗವಂತನನ್ನು ಸೇರುವ ದಾರಿಯನ್ನು ಹುಡುಕುವ ಕ್ರಿಯೆ. ಒಮ್ಮೆ ದಾರಿ ಸಿಕ್ಕರೆ ಎಲ್ಲವೂ ಬೆಳ್ಳಂಬೆಳಕು.

ಭೂಯೋ ನಮಃ ಸದ್ವೃಜಿನಚ್ಛಿದೇSಸತಾಮಸಂಭವಾಯಾಖಿಲಸತ್ತ್ವಮೂರ್ತಯೇ ।
ಪುಂಸಾಂ ಪುನಃ ಪಾರಮಹಂಸ್ಯ ಆಶ್ರಮೇ ವ್ಯವಸ್ಥಿತಾನಾಮನುಮೃಗ್ಯ ದಾಶುಷೇ ॥೧೩॥

"ಮತ್ತೆ ಮತ್ತೆ ನಮಸ್ಕಾರ" ಎನ್ನುತ್ತಾರೆ ಶುಕಾಚಾರ್ಯರು. ಯಾರು ಸಾತ್ತ್ವಿಕರೋ ಅವರ ಪಾಪವನ್ನು ತೊಳೆದು, ಅವರ ದುಃಖವನ್ನು(ವೃಜಿನ/ಬೃಜಿನ/ಪಾಪದಿಂದ ಬರುವ ದುಃಖವನ್ನು)ಪರಿಹಾರ ಮಾಡುವವನು; ದುಷ್ಟರಿಗೆ/ತಾಮಸರಿಗೆ ಎಂದೂ ಉನ್ನತಿಯ ಮಾರ್ಗವನ್ನು ತೋರದವನು(ಅಸಂಭವಃ); ಸರ್ವಗುಣಪೂರ್ಣನು;

ಸತ್ತ್ವಸ್ವರೂಪನು; ಗುಣತ್ರಯಗಳ ಸ್ಪರ್ಶವೇ ಇಲ್ಲದ ಜ್ಞಾನಾನಂದಗಳ ಅಖಂಡ ಮೂರ್ತಿ; ತಮ್ಮ ಜೀವನವನ್ನು ಭಗವಂತನ ಉಪಾಸನೆಗೆ ಮೀಸಲಿಡುವ, ತಮ್ಮೊಳಗೆ ಪೂರ್ಣವಾಗಿ ಭಗವಂತನನ್ನು ತುಂಬಿಕೊಂಡವರ(ಪಾರಮಹಂಸ್ಯ) ಚಿಂತನೆಗೆ ನಿಲುಕುವ ಮತ್ತು ಅವರಿಗೆ ಬಯಸಿದ್ದನ್ನು ಕರುಣಿಸುವ ನಾರಾಯಣನಿಗೆ ನಮಸ್ಕಾರ ಎಂದು ಶುಕಾಚಾರ್ಯರು ಭಗವಂತನನ್ನು ಸ್ತುತಿಸುತ್ತಾರೆ.

**ಸ ಏಷ ಆತ್ಮಾSSತ್ಮವತಾಮಧೀಶ್ವರಸ್ತ್ರಯೀಮಯೋ ಧರ್ಮಮಯಸ್ತಪೋಮಯಃ ।**
**ಗತವ್ಯಲೀಕೈರಜಶಂಕರಾದಿಭಿರ್ವಿತರ್ಕ್ಯಲಿಂಗೋ ಭಗವಾನ್ ಪ್ರಸೀದತಾಮ್ ॥೧೯॥**

ಎಲ್ಲರ ಅಂತರ್ಯಾಮಿ, ಎಲ್ಲರ ಸ್ವಾಮಿ ಭಗವಂತ ಮನನಶೀಲ ಜ್ಞಾನಿಗಳಿಗೆ(ಆತ್ಮವಂತರಿಗೆ) ಅಧೀಶ್ವರ. [ಭಗವಂತ ಎಲ್ಲರಿಗೂ ಸ್ವಾಮಿ. ಆದರೆ ಎಲ್ಲರಿಗೂ ಆ ಜ್ಞಾನ ಇರುವುದಿಲ್ಲ ಅಷ್ಟೇ]. ಇಂತಹ ಭಗವಂತನನ್ನು ಶುಕಾಚಾರ್ಯರು ತ್ರೀಯೀಮಯಃ, ಧರ್ಮಮಯಃ, ತಪೋಮಯಃ ಎಂದು ಸ್ತುತಿಸಿದ್ದಾರೆ. ತ್ರೀಯೀಮಯಃ ಎಂದರೆ: ವೇದವೇ ಅವನ ಅರಿವಿಗೆ ಮತ್ತು ಅನುಗ್ರಹಕ್ಕೆ ಪ್ರಧಾನ ಕಾರಣವಾಗಿರುವವನು; ಧರ್ಮಮಯಃ ಎಂದರೆ: ಧಾರ್ಮಿಕ ಜೀವನವೇ ಅವನ ಅನುಗ್ರಹಕ್ಕೆ ಪ್ರಧಾನ ಕಾರಣವಾಗಿರುವವನು. ತಪೋಮಯಃ ಎಂದರೆ: ತಪಸ್ಸೇ ಅವನ ಅನುಗ್ರಹಕ್ಕೆ ಪ್ರಧಾನ ಕಾರಣವಾಗಿರುವವನು.

ಕೇವಲ ನಿರ್ವ್ಯಾಜ್ಯ ಭಕ್ತಿಯಿಂದ ಭಗವಂತನನ್ನು ತಿಳಿಯುವುದು ಸಾಧ್ಯ. ಕಪಟ ಭಕ್ತಿ, ಕಪಟ ಪಾಂಡಿತ್ಯದಿಂದ ಜನರನ್ನು ಮೋಸಗೊಳಿಸಬಹುದೇ ಹೊರತು ಭಗವಂತನನ್ನಲ್ಲ. ತಮ್ಮ ನಿರ್ವ್ಯಾಜ್ಯ ಭಕ್ತಿಯಿಂದ ಬ್ರಹ್ಮ-ರುದ್ರಾದಿಗಳು "ಭಗವಂತನ ಇರವು ಹೀಗಿರಬಹುದು" ಎಂದು ಊಹಿಸುತ್ತಾರೆ. ಅಂದರೆ ಅವರಿಗೂ ನಿಶ್ಚಿತರೂಪವಾಗಿ ಭಗವಂತ ಹೀಗೆಯೇ ಎಂದು ಹೇಳುವುದು ಸಾಧ್ಯವಿಲ್ಲ. "ಇಂತಹ ಭಗವಂತ ನಮಗೆ ಅನುಗ್ರಹ ಮಾಡಲಿ; ನನಗೆ ಇದನ್ನು ಉಪದೇಶ ಮಾಡಿದಂತಹ ವೇದವ್ಯಾಸರೂಪಿ ಭಗವಂತನ ಅನುಗ್ರಹ ನಮ್ಮ ಮೇಲಿರಲಿ; ಆತ ನನ್ನ ನಾಲಿಗೆಯಲ್ಲಿ ಕುಳಿತು ನನ್ನಿಂದ ನುಡಿಸಲಿ" ಎಂದು ಪ್ರಾರ್ಥಿಸುತ್ತಾರೆ ಶುಕಾಚಾರ್ಯರು.

**ಏತದೇವಾತ್ಮಭೂ ರಾಜನ್ ನಾರದಾಯೇತಿ ಪೃಚ್ಛತೇ ।**
**ವೇದಗರ್ಭೋSಭ್ಯಧಾತ್ ಸರ್ವಂ ಯದಾಹ ಹರಿರಾತ್ಮನಃ ॥೨೫॥**

ಶುಕಾಚಾರ್ಯರು ಹೇಳುತ್ತಾರೆ: "ಸೃಷ್ಟಿಯ ಆದಿಯಲ್ಲಿ ಭಗವಂತ ಚತುರ್ಮುಖನಿಗೆ ಏನನ್ನು ಉಪದೇಶ ಮಾಡಿದನೋ; ಚತುರ್ಮುಖ ತನ್ನ ಮಾನಸಪುತ್ರ ನಾರದರಿಗೆ ಏನನ್ನು ಉಪದೇಶ ಮಾಡಿದನೋ; ನನ್ನ ತಂದೆ ವೇದವ್ಯಾಸರು ನನಗೆ ಏನು ಉಪದೇಶ ಮಾಡಿದರೋ; ಅದನ್ನೇ ಯಥಾವತ್ತಾಗಿ ನಾನು ಇನ್ನು ಮುಂದೆ ನಿನಗೆ ಹೇಳಲಿದ್ದೇನೆ" ಎಂದು. ಭಗವಂತ ಸೃಷ್ಟಿ-ಸ್ಥಿತಿ-ಸಂಹಾರವನ್ನು ಯಾವ ಕಾರಣಕ್ಕಾಗಿ ಮಾಡುತ್ತಾನೆ ಎನ್ನುವ ಪ್ರಶ್ನೆಯನ್ನು ಹಿಂದೆ ನಾರದರು ತಮ್ಮ ತಂದೆ ಚತುರ್ಮುಖನಲ್ಲಿ ಕೇಳಿದ್ದರು. ಅದೇ ಪ್ರಶ್ನೆಯನ್ನು ಇಲ್ಲಿ ಪರೀಕ್ಷಿತ ಶುಕಾಚಾರ್ಯರಲ್ಲಿ ಕೇಳಿದ್ದಾನೆ. ಚತುರ್ಮುಖ ವೇದಗರ್ಭ. ಅಂದರೆ ಸಮಸ್ತ ವೇದಗಳೂ ಆತನ ಗರ್ಭದಲ್ಲಿ ಸದಾ ನೆಲೆಸಿರುತ್ತವೆ. ತನ್ನ ನಾಲ್ಕು ಮುಖಗಳಿಂದ ನಾಲ್ಕು ವೇದಗಳನ್ನು ಅಭಿವ್ಯಕ್ತಗೊಳಿಸಿದವನು ಚತುರ್ಮುಖ. ಇಂಥ

ಚತುರ್ಮುಖ ಸ್ವಯಂ ನಾರಾಯಣನಿಂದ ಪಡೆದ ಜ್ಞಾನವನ್ನು ತನ್ನ ಮಗ ನಾರದನಿಗೆ ಉಪದೇಶಿಸಿದ. ಇದೇ ಉಪದೇಶವನ್ನು ನಾನು ನನ್ನ ತಂದೆ ವೇದವ್ಯಾಸರಿಂದ ಪಡೆದೆ. ನಾನು ಏನನ್ನು ಪಡೆದಿದ್ದೇನೋ ಅದನ್ನೇ ಯಥಾವತ್ತಾಗಿ ನಾನು ನಿನಗೆ ಹೇಳುತ್ತೇನೆ ಎಂದು ಮಂಗಳಾಚರಣೆ ಮಾಡುತ್ತಾರೆ ಶುಕಾಚಾರ್ಯರು.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಚತುರ್ಥೋಽಧ್ಯಾಯಃ ॥**

ಭಾಗವತ ಮಹಾಪುರಾಣದ ಎರಡನೇ ಸ್ಕಂಧದ ನಾಲ್ಕನೇ ಅಧ್ಯಾಯ ಮುಗಿಯಿತು

*********

# ಪಂಚಮೋSಧ್ಯಾಯಃ

## ಸೃಷ್ಟಿಯ ಸಂಕ್ಷಿಪ್ತ ಚಿತ್ರಣ-ನಾರದ ಚತುರ್ಮುಖ ಸಂವಾದ

ಸೃಷ್ಟಿ-ಸ್ಥಿತಿ-ಸಂಹಾರದ ಕುರಿತು ಪ್ರಶ್ನಿಸಿದ ಪರೀಕ್ಷಿತನಿಗೆ ಶುಕಾಚಾರ್ಯರು ಸೃಷ್ಟಿಯ ಚಿತ್ರಣವನ್ನು ಸಂಕ್ಷಿಪ್ತವಾಗಿ ನಾರದ-ಚತುರ್ಮುಖ ಸಂವಾದ ರೂಪದಲ್ಲಿ ಈ ಅಧ್ಯಾಯದಲ್ಲಿ ನೀಡಿದ್ದಾರೆ. ಮುಂದೆ ಸೃಷ್ಟಿಯ ವರ್ಣನೆ ಮೂರನೇ ಸ್ಕಂಧದಲ್ಲಿ ವಿಸ್ತಾರವಾಗಿ ಬರುತ್ತದೆ. ಆದರೆ ಇಲ್ಲಿ ಅದರ ಸಂಕ್ಷಿಪ್ತ ಚಿತ್ರಣವನ್ನು ನಾವು ಕಾಣಬಹುದು. ಬನ್ನಿ, ನಮ್ಮ-ನಿಮ್ಮೆಲ್ಲರ ಪರವಾಗಿ ನಾರದರು ಚತುರ್ಮುಖನಲ್ಲಿ ಹಾಕಿದ ಪ್ರಶ್ನೆ ಮತ್ತು ಅದಕ್ಕೆ ಚತುರ್ಮುಖನ ಉತ್ತರವನ್ನು ಅವರ ಬಾಯಿಂದಲೇ ಕೇಳೋಣ.

**ನಾರದ ಉವಾಚ--**

**ದೇವದೇವ ನಮಸ್ತೇSಸ್ತು ಭೂತಭಾವನ ಪೂರ್ವಜ ।**
**ತದ್ ವಿಜಾನೀಹಿ ಯಜ್ಜ್ಞಾನಮಾತ್ಮತತ್ತ್ವನಿದರ್ಶನಮ್ ॥೦೧॥**

ಚತುರ್ಮುಖ ನಾರದನ ತಂದೆ. ಸೃಷ್ಟಿಯ ಆದಿಯಲ್ಲಿ ನವ ಪ್ರಜಾಪತಿಗಳು ಮತ್ತು ಯಾವ ಪ್ರಜಾಪತಿಯೂ ಅಲ್ಲದ ನಿತ್ಯ ಬ್ರಹ್ಮಚಾರಿ ನಾರದರೂ ಸೇರಿ ಹತ್ತು ಮಂದಿ ಮಹಾಜ್ಞಾನಿಗಳನ್ನು ಚತುರ್ಮುಖ ಸೃಷ್ಟಿಸಿದ. ಈ ಹತ್ತು ಮಂದಿಗಳಲ್ಲಿ ದಕ್ಷನನ್ನು ಬಿಟ್ಟರೆ ನಾರದರೇ ಅತ್ಯಂತ ಎತ್ತರದ ಜ್ಞಾನಿ. ಅಂತಹ ನಾರದರು ಚತುರ್ಮುಖನಲ್ಲಿ ಹೇಳುತ್ತಾರೆ: "ನೀನು ದೇವತೆಗಳಿಗೂ ದೇವತೆ" ಎಂದು. ದೇವತೆ ಎನ್ನುವ ಪದಕ್ಕೆ ಅನೇಕ ಅರ್ಥಗಳಿವೆ. ಮುಖ್ಯಾರ್ಥದಲ್ಲಿ ದೇವಾ ಎಂದರೆ ಸಾಕ್ಷಾತ್ ಭಗವಂತನೇ. [ಉದಾಹರಣೆಗೆ ಗಾಯತ್ರಿಯ ***'ಭರ್ಗೋ ದೇವಸ್ಯ ಧೀಮಹಿ'*** ಎನ್ನುವಲ್ಲಿ ದೇವಾ ಎಂದರೆ ಸಾಕ್ಷಾತ್ ಭಗವಂತ]. ಭಗವಂತನ ನಂತರ ದೇವತೆಗಳು ಅನೇಕ ಹಾಗೂ ಅವರಲ್ಲಿ ವಿವಿಧ ಹಂತ/ಮಟ್ಟ/ತಾರತಮ್ಯವಿದೆ. ಈ ಎಲ್ಲಾ ದೇವತೆಗಳಲ್ಲಿ ಎಲ್ಲರಿಗಿಂತ ಎತ್ತರದಲ್ಲಿರುವ ದೇವತೆ ಚತುರ್ಮುಖ ಬ್ರಹ್ಮ. ಹೀಗಾಗಿ ಚತುರ್ಮುಖ ದೇವದೇವ. [ದಿವು-ವ್ಯವಹಾರೇ ಧಾತು]. ದೇವತೆಗಳು ಎಂದರೆ ಪ್ರಪಂಚದ ವ್ಯವಹಾರ ನಡೆಸುವವರು ಎನ್ನುವ ಅರ್ಥವೂ ಇದೆ. ಏಕೆಂದರೆ: ತತ್ತ್ವಾಭಿಮಾನಿಗಳಾಗಿ ಪ್ರತಿಯೊಂದು ಕ್ರಿಯೆಯನ್ನು ನಡೆಸುವವರು ದೇವತೆಗಳಾಗಿರುವುದರಿಂದ ಅವರನ್ನು ದೇವ/ದೇವತೆ ಎಂದು ಕರೆಯುತ್ತಾರೆ. ಹಾಗಾಗಿ ಜಗತ್ತಿನ ಎಲ್ಲಾ ವ್ಯವಹಾರಗಳನ್ನು ನಡೆಸುವ ತತ್ತ್ವಾಭಿಮಾನಿಗಳಲ್ಲೇ ಸರ್ವಶ್ರೇಷ್ಠನಾದ ಚತುರ್ಮುಖ ದೇವದೇವ.

ನಮಸ್ಕರಿಸುತ್ತಾ ನಾರದರು ಚತುರ್ಮುಖನನ್ನು ಇಲ್ಲಿ 'ಭೂತಭಾವನ ಪೂರ್ವಜ' ಎಂದು ಸಂಬೋಧಿಸುವುದನ್ನು ನಾವು ಕಾಣುತ್ತೇವೆ. ಈ ಹಿಂದೆ ಹೇಳಿದಂತೆ ಚತುರ್ಮುಖ ಬ್ರಹ್ಮ ನಮ್ಮೆಲ್ಲಾ ವ್ಯವಹಾರಗಳ ಕೇಂದ್ರಸ್ಥಾನವಾದ ಚಿತ್ತ ಅಥವಾ ವಿಜ್ಞಾನಮಯಕೋಶದ ನಿಯಾಮಕ ದೇವತೆ. ಇಂತಹ ಅತ್ಯಂತ ಮಹತ್ತಾದ ಇಂದ್ರಿಯದ ನಿಯಾಮಕ ಶಕ್ತಿಯಾದ ಚತುರ್ಮುಖ 'ಭೂತಭಾವನಃ'. ಇನ್ನು 'ಭೂತ' ಅಂದರೆ ಜೀವಜಾತ; ಭಾವನ ಅಂದರೆ ನಿರ್ಮಾಣ(**Creation).** ಹೀಗಾಗಿ ಭೂತಭಾವನಃ ಅಂದರೆ ಎಲ್ಲಾ ಜೀವಗಳನ್ನು ಸೃಷ್ಟಿ ಮಾಡಿದ ತಂದೆ ಎಂದರ್ಥ. ಇತರ ದೇವತೆಗಳಿಗೂ ಸೃಷ್ಟತ್ವವಿದೆ. ಆದರೆ ಚತುರ್ಮುಖ ಬ್ರಹ್ಮ ಎಲ್ಲರಿಗೂ ತಂದೆ. ಎಲ್ಲಾ ಜೀವರ ಸೃಷ್ಟಾರ ಎನ್ನುವ

ವಿಶೇಷಣ ಯಾರಿಗಾದರೂ ಅನ್ವಯವಾಗುವುದಿದ್ದರೆ ಅದು ಬ್ರಹ್ಮ-ವಾಯುಗಳಿಗೆ ಮಾತ್ರ. ಹೀಗಾಗಿ ನಾರದರು ಚತುರ್ಮುಖನನ್ನು "ಸಮಸ್ತ ಜೀವಜಾತದ ತಂದೆಯೇ" ಎಂದು ಸಂಬೋಧಿಸಿದ್ದಾರೆ. ಇನ್ನು 'ಪೂರ್ವಜಃ' ಅಂದರೆ ಎಲ್ಲಾ ಜೀವರು ಹುಟ್ಟುವ ಮೊದಲು ಭಗವಂತನ ನಾಭಿಕಮಲದಿಂದ ಹುಟ್ಟಿದ ಆದಿಜೀವ ಎಂದರ್ಥ. ಇದಲ್ಲದೇ ಈ ಎರಡು ವಿಶೇಷಣಗಳನ್ನು ಒಂದೇ ಪದವಾಗಿ ನೋಡಿದರೆ-'ಭೂತಭಾವನಪೂರ್ವಜಃ' ಎಂದಾಗುತ್ತದೆ. ನಮಗೆ ತಿಳಿದಂತೆ 'ಭೂತಭಾವನಃ' ಆ ನಾರಾಯಣ(ವಿಷ್ಣುಸಹಸ್ರನಾಮದಲ್ಲಿ ಈ ನಾಮ ಬಂದಿದೆ). ಆತ ಜಗತ್ತಿನ ಸಮಸ್ತ ಜೀವಜಾತದ(ಚತುರ್ಮುಖನನ್ನೂ ಸೇರಿಸಿ) ಸೃಷ್ಟಿ-ಸ್ಥಿತಿ-ಸಂಹಾರಕ್ಕೆ ಕಾರಣಕರ್ತ. ಇಂತಹ ಭಗವಂತನ ಮೊದಲ ಮಗ(ಪೂರ್ವಜ)ನಾಗಿ ಹುಟ್ಟಿದ ಚತುರ್ಮುಖ 'ಭೂತಭಾವನಪೂರ್ವಜಃ'. ***ಬ್ರಹ್ಮಣಃ ಪಿತರಂವೊಂದೇ, ಶಂಕರಸ್ಯ ಪಿತಾಮಹಂ, ಶ್ರೀಯಂ ಪತಿಂ, ಅಜಮ್ ನಿತ್ಯಂ, ಇಂದ್ರಾದಿ ಪ್ರಪಿತಾಮಹಂ.*** ಹುಟ್ಟು-ಸಾವಿಲ್ಲದ, ರಮಾರಮಣ ಭಗವಂತ ಬ್ರಹ್ಮ-ವಾಯುಗಳಿಗೆ ಅಪ್ಪ, ಗರುಡ-ಶೇಷ-ರುದ್ರರಿಗೆ ಅಜ್ಜ, ಇಂದ್ರಾದಿ-ದೇವತೆಗಳಿಗೆ ಮುತ್ತಜ್ಜ. ಇಂತಹ ಭಗವಂತನಿಂದ ಮೊದಲು ಹುಟ್ಟಿದ ಚತುರ್ಮುಖ 'ಭೂತಭಾವನಪೂರ್ವಜಃ'.

ಚತುರ್ಮುಖನನ್ನು ಆತನ ಅಸಾಧಾರಣ ಗುಣಗಳಿಂದ ಸಂಬೋಧನೆ ಮಾಡಿದ ನಾರದರು ಹೇಳುತ್ತಾರೆ: "ಅರಿವನ್ನು ಕೊಡತಕ್ಕ ಮಾತಿನಿಂದ ನನಗೆ ತಿಳುವಳಿಕೆಯನ್ನು ತಿಳಿಸಿ ಹೇಳು" ಎಂದು. ಈ ಶ್ಲೋಕದಲ್ಲಿ 'ವಿಜಾನೀಹಿ' ಎನ್ನುವ ಪದ ಬಳಕೆಯಾಗಿದೆ. ಸಂಸ್ಕೃತದಲ್ಲಿ 'ವಿಜಾನೀಹಿ' ಅಂದರೆ 'ತಿಳಿಸು' ಎಂದರ್ಥವಲ್ಲ, ಬದಲಿಗೆ 'ತಿಳಿದುಕೋ' ಎಂದರ್ಥ. ಆದರೆ ಆ ಅರ್ಥದಲ್ಲಿ ಈ ಪದ ಇಲ್ಲಿ ಬಳಕೆಯಾಗಲು ಸಾಧ್ಯವಿಲ್ಲ. ಆದರೂ ಏಕೆ ಬಳಸಿದ್ದಾರೆ? ಈ ಪ್ರಶ್ನೆಗೆ ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಉತ್ತರಿಸುತ್ತಾ ಹೇಳುತ್ತಾರೆ: ***"ವಿಜಾನೀಹಿ ವಿಜ್ಞಾಪಯ । 'ವ್ಯತ್ಯಯೋ ಭೇದಸ್ವಾತಂತ್ರ್ಯ ಕರಣೇಷು' ಇತಿ ವಚನಾತ್ ।*** ಇನ್ನೊಬ್ಬರ ಹತ್ತಿರ 'ತಿಳಿಸು' ಅನ್ನುವ ಬದಲು 'ತಿಳಿ' ಎಂದು ಹೇಳುವುದು ಸ್ವಾತಂತ್ರ್ಯವನ್ನು ತೋರಿಸುವುದಕ್ಕೆ. ಉದಾಹರಣೆಗೆ ನಾವು ಕಷ್ಟಪಟ್ಟು ಮನೆಯೊಂದನ್ನು ಕಟ್ಟಿಸಿರುತ್ತೇವೆ. ಆದರೆ ಮಾತನಾಡುವಾಗ "ಕಷ್ಟಪಟ್ಟು ***ಕಟ್ಟಿದ*** ಮನೆ" ಎನ್ನುತ್ತೇವೆ. ಇಲ್ಲಿ ***'ಕಟ್ಟಿಸಿದ'*** ಎನ್ನುವ ಪದದ ಬದಲು ***'ಕಟ್ಟಿದ'*** ಎನ್ನುವ ಪದ ಬಳಕೆ ಸ್ವಾತಂತ್ರ್ಯವನ್ನು ತೋರಿಸುತ್ತದೆ. ಕಟ್ಟಿದ ವ್ಯಕ್ತಿಗಳು ಬೇರೆಯವರಾದರೂ ಕೂಡಾ ಅಲ್ಲಿ ಸ್ವಾತಂತ್ರ್ಯ ಅವರಲ್ಲಿಲ್ಲದೇ ನಮ್ಮಲ್ಲಿರುವುದರಿಂದ ಹೀಗೆ ಪದ ಪ್ರಯೋಗ ಮಾಡುತ್ತೇವೆ. ಇದೇ ರೀತಿ ಇಲ್ಲಿ ನಾರದರು 'ವಿಜಾನೀಹಿ' ಎಂದು ಪದ ಬಳಸಿರುವುದು 'ತಿಳಿದುಕೋ' ಎಂದು ಆಜ್ಞೆ ಮಾಡುವುದಕ್ಕಲ್ಲ, ಬದಲಿಗೆ ಜೀವಜಾತದಲ್ಲೇ ಅತಿದೊಡ್ಡ ಶಕ್ತಿಯಾದ ಚತುರ್ಮುಖನ ಸ್ವತಂತ್ರ ನಿರ್ಧಾರ ಮಾಡುವ ಶಕ್ತಿಯ ಗುರುತಿನಿಂದಾಗಿ.

ನಾರದರು ಹೇಳುತ್ತಾರೆ: "ಯಾವ ವಿದ್ಯೆ ಆತ್ಮಸ್ವರೂಪದ ಸರಿಯಾದ ವಿವರಣೆಯನ್ನು ಕೊಡುತ್ತದೋ ಆ ವಿದ್ಯೆಯನ್ನು ನನಗೆ ತಿಳಿಹೇಳು" ಎಂದು. ಈ ಹಿಂದೆ ಹೇಳಿದಂತೆ 'ಆತ್ಮ' ಎಂದರೆ ಪರಮಾತ್ಮ. ಭಗವಂತನನ್ನು ಸದಾ ಕಾಣುವ, ಆತನ ಜೊತೆಗೆ ಮಾತನಾಡುವ, ಭಗವಂತನ ಅಪರೋಕ್ಷ ಜ್ಞಾನವುಳ್ಳ ನಾರದರು ತನಗಿಂತ ಹೆಚ್ಚು ಭಗವಂತನನ್ನು ಅರಿತ ಚತುರ್ಮುಖನಲ್ಲಿ "ಭಗವಂತನ ಕುರಿತು ಹೇಳು" ಎಂದು ಕೇಳುವುದು ಅವರಲ್ಲಿ ಭಗವಂತನ ಬಗೆಗಿರುವ ಕಳಕಳಿಯನ್ನು ತೋರಿಸುತ್ತದೆ. ಜ್ಞಾನಕ್ಕೆ ಮಿತಿ ಎನ್ನುವುದಿಲ್ಲ. ಅದನ್ನು ಎಷ್ಟು ತಿಳಿದರೂ ತಿಳಿಯದೇ ಇರುವುದು ಅನಂತವಾಗಿಯೇ ಉಳಿಯುತ್ತದೆ. ಹೀಗಾಗಿ ನಾರದರು "ಭಗವಂತನ ಅರಿವನ್ನು ಕೊಡತಕ್ಕಂತಹ ವಿಷಯವನ್ನು ನನಗೆ ಹೇಳು" ಎಂದು ಚತುರ್ಮುಖನಲ್ಲಿ ಪ್ರಾರ್ಥಿಸಿಕೊಳ್ಳುತ್ತಾರೆ.

ಯದ್ರೂಪಂ ಯದಧಿಷ್ಠಾನಂ ಯತಃ ಸೃಷ್ಟಮಿದಂ ಪ್ರಭೋ ।
ಯತ್ಸಂಸ್ಥಂ ಯತ್ಪರಂ ಯಚ್ಚ ತತ್ ತತ್ತ್ವಂ ವದ ತತ್ತ್ವತಃ ॥೦೨॥

ತಾನು ತಿಳಿಯಬೇಕಾದ ಸಂಗತಿ ಯಾವುದು ಎನ್ನುವುದನ್ನು ವಿವರಿಸುತ್ತಾ ನಾರದರು ಹೇಳುತ್ತಾರೆ: "ಈ ಜಗತ್ತಿಗೂ ಮತ್ತು ಭಗವಂತನಿಗೂ ಇರುವ ಸಂಬಂಧ ಏನು ಎನ್ನುವುದನ್ನು ತಾವು ತಿಳಿಸಿ ಹೇಳಬೇಕು" ಎಂದು. ಈ ಜಗತ್ತು ಯಾವ ಭಗವಂತನ ರೂಪವೋ ಅಂತಹ ಭಗವಂತನ ಬಗೆಗೆ ಹೇಳಿ ಎಂದು ನಾರದರು ಚತುರ್ಮುಖನಲ್ಲಿ ಕೇಳಿಕೊಳ್ಳುತ್ತಾರೆ. ನಾರದರ ಈ ಪ್ರಶ್ನೆಯನ್ನು ಗಮನಿಸಿದರೆ ನಮಗೆ ಸ್ವಲ್ಪ ಗೊಂದಲವಾಗುತ್ತದೆ. ಈ ಜಗತ್ತು ಭಗವಂತನ ರೂಪವಾಗುವುದು ಹೇಗೆ ಎನ್ನುವ ಪ್ರಶ್ನೆ ನಮ್ಮಲ್ಲಿ ಮೂಡುತ್ತದೆ. ಈ ಗೊಂದಲ ಪರಿಹಾರವಾಗಬೇಕಾದರೆ ನಾವು ಇಲ್ಲಿ ಬಳಕೆಯಾಗಿರುವ 'ರೂಪ' ಎನ್ನುವ ಪದದ ಮೂಲಾರ್ಥವನ್ನು ತಿಳಿಯಬೇಕು. '*ರೂಪ-ರೂಪಕ್ರಿಯಾಂ*' ಎನ್ನುವುದು ಧಾತು. ಆದ್ದರಿಂದ ಇಲ್ಲಿ ನಾರದರು "ಈ ಜಗತ್ತಿಗೆ ರೂಪ ಕೊಡುವವನ ಕುರಿತು ಹೇಳು" ಎಂದು ಚತುರ್ಮುಖನಲ್ಲಿ ಕೇಳಿದ್ದೇ ವಿನಃ, "ಭಗವಂತನೇ ಜಗತ್ತಿನ ರೂಪದಲ್ಲಿ ಪರಿಣಾಮಗೊಂಡ ಬಗೆಯನ್ನು ಹೇಳು" ಎಂದು ಕೇಳಿರುವುದಲ್ಲ. *ಬಹುಚಿತ್ರಜಗದ್ ಬಹುಧಾಕರಣಾತ್ ಪರಶಕ್ತಿರನನ್ತಗುಣಃ ಪರಮಃ ।* ಈ ಅನಂತವಾದ ವಿಶ್ವದಲ್ಲಿ ಒಂದು ಇನ್ನೊಂದರಂತಿಲ್ಲ. ಇಲ್ಲಿ ಅನಂತ ವೈವಿಧ್ಯಗಳಿವೆ. ಒಂದೇ ಮರದಲ್ಲಿ ಒಂದು ಎಲೆ ಇನ್ನೊಂದು ಎಲೆಗಿಂತ ಭಿನ್ನ! ಇಂತಹ ಜಗತ್ತಿಗೆ ರೂಪ ಕೊಟ್ಟವನ ಬಗೆಗೆ ಹೇಳು ಎಂದು ನಾರದರು ಪ್ರಾರ್ಥಿಸಿದ್ದಾರೆ.

ಮುಂದುವರಿದು ನಾರದರು ಹೇಳುತ್ತಾರೆ: "ಈ ಜಗತ್ತಿನ ಅಧಿಷ್ಠಾನ ಯಾರೋ ಅವನ ಕುರಿತು ಹೇಳು" ಎಂದು. ಅಧಿಷ್ಠಾನ ಅಂದರೆ 'ಅಧಿಕಮ್ ಸ್ಥಾನಮ್'. ಉದಾಹರಣೆಗೆ ನಾವು ಕುರ್ಚಿಯಲ್ಲಿ ಕುಳಿತಿದ್ದರೆ ಕುರ್ಚಿ ನಮಗೆ ಅಧಿಷ್ಠಾನವಲ್ಲ. ಏಕೆಂದರೆ ಕುರ್ಚಿಯನ್ನು ಹೊತ್ತಿರುವುದು ಭೂಮಿ; ಭೂಮಿಯನ್ನು ಹೊತ್ತಿರುವುದು ಸಂಕರ್ಷಣ[ಆಕರ್ಷಣ ಅಥವಾ ಗುರುತ್ವಾಕರ್ಷಣ ಶಕ್ತಿ]; ಸಂಕರ್ಷಣನನ್ನು ಹೊತ್ತಿರುವುದು ವಾಯು [ವಾತಾವರಣ/ಪ್ರಾಣಶಕ್ತಿ]; ಪ್ರಾಣನನ್ನು ಹೊತ್ತಿರುವುದು ಆ ನಾರಾಯಣ. ಆದ್ದರಿಂದ ಎಲ್ಲಕ್ಕೂ ಅಧಿಷ್ಠಾನ ಆ ಭಗವಂತ. ಅಂತಹ ಭಗವಂತನ ಕುರಿತು ಹೇಳು ಎಂದು ನಾರದರು ಚತುರ್ಮುಖನಲ್ಲಿ ಕೇಳಿಕೊಳ್ಳುತ್ತಾರೆ. ಯಾರು ಎಲ್ಲವನ್ನೂ ಸೃಷ್ಟಿಸಿದನೋ, ಯಾರು ಎಲ್ಲವುದಕ್ಕೂ ರೂಪಕೊಟ್ಟನೋ, ಯಾರು ಎಲ್ಲವುದಕ್ಕೂ ಆಧಾರವಾಗಿ ನಿಂತಿದ್ದಾನೋ, ಅಂತಹ ಭಗವಂತನ ಕುರಿತು ಕೇಳಬೇಕು ಎನ್ನುವ ಅಭಿಲಾಷೆಯನ್ನು ಇಲ್ಲಿ ನಾರದರು ವ್ಯಕ್ತಪಡಿಸಿದ್ದಾರೆ. ಈ ಶ್ಲೋಕದಲ್ಲಿ ನಾರದರು ಚತುರ್ಮುಖನನ್ನು 'ಪ್ರಭೋ' ಎಂದು ಸಂಬೋಧಿಸಿರುವುದನ್ನು ಕಾಣುತ್ತೇವೆ. ಪ್ರಕೃಷ್ಟನಾದ, ಎಲ್ಲಕ್ಕಿಂತ ಹಿರಿದಾದ ಭಗವಂತನಿಂದ ಸೃಷ್ಟನಾದ ಹಾಗೂ ಅಂತಹ ಭಗವಂತನನ್ನು ಬಲ್ಲ ನೀನು ನನಗೆ ಇವೆಲ್ಲವನ್ನೂ ತಿಳಿಸಿ ಹೇಳು ಎನ್ನುವುದು ಈ ವಿಶೇಷಣದ ಹಿಂದಿನ ತಾತ್ಪರ್ಯ.

ಈ ಶ್ಲೋಕದಲ್ಲಿ ಮೊದಲು ಜಗತ್ತಿನ ಅಧಿಷ್ಠಾನವಾಗಿರುವ ಭಗವಂತನ ಕುರಿತು ಹೇಳು ಎಂದು ಕೇಳಿದ ನಾರದರು, ಮತ್ತೆ 'ಸಂಸ್ಥಾನ'ನಾದ ಭಗವಂತನ ಕುರಿತು ಹೇಳು ಎಂದಿದ್ದಾರೆ. ಸಂಸ್ಥಾನ ಎಂದರೆ ನೇರ ಆಧಾರ. ಒಟ್ಟಿನಲ್ಲಿ ಹೇಳಬೇಕೆಂದರೆ: ಜಗತ್ತಿನ ನೇರ ಆಧಾರನೂ ಮತ್ತು ಕೊನೇಯ ಆಧಾರನೂ ಆಗಿರುವ ಭಗವಂತನ ಕುರಿತು ತಿಳಿಸಿ ಹೇಳಬೇಕು ಎನ್ನುವುದು ನಾರದರ ಪ್ರಾರ್ಥನೆ. ಇಲ್ಲಿ ಇನ್ನೊಂದು ವಿಶೇಷವಾದ ಮಾತನ್ನು ನಾರದರು ಹೇಳಿರುವುದನ್ನು ಕಾಣುತ್ತೇವೆ. ನಾರದರು ಹೇಳುತ್ತಾರೆ: "ಯಾರು ಎಲ್ಲವೂ ಆಗಿದ್ದಾನೋ ಅಂತಹ ಪರಮತತ್ತ್ವದ ಬಗ್ಗೆ ಯಥಾವತ್ತಾದ ಅರಿವನ್ನು ಕೊಡು" ಎಂದು. ಇಲ್ಲಿ 'ಎಲ್ಲವೂ ಆಗಿರುವವನು' ಎಂದರೆ ಎಲ್ಲವನ್ನೂ ಬಲ್ಲವನು, ಎಲ್ಲವನ್ನೂ ಮಾಡಬಲ್ಲ ಸರ್ವಸಮರ್ಥ ಎಂದರ್ಥ.

ಸರ್ವಂ ಹ್ಯೇತದ್ ಭವಾನ್ ವೇದ ಭೂತಭವ್ಯಭವತ್ಪ್ರಭುಃ ।
ಕರಾಮಲಕವದ್ ವಿಶ್ವಂ ವಿಜ್ಞಾನಾವಸಿತಂ ತವ ॥೦೩॥

ತಾನು ಈ ಪ್ರಶ್ನೆಯನ್ನು ಚತುರ್ಮುಖನಲ್ಲೇ ಏಕೆ ಕೇಳುತ್ತಿದ್ದೇನೆ ಎನ್ನುವುದನ್ನು ಈ ಶ್ಲೋಕದಲ್ಲಿ ನಾರದರು ಸ್ಪಷ್ಟಪಡಿಸಿದ್ದಾರೆ. ನಾರದರು ಚತುರ್ಮುಖನಲ್ಲಿ ಹೇಳುತ್ತಾರೆ: " ಎಲ್ಲವನ್ನೂ ತಿಳಿದಿರುವ ನೀವು ಭೂತಭವ್ಯಭವತ್ಪ್ರಭುಃ" ಎಂದು. ನಾರದರು ಬಳಸಿರುವ 'ಭೂತಭವ್ಯಭವತ್ಪ್ರಭುಃ' ಎನ್ನುವ ನಾಮ ಭಗವಂತನ ನಾಮವಾಗಿ ವಿಷ್ಣುಸಹಸ್ರನಾಮದಲ್ಲಿ ಬಂದಿರುವುದನ್ನು ಕಾಣುತ್ತೇವೆ. ಅದೇ ನಾಮವನ್ನು ಚತುರ್ಮುಖನ ಪರವಾಗಿ ನಾರದರು ಇಲ್ಲಿ ಬಳಸಿದ್ದಾರೆ. ಇದರ ಅರ್ಥ: "ಭಗವಂತನನ್ನು ಬಿಟ್ಟರೆ, ಹಿಂದಿನ, ಇಂದಿನ ಮತ್ತು ಮುಂದಿನ ಎಲ್ಲವುದರ ಒಡೆಯ ನೀನು" ಎಂದು. ಏಕೆಂದರೆ ಚತುರ್ಮುಖನಿಗೆ ಒಂದೊಂದು ಕಲ್ಪವೂ ಒಂದೊಂದು ದಿನದಂತೆ. ಆತ ಹಿಂದಿನ ಅನೇಕ ಕಲ್ಪಗಳಲ್ಲಿ ಅನೇಕ ಸೃಷ್ಟಿ ಮಾಡಿರುವ ಹಾಗೂ ಭವಿಷ್ಯತ್ತಿನಲ್ಲಿ ಇನ್ನೂ ಅನೇಕ ಸೃಷ್ಟಿ ಮಾಡಲಿರುವ ಮಹಾಶಕ್ತಿ. ಹೀಗಾಗಿ ಇಡೀ ಪ್ರಪಂಚ ಚತುರ್ಮುಖನಿಗೆ ನಿಚ್ಚಳ. ಭಗವಂತನ ಬಗೆಗಿನ ವಿಜ್ಞಾನ(ವಿಶಿಷ್ಟಜ್ಞಾನ/ ವಿವರವಾದ ಜ್ಞಾನ) ಬ್ರಹ್ಮ-ವಾಯುವಿಗೆ ತಿಳಿದಷ್ಟು ಇನ್ಯಾರಿಗೂ ತಿಳಿದಿರಲು ಸಾಧ್ಯವಿಲ್ಲ. ಹೀಗಾಗಿ ನಾರದರು ತಮ್ಮ ಪ್ರಶ್ನೆಯನ್ನು ನೇರವಾಗಿ ಚತುರ್ಮುಖನ ಮುಂದಿಟ್ಟಿದ್ದಾರೆ.

ಯದ್ವಿಜ್ಞಾನೋ ಯದಾಧಾರೋ ಯತ್ಪರಸ್ತ್ವಂ ಯದಾತ್ಮಕಃ ।
ಏಕಃ ಸೃಜಸಿ ಭೂತಾನಿ ಭೂತೈರೇವಾತ್ಮಮಾಯಯಾ ॥೦೪॥

ನಿಮ್ಮನ್ನು ಸೃಷ್ಟಿ ಮಾಡಿದ, ನಿಮ್ಮೊಳಗಿದ್ದು ನಿಮ್ಮನ್ನು ನಿಯಂತ್ರಿಸುವ, ನಿಮ್ಮ ಅಂತರ್ಯಾಮಿ ಬಗ್ಗೆ ನಿಮಗೆ ತಿಳಿದಿರುವಷ್ಟು ಬೇರೆ ಯಾರಿಗೆ ತಿಳಿದಿರಲು ಸಾಧ್ಯ? ಎಂದು ಪ್ರಶ್ನಿಸಿದ ನಾರದರು, ಆನಂತರ ನಮ್ಮಂತಹ ಸಾಮಾನ್ಯ ಜನರ ಪರವಾಗಿ ಒಂದು ಪೂರ್ವಪಕ್ಷ ಮಾಡುವುದನ್ನು ಈ ಶ್ಲೋಕದಲ್ಲಿ ಕಾಣುತ್ತೇವೆ. ಅಸಂಗತವಾದುದನ್ನು ಕೇಳಿ ಸಂಗತವನ್ನು ಪಡೆಯುವ ಸಲುವಾಗಿ ನಾರದರು ಹೇಳುತ್ತಾರೆ: "ನನಗನಿಸಿದಂತೆ ಈ ಜಗತ್ತನ್ನು ಸೃಷ್ಟಿ ಮಾಡುವ ಇನ್ನೊಂದು ಶಕ್ತಿ ಇಲ್ಲ; ಎಲ್ಲವೂ ನೀನೇ; ನಿನ್ನಿಂದಾಚೆಗೇನಿದೆ?" ಎಂದು. ಒಬ್ಬ ಸಾಮಾನ್ಯನಿಗೆ ಈ ರೀತಿ ಯೋಚನೆ ಬಂದರೆ ಅದಕ್ಕೆ ಚತುರ್ಮುಖನ ಉತ್ತರವೇನು ಎಂದು ಚತುರ್ಮುಖನ ಬಾಯಿಯಿಂದಲೇ ಕೇಳುವುದಕ್ಕಾಗಿ ನಾರದರು ಇಲ್ಲಿ ಈ ರೀತಿ ಹೇಳಿದ್ದಾರೆ. "ಪಂಚಭೂತದ ಸೃಷ್ಟಿ, ಗಂಡು-ಹೆಣ್ಣಿನ ಸೃಷ್ಟಿ, ಜೀವದಿಂದ ಜೀವದ ಸೃಷ್ಟಿ, ಇವೆಲ್ಲವೂ ನಿನ್ನ ಸ್ವರೂಪಭೂತ ಸಾಮರ್ಥ್ಯದಿಂದಲೇ ನಡೆಯುತ್ತಿರುವುದು" ಎನ್ನುತ್ತಾರೆ ನಾರದರು.

ಆತ್ಮನ್ ಭಾವಯಸೇ ತಾನಿ ನ ಪರಾಗ್ ಭಾವಯೇಃ ಸ್ವಯಮ್ ।
ಆತ್ಮಶಕ್ತಿಮವಷ್ಟಭ್ಯ ಸೂತ್ರನಾಭಿರಿವಾಕ್ಲಮಃ ॥೦೫॥

"ಎಲ್ಲವನ್ನೂ ಸೃಷ್ಟಿ ಮಾಡುವವನೂ ನೀನೇ; ಕೊನೆಗೊಂದುದಿನ ಎಲ್ಲವನ್ನೂ ಸಂಹಾರ ಮಾಡುವವನೂ ನೀನೇ. ನೀನು ಇನ್ನೊಂದು ಬಾಹ್ಯ ಶಕ್ತಿಯ ನೆರವಿನಿಂದ ಇದೆಲ್ಲವನ್ನೂ ಮಾಡುತ್ತಿಲ್ಲ, ಬದಲಿಗೆ ಸ್ವಸಾಮರ್ಥ್ಯದಿಂದ ಮಾಡುತ್ತಿರುವೆ. ಹೇಗೆ ಜೇಡ ತನ್ನ ಹೊಟ್ಟೆಯಿಂದ ನೂಲನ್ನು ತೆಗೆದು ಬಲೆಯನ್ನು ನಿರ್ಮಿಸುತ್ತದೋ ಹಾಗೇ, ನೀನು ಪ್ರಪಂಚವೆಂಬ ಬಲೆಯನ್ನು ನಿರ್ಮಿಸಿ ಅದರೊಳಗೆ ನಮ್ಮನ್ನಿಟ್ಟಿರುವೆ" ಎನ್ನುತ್ತಾರೆ ನಾರದರು.

ನಾಹಂ ವೇದ ಪರಂ ತ್ವಸ್ಮಾನ್ನಾವರಂ ನ ಸಮಂ ವಿಭೋ ।
ನಾಮರೂಪಗುಣೈರ್ಭಾವ್ಯಂ ಸದಸತ್ ಕಿಂಚಿದನ್ಯತಃ ॥೦೬॥

"ನೀನು ನಿರ್ಮಿಸಿರುವ ಈ ಪ್ರಪಂಚವನ್ನು ನೋಡಿದರೆ ನಿನ್ನಿಂದಾಚೆಗೆ ನಿನಗೆ ಸಮನಾಗಿರುವ ಅಥವಾ ನಿನಗಿಂತ ಉನ್ನತವಾಗಿರುವ ಶಕ್ತಿ ಇನ್ನೊಂದಿಲ್ಲ ಎಂದು ನನಗನಿಸುತ್ತದೆ. ನಾಮ-ರೂಪ-ಕ್ರಿಯಾತ್ಮಕವಾಗಿರುವ ಈ ಪ್ರಪಂಚದಲ್ಲಿ ಮೂಲತಃ ಇರುವುದು ಎರಡೇ ಬಗೆ. ಒಂದು ಕಣ್ಣಿಗೆ ಕಾಣುವಂತಹದ್ದು(ಸತ್) ಮತ್ತು ಇನ್ನೊಂದು ಕಣ್ಣಿಗೆ ಕಾಣದೇ ಇರುವಂತಹದ್ದು(ಅಸತ್). ಇಂತಹ ಕಾರ್ಯಕಾರಣಾತ್ಮಕ ಪ್ರಪಂಚ ಕೇವಲ ನಿನ್ನಿಂದ ನಿರ್ಮಾಣವಾಗಿದೆ ಎಂದು ನಾನು ತಿಳಿದುಕೊಂಡಿದ್ದೇನೆ" ಎಂದು ತಮ್ಮ ಪೂರ್ವಪಕ್ಷ ಹೇಳಿಕೆಯನ್ನು ಮುಂದಿಟ್ಟ ನಾರದರು, ಈ ತಿಳುವಳಿಕೆ ಹಿಂದಿನ ಒಂದು ಸಮಸ್ಯೆಯನ್ನು ಚತುರ್ಮುಖನ ಮುಂದಿಡುತ್ತಾರೆ.

ಸ ಭವಾನಚರದ್ ಘೋರಂ ಯತ್ ತಪಃ ಸುಸಮಾಹಿತಃ ।
ತೇನ ಖೇದಯಸೇ ನಸ್ತ್ವಂ ಪರಾಂ ಶಂಕಾಂ ಚ ಯಚ್ಛಸಿ ॥೦೭॥

"ಎಲ್ಲವೂ ನೀನೇ ಎಂದು ನನಗನಿಸಿದರೂ ಕೂಡಾ, ಅಂತಹ ನೀನು ಸೃಷ್ಟಿಯ ಆರಂಭದಲ್ಲಿ ಸಾವಿರಾರು ವರ್ಷಗಳ ತನಕ, ನಿರ್ವಿಕಾರನಾಗಿ, ಏಕಾಗ್ರತೆಯಿಂದ ತಪಸ್ಸು ಮಾಡಿರುವುದು ಯಾರನ್ನು ಕುರಿತು? ಈ ಸಮಸ್ಯೆಗೆ ಉತ್ತರ ಕಾಣದೇ ಗೊಂದಲಕ್ಕೊಳಗಾಗಿದ್ದೇನೆ" ಎಂದು ತಮ್ಮ ಸಮಸ್ಯೆಯನ್ನು ಚತುರ್ಮುಖನ ಮುಂದೆ ತೋಡಿಕೊಳ್ಳುತ್ತಾರೆ ನಾರದರು.

ಏತನ್ಮೇ ಪೃಚ್ಛತಃ ಸರ್ವಂ ಸರ್ವಜ್ಞ ಸಕಲೇಶ್ವರ ।
ವಿಜಾನೀಹಿ ಯಥೈವೇದಮಹಂ ಬುಧ್ಯೇSನುಶಾಸಿತಃ ॥೦೮॥

ಚತುರ್ಮುಖನೇ ಪ್ರಪಂಚದ ಕೊನೆ, ಆತನಿಂದಲೇ ಎಲ್ಲವೂ ಸೃಷ್ಟಿಯಾಗಿರುವುದು, ಅವನೇ ಈ ಪ್ರಪಂಚದ ಮೂಲಾಧಾರ ಎಂದು ತಿಳಿದುಕೊಂಡರೆ, ಅಂತಹ ಚತುರ್ಮುಖ ಆರಾಧನೆ ಮಾಡುತ್ತಿರುವ ಶಕ್ತಿ ಯಾವುದು? ಆ ಮಹಾಶಕ್ತಿಯ ಬಗೆಗೆ ಸಮಗ್ರವಾಗಿ ವಿವರಿಸಬೇಕೆಂದು ನಾರದರು ತಮ್ಮ ತಂದೆಯಾದ ಚತುರ್ಮುಖನಲ್ಲಿ ಕೇಳಿಕೊಳ್ಳುತ್ತಾರೆ. ತಾವು ಈ ಪ್ರಶ್ನೆಯನ್ನು ಚತುರ್ಮುಖನಲ್ಲೇ ಏಕೆ ಕೇಳುತ್ತಿರುವುದು ಎನ್ನುವುದನ್ನು ವಿವರಿಸುತ್ತಾ ನಾರದರು ಹೇಳುತ್ತಾರೆ: " ಹೇಗೆ ಹೇಳಿದರೆ ನನಗೆ ತಿಳಿದೀತು ಎನ್ನುವುದನ್ನು ಎಲ್ಲವನ್ನೂ ತಿಳಿದಿರುವ ನೀವು ಬಲ್ಲಿರಿ. ಹಾಗಾಗಿ ನನಗೆ ಮನವರಿಕೆಯಾಗುವಂತೆ ತಾವು ಅನುಶಾಸನ ಮಾಡಬೇಕು" ಎಂದು ವಿನಂತಿಸುತ್ತಾರೆ ನಾರದರು.

ಬ್ರಹ್ಮೋವಾಚ--

ಸಮ್ಯಕ್ ಕಾರುಣಿಕಸ್ಯೇದಂ ವತ್ಸ ತೇ ವಿಚಿಕಿತ್ಸಿತಮ್ ।
ಯದಹಂ ಚೋದಿತಃ ಸೌಮ್ಯ ಭಗವದ್ವೀರ್ಯದರ್ಶನೇ ॥೦೯॥

ನಾರದರ ಪ್ರಶ್ನೆಯನ್ನು ಆಲಿಸಿದ ಚತುರ್ಮುಖ ಹೇಳುತ್ತಾನೆ: "ನಿನ್ನ ಕರುಣೆ ಬಹಳ ದೊಡ್ಡದು ಮಗನೇ" ಎಂದು. ಈ ಹಿಂದೆ ಹೇಳಿದಂತೆ ನಮ್ಮ ಮೇಲಿನ ಕಾರುಣ್ಯದಿಂದ, ನಮ್ಮ-ನಿಮ್ಮೆಲ್ಲರ ಪರವಾಗಿ ನಾರದರು ಪ್ರಶ್ನೆ ಹಾಕಿರುವುದು. ಹೀಗೆ ಲೋಕದ ಪರವಾಗಿ, ಲೋಕದ ಸಂಶಯವನ್ನು ನೇರ ಚತುರ್ಮುಖನ ಉತ್ತರದಿಂದ ಪರಿಹರಿಸುವ ಉದ್ದೇಶದಿಂದ ನಾರದರು ಈ ರೀತಿ ಪ್ರಶ್ನೆ ಮಾಡಿರುವುದರಿಂದ ಚತುರ್ಮುಖ ಅವರನ್ನು ಪ್ರಶಂಸಿಸುತ್ತಿದ್ದಾನೆ. ಇಲ್ಲಿ ಚತುರ್ಮುಖ ನಾರದರನ್ನು "ಸೌಮ್ಯ" ಎಂದು ಸಂಬೋಧಿಸುವುದನ್ನು ಕಾಣುತ್ತೇವೆ. ತಮ್ಮ ಒಡನಾಟ ಮಾಡಿದವರಿಗೆ ಚಂದ್ರನ ಬೆಳಕಂತೆ ಅಹ್ಲಾದ ನೀಡುವ ಸ್ವಭಾವ ಉಳ್ಳವರು ಸೌಮ್ಯರು; ಭಗವಂತನ ವಿಷಯೀಕವಾದ ಉತ್ಕೃಷ್ಟ ಜ್ಞಾನ(ಉಮ) ಉಳ್ಳವರ (ಸೋಮರ) ಗುಣ-ಸ್ವಭಾವ ಸೌಮ್ಯ. "ನೀನು ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡವನು, ನಿನಗೆ ಭಗವಂತನೇ ಎಲ್ಲವನ್ನೂ ಸೃಷ್ಟಿ ಮಾಡಿರುವುದು ಎಂಬುದು ತಿಳಿದಿದೆ. ಆದರೂ ಲೋಕದ ಜನರ ಮೇಲಿನ ಕಾರುಣ್ಯದಿಂದ, ಅವರ ಸಂಶಯ ನಿವಾರಣೆಗಾಗಿ ಈ ರೀತಿ ಪ್ರಶ್ನೆ ಮಾಡಿದೆ" ಎನ್ನುವುದು ಇಲ್ಲಿ ಬಳಸಿರುವ 'ಸೌಮ್ಯ' ಎನ್ನುವ ವಿಶೇಷಣದ ಹಿಂದಿನ ತಾತ್ಪರ್ಯ. ಮುಂದುವರಿದು ಚತುರ್ಮುಖ ಹೇಳುತ್ತಾನೆ: "ನನಗೆ ನಿನ್ನ ಪ್ರಶ್ನೆಯಿಂದ ಬಹಳ ಸಂತೋಷವಾಗಿದೆ. ನಿನ್ನ ಪ್ರಶ್ನೆಯ ನೆಪದಲ್ಲಾದರೂ, ನಾನು ಸದಾ ಮನದಲ್ಲಿ ಚಿಂತಿಸುವ ಭಗವಂತನ ಬಗೆಗೆ ಮಾತನಾಡುವ ಅವಕಾಶ ನನಗೆ ದೊರಕಿತಲ್ಲಾ" ಎಂದು.

ನಾನೃತಂ ಬತ ತಚ್ಚಾಪಿ ಯಥಾ ಮಾಂ ಪ್ರಬ್ರವೀಷಿ ಭೋಃ ।
ಅವಿಜ್ಞಾಯ ಪರಂ ಮತ್ತ ಏತಾವತ್ತ್ವಂ ಯತೋ ಹಿ ಮೇ ॥೧೦॥

"ನಾನೇ ಸೃಷ್ಟಿ ಮಾಡುವವನು, ನನ್ನಿಂದ ಮೇಲೆ ಇನ್ನ್ಯಾವ ಶಕ್ತಿಯೂ ಇಲ್ಲಾ ಎಂದಿಯಲ್ಲಾ, ಸುಳ್ಳಲ್ಲವೇ ಇದು? ನನ್ನನ್ನು ಆದಿಜೀವನಾಗಿ ಸೃಷ್ಟಿಸಿದ ಆ ಭಗವಂತನನ್ನು ಮರೆತು ಮಾತನಾಡುವುದು ಎಲ್ಲಾದರೂ ಉಂಟೇ? ಅಂತಹ ಮಾತನ್ನು ಪರಿಹಾಸ್ಯಕ್ಕಾಗಿ ಆಡಿದರೂ ಕೂಡಾ ಆ ಮಾತಿನಲ್ಲಿ ಭಗವಂತನ ವಿಸ್ಮೃತಿ ಬಂತಲ್ಲವೇ? ನನ್ನನ್ನು ಜೀವಜಾತದಲ್ಲೇ ಹಿರಿಯ ಜೀವವನ್ನಾಗಿ ಸೃಷ್ಟಿಸಿದ ಆ ಭಗವಂತನನ್ನೇ ಮರೆತರೆ ಹೇಗೆ?" ಎಂದು ಕೇಳುತ್ತಾನೆ ಚತುರ್ಮುಖ. ಇಲ್ಲಿ "*ಏತಾವತ್ತ್ವಂ ಯತೋ ಹಿ ಮೇ*" ಎನ್ನುವ ಮಾತಿನ ಹಿಂದಿನ ಧ್ವನಿಯನ್ನು ನಾವು ಗಮನಿಸಬೇಕು. "ಭಗವಂತ ನನಗೆಷ್ಟು ಸಾಮರ್ಥ್ಯ ಕೊಟ್ಟಿದ್ದಾನೋ, ಆ ಪರಿಮಿತಿಯಲ್ಲಿ ನಾನು ಕಾರ್ಯ ನಿರ್ವಹಿಸುತ್ತೇನೆ. ಅದಕ್ಕಿಂತ ಹೆಚ್ಚು ಇನ್ನೇನೂ ಇಲ್ಲ. ಹೀಗಿರುವಾಗ ಇಂತಹ ಪ್ರಶ್ನೆಯೇ ಬರಬಾರದಿತ್ತು" ಎನ್ನುತ್ತಾನೆ ಚತುರ್ಮುಖ.
"ನಿನ್ನ ಪ್ರಶ್ನೆಗೆ ಉತ್ತರಿಸುತ್ತೇನೆ, ಆದರೆ ಭಗವಂತನ ವಿಸ್ಮೃತಿಯಿಂದ ಕೂಡಿದ ಪ್ರಶ್ನೆ ಮಾಡಿದ ದೋಷ ಪರಿಹಾರಕ್ಕಾಗಿ ಮತ್ತು ಭಗವಂತ 'ನನ್ನಲ್ಲಿ ನಿಂತು ನುಡಿಸಲಿ' ಎನ್ನುವ ಪ್ರಾರ್ಥನೆಯೊಂದಿಗೆ ಮೊದಲು ಆತನ ಧ್ಯಾನ ಮಾಡೋಣ" ಎನ್ನುತ್ತಾ ಭಗವಂತನನ್ನು ಸ್ತುತಿಸುತ್ತಾನೆ ಚತುರ್ಮುಖ.

ನಮಸ್ತಸ್ಮೈ ಭಗವತೇ ವಾಸುದೇವಾಯ ಧೀಮಹಿ ।
ಯನ್ಮಾಯಯಾ ದುರ್ಜಯಯಾ ಮಾಂ ವದಂತಿ ಜಗದ್ಗುರುಮ್ ॥೧೨॥

*'ಓಂ ನಮೋ ಭಗವತೇ ವಾಸುದೇವಾಯ'* ಎನ್ನುವ ದ್ವಾದಶಾಕ್ಷರ ಮಂತ್ರ ಮತ್ತು *'ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್ ।'* ಎನ್ನುವ ಚತುರ್ವಿಂಶಾSಕ್ಷರದ ವಿಷ್ಣು ಗಾಯತ್ರಿ

ಮಂತ್ರದ ಸಮ್ಮಿಲನವನ್ನು ಚತುರ್ಮುಖನ ಈ ಪ್ರಾರ್ಥನೆಯಲ್ಲಿ ಕಾಣಬಹುದು. ತನ್ನ ಉಪದೇಶಕ್ಕೂ ಮೊದಲು ಚತುರ್ಮುಖ ಈ ರೀತಿ ಪ್ರಾರ್ಥನೆ ಮಾಡುತ್ತಿದ್ದಾನೆ ಎಂದರೆ ಇದು ಆತನ ನಿತ್ಯ ಉಪಾಸನೆಯ ಭಾಗ ಎನ್ನಬಹುದು. "ಯಾರಿಂದ ನಾನು ಜಗತ್ತಿನ ಆದಿಜೀವನಾಗಿ ಸೃಷ್ಟಿಯಾದೆನೋ, ಯಾರ ಮುಂದೆ ನನ್ನ ಸಾಮರ್ಥ್ಯ ಅತ್ಯಲ್ಪವೋ, ಅಂತಹ ವಾಸುದೇವನಿಗೆ ನಮಸ್ಕಾರ" ಎಂದಿದ್ದಾನೆ ಚತುರ್ಮುಖ. ಇಲ್ಲಿ "ವಾಸುದೇವ" ಎನ್ನುವ ವಿಶೇಷ ನಾಮದಿಂದ ಭಗವಂತನನ್ನು ಸಂಬೋಧಿಸಲಾಗಿದೆ. ಲೋಕದಲ್ಲಿ ವಾಸುದೇವ ಎನ್ನುವ ಭಗವಂತನ ನಾಮವನ್ನು 'ವಸುದೇವನ ಮಗ ಶ್ರೀಕೃಷ್ಣ' ಎನ್ನುವ ಅರ್ಥದಲ್ಲಿ ಕಾಣುತ್ತಾರೆ. ಆದರೆ ಈ ನಾಮ ಭಗವಂತನ ಶ್ರೀಕೃಷ್ಣ ಅವತಾರಕ್ಕೂ ಮೊದಲು ಇದ್ದ ಅಪ್ರಾಕೃತ ನಾಮ. ಇದು ಪ್ರಪಂಚದಲ್ಲಿ ಒಂದು ಕಾಲಘಟ್ಟದಲ್ಲಿ ನಡೆದ ಘಟನೆಯಿಂದ ಬಂದ ಹೆಸರಲ್ಲ. ಈ ಹಿಂದೆ ಹೇಳಿದಂತೆ ವಾಸುದೇವ ಎನ್ನುವ ನಾಮದ ಅರ್ಥವನ್ನು ನಾವು ಮುಂದೆ ಭಾಗವತದಲ್ಲೇ ಕಾಣುತ್ತೇವೆ. ***ಸತ್ತ್ವಂ ವಿಶುದ್ಧಂ ವಸುದೇವಶಬ್ದಿತಂ(೪-೩೦-೨೩).*** ಶುದ್ಧ ಮನಸ್ಸಿಗೆ ಗೋಚರನಾಗುವ ಸರ್ವವ್ಯಾಪ್ತ ಭಗವಂತ ವಾಸುದೇವ. ನಮ್ಮ ಹೃದಯ ಕಮಲದಲ್ಲಿ ಸದಾ ವಾಸವಾಗಿರುವ ಆದರೆ ತನ್ನನ್ನು ಸದಾ ಮುಚ್ಚಿಕೊಂಡಿರುವ ಮತ್ತು ಪರಿಶುದ್ಧ ಮನಸ್ಸಿಗೆ ಧ್ಯಾನದಲ್ಲಿ ಬೆಳಕಾಗಿ ಗೋಚರನಾಗುವ ಭಗವಂತ ವಾಸುದೇವ. ಸೃಷ್ಟಿಯ ಪೂರ್ವದಲ್ಲಿ, ಚತುರ್ಮುಖ ಹುಟ್ಟುವ ಮೊದಲು ಆವಿರ್ಭಾವಗೊಂಡ ಭಗವಂತನ ಮೋಕ್ಷಪ್ರದ ರೂಪ ವಾಸುದೇವ ರೂಪ.

ವಿಷ್ಣು ಗಾಯತ್ರಿಯಲ್ಲಿ 'ನಾರಾಯಣಾಯ' ಎಂದರೆ ನಾರಾಯಣನಿಗೋಸ್ಕರ ಎಂದರ್ಥವಲ್ಲ. ನಾರಾಯಣನನ್ನು ನಾವು ಬಲ್ಲೆವು; ನಮ್ಮಿಂದ ಕ್ರಿಯೆ ಮಾಡಿಸುವ ಪರಶಕ್ತಿ ಆತ ಎನ್ನುವುದು ನಮಗೆ ತಿಳಿದಿದೆ; ನಮ್ಮ ಎಲ್ಲಾ ಅರಿವು ಇರುವುದು ಅಂತಹ ನಾರಾಯಣನನ್ನು ತಿಳಿಯುವುದಕ್ಕೋಸ್ಕರ ಮತ್ತು ಆತನ ಅನುಗ್ರಹ ಪ್ರೀತಿ ಪಡೆಯುವುದಕ್ಕೋಸ್ಕರ ಎನ್ನುತ್ತದೆ ವಿಷ್ಣು ಗಾಯತ್ರಿ. ಇಲ್ಲಿ ವಿದ್ಮಹೇ ಎನ್ನುವ ಪದದ ಹಿಂದೆ ನಮಸ್ಕಾರದ ಧ್ವನಿ ಇದೆ. ನಾರಾಯಣಾಯ ವಿದ್ಮಹೇ ಎಂದರೆ ನಾರಾಯಣಾಯ ನಮಃ. "ಯಾರು ತನ್ನ ಅರಿವನ್ನು ನನಗೆ ಕೊಟ್ಟನೋ ಅಂತಹ ಭಗವಂತನಿಗೆ ನನ್ನ ನಮಸ್ಕಾರ" ಎನ್ನುತ್ತದೆ ಈ ಮಂತ್ರ.

ವಿಷ್ಣು ಗಾಯತ್ರಿಯಲ್ಲಿ ನಾರಾಯಣ, ವಾಸುದೇವ ಮತ್ತು ವಿಷ್ಣು ಎನ್ನುವ ಭಗವಂತನ ಮೂರು ನಾಮಗಳನ್ನು ಕಾಣುತ್ತೇವೆ. ನಾರಾಯಣ ಎನ್ನುವುದು ಭಗವಂತನ ಮೂಲರೂಪದ ಹೆಸರು. ಮೂಲರೂಪದಿಂದಾದ ಮೊದಲ ಆವಿಷ್ಕಾರವೇ ವಾಸುದೇವ ರೂಪ. ಹೀಗಾಗಿ ಮೊದಲು ನಾರಾಯಣನಿದ್ದ, ಇದ್ದವನು ತನ್ನಿಂದ ತಾನೇ ಇನ್ನೊಂದು ರೂಪವಾಗಿ(ವಾಸುದೇವನಾಗಿ) ಆವಿರ್ಭಾವಗೊಂಡ. ನಂತರ ಸಂಕರ್ಷಣ, ಅನಿರುದ್ಧ ಮತ್ತು ಪ್ರದ್ಯುಮ್ನ ರೂಪಗಳಾದವು. ಈ ರೀತಿ ಚತುರ್ಮೂರ್ತಿಯಾಗಿ ಆವಿರ್ಭಾವಗೊಂಡ ಭಗವಂತನಿಂದ ಚತುರ್ಮುಖ ಬ್ರಹ್ಮನ ಸೃಷ್ಟಿಯಾಯಿತು. **[...*ನಾರಾಯಣಾತ್ ಬ್ರಹ್ಮ ಜಾಯತೇ,...*** ನಾರಾಯಣ ಉಪನಿಷತ್ತು**]** ಆನಂತರ ಚತುರ್ಮುಖನ ಮುಖೇನ ಸೃಷ್ಟಿಯಾದ ಪ್ರಪಂಚದ ಪಾಲನೆಗಾಗಿ ಭಗವಂತ ವಿಷ್ಣು ರೂಪದಲ್ಲಿ ಆವಿರ್ಭಾವಗೊಂಡ.[ಈ ಕುರಿತು ಭಾಗವತದಲ್ಲೇ ಮುಂದೆ ವಿವರಗಳನ್ನು ಕಾಣಬಹುದು].

ಭಗವಂತನ 'ನಾರಾಯಣ' ಎನ್ನುವ ನಾಮಕ್ಕೆ ವಿಶೇಷ ಅರ್ಥವಿದೆ. ***ನಾಸದಾಸೀನ್ನೋ ಸದಾಸೀತ್ ತದಾನೀಮಿತಿ |*** ಯಾರು ಯಾವುದೂ ಇಲ್ಲದಾಗ ಇದ್ದನೋ-ಆತನೇ ನಾರಾಯಣ. ಯಾವುದೂ ಇಲ್ಲದೇ ಇದ್ದಾಗ ನಾರಾಯಣ ಎಲ್ಲಿದ್ದ ಎಂದರೆ ಆತ ಪ್ರಳಯ ಸಮುದ್ರದಲ್ಲಿ ಮಲಗಿದ್ದ ಎನ್ನುತ್ತದೆ ಶಾಸ್ತ್ರ. ಇಲ್ಲಿ ಒಂದು ಪ್ರಶ್ನೆ ಬರುತ್ತದೆ. ಯಾವುದೂ ಇಲ್ಲದೇ ಇದ್ದಾಗ ಸಮುದ್ರ ಎಲ್ಲಿಂದ ಬಂತು ಎಂದು. ಇದನ್ನು ವ್ಯಾಸರು ಮಹಾಭಾರತದಲ್ಲಿ ವಿವರಿಸಿರುವುದನ್ನು ಕಾಣುತ್ತೇವೆ. ***"ಆಪೋ ನಾರಾಃ ಇತಿ ಪ್ರೋಕ್ತಃ ಆಪೋ ವೈ ನಾರ-ಸೂನವಃ | ಅಯನಂ ತಸ್ಯ ತಃ ಪೂರ್ವಂ ತೇನ ನಾರಾಯಣ ಇತಿ***

***ಸ್ಮೃತಃ".*** ಭಗವಂತ ಪ್ರಳಯೋದಕದಲ್ಲಿ ಮಲಗಿದ್ದ. ನಮಗೆ ತಿಳಿದಂತೆ ಪ್ರಳಯಕಾಲದಲ್ಲಿ ಯಾವ ವಸ್ತುವೂ ಇಲ್ಲವಾಗುವುದಿಲ್ಲ, ಬದಲಿಗೆ ಅದು ತನ್ನ ರೂಪವನ್ನು ಕಳೆದುಕೊಂಡು ಸೂಕ್ಷ್ಮರೂಪದ ಪರಮಾಣು ಸಮುದ್ರವಾಗಿ ಮಾರ್ಪಾಟಾಗುತ್ತದೆ. ಇಂತಹ ಪರಮಾಣು ಸಮುದ್ರದಲ್ಲಿ ಆ ನಾರಾಯಣ ಪವಡಿಸಿದ್ದ. ಪ್ರಳಯ ಕಾಲದಲ್ಲಿ ಏನೂ ಇರಲಿಲ್ಲ ಎಂದರೆ ಯಾವುದೇ ಆಕಾರವಿರಲಿಲ್ಲ, ಎಲ್ಲವೂ ಪರಮಾಣು ರೂಪದಲ್ಲಿತ್ತು ಎಂದರ್ಥ. ಇಂತಹ ಪರಮಾಣುಗಳಿಂದ ಕಾಣುವ ವಿವಿಧ ರೂಪದ ನಿರ್ಮಾಣವೇ 'ಸೃಷ್ಟಿ'. ಒಟ್ಟಿನಲ್ಲಿ ಹೇಳಬೇಕೆಂದರೆ ಸೃಷ್ಟಿ ಪೂರ್ವದಲ್ಲಿ ಜಗತ್ತಿನ ಮೂಲದ್ರವ್ಯವಾದ ಸೂಕ್ಷ್ಮ ಪ್ರಕೃತಿಯೆಂಬ ಪ್ರಳಯ ಸಮುದ್ರದಲ್ಲಿ ಪವಡಿಸಿರುವ ಭಗವಂತನೇ ನಾರಾಯಣ. "ಅಂತಹ ನಿರ್ದೋಷ, ಸಕಲಗುಣಪೂರ್ಣ, ಆನಂದಮಯ ನಾರಾಯಣನನ್ನು ನಾನು ಬಲ್ಲೆ" ಎನ್ನುತ್ತಾನೆ ಚತುರ್ಮುಖ.

ಭಗವಂತ ಈ ಸೃಷ್ಟಿ ನಿರ್ಮಾಣ ಮಾಡಿರುವುದು ತನ್ನ ಯಾವುದೋ ಒಂದು ಕೊರತೆ ನೀಗಿಸಿಕೊಳ್ಳುವುದಕ್ಕಾಗಿ ಅಲ್ಲ. ಏಕೆಂದರೆ ಸೃಷ್ಟಿಯ ಮೊದಲು ಆತನಿಗೆ ಯಾವುದೇ ಕೊರತೆ ಇರಲಿಲ್ಲ. ಆತ ಸದಾ ಆನಂದಮಯ. ಸೃಷ್ಟಿ ನಿರ್ಮಾಣವಾದ ನಂತರ ಭಗವಂತ ತಾನು ಸೃಷ್ಟಿಸಿದ ಪ್ರಪಂಚಕ್ಕೆ ಆಶ್ರಯ/ಆಧಾರನಾಗಿ ನಿಂತ. ಹೀಗೆ ನರರ ಸಮುದಾಯದಿಂದ ಗಮ್ಯನಾಗಿ, ಜ್ಞೇಯನಾಗಿ, ಅರಿವಿಗೆ ಗೋಚರನಾಗಿ, ಕೊನೆಗೆ ಮೋಕ್ಷದಲ್ಲಿ ಆಶ್ರಯನಾಗಿ ನಿಲ್ಲುವವ ನಾರಾಯಣ. "ಅಂತಹ ವಾಸುದೇವನಿಗೆ ನಮಸ್ಕಾರ" ಎನ್ನುತ್ತಾನೆ ಚತುರ್ಮುಖ.

ಈ ಹಿಂದೆ ಹೇಳಿದಂತೆ ಭಗವಂತನ ವಾಸುದೇವ ರೂಪದಿಂದ ಚತುರ್ಮುಖನ ಸೃಷ್ಟಿಯಾಯಿತು. ಚತುರ್ಮುಖನ ಮುಖೇನ ಈ ಪ್ರಪಂಚ ನಿರ್ಮಾಣವಾಯಿತು. ಹೀಗೆ ಸೃಷ್ಟಿಯಾದ ಪ್ರಪಂಚ ಅಳಿವಿನ ದಾರಿಯನ್ನು ಕಾಣದೇ ಉಳಿವಿನತ್ತ ಸಾಗಲು ಒಂದು ಶಕ್ತಿ ಬೇಕಾಗಿತ್ತು. ಅದಕ್ಕೋಸ್ಕರ ಚತುರ್ಮುಖನ ಪ್ರಾರ್ಥನೆಯಂತೆ ಭಗವಂತ ಜಗತ್ಪಾಲನಾ ಶಕ್ತಿ ವಿಷ್ಣುವಾಗಿ ಆವಿರ್ಭಾವ ಹೊಂದಿದ. "ಅಂತಹ ವಿಷ್ಣು ನಮ್ಮನ್ನು ಒಳ್ಳೆಯ ಮಾರ್ಗದಲ್ಲಿ ನಡೆಸಲಿ, ನಮ್ಮಿಂದ ಒಳ್ಳೆಯ ಮಾತನ್ನು ನುಡಿಸಲಿ" ಎಂದು ಚತುರ್ಮುಖ ಇಲ್ಲಿ ಪ್ರಾರ್ಥಿಸಿದ್ದಾನೆ.

ಪಾಲನೆ ಮಾಡಲು ಭಗವಂತ ತಳೆದ ರೂಪ ವಿಷ್ಣುರೂಪ. ಇಲ್ಲಿ ಪಾಲನೆ ಎಂದರೆ ಬದುಕಗೊಡುವುದು. ಅಂದರೆ ಉಸಿರೊಳಗೆ ಸೇರಿ, ಉಸಿರಿನ ಉಸಿರಾಗಿ ನಿಂತು ಪಾಲನೆ ಮಾಡುವ ಭಗವಂತ ವಿಷ್ಣುಃ**(*ವಿಷತೀತಿ ವಿಷ್ಣುಃ*).** ಉಪನಿಷತ್ತಿನಲ್ಲಿ ಹೇಳುವಂತೆ: ***"ತತ್ ಸೃಸ್ಟ್ವಾ ತದೇವಾನು ಪ್ರಾವಿಷತ್".*** ಪ್ರತಿಯೊಂದು ಜೀವದ ಒಳಗೆ ಪಾಲಕನಾಗಿ ಭಗವಂತ ನೆಲೆಸಿರುತ್ತಾನೆ. ಒಳಗೆ ಪ್ರೇರಕನಾಗಿ, ಹೊರಗೆ ಧಾರಕನಾಗಿ ಭಗವಂತ ವಿಷ್ಣುರೂಪದಲ್ಲಿ ಜೀವಜಾತದ ಪಾಲನೆ ಮಾಡುತ್ತಾನೆ. ಭಗವಂತನ ವಿಷ್ಣುಃ ನಾಮಕ್ಕೆ ವೇದದಲ್ಲಿ ಒಂದು ಸುಂದರ ವಿವರಣೆಯನ್ನು ಕಾಣಬಹುದು. ಐತರೇಯದಲ್ಲಿ ಹೇಳುವಂತೆ: ***ಣ-ಕಾರೋ ಬಲಂ ಷ-ಕಾರಃ ಪ್ರಾಣೋ ಆತ್ಮಾ.*** ಆದ್ದರಿಂದ ವಿಷ್ಣುಃ ಎನ್ನುವಲ್ಲಿ 'ಣ'-ಕಾರ ಬಲವನ್ನು ಹೇಳಿದರೆ 'ಉ-ಕಾರ' ಸ್ವರೂಪವೆನ್ನುವ ಅರ್ಥವನ್ನು ನೀಡುತ್ತದೆ. ಆದ್ದರಿಂದ 'ಣುಃ' ಎಂದರೆ ಅದು ಇಡೀ ಜಗತ್ತನ್ನು ಧಾರಣೆ ಮಾಡುವ ಬಲ. ಅದೇ ಆತ್ಮಬಲ, ದೇಹಬಲ, ಮನೋಬಲ, ಇತ್ಯಾದಿ ಎಲ್ಲಾ ಬಲಗಳ ಸಮಷ್ಟಿ. ಎಲ್ಲವನ್ನೂ ಮಣಿಸುವ ಶಕ್ತಿಸ್ವರೂಪ(ಣವಯತೀತಿ-ಣಃ) ಭಗವಂತ 'ಣುಃ'. ಇನ್ನು ವಿಷ್ಣುಃ ಎನ್ನುವ ಭಗವಂತನ ನಾಮದಲ್ಲಿ ಷ-ಕಾರ ಪ್ರೇರಣೆ ಎನ್ನುವ ಅರ್ಥವನ್ನು ಕೊಡುತ್ತದೆ. ಅಂತರ್ಯಾಮಿಯಾಗಿ ಒಳಗೆ ನಿಂತು ನಮ್ಮ ಸಮಸ್ತ ವ್ಯಾಪಾರವನ್ನು ನಿಯಂತ್ರಿಸುವ ಭಗವಂತ 'ಷ'. ಇಂತಹ ವಿಶಿಷ್ಟ(ವಿ)ವಾದ ಶಕ್ತಿಯಾದ ಭಗವಂತ ವಿಷ್ಣುಃ. ಒಟ್ಟಿನಲ್ಲಿ ಹೇಳಬೇಕೆಂದರೆ ಸರ್ವ ಜಗತ್ ಧಾರಣೆ ಮತ್ತು ಪ್ರೇರಣೆ ಯಾರಿಗೆ ಸಹಜ ಕ್ರಿಯೆಯೋ ಅವನು ವಿ-ಷ-ಣು. ಹೀಗೆ ವಿಷ್ಣು/ವಿಷಣು ಎನ್ನುವ ನಾಮ ಪಾಲನೆಗಾಗಿ ಭಗವಂತ ಧರಿಸಿದ ಅವತಾರದ ಕ್ರಿಯೆ ಏನೋ ಅದಕ್ಕೆ

ಸಂಬಂಧಿಸಿದ ಎಲ್ಲಾ ಅರ್ಥವನ್ನೂ ಹೇಳುತ್ತದೆ. "ಇಂತಹ ಭಗವಂತ ನನ್ನೊಳಗೆ ನಿಂತು ನನ್ನ ನಾಲಿಗೆಯಿಂದ ನುಡಿಸಲಿ" ಎಂದು ಚತುರ್ಮುಖ ಪ್ರಾರ್ಥಿಸುತ್ತಾನೆ.

"ಏನು ಮಾಯೆ ಆ ಭಗವಂತನದು ? ಆತನ ಮುಂದೆ ನಾನೆಲ್ಲಿಯ ಗುರು" ಎನ್ನುತ್ತಾನೆ ಚತುರ್ಮುಖ. ಇಲ್ಲಿ ಮಾಯಾ ಎನ್ನುವ ಪದ ಬಳಕೆ ಮಾಡಿದ್ದಾನೆ ಚತುರ್ಮುಖ. ಸಂಸ್ಕೃತದಲ್ಲಿ ಮಾಯಾ ಶಬ್ದಕ್ಕೆ ಅನೇಕ ಅರ್ಥಗಳಿವೆ. ಭಗವಂತನ ಇಚ್ಛೆ, ಜ್ಞಾನ ಮತ್ತು ಮಹಿಮೆ ಆತನ ಸ್ವರೂಪಭೂತವಾದ ಮಾಯೆ. ಇನ್ನು ಭಗವಂತನ ಅಧೀನವಾಗಿರುವ ಪ್ರಕೃತಿ ಮಾಯೆ. ಜಡ ಪ್ರಕೃತಿ ಕೂಡಾ ಮಾಯೆ. ಇದಲ್ಲದೇ ನಮಗೆ ಬಂಧಕ ಶಕ್ತಿಯಾಗಿ ತುಂಬಿಕೊಂಡಿರುವ ಶ್ಯೆವರೀ ಮಾಯೆ ಕೂಡಾ ಒಂದು ವಿಧದ ಮಾಯೆ. ಆದರೆ ಶ್ಯೆವರೀ ಮಾಯೆ ಮಯನೆಂಬ ಇಂದ್ರಜಾಲದ ಮೂಲಪುರುಷನಿಂದ ಸೃಷ್ಟಿಯಾಗಿರುವುದರಿಂದ ಇದು ಭಗವಂತನಿಗೆ ಅನ್ವಯವಾಗುವುದಿಲ್ಲ.

"ಭಗವಂತನ ಇಚ್ಛೆಯಂತೆ, ಜಗನ್ಮಾತೆ ಶ್ರೀಲಕ್ಷ್ಮಿಯ ಮತ್ತು ಜಡಪ್ರಕೃತಿಯ ಮೋಹಕ್ಕೆ ಒಳಗಾಗಿ ಈ ಜಗತ್ತು ನನ್ನನ್ನೇ ಜಗದ್ಗುರು ಎಂದು ಕರೆಯುತ್ತಿದೆ. ಆದರೆ ಆ ಭಗವಂತನ ಮುಂದೆ ನಾನೆಲ್ಲಿಯ ಜಗದ್ಗುರು?" ಎನ್ನುತ್ತಾನೆ ಚತುರ್ಮುಖ. ಆಚಾರ್ಯ ಮಧ್ವರು ಉಪನಿಷತ್ ಭಾಷ್ಯದಲ್ಲಿ ಹೇಳುವಂತೆ: *ಯಸ್ಮಾತ್ ಬ್ರಹ್ಮೇಂದ್ರ ಸುದ್ರಾದಿ ದೇವತಾನಾಮ್ ಶ್ರೀಯೋಽಪಿ ಚ । ಜ್ಞಾನ ಸ್ಫೂರ್ತಿ ಸದಾ ತಸ್ಮೈ ಹರಯೇ ಗುರವೇ ನಮಃ ॥* ಸಮಸ್ತ ದೇವತೆಗಳೊಂದಿಗೆ ಶ್ರಿಲಕ್ಷ್ಮಿಗೂ ಗುರುವಾಗಿರುವ ನಾರಾಯಣನೇ ಜಗದ್ಗುರು [ಕೃಷ್ಣಂ ವಂದೇ ಜಗದ್ಗುರುಮ್]. ಹೀಗಾಗಿ ಆ ನಾರಾಯಣನಿಂದ ಮೇಲೆ ಇನ್ನೊಬ್ಬ ಜಗದ್ಗುರುವಿಲ್ಲ.

ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ವಾಸುದೇವಾತ್ ಪರೋ ಬ್ರಹ್ಮನ್ ನ ಚಾನ್ಯೋಽರ್ಥೋಽಸ್ತಿ ತಾತ್ತ್ವತಃ ॥೧೪॥

ಮೊದಲ ಸ್ಕಂಧದಲ್ಲಿ ವಿಶ್ಲೇಶಿಸಿದಂತೆ ಭಾಗವತದ ಹಲವು ಶ್ಲೋಕಗಳಲ್ಲಿ ನಾವು ವೇದಮಂತ್ರದ ಭಾಗವನ್ನು ಕಾಣಬಹುದು. ಈ ಮೇಲಿನ ಶ್ಲೋಕವೂ ಕೂಡಾ ವೇದ ಮಂತ್ರದ ಭಾಗವಾಗಿದೆ. ವೇದದಲ್ಲಿ ಹೀಗೆ ಹೇಳಿದ್ದಾರೆ: *ದ್ರವ್ಯಂ ಕರ್ಮಚ ಕಾಲಶ್ಚ ಸ್ವಭಾವೋ ಜೀವ ಏವ ಚ । ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯ ॥* ಈ ವೇದ ಮಂತ್ರದ ಪೂರ್ವಾರ್ಧವೇ ಮೇಲಿನ ಶ್ಲೋಕದ ಪೂರ್ವಾರ್ಧವಾಗಿರುವುದನ್ನು ಇಲ್ಲಿ ನಾವು ಕಾಣುತ್ತೇವೆ.

ದ್ರವ್ಯ, ಕರ್ಮ, ಕಾಲ, ಸ್ವಭಾವ ಮತ್ತು ಜೀವ ಈ ಐದರ ಸಮಷ್ಟಿ ಈ ಪ್ರಪಂಚ. ಸೃಷ್ಟಿಗೂ ಮೊದಲು ಜೀವನಿದ್ದ, ಅವನಿಗೆ ಅವನದೇ ಆದ ಸ್ವಭಾವವಿತ್ತು. ಆದರೆ ಅದರ ಅಭಿವ್ಯಕ್ತಿ ಆತನಿಗಿರಲಿಲ್ಲ. ಹೇಗೆ ಒಂದು ಬೀಜದಲ್ಲಿ ಮರವಾಗಿ ಬೆಳೆಯುವ ಶಕ್ತಿ ಹುದುಗಿರುತ್ತದೋ ಹಾಗೇ ಜೀವನಲ್ಲಿ ಅವನದೇ ಆದ ಜೀವಸ್ವಭಾವ ಅನಾದಿನಿತ್ಯವಾಗಿ ಹುದುಗಿರುತ್ತದೆ. ಹೇಗೆ ಬೀಜವನ್ನು ಬಿತ್ತದೇ ಇದ್ದರೆ ಆ ಬೀಜದೊಳಗಿನ ಶಕ್ತಿ ಅಭಿವ್ಯಕ್ತಿ ಸಾಧ್ಯವಿಲ್ಲವೋ ಹಾಗೇ ಭಗವಂತ ಸೃಷ್ಟಿ ಮಾಡದೇ ಇದ್ದರೆ ಜೀವಸ್ವಭಾವದ ಅಭಿವ್ಯಕ್ತಿ ಸಾಧ್ಯವಿಲ್ಲ. ಹೇಗೆ ಪ್ರತಿಯೊಂದು ವಿಧದ ಬೀಜ ಬಿತ್ತನೆಗೆ ಬೇರೆ ಬೇರೆ ಕಾಲವಿದೆಯೋ ಹಾಗೇ ಪ್ರತಿಯೊಂದು ಜೀವದ ಅಭಿವ್ಯಕ್ತಿಗೆ ಒಂದು ಕಾಲವಿದೆ. ಸೃಷ್ಟಿಯಲ್ಲಿ ಯಾವ-ಯಾವ ಸ್ವಭಾವ ಯಾವ-ಯಾವ ಕಾಲದಲ್ಲಿ ಸೃಷ್ಟಿಯಾಗಬೇಕು ಎನ್ನುವುದು ಭಗವಂತನ ನಿಯಮ ಮತ್ತು ಅದರಂತೆ ಎಲ್ಲವೂ ಸೃಷ್ಟಿಯಾಗುತ್ತದೆ. ಸ್ವಭಾವದ ಅಭಿವ್ಯಕ್ತಿಯಾಗುವ ಕಾಲ ಬಂದಾಗ ಭಗವಂತ ಜೀವನಿಗೆ ಮಣ್ಣು-ನೀರು-ಬೆಂಕಿಯ ಸಮಷ್ಟಿಯಿಂದಾದ(ದ್ರವ್ಯ) ದೇಹ ಕೊಡುತ್ತಾನೆ. ಹೀಗೆ ಜನ್ಮತಳೆದ ಜೀವ ತನ್ನ

ಸ್ವಭಾವಕ್ಕನುಗುಣವಾಗಿ ಕರ್ಮವನ್ನು ಮಾಡುತ್ತಾನೆ. ಈ ಎಲ್ಲಾ ಕ್ರಿಯೆಗಳು ಭಗವಂತನ ಅಧೀನವಾಗಿ ಅವನ ಇಚ್ಛೆಯಂತೆ ನಡೆಯುತ್ತದೆ.

ಇಲ್ಲಿ ಹೇಳಿರುವ 'ಜೀವರಲ್ಲಿ' ಚತುರ್ಮುಖನೂ ಒಬ್ಬ. ಹೀಗಾಗಿ ಚತುರ್ಮುಖನನ್ನು ಸೃಷ್ಟಿ ಮಾಡಿದ ಭಗವಂತನಿಗಿಂತ ಮಿಗಿಲಾದ ಅಥವಾ ಅದಕ್ಕೆ ಸಮನಾದ(ತದ್ವತ್/ತಾತ್ತ್ವತಃ) ಇನ್ನೊಂದು ಶಕ್ತಿ ಇಲ್ಲ. ಈ ಶ್ಲೋಕದಲ್ಲಿ ಚತುರ್ಮುಖ ನಾರದರನ್ನು 'ಬ್ರಹ್ಮನ್' ಎಂದು ಸಂಬೋಧಿಸಿರುವುದನ್ನು ಕಾಣುತ್ತೇವೆ. 'ಬ್ರಹ್ಮನ್' ಎಂದರೆ ಭಗವಂತನನ್ನು ತಿಳಿದ ಜ್ಞಾನಿ ಎಂದರ್ಥ. "ಭಗವಂತನನ್ನು ತಿಳಿದ ನಿನಗೆ ಎಲ್ಲವೂ ತಿಳಿದಿದೆ, ಆದರೂ ಪ್ರಪಂಚದ ಜನರ ಸಂದೇಹ ನಿವಾರಣೆಗಾಗಿ, ಅವರ ಮೇಲಿನ ಕಾರುಣ್ಯದಿಂದ ಈ ರೀತಿ ನೀನು ಪ್ರಶ್ನೆ ಮಾಡಿದ್ದೀಯ" ಎನ್ನುವ ಧ್ವನಿ ಆ ಸಂಬೋಧನೆಯ ಹಿಂದಿದೆ.

ಒಟ್ಟಿನಲ್ಲಿ ಹೇಳಬೇಕೆಂದರೆ- "ಆ ಭಗವಂತನೇ ಎಲ್ಲರ ಜಗದ್ಗುರು, ಆತನೇ ಎಲ್ಲವುದರ ಸೂತ್ರದಾರ, ಆತ ಕುಣಿಸಿದಂತೆ ನಾವು ಕುಣಿಯುತ್ತೇವೆ. ಅಂತಹ ಭಗವಂತನಿಗೆ ನಮ್ಮ ನಮಸ್ಕಾರ. ಆತನನ್ನು ಬಿಟ್ಟು ಜಗತ್ತಿನಲ್ಲಿ ಯಾವುದೇ ಅಸ್ತಿತ್ವವಿಲ್ಲ" ಎಂದಿದ್ದಾನೆ ಚತುರ್ಮುಖ. ಚತುರ್ಮುಖನ ಈ ಮಾತನ್ನು ಕೇಳಿದಾಗ ನಮಗೊಂದು ಸಂಶಯ ಬರುತ್ತದೆ. ವೇದ ಪುರಾಣಗಳಲ್ಲಿ ಹಲವು ಕಡೆ ಚತುರ್ಮುಖನೇ ಸೃಷ್ಟಿ ಮಾಡಿದ ಎನ್ನುವಂತೆ ಹೇಳಿದ್ದಾರೆ. ಉದಾಹರಣೆಗೆ ಋಗ್ವೇದದಲ್ಲಿ ಹೇಳುವಂತೆ: ***ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ । (೧೦.೧೨೧.೧೦).*** ಪ್ರಜಾಪತಿ ಎನ್ನುವ ಹೆಸರು ಚತುರ್ಮುಖನಿಗೂ ಇರುವುದರಿಂದ ಇಲ್ಲಿ ಚತುರ್ಮುಖನೇ ಆದಿಪುರುಷ ಎನ್ನುವ ಅರ್ಥ ಮೇಲ್ನೋಟಕ್ಕೆ ಕಾಣುತ್ತದೆ. ಈ ರೀತಿಯ ಸಮಸ್ಯೆಗೆ ಸ್ವಯಂ ಚತುರ್ಮುಖನೇ ಉತ್ತರ ಹೇಳಿರುವುದನ್ನು ಮುಂದಿನ ಶ್ಲೋಕದಲ್ಲಿ ಕಾಣಬಹುದು.

ನಾರಾಯಣಪರಾ ವೇದಾ ದೇವಾ ನಾರಾಯಣಾಂಗಜಾಃ ।
ನಾರಾಯಣಪರಾ ಲೋಕಾ ನಾರಾಯಣಪರಾ ಮಖಾಃ ॥೧೫॥

ನಾರಾಯಣಪರೋ ಯೋಗೋ ನಾರಾಯಣಪರಂ ತಪಃ ।
ನಾರಾಯಣಪರಂ ಜ್ಞಾನಂ ನಾರಾಯಣಪರಾ ಗತಿಃ ॥೧೬॥

ಈ ಮಂತ್ರ ನಾರಾಯಣ ಉಪನಿಷತ್ತಿನ ಅರ್ಥಾನುರೂಪವಾಗಿದೆ. [ಈ ಕುರಿತು ಈಗಾಗಲೇ ಒಂದನೇ ಸ್ಕಂಧದಲ್ಲಿ ಸ್ವಲ್ಪ ಮಟ್ಟಿಗೆ ವಿಶ್ಲೇಶಿಸಿದ್ದೇವೆ. ಉಲ್ಲೇಖಿತ: ೦೧.೦೨.೨೯] ಮಹಾನಾರಾಯಣ ಉಪನಿಷತ್ತಿನಲ್ಲಿ ಹೇಳಿರುವ ಮಾತನ್ನೇ ಇಲ್ಲಿ ಚತುರ್ಮುಖನ ಅನುಸಂಧಾನವಾಗಿ ಭಾಗವತ ನಮ್ಮ ಮುಂದಿಡುತ್ತದೆ. ಇಲ್ಲಿ '***ನಾರಾಯಣ ಪರಾಃ ವೇದಾಃ*** ಎಂದಿದ್ದಾರೆ. ನಮಗೆ ತಿಳಿದಂತೆ ವೇದದಲ್ಲಿ ಅನೇಕ ದೇವತೆಗಳ ಉಲ್ಲೇಖ ಬರುತ್ತದೆ ಮತ್ತು ಆ ದೇವತೆಯೇ ಪರಶಕ್ತಿ ಎಂದು ವೇದ ಹೇಳುವಂತೆ ಕಾಣುತ್ತದೆ. ಆದರೆ ಮುಖ್ಯಾರ್ಥವಾಗಿ ವೇದದ ಯಾವ ಮಂತ್ರ ತೆಗೆದುಕೊಂಡರೂ ಕೂಡಾ ಅದು ಹೇಳುವುದು ನಾರಾಯಣನನ್ನೇ ಹೊರತು ಇನ್ಯಾರನ್ನೋ ಅಲ್ಲ. [ಈ ಕುರಿತು ಇನ್ನೂ ಹೆಚ್ಚಿನ ವಿವರಣೆಯನ್ನು ಓದುಗರು ಮೊದಲ ಸ್ಕಂಧದ ಭಾಗವತದ ಮಂಗಲ ಪದ್ಯದಲ್ಲಿ ಕಾಣಬಹುದು. ಉಲ್ಲೇಖಿತ: ೦೧.೦೧.೦೧]. 'ನಾರಾಯಣ' ಎನ್ನುವ ಭಗವಂತನ ನಾಮದ ಶಬ್ದನಿಷ್ಪತ್ತಿ ಕೂಡಾ ಇದನ್ನೇ ಹೇಳುತ್ತದೆ. 'ನಾರ'

ಎಂದರೆ ಅರ(ದೋಷ) ಇಲ್ಲದ್ದು. ಅಂದರೆ ವೇದ. ಅಯನ ಎಂದರೆ ತಿಳಿಯಲ್ಪಡುವವನು. ಆದ್ದರಿಂದ ನಾರಾಯಣ ಎಂದರೆ ವೇದಗಳಿಂದ ತಿಳಿಯಲ್ಪಡುವ, ಸರ್ವವೇದ ಪ್ರತಿಪಾದ್ಯ ವಾಸುದೇವ.

*'ದೇವಾ ನಾರಾಯಣಾಂಗಜಾಃ'*. ದೇವತೆಗಳು ಭಗವಂತನ ಅಂಗಭೂತರು. ವೇದದಲ್ಲಿ ಹೇಳುವಂತೆ: *ಅನ್ಯಾನ್ಯನ್ಯಾ ಸಾತ್ಮಾನ್ಯಾನ್ಯನ್ಯಾ ದೇವತಾಃ.* ಹೇಗೆ ಒಬ್ಬ ರಾಜನಿಗೆ ಸಾವಿರಾರು ಮಂದಿ ಪರಿವಾರದವರಿರುತ್ತಾರೋ ಹಾಗೇ ದೇವತೆಗಳು ಭಗವಂತನ ಪರಿವಾರ. ಹೀಗಾಗಿ ವೇದದಲ್ಲಿ ದೇವತೆಗಳ ವರ್ಣನೆ ಬಂದರೆ ಅದು ಮುಖ್ಯಾರ್ಥದಲ್ಲಿ ಭಗವಂತನ ವರ್ಣನೆ, ಆತನ ಪರಿವಾರದ ವರ್ಣನೆ. ದೇವತೆಗಳು ಭಗವಂತನ ಪರಿವಾರಭೂತರೇ ಹೊರತು ಅವರೇ ಸರ್ವಶಕ್ತರಲ್ಲ. ನಾರಾಯಣನ ಮಹಿಮೆಯನ್ನು ತೋರಿಸುವುದಕ್ಕಾಗಿ ಇತರ ವಿಷಯಗಳನ್ನು ವೇದ ಹೇಳುತ್ತದೆಯೇ ಹೊರತು ಅದೇ ಮುಖ್ಯಾರ್ಥವಲ್ಲ. ಹಾಗೆ ಹೇಳುವುದರ ಮುಖ್ಯ ಉದ್ದೇಶ ಭಗವಂತನ ಪಾರಮ್ಯವನ್ನು ತಿಳಿಸಿ ಹೇಳುವುದು. ಹೀಗಾಗಿ ನಾವು ವೇದದ ಯಾವುದೇ ಸೂಕ್ತವನ್ನು ತೆಗೆದು ನೋಡಿದರೂ ಕೂಡಾ, ಅಲ್ಲಿರುವ ಶಬ್ದ ಯಾವುದೇ ಆಗಿದ್ದರೂ ಕೂಡಾ, ಅದು ನಾರಾಯಣನನ್ನು ಹೇಳುವ ಪದವಾಗಿರುತ್ತದೆ ಎನ್ನುವುದನ್ನು ತಿಳಿದಿರಬೇಕು. ವೇದದಲ್ಲಿನ ಪ್ರತಿಯೊಂದು ಪದಕ್ಕೂ ಯೋಗಾರ್ಥವಿದೆ. ಅದನ್ನು ರೂಢಾರ್ಥದಲ್ಲಿ ಅಲ್ಲಿ ಬಳಸಿರುವುದಿಲ್ಲ. ಹೀಗಾಗಿ ವೇದಾಧ್ಯಯನ ಮಾಡುವಾಗ ಪ್ರತೀ ಶಬ್ದವನ್ನೂ ಅದರ ನಿರ್ವಚನದಿಂದ ತಿಳಿದು ಗ್ರಹಣ ಮಾಡಿಕೊಳ್ಳಬೇಕಾಗುತ್ತದೆ.

*ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ ॥ ಋಗ್ವೇದ- ೧೦.೦೮೨.೦೩ ॥*

ಎಲ್ಲಾ ಶಬ್ದಗಳೂ ಪೂರ್ಣ ಅನ್ವಯವಾಗುವುದು ಆ ಭಗವಂತನಲ್ಲಿ. ಅಂತಹ ಭಗವಂತ ತನ್ನ ನಾಮವನ್ನೇ ಇನ್ನೊಬ್ಬರಿಗೆ ಕೊಟ್ಟ. ಈ ರೀತಿ ವೈದಿಕವಾದ ಪ್ರಕ್ರಿಯೆಯಿಂದ ಪ್ರತಿಯೊಂದು ಶಬ್ದದ ಅರ್ಥ ನಿರ್ವಚನ ಮಾಡುತ್ತಾ, ಅದರ ಪೂರ್ಣಾರ್ಥದಲ್ಲಿ ನಾವು ಆ ಶಬ್ದವನ್ನು ಅನುಸಂಧಾನ ಮಾಡಿದಾಗ ಸಮಸ್ತ ವೇದಗಳೂ ನಾರಾಯಣ ಪರವಾಗಿರುವುದು ಕಾಣುತ್ತದೆ. ಹೀಗೆ ಸಮಸ್ತ ವೇದಗಳೂ ಅಂತತಃ ಹೇಳುವುದು ನಾರಾಯಣನನ್ನೇ. [ಈ ಕುರಿತು ಇನ್ನೂ ಹೆಚ್ಚಿನ ವಿವರಣೆಯನ್ನು ಓದುಗರು ಮೊದಲ ಸ್ಕಂಧದ ಎರಡನೇ ಅಧ್ಯಾಯದಲ್ಲಿ ಕಾಣಬಹುದು. ಉಲ್ಲೇಖಿತ: ೦೧.೦೨.೨೮].

*ನಾರಾಯಣಪರಾ ಮಖಾಃ* ಎನ್ನುವಲ್ಲಿ ಮಖಾಃ ಎಂದರೆ ಯಜ್ಞ. "ಯಜ್ಞಗಳಿಂದ ಆರಾಧಿಸಬೇಕಾದ ಸಂಗತಿಗಳೆಲ್ಲವೂ ನಾರಾಯಣ ಪರ" ಎಂದಿದ್ದಾನೆ ಚತುರ್ಮುಖ. ಯಜ್ಞದ ಮೂಲ ಉದ್ದೇಶ ಭಗವಂತನ ಅನುಗ್ರಹ ಹೊರತು ಲೌಕಿಕ ಫಲಗಳಲ್ಲ. ಇದೇ ರೀತಿ *ನಾರಾಯಣಪರಾ ಲೋಕಾಃ* ಎನ್ನುವಲ್ಲಿ ಲೋಕಾಃ ಎಂದರೆ ತಿಳುವಳಿಕೆ ಇರುವ ಜನರು ಎಂದರ್ಥ. ತಿಳಿದವರಿಗೆ(ಜ್ಞಾನಿಗಳಿಗೆ) ತಿಳಿದಿದೆ ನಾರಾಯಣನೊಬ್ಬನೇ ಹಿರಿಯ ವಸ್ತು ಎನ್ನುವುದು. [ಈ ಎಲ್ಲಾ ವಿಷಯಗಳನ್ನು ಶಾಸ್ತ್ರ ಸ್ಪಷ್ಟವಾಗಿ ಹೇಳಿದರೂ ಕೂಡಾ ಇಂದು ಇವೆಲ್ಲವೂ ಕೇವಲ ಪೂಜಾ ಸಂಕಲ್ಪದಲ್ಲಿ ಮಾತ್ರ ಉಳಿದುಕೊಂಡು ಬಿಟ್ಟಿದೆ. *ಭಗವದ್ ಪ್ರೇರಣಾಯಾ ಭಗವದ್ ಪ್ರೀತ್ಯರ್ಥಂ* ಎನ್ನುವ ಸಂಕಲ್ಪ ಸ್ಪಷ್ಟವಾಗಿ ಮೇಲಿನ ಮಾತನ್ನು ಹೇಳುತ್ತದೆ. ಪೂಜೆಯ ಕೊನೆಯಲ್ಲಿ *ಕೃಷ್ಣಾರ್ಪಣಮಸ್ತು* ಎಂದು ಅರ್ಪಿಸುವ ಉದ್ದೇಶವೂ ಇದೇ. ಆದರೆ ಇಂದು ಸಂಕಲ್ಪದ ಮೂಲ ಉದ್ದೇಶ ತಿಳಿಯದೇ ಏನೇನೋ ಐಹಿಕ ಕಾಮನೆಗಳನ್ನು ಜನ ತಮ್ಮ ಸಂಕಲ್ಪದಲ್ಲಿ ಸೇರಿಸಿಕೊಂಡು ಬಿಟ್ಟಿದ್ದಾರೆ].

"ಯೋಗ, ತಪಸ್ಸು ಎಲ್ಲವೂ ನಾರಾಯಣ ಪರ" ಎಂದಿದ್ದಾನೆ ಚತುರ್ಮುಖ. ಯಮ-ನಿಯಮ-ಪ್ರಾಣಾಯಾಮ ಇತ್ಯಾದಿ ಎಲ್ಲವೂ ಮನಸ್ಸನ್ನು ಏಕಾಗ್ರಗೊಳಿಸುವ ಸಾಧನ. ಏಕಾಗ್ರ ಮನಸ್ಸಿನಿಂದ ಭಗವಂತನ ಚಿಂತನೆ ಮಾಡುವುದಕ್ಕಾಗಿ ಈ ಎಲ್ಲಾ ಸಾಧನಗಳಿರುವುದು. ಎಲ್ಲಾ ಯೋಗಗಳ ಕೊನೆಯ ಗುರಿ ಆ ಭಗವಂತ. ತಪಸ್ಸು

ಎಂದರೆ ನಿರಂತರವಾಗಿ ಆಳವಾದ ಚಿಂತನೆ ಮಾಡಿ ಸತ್ಯವನ್ನು(ಸತ್ಯ ನಾಮಕನಾದ ನಾರಾಯಣನನ್ನು) ತಿಳಿಯುವುದೇ ಆಗಿದೆ.

ಜಗತ್ತಿನ ಮೂಲಸತ್ಯ ಆ ನಾರಾಯಣ ಎಂದು ತಿಳಿಯುವುದೇ ನಿಜವಾದ ಜ್ಞಾನ. ಅರಿವಿನ ಕೊನೆ ಆ ಭಗವಂತ. ನಾವು ಈ ಪ್ರಪಂಚವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ, ಪ್ರತಿಯೊಂದನ್ನೂ ಪರಮಾಣುವಿನ ತನಕ ತಿಳಿಯುವ ಪ್ರಯತ್ನ ಮಾಡಬಹುದು. ಆದರೆ ಹಾಗೆ ಮಾಡುವುದರಿಂದ ಅದು ಏಕೆ ಆ ರೀತಿ ಇದೆ ಎನ್ನುವುದು ತಿಳಿಯುವುದಿಲ್ಲ. ಆದ್ದರಿಂದ ಎಲ್ಲಾ ಮುಖಗಳಿಂದ ಸತ್ಯ ತಿಳಿಯಬೇಕಾದರೆ ಎಲ್ಲವುದಕ್ಕೂ ಕಾರಣೀಭೂತವಾಗಿರುವ ಮೂಲಶಕ್ತಿಯನ್ನು ಅರಿಯಬೇಕು. ಆ ಮೂಲಶಕ್ತಿ ಭಗವಂತನೇ ನಮ್ಮ ಜ್ಞಾನದ ಕೊನೆ. ನಮ್ಮ ಸಾಧನೆಯ ಕೊನೇ ಗುರಿ ಆ ಭಗವಂತ. ಹಾಗಾಗಿ ನಮ್ಮ ಎಲ್ಲಾ ನಡೆಯೂ ಆ ಭಗವಂತನನ್ನು ಸೇರುವುದಕ್ಕೆ ಪೋಷಕವಾಗಿರಬೇಕು.

ಮೇಲಿನ ಎರಡು ಶ್ಲೋಕಗಳಲ್ಲಿ ಚತುರ್ಮುಖ ಬ್ರಹ್ಮ ವೇದ-ಶಾಸ್ತ್ರಗಳ ಸಮಷ್ಟಿ ಚಿತ್ರಣವನ್ನು ನಮ್ಮ ಮುಂದಿರಿಸಿರುವುದನ್ನು ನಾವು ನೋಡಿದೆವು. "ತಿಳಿದುಕೊಳ್ಳಬೇಕಾಗಿರುವುದರ ಕೊನೆ ಆ ನಾರಾಯಣ; ಹೋಗಿ ಸೇರಬೇಕಾದ, ಮತ್ತೆ ಮರಳಿ ಬಾರದ ತಾಣ ಆ ನಾರಾಯಣ. ಇಂತಹ ಭಗವಂತ ನನ್ನನ್ನು ಸೃಷ್ಟಿ ನಿರ್ಮಾಣಕ್ಕೆ ಸಾಧನವಾಗಿ(**instrument**) ಬಳಸುತ್ತಾನೆ. ಹೀಗಿರುವಾಗ ನಾನೆಲ್ಲಿಯ ಜಗದ್ಗುರು" ಎಂದು ನಾರದರನ್ನು ಪ್ರಶ್ನಿಸುತ್ತಾನೆ ಚತುರ್ಮುಖ.

ಸತ್ತ್ವಂ ರಜಸ್ತಮ ಇತಿ ನಿರ್ಗುಣಸ್ಯ ಗುಣಾಸ್ತ್ರಯಃ ।
ಸ್ಥಿತಿಸರ್ಗನಿರೋಧೇಷು ಗೃಹೀತಾ ಮಾಯಯಾ ವಿಭೋಃ ॥೧೮॥

ಭಗವಂತನ ಸೃಷ್ಟಿ-ಪಾಲನೆ-ಸಂಹಾರದ ಕುರಿತು ಇಲ್ಲಿ ಚತುರ್ಮುಖ ಬ್ರಹ್ಮ ವಿವರಿಸುವುದನ್ನು ಕಾಣುತ್ತೇವೆ. ಸ್ವಯಂ ತ್ರಿಗುಣಾತೀತನಾದುದರಿಂದ ಭಗವಂತನ ಮೇಲೆ ತ್ರಿಗುಣಗಳ ಪ್ರಭಾವವಿಲ್ಲ. ಆದರೆ ತ್ರಿಗುಣಗಳನ್ನು ಬಳಸಿಕೊಂಡು ಭಗವಂತ ಸೃಷ್ಟಿ-ಸ್ಥಿತಿ-ಸಂಹಾರವನ್ನು ಮಾಡುತ್ತಾನೆ. ಪಾಲನೆ(ಸ್ಥಿತಿ)ಗೆ ಸತ್ವಗುಣ, ಸೃಷ್ಟಿಗೆ ರಜೋಗುಣ ಮತ್ತು ಸಂಹಾರಕ್ಕೆ ತಮೋಗುಣವನ್ನು ಭಗವಂತ ಬಳಸುತ್ತಾನೆ. ಈ ಮೂರು ಕ್ರಿಯೆ ಒಂದಕ್ಕೊಂದು ಪರಸ್ಪರ ಸಂಬಂಧವಿರುವ ಕ್ರಿಯೆ. ಉದಾಹರಣೆಗೆ ಅಜ್ಞಾನ ತಮೋಗುಣ. ಅದನ್ನು ನಾಶ ಮಾಡಿದರೆ ಜ್ಞಾನ ಬರುತ್ತದೆ. ಹಾಗಾಗಿ ಅಜ್ಞಾನದ ಸಂಹಾರ ಎಂದರೆ ಅದು ಜ್ಞಾನದ ಸೃಷ್ಟಿ. ಹೀಗೆ ಸೃಷ್ಟಿಯ ಮೊಟ್ಟೆಯಲ್ಲೇ ಸಂಹಾರದ ಬೀಜವಿರುತ್ತದೆ. ತ್ರಿಗುಣಗಳು ಎಲ್ಲಾ ಕಾಲದಲ್ಲೂ ಭಗವಂತನ ಅಧೀನ. ಸರ್ವಸಮರ್ಥನಾದ ಭಗವಂತ ತನ್ನ ಇಚ್ಛೆಯಂತೆ ಗುಣತ್ರಯಗಳನ್ನು ಬಳಸಿ ಸೃಷ್ಟಿ-ಸ್ಥಿತಿ-ಸಂಹಾರ ಮಾಡುತ್ತಾನೆ. ಪಾಲನೆಯಲ್ಲಿ ಯಾರನ್ನೂ ಬಳಸಿಕೊಳ್ಳದೇ ಸ್ವಯಂ ಮಾಡುವ ಭಗವಂತ, ಸೃಷ್ಟಿ ಕಾರ್ಯದಲ್ಲಿ ಚತುರ್ಮುಖನನ್ನು, ಸಂಹಾರ ಕಾರ್ಯದಲ್ಲಿ ಶಿವನನ್ನು ಉಪಕರಣವಾಗಿ ಬಳಸುತ್ತಾನೆ.

ತ್ರಿಗುಣಗಳ ಸಮಷ್ಟಿಯಿಂದ ನಮ್ಮ ದೇಹ ರಚನೆಯಾಗಿದೆ. ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿತ್ವವೂ ತ್ರಿಗುಣಾತ್ಮಕವಾಗಿರುತ್ತದೆ. ಇಷ್ಟೇ ಅಲ್ಲದೇ ಹೊರಗಿನಿಂದ ತ್ರಿಗುಣಗಳು ವ್ಯಕ್ತಿಯಮೇಲೆ ನಿರಂತರ ಪ್ರಭಾವಬೀರುತ್ತಿರುತ್ತವೆ.

*ಕಾರ್ಯಕಾರಣಕರ್ತೃತ್ವೇ ದ್ರವ್ಯಜ್ಞಾನಕ್ರಿಯಾಶ್ರಯಾಃ ।*
*ಬಧ್ನಂತಿ ನಿತ್ಯದಾ ಮುಕ್ತಂ ಮಾಯಿನಂ ಪುರುಷಂ ಗುಣಾಃ ॥೧೯॥*

ವಾಸ್ತವಿಕವಾದ ಆದರೆ ನಾವು ಮರೆತಿರುವ ಒಂದು ವಿಚಾರವನ್ನು ಚತುರ್ಮುಖ ಇಲ್ಲಿ ನೆನಪಿಸುವುದನ್ನು ಕಾಣುತ್ತೇವೆ. ಚತುರ್ಮುಖ ಹೇಳುತ್ತಾನೆ: "ಈ ದೇಹದಲ್ಲಿರುವ ಜೀವ ವಸ್ತುತಃ ಮಾಯಿ" ಎಂದು. ಮಾಯಿ ಎಂದರೆ ಅಜ್ಞಾನದ ಬಂಧನವಿಲ್ಲದ  ಜ್ಞಾನಸ್ವರೂಪ ಎಂದರ್ಥ. ಜೀವ ಈ ದೇಹ, ಇಂದ್ರಿಯ ಇವೆಲ್ಲವುದಕ್ಕಿಂತ ಭಿನ್ನ. ಅದು ಸದಾ ಜ್ಞಾನರೂಪ ಮತ್ತು ಅದಕ್ಕೆ ಅಂಟುವಿಕೆ ಎನ್ನುವುದು ಇಲ್ಲವೇ ಇಲ್ಲ. ಆದರೆ ಜೀವನನ್ನು ತ್ರಿಗುಣಗಳು ದೇಹದಲ್ಲಿ ಕಟ್ಟಿಹಾಕಿ ತಮ್ಮ ಪ್ರಭಾವವನ್ನು ಬೀರುತ್ತಿರುತ್ತವೆ. ಮಣ್ಣು-ನೀರು-ಬೆಂಕಿಯಿಂದಾದ ಶರೀರ, ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯ ಈ ಮೂರು ತ್ರಿಗುಣಗಳ ಕಾರ್ಯಕ್ಷೇತ್ರ. ಅವು ಇಲ್ಲಿ  ಕುಳಿತು ಏಕಕಾಲದಲ್ಲಿ ತಮ್ಮ ಪ್ರಭಾವವನ್ನು ಬೀರುತ್ತಿರುತ್ತವೆ. ಶರೀರದಲ್ಲಿ ತಮೋಗುಣ, ಕರ್ಮೇಂದ್ರಿಯಗಳಲ್ಲಿ  ರಜೋಗುಣ  ಮತ್ತು ಜ್ಞಾನೇಂದ್ರಿಯಗಳಲ್ಲಿ ಸತ್ವಗುಣ ಕುಳಿತು ಜೀವನನ್ನು ಬಂಧನಕ್ಕೆ ತಳ್ಳುತ್ತವೆ.

ನಮ್ಮ ದೇಹ ಪ್ರತೀಕ್ಷಣ ವಿಕಾರಕ್ಕೆ ಒಳಗಾಗುತ್ತಿರುತ್ತದೆ ಮತ್ತು ಅದರ ಮುಖೇನ ತಮೋಗುಣ ಕೆಲಸ ಮಾಡುತ್ತದೆ. ಹೀಗಾಗಿ ನಾನಾ ವಿಧವಾದ ಕಾರ್ಯಗಳನ್ನು ದೇಹದ ಮೂಲಕ ಮಾಡಿ ನಾನಾ ವಿಧದ ದುಃಖವನ್ನು ನಾವು ಅನುಭವಿಸುತ್ತಿರುತ್ತೇವೆ.

ರಜೋಗುಣದ ಕಾರ್ಯಕ್ಷೇತ್ರ ಕರ್ಮೇಂದ್ರಿಯಗಳು. ಈ ಕರ್ಮೇಂದ್ರಿಯಗಳಿಂದ ನಾವು ಅನೇಕ ಚಟುವಟಿಕೆಗಳನ್ನು ಮಾಡುತ್ತೇವೆ. ಕರ್ಮಗಳನ್ನು ಮಾಡಿ ಕೊನೆಗೆ 'ನಾನು ಮಾಡಿದೆ' ಎನ್ನುವ ಅಹಂಕಾರ-ಮಮಕಾರಕ್ಕೆ ಬಲಿಯಾಗಿ ರಜೋಗುಣದ ಬಂಧಿಯಾಗುತ್ತೇವೆ.

ಸತ್ವಗುಣ ನಮ್ಮ ಜ್ಞಾನೇಂದ್ರಿಯದ ಮೇಲೆ ಕೆಲಸ ಮಾಡುತ್ತದೆ. ನಮ್ಮ ಜ್ಞಾನೇಂದ್ರಿಯಗಳು ನಮಗೆ ಅಂತರಂಗದ ಆನಂದದ ಭೋಕ್ತೃತ್ವವನ್ನು ಕೊಡುತ್ತವೆ. ಆದರೆ  ಅದೇ ಭೋಕ್ತೃತ್ವ ಕೊನೆಗೆ ಬಾಧಕವಾಗಿ  ನಮ್ಮ ಮೇಲೆ ಪ್ರಭಾವ ಬೀರುತ್ತದೆ. ಉದಾಹರಣೆಗೆ  ಕಣ್ಣು.  ಸಂಜೆಯ ಹೊತ್ತು ಸಮುದ್ರ ತಟಿಯಲ್ಲಿ ಕುಳಿತು ಸೂರ್ಯಾಸ್ತ ನೋಡುವುದರಲ್ಲಿ ಸಿಗುವ ಆನಂದ ಅಪರಿಮಿತ. ನಾವು ಎಲ್ಲವನ್ನೂ ಮರೆತು ಆ ಆನಂದವನ್ನು ಅನುಭವಿಸುತ್ತೇವೆ. ಆದರೆ ಶಾಸ್ತ್ರಗಳಲ್ಲಿ ಹೇಳುವಂತೆ:  ***ನೇಕ್ಷೇತ ಉದ್ಯಂತಮಾದಿತ್ಯಂ ನಾಸ್ತಂ ಯನ್ತಂ ಕದಾಚನ । ನೋಪರಕ್ತಂ ನ ವಾರಿಸ್ಥಂ ನ ಮಧ್ಯಂ ನಭಾಸೋ ಗತಮ್.*** ಸೂರ್ಯನ ಸಂಜೆಯ ಕೆಂಪಾದ ಈ ಕಿರಣಗಳಲ್ಲಿ ಮಂದೇಹ ಎನ್ನುವ ದುಷ್ಟಶಕ್ತಿ ಕೆಲಸ ಮಾಡುತ್ತಿರುತ್ತದೆ ಮತ್ತು ಅದು ಕ್ರಮೇಣ ನಮ್ಮ ಚಟುವಟಿಕೆಗಳನ್ನು ಕುಂಠಿತಗೊಳಿಸುತ್ತದೆ.  ಇದಕ್ಕಾಗಿ ಪ್ರಾಚೀನರು ಸೂರ್ಯೋದಯ ಮತ್ತು ಸೂರ್ಯಾಸ್ತ ಕಾಲದಲ್ಲಿ ಅರ್ಘ್ಯ ಕೊಟ್ಟು ದೇವರನ್ನು ಪ್ರಾರ್ಥನೆ ಮಾಡುವ ಸಂಪ್ರದಾಯವನ್ನು ಚಾಲ್ತಿಗೆ ತಂದರು. ನೀರಿನಿಂದ ಪ್ರತಿಫಲಿಸುವ ಸೂರ್ಯ ಮತ್ತು ಗ್ರಹಣಕಾಲದ ಸೂರ್ಯನನ್ನು ಬರಿಗಣ್ಣಿನಿಂದ ಕಾಣುವುದನ್ನು ಶಾಸ್ತ್ರ ನಿಷೇಧಿಸುತ್ತದೆ. [ಹಿಂದೆ ಸೂರ್ಯಗ್ರಹಣವನ್ನು ನೀರಿಗೆ ಗೋಮಯ ಬೆರೆಸಿ ಅದರ ಮುಖೇನ ನೋಡುತ್ತಿದ್ದರು ಮತ್ತು ಗ್ರಹಣದ ಸಮಯವನ್ನಾಧರಿಸಿ ಗಣಿತಬದ್ಧವಾಗಿ ಪಂಚಾಂಗ ಸಿದ್ಧಪಡಿಸುತ್ತಿದ್ದರು]. ಒಟ್ಟಿನಲ್ಲಿ ಹೇಳಬೇಕೆಂದರೆ ಸತ್ವಗುಣ ಜ್ಞಾನದ ಜೊತೆಗೆ ಸಂತೋಷವನ್ನು ಕೊಟ್ಟರೂ, ಕೊನೆಗೆ ಅದರಿಂದ ಬರಬಹುದಾದ ಅಹಂಕಾರ ಮಮಕಾರ ನಮ್ಮನ್ನು ಬಂಧಿಯನ್ನಾಗಿಸುತ್ತದೆ.

ಸ ಏಷ ಭಗವಾಂಲ್ಲಿಂಗೈಃ ತ್ರಿಭಿರೇತೈರಧೋಕ್ಷಜಃ ।
ಸ್ವಲಕ್ಷಿತಗತಿರ್ಬ್ರಹ್ಮನ್ ಸರ್ವೇಷಾಂ ಮಮ ಚೇಶ್ವರಃ ॥೨೦॥

ಹಿಂದೆ ದೇಹ, ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳು ನಮಗೆ ಅಹಂಕಾರ-ಮಮಕಾರವನ್ನು ಕೊಟ್ಟು ಬಂಧಿಯಾಗಿಸುತ್ತವೆ ಎಂದು ಹೇಳಿದ ಚತುರ್ಮುಖ ಇಲ್ಲಿ ಭಗವಂತನನ್ನು ತಿಳಿಯಲೂ ಕೂಡಾ ಇವೇ ಮೂರು ಸಾಧಕ ಎನ್ನುತ್ತಾನೆ. ಈ ದೃಷ್ಟಿಯಲ್ಲಿ ನೋಡಿದಾಗ ದೇಹ, ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳು ನಾವು ತಿಳಿಯದ, ನಾವು ಕಾಣದ ಭಗವಂತನನ್ನು ನಮಗೆ ತಿಳಿಸಿ ನಮ್ಮನ್ನು ಭಗವಂತನೆಡೆಗೆ ಕೊಂಡೊಯ್ಯುವ ಅಪೂರ್ವ ಸಾಧನಗಳಾಗಿಯೂ ಕೆಲಸ ಮಾಡುತ್ತವೆ ಎನ್ನುವುದು ತಿಳಿಯುತ್ತದೆ. ಅಹಂಕಾರ-ಮಮಕಾರದ ಅಂಟನ್ನು ತೆಗೆದಾಗ, ಈ ದೇಹ ಭಗವಂತನ ಸಾಧನೆಗಾಗಿ ಇರುವ ಒಂದು ಅಪೂರ್ವ ಸ್ವತ್ತು ಎನ್ನುವ ಭಾವ ಬಂದಾಗ, ಈ ಜನ್ಮದಲ್ಲೇ ಭಗವಂತನನ್ನು ಕಾಣಬೇಕು ಎನ್ನುವ ತುಡಿತ ಬಂದಾಗ ಅದು ಉದ್ಧಾರದ ಮಾರ್ಗವಾಗುತ್ತದೆ. ಇಂದ್ರಿಯಗಳ ಎಲ್ಲಾ ಕೆಲಸವೂ ಭಗವಂತನ ಪೂಜಾರೂಪ ಎನ್ನುವ ಅನುಸಂಧಾನ ಬಂದಾಗ, ಈ ಮೂರರ ನೆರವಿನಿಂದಲೇ ಅಧೋಕ್ಷಜನಾದ ಭಗವಂತನನ್ನು ಕಾಣಲು ಸಾಧ್ಯವಾಗುತ್ತದೆ. [ಅಧೋಕ್ಷಜಃ ಎಂದರೆ ಅಕ್ಷಗಳಿಗೆ(ಇಂದ್ರಿಯಗಳಿಗೆ) ನಿಲುಕದವ ಆದರೆ ಅಕ್ಷಗಳನ್ನು ತಿರಸ್ಕರಿಸಿದಾಗ ಕಾಣಸಿಗುವ ಭಗವಂತ ಎಂದರ್ಥ].

ನಮ್ಮ ದೇಹ, ನಮ್ಮ ಅಂಗಾಂಗದಲ್ಲಿ ಕುಳಿತು ನಮ್ಮಿಂದ ಆ ಭಗವಂತ ಕೆಲಸವನ್ನು ಮಾಡಿಸುತ್ತಿದ್ದಾನೆ ಎನ್ನುವ ಅರಿವು ಮೂಡಿದಾಗ ಈ ದೇಹ, ಸರ್ವೇನ್ದ್ರಿಯಗಳು ಭಗವಂತನ ಪೂಜೆಯ ಉಪಕರಣವಾಗುತ್ತವೆ. ಆಗ ಅಹಂಕಾರ-ಮಮಕಾರ ಹತ್ತಿರ ಸುಳಿಯುವುದಿಲ್ಲ. ಈ ರೀತಿ ಭಕ್ತಿಯಿಂದ ಭಜಿಸುವ ಭಕ್ತರಿಗೆ ಆ ಭಗವಂತ ಸ್ವಇಚ್ಛೆಯಿಂದ ತನ್ನನ್ನು ತಾನು ತೋರಿಸಿಕೊಳ್ಳುತ್ತಾನೆ. ನಮ್ಮ ಇಂದ್ರಿಯ, ಮನಸ್ಸು, ದೇಹದ ಅಣು-ಕಣವೂ ಭಗವಂತನೊಂದಿಗೆ ಶ್ರುತಿಗೂಡಬೇಕು. ಆಗ ಭಗವಂತನ ದರ್ಶನ ಸಾಧ್ಯವಾಗುತ್ತದೆ. ಗೀತೆಯಲ್ಲಿ ಹೇಳುವಂತೆ: **ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ । ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥೯-೨೨॥** ಇಲ್ಲಿ "ನನ್ನ ಸೇವೆಗೆ ಮುಡಿಪಾದವರ ಯೋಗ-ಕ್ಷೇಮದ ಹೊಣೆ ನನ್ನದು" ಎಂದಿದ್ದಾನೆ ಶ್ರೀಕೃಷ್ಣ. "ಯಾವುದು ನಮ್ಮನ್ನು ಅಹಂಕಾರ-ಮಮಕಾರಗಳಿಂದ ಅಧೋಗತಿಗೆ ತಳ್ಳಬಲ್ಲದೋ, ಅದನ್ನೇ ನಾವು ನಮ್ಮನ್ನು ಭಗವಂತನ ಬಳಿ ಕೊಂಡೊಯ್ಯುವ ಸಾಧನವಾಗಿ ಬಳಸಬಹುದು. ಓ ಬ್ರಹ್ಮನ್, ಈ ಸಾಧನಗಳನ್ನು ಅಧಿಷ್ಠಾನವಾಗಿ ಬಳಸಿಕೊಂಡು, ಎಲ್ಲರ ಅಧಿಪತಿಯಾಗಿರುವ, ಆ ನನ್ನ ಅಧಿಪತಿ ಭಗವಂತನನ್ನು ಕಾಣಬಹುದು" ಎನ್ನುತ್ತಾನೆ ನಾರದನನ್ನು ಕುರಿತು ಚತುರ್ಮುಖ.

## ಮಹತತ್ತ್ವದ ಸೃಷ್ಟಿ

**ಕಾಲಂ ಕರ್ಮ ಸ್ವಭಾವಂ ಚ ಮಾಯೇಶೋ ಮಾಯಯಾ ಸ್ವಯಾ ।**
**ಆತ್ಮನ್ ಯದೃಚ್ಛಯಾ ಪ್ರಾಪ್ತಂ ವಿಬುಭೂಷುರುಪಾದದೇ ॥೨೧॥**

**ಕಾಲಾದ್ ಗುಣವ್ಯತಿಕರಾತ್ ಪರಿಣಾಮಸ್ವಭಾವತಃ ।**
**ಕರ್ಮಣೋ ಜನ್ಮ ಮಹತಃ ಪುರುಷಾಧಿಷ್ಠಿತಾದಭೂತ್ ॥೨೨॥**

ಭಗವಂತ ಅನಾದಿ ಅನಂತವಾಗಿರುವ 'ಜೀವದ' ದೇಹರಚನೆಯನ್ನು ಅದರ ಸ್ವಭಾವಕ್ಕನುಗುಣವಾಗಿ ಆಯಾ ಕಾಲದಲ್ಲಿ ಮಾಡುತ್ತಾನೆ. ಇದಕ್ಕಾಗಿ ಆತ ಸೃಷ್ಟಿಯ ಮೂಲದ್ರವ್ಯವಾದ, ಸೂಕ್ಷ್ಮರೂಪದಲ್ಲಿರುವ ಜಡಪ್ರಕೃತಿಯನ್ನು ಬಳಸಿಕೊಳ್ಳುತ್ತಾನೆ. ಸುಖ-ದುಃಖದ ಭೋಗದಿಂದ ಪುಣ್ಯಪಾಪಗಳ ಸಂಚಯನಕ್ಕಾಗಿ ಭಗವಂತ ಜೀವನಿಗೆ

ದೇಹವನ್ನು ನೀಡುತ್ತಾನೆ. ಜೀವದ ಸ್ವಭಾವದಂತೆ ಆಯಾ ಕಾಲದಲ್ಲಿ ಆಯಾ ಕರ್ಮಗಳು ನಡೆಯುತ್ತವೆ. ಯಾವ ಜೀವ ಯಾವ ಜಡದೊಂದಿಗೆ ಎಂದು ಬೆರೆಯಬೇಕು ಎನ್ನುವುದೇ 'ಕಾಲ'. ಸ್ವಭಾವಕ್ಕನುಗುಣವಾಗಿ ನಡೆಯುವ ಕ್ರಿಯೆಯೇ 'ಕರ್ಮ'. ಭಗವಂತ ಜೀವದ ಸ್ವಭಾವಕ್ಕನುಗುಣವಾಗಿ ಅದು ವಿಕಸನ ಹೊಂದುವುದಕ್ಕೆ ಮಾಡುವ ವ್ಯವಸ್ಥೆಯೇ 'ಸೃಷ್ಟಿ'. ಜೀವ ವಿಕಸನ ಹೊಂದುತ್ತಾ ತನ್ನ ಸ್ವಭಾವದಂತೆ ಕರ್ಮ ಮಾಡಿ, ಕರ್ಮಕ್ಕೆ ತಕ್ಕಂತೆ ಆಯಾ ಕಾಲದಲ್ಲಿ ಫಲವನ್ನು ಪಡೆಯುತ್ತಾನೆ. ಎಲ್ಲವನ್ನೂ ಭಗವಂತ ಸ್ವ-ಸಾಮರ್ಥ್ಯದಿಂದ, ತನ್ನ ಇಚ್ಛೆಯಂತೆ ಮಾಡುತ್ತಾನೆ. [ಇಲ್ಲಿ ಬಳಕೆಯಾದ 'ಯದೃಚ್ಛಯಾ' ಎನ್ನುವ ಪದದ ಮೇಲ್ನೋಟದ ಅರ್ಥ 'ಆಕಸ್ಮಿಕ'. ಆದರೆ ಇಲ್ಲಿ ನಾವು ಈ ಪದದ ಅಂತರಂಗದ ಅರ್ಥವನ್ನು ತೆಗೆದುಕೊಳ್ಳಬೇಕು. ಯತ್+ಋ+ಇಚ್ಛಾ . ಎಲ್ಲೆಡೆ ವ್ಯಾಪ್ತನಾದ ಭಗವಂತ(ಯತ್) ತನ್ನ ಜ್ಞಾನಸ್ವರೂಪದಿಂದ(ಋ) ಸಮಗ್ರವನ್ನೂ ತಿಳಿದು ಇಚ್ಛಿಸುತ್ತಾನೆ. ಆತನ ಇಚ್ಛೆಯಂತೆ ಎಲ್ಲವೂ ನಡೆಯುತ್ತದೆ].

"ಮೊಟ್ಟಮೊದಲು ಭಗವಂತ ಮಹತತ್ತ್ವವನ್ನು ಸೃಷ್ಟಿ ಮಾಡಿದ" ಎನ್ನುತ್ತಾನೆ ಚತುರ್ಮುಖ. ಇದು ತ್ರಿಗುಣಗಳ ವೈಷಮ್ಯದ ಕಂಪನದಿಂದ ಉಂಟಾದ ಪ್ರಪಂಚ ಸೃಷ್ಟಿಯ ಮೊಟ್ಟ ಮೊದಲ ವಿಕಾರ. ಮಹತತ್ತ್ವವನ್ನು ನಿಯಂತ್ರಿಸುವ ಜೀವ ಚತುರ್ಮುಖ. ಪಿಂಡಾಂಡದಲ್ಲಿ ಮಹತತ್ತ್ವ ಎಂದರೆ 'ಚಿತ್ತ' ಅಥವಾ 'ವಿಜ್ಞಾನಮಯಕೋಶ'. ಹೀಗಾಗಿ ಇಲ್ಲಿ ಮಹತತ್ತ್ವದ ಸೃಷ್ಟಿಯಾಯಿತು ಎಂದರೆ ವಿಶ್ವದ ಸುಪ್ತಪ್ರಜ್ಞೆ ಜಾಗೃತವಾಯಿತು ಎಂದರ್ಥ. ಪ್ರಳಯಕಾಲದಲ್ಲಿ ಇಡೀ ವಿಶ್ವದಲ್ಲಿ ತಮ್ಮ ಇರವಿನ ಅರಿವೂ ಇಲ್ಲದೇ ಇದ್ದ ಜೀವದಲ್ಲಿ ಸುಪ್ತಪ್ರಜ್ಞೆಯ ವಿಕಾಸದ ಬೀಜಕ್ಷೇಪವೇ ಈ ಮಹತತ್ತ್ವ ಅಥವಾ ಚತುರ್ಮುಖನ ಸೃಷ್ಟಿ. ಸೃಷ್ಟಿಯ ಪ್ರಾರಂಭದಲ್ಲಿ ಮೊಟ್ಟಮೊದಲು ಸರ್ವವ್ಯಾಪ್ತ ಭಗವಂತ ತನ್ನ ಪುರುಷ ನಾಮಕ ರೂಪದಿಂದ ಚತುರ್ಮುಖನನ್ನು ಸೃಷ್ಟಿ ಮಾಡಿ ಆತನೊಳಗೆ ಬ್ರಹ್ಮನಾಮಕನಾಗಿ ಕುಳಿತು ವಿಶ್ವದ ಸುಪ್ತಪ್ರಜ್ಞೆಯನ್ನು ಜಾಗೃತಗೊಳಿಸಿದ. [ಮಹತತ್ತ್ವವನ್ನು ಸೃಷ್ಟಿ ಮಾಡಿದ ಭಗವಂತನ ರೂಪ ಮೊದಲನೆಯ ಪುರುಷ ನಾಮಕ ರೂಪ. ನಂತರ ಅಹಂಕಾರ ತತ್ತ್ವ ಮತ್ತು ಪಂಚಭೂತಗಳನ್ನು ಸೃಷ್ಟಿ ಮಾಡಿ ಬ್ರಹ್ಮಾಂಡದೊಳಗೆ ಸೇರಿದ ಭಗವಂತನ ರೂಪ ಎರಡನೇ ಪುರುಷ ನಾಮಕ ರೂಪ. ಆನಂತರ ಬ್ರಹ್ಮಾಂಡದಲ್ಲಿ ಪಿಂಡಾಂಡವನ್ನು ಸೃಷ್ಟಿಸಿ ಪ್ರತಿಯೊಂದು ಪಿಂಡಾಂಡದೊಳಗೆ ಸೇರಿದ ಭಗವಂತನ ರೂಪ ಮೂರನೇ ಪುರುಷ ನಾಮಕ ರೂಪ].

## ಅಹಂಕಾರತತ್ತ್ವದ ಸೃಷ್ಟಿ

ಮಹತಸ್ತು ವಿಕುರ್ವಾಣಾದ್ ರಜಸ್ಸತ್ತ್ವೋಪಬೃಂಹಿತಾತ್ ।
ತಮಃಪ್ರಧಾನಸ್ತ್ವಭವದ್ ದ್ರವ್ಯಜ್ಞಾನಕ್ರಿಯಾತ್ಮಕಃ ॥೨೩॥

ಸೋSಹಂಕಾರ ಇತಿ ಪ್ರೋಕ್ತೋ ವಿಕುರ್ವನ್ ಸಮಭೂತ್ ತ್ರಿಧಾ ।
ವೈಕಾರಿಕಸ್ತೈಜಸಶ್ಚ ತಾಮಸಶ್ಚೇತಿ ಯದ್ಭಿದಾ ।
ದ್ರವ್ಯಶಕ್ತಿಃ ಕ್ರಿಯಾಶಕ್ತಿರ್ಜ್ಞಾನಶಕ್ತಿರಿತಿ ಪ್ರಭೋ ॥೨೪॥

ಮಹತತ್ತ್ವದ ವಿಕಸನವಾಗುತ್ತಾ ಅಹಂಕಾರ ತತ್ತ್ವದ(**Awareness of self**) ಸೃಷ್ಟಿಯಾಯಿತು. ಅಹಂಕಾರ ತತ್ತ್ವಕ್ಕೆ ಮೂರು ಮುಖಗಳು. ದ್ರವ್ಯ, ಕ್ರಿಯಾ ಮತ್ತು ಜ್ಞಾನ. ದ್ರವ್ಯ ಎಂದರೆ ಪಂಚಭೂತಗಳು, ಜ್ಞಾನ ಎಂದರೆ ಜ್ಞಾನೇಂದ್ರಿಯಗಳು ಮತ್ತು ಕರ್ಮ ಎಂದರೆ ಕರ್ಮೇಂದ್ರಿಯಗಳು. ಅಹಂಕಾರ ತತ್ತ್ವದ ಸೃಷ್ಟಿಯಿಂದಾಗಿ ಆ ಕಲ್ಪದಲ್ಲಿ ಸೃಷ್ಟಿಯಾಗಬೇಕಾಗಿರುವ ಎಲ್ಲಾ ಜೀವಗಳಿಗೆ 'ನಾನು' ಎನ್ನುವ ಎಚ್ಚರ ಜಾಗೃತವಾಯಿತು. ಈ ಸ್ಥಿತಿಯಲ್ಲಿ

ಮನಸ್ಸಾಗಲೀ, ಇಂದ್ರಿಯಗಳಾಗಲೀ ಇನ್ನೂ ಜಾಗೃತವಾಗಿಲ್ಲ. [ಹೇಗೆ ಗರ್ಭದಲ್ಲಿ ಭ್ರೂಣ ಬೆಳೆಯುತ್ತದೋ ಹಾಗೇ ಈ ಸೃಷ್ಟಿ ಪ್ರಕ್ರಿಯೆ]. ಅಹಂಕಾರ ತತ್ತ್ವ ಮತ್ತೆ ಮೂರು ಮುಖದಲ್ಲಿ ಸೃಷ್ಟಿಯನ್ನು ವಿಸ್ತರಿಸಿತು. ಅವುಗಳೆಂದರೆ ವೈಕಾರಿಕ ಅಹಂಕಾರ, ತೈಜಸ ಅಹಂಕಾರ ಮತ್ತು ತಾಮಸ ಅಹಂಕಾರ [ಅಹಂಕಾರ ತತ್ತ್ವದ ವಿಸ್ತಾರವನ್ನು ಈ ಅಧ್ಯಾಯದ ೩೦ ಮತ್ತು ೩೧ನೇ ಶ್ಲೋಕದಲ್ಲಿ ವಿವರಿಸಿದ್ದು, ಅದನ್ನು ಸೃಷ್ಟಿಯ ವಿಸ್ತಾರದ ಕ್ರಮಾಂಕದಲ್ಲಿ ಇಲ್ಲೇ ವಿಶ್ಲೇಷಿಸಿ ಮುಂದೆ ಹೋಗೋಣ].

## ಅಹಂಕಾರತತ್ತ್ವದ ಮೂರು ಮುಖಗಳಿಂದ ಸೃಷ್ಟಿಯ ವಿಸ್ತಾರ

**ವೈಕಾರಿಕಾನ್ಮನೋ ಜಜ್ಞೇ ದೇವಾ ವೈಕಾರಿಕಾ ದಶ ।**
**ದಿಗ್ವಾತಾರ್ಕಪ್ರಚೇತೋSಶ್ವಿವಹ್ನೀಂದ್ರೋಪೇಂದ್ರಮಿತ್ರಕಾಃ ॥೩೦॥**

**ತೈಜಸಾತ್ತು ವಿಕುರ್ವಾಣಾದಿಂದ್ರಿಯಾಣಿ ದಶಾಭವನ್ ।**
**ಜ್ಞಾನಶಕ್ತಿಃ ಕ್ರಿಯಾಶಕ್ತಿರ್ಬುದ್ಧಿಃ ಪ್ರಾಣಶ್ಚತೈಜಸೌ ॥೩೧॥**

ವೈಕಾರಿಕ ಅಹಂಕಾರ ಎಂದರೆ ಸಾತ್ತ್ವಿಕ ಅಹಂಕಾರ. ಇದು ವಿವಿಧಕಾರಕ ಸೃಷ್ಟಿ. ಅಂದರೆ ವಿವಿಧ ಕ್ರಿಯಾಕಾರಕರಾಗಿರುವ ಮನಸ್ಸು ಮತ್ತು ಹತ್ತು ಇಂದ್ರಿಯಾಭಿಮಾನಿ ದೇವತೆಗಳ(ವೈಕಾರಿಕರ) ಸೃಷ್ಟಿ. ವೈಕಾರಿಕ ಅಹಂಕಾರದ ಸೃಷ್ಟಿಯಿಂದಾಗಿ ಆ ಕಲ್ಪದಲ್ಲಿ ಸೃಷ್ಟಿಯಾಗಬೇಕಾಗಿರುವ ಎಲ್ಲಾ ಜೀವಗಳ ಲಿಂಗ ಶರೀರದಲ್ಲಿ ಸುಪ್ತವಾಗಿದ್ದ ಮನೋಮಯಕೋಶ ಜಾಗೃತವಾಗಿ ಜೀವಗಳಲ್ಲಿ ಮನಸ್ಸು ಕೆಲಸ ಮಾಡಲು ಪ್ರಾರಂಭಿಸಿತು. ಮಹತತ್ತ್ವದ(ಚಿತ್ತದ) ದೇವತೆಗಳು ಬ್ರಹ್ಮ ಮತ್ತು ವಾಯು(ಪ್ರಾಣ)ವಾದರೆ ಗರುಡ-ಶೇಷ-ರುದ್ರರು ಮನೋಭಿಮಾನಿ ದೇವತೆಗಳು. ಆದರೆ ಶಿವ ವಿಶೇಷವಾಗಿ ಮನೋಭಿಮಾನಿ. ಮಹತತ್ತ್ವದಲ್ಲಿ ಭಗವಂತ ವಾಸುದೇವ ರೂಪದಲ್ಲಿದ್ದಾನೆ. ಅಹಂಕಾರ ತತ್ತ್ವದಲ್ಲಿ ಭಗವಂತ ಸಂಕರ್ಷಣ ರೂಪದಲ್ಲಿದ್ದಾನೆ. ಬುದ್ಧಿಯಲ್ಲಿ ಪ್ರದ್ಯುಮ್ನರೂಪಿ ಭಗವಂತನಿದ್ದರೆ, ಮನಸ್ಸಿನಲ್ಲಿ ಅನಿರುದ್ಧರೂಪದಲ್ಲಿ ಭಗವಂತನಿದ್ದಾನೆ. ಅಹಂಕಾರತತ್ತ್ವದಲ್ಲಿ ಸಂಕರ್ಷಣ ರೂಪಿ ಭಗವಂತನಿರುವುದರಿಂದ ಶೇಷನನ್ನೂ ಕೂಡಾ ಅದರ ಅಭಿಮಾನಿ ದೇವತೆ ಎಂದು ಶಾಸ್ತ್ರಕಾರರು ಹೇಳುತ್ತಾರೆ.

ಸಾತ್ತ್ವಿಕ ಅಹಂಕಾರ ನಿಯಾಮಕನಾದ ಶಿವನಿಂದ ಮನಸ್ಸು ಮತ್ತು ಹತ್ತು ಇಂದ್ರಿಯಾಭಿಮಾನಿ ದೇವತೆಗಳ ಸೃಷ್ಟಿಯಾಯಿತು. (೧) ಕಿವಿಯ ಅಭಿಮಾನಿ ದಿಗ್ದೇವತೆಗಳು. [ಪೂರ್ವದಿಕ್ಕಿಗೆ ಮಿತ್ರ, ಪಶ್ಚಿಮದಿಕ್ಕಿಗೆ ವರುಣ, ಉತ್ತರ ದಿಕ್ಕಿಗೆ ಕುಬೇರ ಮತ್ತು ದಕ್ಷಿಣ ದಿಕ್ಕಿಗೆ ಯಮ ಅಭಿಮಾನಿ ದೇವತೆಗಳು. ಇವರೆಲ್ಲರ ಮುಖಂಡ ಹಾಗೂ ಶೋತ್ರಾಭಿಮಾನಿ-ಸೋಮ(ಚಂದ್ರ)]. (೨) ಸ್ಪರ್ಶದ ದೇವತೆ ವಾಯು. ಇಲ್ಲಿ ವಾಯು ಎಂದರೆ ಪ್ರಧಾನ ವಾಯು(ಪ್ರಾಣ) ಅಲ್ಲ, ಸ್ಪರ್ಶ ಶಕ್ತಿಯನ್ನು ಕೊಡುವ ಅಹಂಪ್ರಾಣ. (೩) ಕಣ್ಣಿನ ದೇವತೆ ಅರ್ಕ(ಸೂರ್ಯ). (೪)ನಾಲಿಗೆ ಅಥವಾ ರಸದ ಅಭಿಮಾನಿ ದೇವತೆ ಪ್ರಚೇತ(ವರುಣ). (೫) ಮೂಗಿನ ಅಥವಾ ಗಂಧದ ಅಭಿಮಾನಿ ದೇವತೆ ಆಶ್ವೀದೇವತೆಗಳು. (೬) ಬಾಯಿ ಅಥವಾ ವಾಗೀನ್ದ್ರಿಯದ ದೇವತೆ ವಹ್ನಿ(ಅಗ್ನಿ). (೭) ಕೈಯ ಅಭಿಮಾನಿ ದೇವತೆ ಇಂದ್ರ. (೮) ಕಾಲಿನ ಅಭಿಮಾನಿ ದೇವತೆಯಾಗಿ ಸ್ವಯಂ ಭಗವಂತನೇ ಉಪೇಂದ್ರನಾಗಿ ಶಿವನಿಂದ ಹುಟ್ಟಿದ. ಇಂದ್ರ ಪುತ್ರ ಜಯಂತ ಕೂಡಾ ಕಾಲಿನ ಅಭಿಮಾನಿ ದೇವತೆ. (೯) ದೇಹಕ್ಕೆ ಬೇಡವಾದುದನ್ನು ಹೊರ ಹಾಕುವ ಪಾಯುವಿನ ಅಭಿಮಾನಿ ಮಿತ್ರ ಹಾಗೂ (೧೦) ಮೂತ್ರ ಮತ್ತು ರೇತಸ್ಸಿನ ವಿಸರ್ಜನೆ ಹಾಗೂ ರೇತಸ್ಸಿನ ಸ್ವೀಕಾರದ

ಜನನೇಂದ್ರಿಯದ ಅಭಿಮಾನಿ ಸಂತಾನ ದೇವತೆಯಾದ ದಕ್ಷಪ್ರಜಾಪತಿ. ಹೀಗೆ ಹತ್ತು ಮಂದಿ ಅಭಿಮಾನಿ ದೇವತೆಗಳು ವೈಕಾರಿಕ ಅಹಂಕಾರದಿಂದ ಸೃಷ್ಟಿಯಾದರು.

**ತಾಮಸಾದಪಿ ಭೂತಾದೇರ್ವಿಕುರ್ವಾಣಾದಭೂನ್ನಭಃ ।**
**ತಸ್ಯ ಮಾತ್ರಾಗುಣಃ ಶಬ್ದೋ ಲಿಂಗಂ ಯದ್ ದ್ರಷ್ಟೃದೃಶ್ಯಯೋಃ ॥೨೫॥**

ತೈಜಸ ಅಹಂಕಾರದಿಂದ ಹತ್ತು ಇಂದ್ರಿಯಗಳು ಜಾಗೃತಗೊಂಡವು. ಹೀಗೆ ಮುಂದೆ ನಿರ್ಮಾಣವಾಗುವ ಬ್ರಹ್ಮಾಂಡದಲ್ಲಿ ಹುಟ್ಟಿಬರುವ ಜೀವಗಳ ಚಿತ್ತ, ಮನಸ್ಸು, ಅಹಂಕಾರ, ಪಂಚಜ್ಞಾನೇಂದ್ರಿಯಗಳು ಮತ್ತು ಪಂಚ ಕರ್ಮೇಂದ್ರಿಯಗಳು ಜಾಗೃತಗೊಂಡವು. ತಾಮಸ ಅಹಂಕಾರದಿಂದ ಪಂಚಭೂತಗಳ ಸೃಷ್ಟಿಯಾಯಿತು. ಪಂಚಭೂತಗಳಲ್ಲಿ ಮೊದಲು ಆಕಾಶದ ಸೃಷ್ಟಿಯಾಯಿತು.

ಇಲ್ಲಿ ನಮಗೆ ಒಂದು ಪ್ರಶ್ನೆ ಕಾಡಬಹುದು. ಅದೇನೆಂದರೆ ಪಂಚಭೂತಗಳ ಸೃಷ್ಟಿಯಲ್ಲಿ ಆಕಾಶದ ಸೃಷ್ಟಿ ಎಂದರೇನು ಎಂದು. ಮೂಲತಃ ಆಕಾಶದ ಸೃಷ್ಟಿ ವಾಸ್ತವವಲ್ಲ, ಇದು ಸಾಪೇಕ್ಷವಾಗಿ. ಅಂತರಿಕ್ಷ **(Space)** ಮೊದಲೇ ಇತ್ತು. ಅದರಲ್ಲಿ ಭಗವಂತ ತನ್ನ ರೂಪವನ್ನು ಆವಿರ್ಭಾವಗೊಳಿಸುವುದೇ ಆಕಾಶದ ಸೃಷ್ಟಿ. ಬಣ್ಣವಿಲ್ಲದ ಅಂತರಿಕ್ಷದಲ್ಲಿ 'ಕಣ್ಣಿಗೆ ಕಾಣದ ನೀಲ ವರ್ಣದ**(Ultraviolet)**' ಆಕಾಶ ಸೃಷ್ಟಿಯಾಯಿತು. **(**ಇತ್ತೀಚೆಗೆ ವಿಜ್ಞಾನ ಕಂಡುಕೊಂಡ **Ultraviolet** ವಿಷಯವನ್ನು ಹದಿಮೂರನೇ ಶತಮಾನದಲ್ಲೇ ಆಚಾರ್ಯ ಮಧ್ವರು ವಿವರಿಸಿ ಹೇಳಿರುವುದನ್ನು ಓದುಗರು ಗಮನಿಸಬೇಕು. **Space is not created but Ether is created).** ಆಕಾಶದ ಸೃಷ್ಟಿಯೊಂದಿಗೆ ಆಕಾಶದ ಅಸಾಧಾರಣ ಗುಣವಾದ**(Exclusive quality)** ಶಬ್ದದ ಸೃಷ್ಟಿಯಾಯಿತು. ಅಂದರೆ ಈ ಕಲ್ಪದಲ್ಲಿ ಸೃಷ್ಟಿಯಾಗಬೇಕಾಗಿರುವ ಜೀವಜಾತಗಳಿಗೆ ನಾದದ ಅನುಭವ ಪ್ರಾರಂಭವಾಯಿತು.

**ನಭಸೋSಥ ವಿಕುರ್ವಾಣಾದಭೂತ್ ಸ್ಪರ್ಶಗುಣೋSನಿಲಃ ।**
**ಪರಾನ್ವಯಾಚ್ಛಬ್ದವಾಂಶ್ಚ ಪ್ರಾಣ ಓಜಃ ಸಹೋ ಬಲಮ್ ॥೨೬॥**

ಆಕಾಶದಲ್ಲಿ ಆರಂಭವಾದ ಸ್ಪಂದನದಿಂದ ಗಾಳಿಯ ಸೃಷ್ಟಿಯಾಯಿತು. ಸ್ಪರ್ಶ ಗಾಳಿಯ ಅಸಾಧಾರಣ ಗುಣ. ಗಾಳಿ ಶಬ್ದ ವಾಹಕ ಕೂಡಾ ಹೌದು. ಪ್ರಾಣ, ಓಜಸ್ಸು, ಸಹಸ್ಸು ಮತ್ತು ಬಲ ಗಾಳಿಯ ನಾಲ್ಕು ಪ್ರಮುಖ ಗುಣಗಳು. ಗಾಳಿಯಿಂದಾಗಿ ಜೀವಜಾತಗಳಲ್ಲಿ ಪ್ರಾಣಶಕ್ತಿ ತುಂಬಿತು. ಪ್ರಾಣಶಕ್ತಿ ಎಂದರೆ ಎಲ್ಲವನ್ನೂ ಧಾರಣೆ ಮಾಡುವ ಶಕ್ತಿ. ಓಜಸ್ಸು ಎಂದರೆ ಇನ್ನೊಬ್ಬರನ್ನು ಮಣಿಸುವ ಶಕ್ತಿ. ಬಿರುಗಾಳಿ ಬೀಸಿತೆಂದರೆ ಅದರ ಮುಂದೆ ಯಾವುದೂ ನಿಲ್ಲಲಾರದು. ಅದೇ ರೀತಿ ಎಲ್ಲವನ್ನೂ ಮಣಿಸಬಲ್ಲ ಗಾಳಿಯನ್ನು ಮಣಿಸುವ ಶಕ್ತಿ ಇನ್ನೊಂದಿಲ್ಲ(ಸಹಸ್ಸು). ತನ್ನ ಇಚ್ಛೆಯಂತೆ ತಾನು ನಿರ್ಧಾರ ಮಾಡುವ ಶಕ್ತಿ ಬಲ. ಇವೆಲ್ಲವೂ ಪ್ರಾಣದೇವರ ಅಸಾಧಾರಣ ಗುಣಗಳು.

**ವಾಯೋರಪಿ ವಿಕುರ್ವಾಣಾತ್ ಕಾಲಕರ್ಮಸ್ವಭಾವತಃ ।**
**ಉದಪದ್ಯತ ತೇಜೋ ವೈ ರೂಪವತ್ ಸ್ಪರ್ಶಶಬ್ದವತ್ ॥೨೭॥**

ತೇಜಸಸ್ತು ವಿಕುರ್ವಾಣಾದಾಸೀದಂಭೋ ರಸಾತ್ಮಕಮ್ ।
ರೂಪವತ್ ಸ್ಪರ್ಶವಚ್ಚಾಂಭೋ ಘೋಷವಚ್ಚ ತದನ್ವಯಾತ್ ॥೨೮॥

ಗಾಳಿಯ ಒತ್ತಡದಲ್ಲಿ ಉಂಟಾದ ಸಂಘರ್ಷದಿಂದ ಬೆಂಕಿ ಸೃಷ್ಟಿಯಾಯಿತು. 'ರೂಪ' ಬೆಂಕಿಯ ಅಸಾಧಾರಣ ಗುಣ. ಇದರಿಂದಾಗಿ ಆ ಕಲ್ಪದಲ್ಲಿ ಸೃಷ್ಟಿಯಾಗಬೇಕಾಗಿರುವ ಜೀವಜಾತಗಳ ಕಣ್ಣಿಗೆ ಕಾಣುವ ರೂಪದ ಸೃಷ್ಟಿ ನಿರ್ಮಾಣವಾಯಿತು. ಬೆಂಕಿಯಲ್ಲಿ ಶಬ್ದವಿದೆ ಮತ್ತು ಸ್ಪರ್ಶವಿದೆ. ಮೂಲಭೂತವಾಗಿ ಏಳು ಬಣ್ಣಗಳಿರುವುದೂ ಬೆಂಕಿಯಲ್ಲೇ (ಸಪ್ತಜಿಹ್ವ). ಶಾಖ ಹೆಚ್ಚಾದಾಗ ಹೇಗೆ ಬೆವರು ಹುಟ್ಟುತ್ತದೋ ಹಾಗೇ ಬೆಂಕಿಯಿಂದ ನೀರಿನ ಸೃಷ್ಟಿಯಾಯಿತು. ಶಬ್ದ, ಸ್ಪರ್ಶ ಮತ್ತು ರೂಪದ ಜೊತೆಗೆ ವಿಶೇಷವಾಗಿ 'ರಸ' ನೀರಿನ ಅಸಾಧಾರಣ ಗುಣ.

ವಿಶೇಷಸ್ತು ವಿಕುರ್ವಾಣಾದಂಭಸೋ ಗಂಧವಾನಭೂತ್ ।
ಪರಾನ್ವಯಾದ್ ರಸಸ್ಪರ್ಶರೂಪಶಬ್ದಗುಣಾನ್ವಿತಃ ॥೨೯॥

ಆಕಾಶ, ಗಾಳಿ, ಬೆಂಕಿ ಮತ್ತು ನೀರಿನ ಸೃಷ್ಟಿಯ ನಂತರ ಕೊನೆಯದಾಗಿ ಎಲ್ಲಾ ಗುಣಗಳನ್ನು ಹೊಂದಿರುವ 'ವಿಶೇಷದ' ಅಥವಾ ಮಣ್ಣಿನ ಸೃಷ್ಟಿಯಾಯಿತು. ನೀರೇ ಗಟ್ಟಿಯಾಗಿ ಮಣ್ಣಿನ ರೂಪ ಪಡೆಯಿತು. ಹೀಗೆ ಏನೂ ಕಾಣದ ಆಕಾಶದಲ್ಲಿ ಕಣ್ಣಿಗೆ ಕಾಣುವ ಘನಪದಾರ್ಥ ವಿಕಸನವಾಯಿತು. ಕೇವಲ ಪಂಚಭೂತಗಳಷ್ಟೇ ಅಲ್ಲ, ಅದರ ಅಭಿಮಾನಿ ದೇವತೆಗಳ ಸೃಷ್ಟಿಯೂ ಆಯಿತು. ಶಿವನಿಂದ ಮನಸ್ಸು ಹುಟ್ಟಿತು. ಶಿವನ ಮೊದಲ ಮಗ ಸ್ಕಂಧ ಮನಸ್ಸಿನ ದೇವತೆ. ಶಿವನಿಂದ ಆಕಾಶದ ಸೃಷ್ಟಿಯಾಯಿತು. ಶಿವನ ಎರಡನೇ ಮಗ ಗಣಪತಿ ಆಕಾಶದ ದೇವತೆ. ಅದೇ ರೀತಿ ಗಾಳಿಯ ಅಭಿಮಾನಿ ದೇವತೆ ಮರೀಚಿ, ಬೆಂಕಿಯ ಅಭಿಮಾನಿ ದೇವತೆ ಅಗ್ನಿಪುತ್ರ ಪಾವಕ, ನೀರಿನ ವಿಶಿಷ್ಠ ಅಭಿಮಾನಿ ದೇವತೆ ಬುಧ ಹಾಗೂ ಮಣ್ಣಿನ ವಿಶಿಷ್ಠ ಅಭಿಮಾನಿ ದೇವತೆ ಶನಿ. ಹೀಗೆ ದೇವತಾ ತಾರತಮ್ಯದ ಅನುಕ್ರಮದಲ್ಲೇ ಪಂಚಭೂತಗಳ ಅಭಿಮಾನಿ ದೇವತೆಗಳ ಸೃಷ್ಟಿಯಾಯಿತು.

ಸೃಷ್ಟಿ ಪ್ರಕ್ರಿಯೆಯ ಈ ಹಂತದಲ್ಲಿ ಇನ್ನೂ ಬ್ರಹ್ಮಾಂಡ ಮತ್ತು ಪಿಂಡಾಂಡ ರಚನೆ ಆಗಿಲ್ಲ. ಪಂಚಭೂತಗಳು, ಪಂಚತನ್ಮಾತ್ರೆಗಳು, ಪಂಚ ಜ್ಞಾನೇಂದ್ರಿಯಗಳು, ಪಂಚ ವಿಧ ಅಂತಃಕರಣ, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನ, ಎಲ್ಲವೂ ಸೃಷ್ಟಿಯಾಗಿದೆ. ಅನ್ನಮಯಕೋಶ, ಪ್ರಾಣಮಯಕೋಶ, ಮನೋಮಯಕೋಶ, ವಿಜ್ಞಾನಮಯಕೋಶ ಹೀಗೆ ಎಲ್ಲಾ ಕೊಶಗಳೂ ಸಿದ್ಧವಾಗಿವೆ. ಜೀವಿಗಳ ಸೂಕ್ಷ್ಮಶರೀರದಲ್ಲಿ ಇಂದ್ರಿಯ ಜಾಗೃತವಾಗಿದೆ. ಆದರೆ ದೇಹರಚನೆ ಇನ್ನೂ ಆಗಿಲ್ಲ.

ಇಲ್ಲಿ ಪಂಚಭೂತಗಳು ಎಂದರೆ ಶುದ್ಧ ಪಂಚಭೂತಗಳು. ಇಂದು ಪ್ರಪಂಚದಲ್ಲಿರುವ ಪಂಚಭೂತಗಳು ಶುದ್ಧ ಪಂಚಭೂತಗಳಲ್ಲ. ಉದಾಹರಣೆಗೆ ಮಣ್ಣು ಅಥವಾ ನೀರು ಎಂದರೆ ಅದು ಮಣ್ಣು-ನೀರು-ಬೆಂಕಿಯ ಮಿಶ್ರಣ. ಶುದ್ಧ ಮಣ್ಣು ಅಥವಾ ಶುದ್ಧ ನೀರು ಬ್ರಹ್ಮಾಂಡ ಸೃಷ್ಟಿಯ ಉತ್ತರದಲ್ಲಿ ಇಲ್ಲವೇ ಇಲ್ಲ. ಸೃಷ್ಟಿಯ ಈ ಹಂತದಲ್ಲಿ ಶುದ್ಧ ಪಂಚಭೂತಗಳು ಮತ್ತು ಐದು ಶುದ್ಧಗುಣಗಳು ಸೃಷ್ಟಿಯಾಗಿವೆ. ಈ ಗುಣಗಳ (ಪಂಚತನ್ಮಾತ್ರೆಗಳ) ಅಭಿಮಾನಿ ದೇವತೆಗಳು ಕೂಡಾ ಸೃಷ್ಟಿಯಾಗಿದ್ದಾರೆ. ಶಬ್ದ ಮತ್ತು ಸ್ಪರ್ಶದ ಅಭಿಮಾನಿ ದೇವತೆ ಗರುಡ ಪತ್ನಿ ಸುಪರ್ಣಿ, ರೂಪ ಮತ್ತು ರಸದ ಅಭಿಮಾನಿ ದೇವತೆ ಶೇಷ ಪತ್ನಿ ವಾರುಣಿ, ಗಂಧದ ಅಭಿಮಾನಿ ದೇವತೆ ರುದ್ರ ಪತ್ನಿ ಪಾರ್ವತಿ. ಇವರಲ್ಲದೆ ರುದ್ರ ಪುತ್ರರಾದ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಕೂಡಾ ಪಂಚತನ್ಮಾತ್ರೆಗಳ

ಅಭಿಮಾನಿ ದೇವತೆಗಳು. ಹೀಗೆ ಬ್ರಹ್ಮಾಂಡ ಸೃಷ್ಟಿಗೆ ಬೇಕಾದ ದ್ರವ್ಯ **(raw material)** ಸಿದ್ಧವಾಯಿತು. ಮುಂದೆ ತತ್ತ್ವಾಭಿಮಾನಿ ದೇವತೆಗಳು ಈ ದ್ರವ್ಯವನ್ನು ಬಳಸಿ ಒಂದು ವ್ಯವಸ್ಥಿತವಾದ ಬ್ರಹ್ಮಾಂಡ ಮತ್ತು ಪಿಂಡಾಂಡ ರಚನೆ ಮಾಡಬೇಕು. ಆದರೆ ಈ ಕಾರ್ಯ ದೇವತೆಗಳಿಗೆ ಅಷ್ಟು ಸುಲಭದ ಕೆಲಸವಾಗಿರಲಿಲ್ಲ.

ತದಾ ಸಂಹತ್ಯ ಚಾನ್ಯೋನ್ಯಂ ಭಗವಚ್ಛಕ್ತಿಚೋದಿತಾಃ ।
ಸದಸತ್ತ್ವಮುಪಾದಾಯ ನೋಭಯಂ ಸಸೃಜುರ್ಹ್ಯದಃ ॥೩೩॥

"ದೇವತೆಗಳ ವ್ಯಯಕ್ತಿಕ ಅಥವಾ ಸಾಮೂಹಿಕ ಪ್ರಯತ್ನದಿಂದ ಅವರಿಗೆ ಬ್ರಹ್ಮಾಂಡ ಸೃಷ್ಟಿ ಸಾಧ್ಯವಾಗದೇ ಇದ್ದಾಗ, ಶಕ್ತಿ ರೂಪನಾಗಿ ಭಗವಂತ ಅವರೊಳಗೆ ತುಂಬಿ, ಅವರಿಂದ ಬ್ರಹ್ಮಾಂಡ ಸೃಷ್ಟಿ ಮಾಡಿಸಿದ" ಎನ್ನುತ್ತಾನೆ ಚತುರ್ಮುಖ. ಶಾಸ್ತ್ರಗಳು ಹೇಳುವಂತೆ: *ಪರಾಸ್ಯ ಶಕ್ತಿಹೀ ವಿವಿಧೈವ್ಯ ಶ್ರೂಯತೇ, ಸ್ವಾಭಾವಿಕ್ಯೆ ಜ್ಞಾನ ಬಲ ಕ್ರಿಯಾ ಚ* . ಶಕ್ತಿಸ್ವರೂಪನಾದ ಭಗವಂತ ಶಕ್ತಿ ಕೊಟ್ಟಾಗ ಮಾತ್ರ ಕಾರ್ಯ ನಡೆಯುತ್ತದೆ. ಭಗವಂತನ ಇಚ್ಛೆ ಇದ್ದಾಗ ಆತ ನಮಗೆ ಶಕ್ತಿ ಕೊಟ್ಟೇ ಕೊಡುತ್ತಾನೆ ಮತ್ತು ಆತನ ಇಚ್ಛೆಯಂತೆ ಕಾರ್ಯ ನೆರವೇರುತ್ತದೆ. ಭಗವಂತನ ಶಕ್ತಿ ಆಧಾನದಿಂದಾಗಿ ದೇವತೆಗಳಲ್ಲಿ ಹೊಸ ಹುರುಪು ಮೂಡಿತು. ಅವ್ಯಕ್ತಸ್ಥಿತಿಯಲ್ಲಿದ್ದ ಮೂಲದ್ರವ್ಯದ ಮಿಶ್ರಣದಿಂದ ವ್ಯಕ್ತ ರೂಪದ ಬ್ರಹ್ಮಾಂಡ ನಿರ್ಮಾಣ ಪ್ರಾರಂಭವಾಯಿತು. ಹೀಗೆ ಕಣ್ಣಿಗೆ ಕಾಣದ ಶಕ್ತಿಗಳು, ಕಣ್ಣಿಗೆ ಕಾಣುವ ಶಕ್ತಿಗಳು ಸೇರಿ, ಕಾಣದ್ದು ಕಾಣುವ ಶಕ್ತಿಯಾಗಿ, ಇನ್ನು ಕೆಲವು ಕಾಣದ ಶಕ್ತಿಯಾಗೇ ಉಳಿದು, ಸತ್ತು-ಅಸತ್ತು ಒಂದಕ್ಕೊಂದು ಉಪಾದಾನವಾಗಿ, ವ್ಯಕ್ತ ಅವ್ಯಕ್ತದೊಳಗೆ ಸೇರಿ, ಅವ್ಯಕ್ತವು ವ್ಯಕ್ತದೊಳಗೆ ಸೇರಿ ಒಂದು ಭಯಂಕರವಾದ ಪ್ರಪಂಚ ನಿರ್ಮಾಣವಾಯಿತು! [ಈ ಮೇಲಿನ ಮಾತು ಪರಮಾಣು ರಚನೆಯನ್ನು ತಿಳಿದವರಿಗೆ ಚೆನ್ನಾಗಿ ಅರ್ಥವಾಗುತ್ತದೆ. ಅಲ್ಲಿರುವ **atom** ಮತ್ತು **subatom,** ಅದೊರೊಳಗಿನ **space,** ಅಲ್ಲಿರುವ ನಿರಂತರ ಚಲನೆ, ಇವೆಲ್ಲವೂ ಒಂದು ವಿಸ್ಮಯವಲ್ಲವೇ?].

ಈ ಬ್ರಹ್ಮಾಂಡವೆಂದರೆ ಅದು ಭಯಂಕರ! ಏಕೆಂದರೆ ಅದು ಹುಟ್ಟು-ಸಾವುಗಳ ಚಕ್ರಭ್ರಮಣ. ಅದು ನಮಗೆಲ್ಲರಿಗೂ ಸಂಸಾರದ, ಸಾವಿನ ಭಯವನ್ನು ಹುಟ್ಟಿಸುವಂತಹದ್ದು. ನಮಗೆ ಸಂಸಾರದ ಭಯವನ್ನು ನೀಡುವವನೂ ಭಗವಂತ, ಮೋಕ್ಷದ ಅಭಯವನ್ನು ನೀಡುವವನೂ ಭಗವಂತ. ಹೀಗೆ ಯಾವ ಭಯವನ್ನು ಮೀರಿದರೂ ಮೀರಲಾರದ ಸಾವಿನ ಭಯವನ್ನು ನೀಡುವ ಬ್ರಹ್ಮಾಂಡ ರಚನೆಯನ್ನು ಭಗವಂತ ತನ್ನ ಪುರುಷನಾಮಕ ರೂಪದಿಂದ ಮಾಡಿದ. ಈ ಹಂತದಲ್ಲಿ ಇನ್ನೂ ಪಿಂಡಾಂಡ ಸೃಷ್ಟಿ ಆಗಿಲ್ಲ. ಬ್ರಹ್ಮಾಂಡ ಸೃಷ್ಟಿಯಾಗಿ ಅಲ್ಲಿ ಜೀವಜಾತಗಳ ಸೃಷ್ಟಿಯಾಗಲು ಸಾವಿರಾರು ವರ್ಷಗಳು ಹಿಡಿದಿವೆ. ಭಗವಂತ ತನ್ನ ನಿಯಮದಂತೆ ಹಂತಹಂತವಾಗಿ ಸೃಷ್ಟಿ ಕಾರ್ಯವನ್ನು ದೇವತೆಗಳ ಒಳಗೆ ಕುಳಿತು ಮಾಡಿದ. ಹೀಗಾಗಿ ಸೃಷ್ಟಿ ಪ್ರಾರಂಭವಾಗಿ ಪೂರ್ಣ ಸೃಷ್ಟಿಯಾಗಲು ಮೂರು ಸಾವಿರದ ಎಂಟುನೂರ ಎಂಬತ್ತೆಂಟು ಸಾವಿರ ಕೋಟಿ ವರ್ಷಗಳು ಹಿಡಿದಿವೆ. ಇದು ಈ ವಿಶ್ವದ ಆಯಸ್ಸಿನ ಎಂಟನೇ ಒಂದು ಭಾಗ (ಸೃಷ್ಟಿಯಾದ ಪ್ರಪಂಚದ ಆಯಸ್ಸು ೩೧,೧೦೪ ಸಾವಿರ ಕೋಟಿ ವರ್ಷಗಳು).

ವರ್ಷಪೂಗಸಹಸ್ರಾಂತೇ ತದಂಡಮುದಕೇಶಯಮ್ ।
ಕಾಲಕರ್ಮಸ್ವಭಾವಸ್ಥೋ(S)ಜೀವೋ(S)ಜೀವಮಜೀಜನತ್ ॥೩೪॥

ಸ ಏಷ ಪುರುಷಸ್ತಸ್ಮಾದಂಡಂ ನಿರ್ಭಿದ್ಯ ನಿರ್ಗತಃ ।
ಸಹಸ್ರೋರ್ವಂಘ್ರಿಬಾಹ್ವಕ್ಷಃ ಸಹಸ್ರಾನನಶೀರ್ಷವಾನ್ ॥೩೫॥

ಭಗವಂತನಿಗೆ ಕ್ಷಣಮಾತ್ರದಲ್ಲಿ ಎಲ್ಲವನ್ನೂ ಸೃಷ್ಟಿ ಮಾಡಬಲ್ಲ ಶಕ್ತಿ ಇದ್ದರೂ ಕೂಡಾ ಆತ ತನ್ನದೇ ಆದ ನಿಯಮಕ್ಕನುಗುಣವಾಗಿ ಎಲ್ಲವನ್ನೂ ಮಾಡುತ್ತಾನೆ. ಬ್ರಹ್ಮಾಂಡ ಸೃಷ್ಟಿಯ ನಂತರ ಜೀವಜಾತದ ಸೃಷ್ಟಿಯಾಗಲು ಮತ್ತೆ ಸಾವಿರಾರು ವರ್ಷಗಳು ಹಿಡಿದಿವೆ. ಬ್ರಹ್ಮಾಂಡ ಎಂದರೆ ಅದು ಮೊಟ್ಟೆ. ಆ ಮೊಟ್ಟೆ ಸಾವಿರಾರು ವರ್ಷಗಳ ಕಾಲ ಸೂಕ್ಷ್ಮ ಪ್ರಕೃತಿ ಎನ್ನುವ ಸೂಕ್ಷ್ಮಾಣುಗಳ ಕಡಲಲ್ಲಿ ಮಲಗಿತ್ತು. ಎಲ್ಲಾ ಜೀವಗಳೂ ತಮ್ಮ ಅಸ್ತಿತ್ವದ ಅರಿವೇ ಇಲ್ಲದೇ ಇರುವಾಗ, ಸಕಲ ಜೀವ ನಿಯಾಮಕನಾದ ಭಗವಂತ(ಆಜೀವ) ತನ್ನನ್ನೇ ತಾನು ಸೃಷ್ಟಿ ಮಾಡಿಕೊಂಡ! ಅಂದರೆ ತನ್ನ ಒಂದು ರೂಪದಿಂದ ಅಭಿವ್ಯಕ್ತನಾದ. ಇದು ಬ್ರಹ್ಮಾಂಡದೊಳಗೆ ತುಂಬಿರುವ ಭಗವಂತನ ಪುರುಷ ರೂಪ. ಹೀಗೆ ಬ್ರಹ್ಮಾಂಡವೆನ್ನುವ ಮೊಟ್ಟೆಯಿಂದ ಭಗವಂತನ ರೂಪ ಆವಿರ್ಭಾವವಾಯಿತು. ಇಷ್ಟೇ ಅಲ್ಲದೆ ಮೊಟ್ಟೆಯೊಳಗೆ ಚತುರ್ಮುಖನೆನ್ನುವ ಜೀವವನ್ನು ಭಗವಂತ ಸೃಷ್ಟಿ ಮಾಡಿದ.[ನಾಭಿ ಕಮಲದಿಂದ ಚತುರ್ಮುಖನ ಸೃಷ್ಟಿ]. ಈ ರೀತಿ ಮೊಟ್ಟೆಯೊಳಗೆಲ್ಲಾ ತುಂಬಿದ ಭಗವಂತ ಮೊಟ್ಟೆ ಒಡೆದು ಹೊರ ಬಂದ.
ಮೊಟ್ಟೆಯೊಡೆದು ಹೊರಬಂದ ಭಗವಂತನ ರೂಪವನ್ನು ಕಂಡವನು ಕೇವಲ ಚತುರ್ಮುಖ ಮಾತ್ರ. ಹೀಗೆ ಹೊರಬಂದ ಭಗವಂತನ ರೂಪವನ್ನು ವಿವರಿಸುತ್ತಾ ಚತುರ್ಮುಖ ಹೇಳುತ್ತಾನೆ " ಸಹಸ್ರಾರು ಪಾದ, ಸಹಸ್ರಾರು ತೊಡೆ, ಸಹಸ್ರಾರು ಕೈ-ಕಣ್ಣುಗಳುಳ್ಳ, ಸಾವಿರಾರು ಮುಖದ ಭಗವಂತ ಬ್ರಹ್ಮಾಂಡದಲ್ಲೆಲ್ಲಾ ವ್ಯಾಪಿಸಿ ನಿಂತ" ಎಂದು. ಭಗವಂತನೊಂದಿಗೆ ಮೊಟ್ಟೆ ಒಡೆದು ಹೊರಬಂದ ಇನ್ನೊಂದು ಜೀವ ಚತುರ್ಮುಖ. ಹೀಗೆ ಬ್ರಹ್ಮಾಂಡ ವಿಕಸನವಾಯಿತು. ದಳದಳವಾಗಿ ಅರಳಿ, ಒಂದೊಂದು ದಳವೂ ಒಂದೊಂದು ಲೋಕವಾಗಿ, ಚತುರ್ದಶ ಭುವನ ಸೃಷ್ಟಿಯಾಯಿತು.

ಯಸ್ಯೇಹಾವಯವೈರ್ಲೋಕಾನ್ ಕಲ್ಪಯಂತಿ ಮನೀಷಿಣಃ ।
ಊರ್ವಾದಿಭಿರಧಃ ಸಪ್ತ ಸಪ್ತೋರ್ಧ್ವಂ ಜಘನಾದಿಭಿಃ ॥೩೬॥

ಮೊಟ್ಟೆಯೊಡೆದು ಬಂದ ಭಗವಂತನ ಪುರುಷರೂಪ ಇಡೀ ಬ್ರಹ್ಮಾಂಡದೊಳಗೆಲ್ಲಾ ತುಂಬಿತು. ಹೀಗೆ ತುಂಬಿದ ಭಗವಂತನ ಒಂದೊಂದು ಅವಯವಗಳಿಂದ ಒಂದೊಂದು ಲೋಕ ಸೃಷ್ಟಿಯಾಯಿತು. ಇಲ್ಲಿ "ಕಲ್ಪಯಂತಿ ಮನೀಷಿಣಃ" ಎಂದಿದ್ದಾರೆ. ಅಂದರೆ ಮನನಮಾಡಿ ಸತ್ಯವನ್ನು ಅರಿತ ಜ್ಞಾನಿಗಳು ಇದನ್ನು ಕಲ್ಪಿಸುತ್ತಾರೆ ಎಂದರ್ಥ. ಇಲ್ಲಿ ಬಂದಿರುವ 'ಕಲ್ಪನೆ' ಎನ್ನುವ ಪದಕ್ಕೆ ಕನ್ನಡದಲ್ಲಿ ಕೇವಲ ಬುದ್ಧಿ ಬಲದಿಂದ ಕಂಡುಕೊಂಡಿದ್ದೇ ಹೊರತು ನಿಜವಲ್ಲ ಎನ್ನುವ ಅರ್ಥವಿದೆ. ಆದರೆ ಸಂಸ್ಕೃತದಲ್ಲಿ 'ಕಲ್ಪನೆ' ಎನ್ನುವುದಕ್ಕೆ ಎರಡು ಅರ್ಥಗಳಿವೆ. ೧. ಇದ್ದದ್ದನ್ನು ಭಾವಿಸುವುದು, ೨. ಇಲ್ಲದ್ದನ್ನು ಭಾವಿಸುವುದು. ಹೀಗಾಗಿ ಮೇಲಿನ ಶ್ಲೋಕದಲ್ಲಿ 'ಜ್ಞಾನಿಗಳು ಕಲ್ಪಿಸುತ್ತಾರೆ' ಎಂದರೆ: ಅಂತರಂಗದ ಸಾಧನೆಯಿಂದ ಸತ್ಯವನ್ನು ಕಂಡುಕೊಂಡ ಜ್ಞಾನಿಗಳು ಅದನ್ನು ಸಮರ್ಥನೆ ಮಾಡುತ್ತಾರೆ ಎಂದರ್ಥ. ಹೀಗೆ ಭಗವಂತನ ಅವಯವಗಳಿಂದ ಹದಿನಾಲ್ಕು ಲೋಕಗಳಾಗಿ ಈ ಬ್ರಹ್ಮಾಂಡ ನಿರ್ಮಾಣವಾಯಿತು.
ಈ ರೀತಿ ಸೃಷ್ಟಿಯಾದ ಪ್ರಪಂಚದಲ್ಲಿ ಇನ್ನೂ ಜೀವಜಾತಗಳ ಸೃಷ್ಟಿಯಾಗಬೇಕು. ಆದರೆ ಭಾಗವತದ ಈ ಅಧ್ಯಾಯ ಜೀವಜಾತದ ಸೃಷ್ಟಿಯ ವಿವರವನ್ನು ಇಲ್ಲಿ ನೀಡುವುದಿಲ್ಲ. ಜೀವಜಾತದ ಸೃಷ್ಟಿಯ ವಿವರವನ್ನು ಮೂರನೇ ಸ್ಕಂಧದಲ್ಲಿ

ಬಹಳ ವಿಸ್ತಾರವಾಗಿ ಹೇಳಿರುವುದನ್ನು ನಾವು ಮುಂದೆ ನೋಡಬಹುದು. ಜಲಚರಗಳು, ವನಸ್ಪತಿಗಳು, ಪಕ್ಷಿಗಳು, ಪ್ರಾಣಿಗಳು ಎಲ್ಲವೂ ಸೃಷ್ಟಿಯಾದ ಮೇಲೆ ಈ ಪ್ರಪಂಚದಲ್ಲಿ ಮನುಷ್ಯನ ಸೃಷ್ಟಿಯಾಯಿತು. ಹೀಗೆ ಸೃಷ್ಟಿಯಾದ ಪ್ರಪಂಚದಲ್ಲಿ ನಾಲ್ಕು ವರ್ಣಗಳ(ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ) ಸೃಷ್ಟಿಯ ವಿವರಣೆಯನ್ನು ಮುಂದಿನ ಶ್ಲೋಕ ವಿವರಿಸುತ್ತದೆ.

## ಭಗವಂತನ ಮುಖ-ತೋಳು-ತೊಡೆ ಮತ್ತು ಪಾದದಿಂದ ಚಾತುರ್ವರ್ಣ್ಯದ ಸೃಷ್ಟಿ

ಪುರುಷಸ್ಯ ಮುಖಂ ಬ್ರಹ್ಮ ಕ್ಷತ್ರಮೇತಸ್ಯ ಬಾಹವಃ ।
ಊರ್ವೋರ್ವೈಶ್ಯೋ ಭಗವತಃ ಪದ್ಭ್ಯಾಂ ಶೂದ್ರೋ ವ್ಯಜಾಯತ ॥೩೭॥

ಪುರುಷಸೂಕ್ತದಲ್ಲಿ ಹೇಳಿರುವಂತೆ: ***ಬ್ರಾಹ್ಮಣೋSಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ। ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ॥*** ಇದೇ ಮಾತನ್ನು ಮೇಲಿನ ಶ್ಲೋಕ ವಿವರಿಸುತ್ತದೆ. ನಾಲ್ಕು ವರ್ಣಗಳು ಎಲ್ಲಾ ಮನುಷ್ಯರಿಗೆ ಅಥವಾ ಎಲ್ಲಾ ಜೀವಜಾತಗಳಿಗೆ ಸಂಬಂಧಿಸಿದ ವಿಚಾರವಲ್ಲ. ಇದು ಸಾಮಾಜಿಕವಾಗಿರುವ ಜಾತಿ ಪದ್ಧತಿಗೆ ಸಂಬಂಧಿಸಿದ ವಿಚಾರವೂ ಅಲ್ಲ. ಅದು ಕೇವಲ ಮೋಕ್ಷ ಯೋಗ್ಯ ಚೇತನಕ್ಕೆ ಸಂಬಂಧಿಸಿರುವ ವಿಚಾರ.

ಭಗವಂತ ತನ್ನ ಮುಖದಿಂದ ಬ್ರಾಹ್ಮಣ್ಯ ಸ್ವಭಾವದ ಜೀವರನ್ನು ಸೃಷ್ಟಿ ಮಾಡಿದ. ತನ್ನ ತೋಳುಗಳಿಂದ ಕ್ಷತ್ರ ಸ್ವಭಾವದ ಜೀವರನ್ನು, ತೊಡೆಗಳಿಂದ ವೈಶ್ಯ ಸ್ವಭಾವ ಹಾಗೂ ಪಾದಗಳಿಂದ ಶೂದ್ರ ಸ್ವಭಾವದ ಜೀವರನ್ನು ಸೃಷ್ಟಿಸಿದ. ಇಲ್ಲಿ ಭಗವಂತ ಆಯಾ ಸ್ವಭಾವವನ್ನು ಅದಕ್ಕೆ ಸಂಬಂಧಿಸಿದ ಆಯಾ ಜಾಗದಿಂದ ಸೃಷ್ಟಿ ಮಾಡಿರುವುದನ್ನು ನಾವು ಗಮನಿಸಬೇಕು. ಬ್ರಾಹ್ಮಣ್ಯ ಎಂದರೆ ಜ್ಞಾನ. ಜ್ಞಾನಕ್ಕೆ ಸಂಬಂಧಿಸಿದ ಕಣ್ಣು-ಕಿವಿ-ಮನಸ್ಸು ಮತ್ತು ಮಾತು ಇರುವ ಜಾಗ ಶಿರಸ್ಸು. ಹಾಗಾಗಿ ಭಗವಂತನ ಶಿರಸ್ಸಿನಿಂದ ಬ್ರಾಹ್ಮಣ್ಯ ಸ್ವಭಾವದ ಸೃಷ್ಟಿಯಾಯಿತು. ಅದೇ ರೀತಿ ಕ್ಷತ್ರಿಯರ ಮೂಲಭೂತ ಗುಣ ರಕ್ಷಣೆ. ಅದಕ್ಕೆ ಪ್ರಧಾನವಾಗಿ ಬೇಕಾಗಿರುವುದು ತೋಳ್ಬಲ. ಹಾಗಾಗಿ ಕ್ಷತ್ರ ಸ್ವಭಾವದವರ ಸೃಷ್ಟಿ ಭಗವಂತನ ತೋಳಿನಿಂದಾಯಿತು. ಇನ್ನು ವೈಶ್ಯರ ಪ್ರಧಾನ ಸ್ವಭಾವ ಉತ್ಪಾದನೆ ಮತ್ತು ವ್ಯಾಪಾರ. ಇದಕ್ಕೆ ಪ್ರಧಾನವಾಗಿ ಬೇಕಾಗಿರುವುದು ಸೊಂಟ ಅಥವಾ ತೊಡೆ. ಹೀಗಾಗಿ ವೈಶ್ಯ ಸ್ವಭಾವದ ಸೃಷ್ಟಿ ಭಗವಂತನ ತೊಡೆಯಿಂದಾಯಿತು. ಕೊನೆಯದಾಗಿ ಎಲ್ಲವುದರ ಪಂಚಾಂಗ ಸೇವಾ ಮನೋವೃತ್ತಿ. ದೇಹದಲ್ಲಿ ಎಲ್ಲವನ್ನೂ ಹೊತ್ತುಕೊಂಡಿರುವ ಭಾಗ ಕಾಲು. ಹೀಗಾಗಿ ಇನ್ನೊಬ್ಬರ ಕಷ್ಟಕ್ಕೆ ಕರಗುವ ಮತ್ತು ಸೇವಾ ಮನೋವೃತ್ತಿ ಇರುವ ಶೂದ್ರ ವರ್ಣದ ಸೃಷ್ಟಿ ಭಗವಂತನ ಪಾದದಿಂದಾಯಿತು.

[ಮೇಲಿನ ಶ್ಲೋಕದಲ್ಲಿ ಮುಖಬಾಹುಗಳಿಂದ ಹುಟ್ಟಿದ್ದನ್ನು ಮುಖವೇ ಬ್ರಾಹ್ಮಣ ಮತ್ತು ಬಾಹುವೇ ಕ್ಷತ್ರಿಯ ಎಂದು ಹೇಳಲಾಗಿದೆ. ಸಪ್ತಸು ಪ್ರಥಮಾ ಎನ್ನುವ ಸೂತ್ರದಂತೆ ಇದನ್ನು ಮುಖದಿಂದ ಬ್ರಾಹ್ಮಣ ಹಾಗೂ ಬಾಹುವಿನಿಂದ ಕ್ಷತ್ರಿಯ ಎಂದು ಅರ್ಥೈಸಬೇಕು. ಇದೇ ರೀತಿ ಜೀವನು ಬ್ರಹ್ಮ ಎಂದು ಹೇಳಿದಲ್ಲೆಲ್ಲಾ ಜೀವ ಬ್ರಹ್ಮನಿಂದ ಹುಟ್ಟಿದ್ದಾನೆ ಎಂದು ಅರ್ಥೈಸಬೇಕು. ಇದನ್ನು ಬ್ರಹ್ಮ ಪುರಾಣದಲ್ಲಿ ಹೀಗೆ ಹೇಳಿದ್ದಾರೆ: ***ಬ್ರಾಹ್ಮಣೋ ಮುಖಮಿತ್ಯೇವ ಮುಖಾಜ್ಜಾತತ್ವಹೇತುತಃ। ಯಥಾSವದಚ್ಛ್ರುತೌ ತದ್ವಜ್ಜೀವೋ ಬ್ರಹ್ಮೇತಿ ವಾಗ್ ಭವೇತ್। ಇತಿ ಬ್ರಾಹ್ಮೇ ॥***].

ಇಲ್ಲಿ ನಾಲ್ಕು ವರ್ಣದ ಸೃಷ್ಟಿ ಎಂದರೆ ನಾಲ್ಕು ವರ್ಣದ ಅಭಿಮಾನಿ ದೇವತೆಗಳ ಸೃಷ್ಟಿ ಕೂಡಾ ಹೌದು. ಮುಖದಿಂದ ಬ್ರಾಹ್ಮಣ ವರ್ಣದ ಸೃಷ್ಟಿಯಾಯಿತು ಎಂದರೆ ಬ್ರಾಹ್ಮಣ ವರ್ಣವನ್ನು ನಿಯಂತ್ರಿಸತಕ್ಕಂತಹ ದೇವತಾ ಅಭಿವ್ಯಕ್ತಿಯಾಯಿತು ಎಂದರ್ಥ. ಚತುರ್ಮುಖ ಬ್ರಹ್ಮ ಬ್ರಾಹ್ಮಣವರ್ಣದ ಮುಖ್ಯ ದೇವತೆಯಾದರೆ ಬೃಹಸ್ಪತಿ ಮತ್ತು ಅಗ್ನಿ ಕೂಡಾ ಬ್ರಾಹ್ಮಣ ವರ್ಣದ ಅಭಿಮಾನಿ ದೇವತೆಯರು. ಇನ್ನು ಕ್ಷತ್ರಿಯ ವರ್ಣದ ಮುಖ್ಯ ಅಭಿಮಾನಿ ದೇವತೆ ಮುಖ್ಯಪ್ರಾಣ ಅಥವಾ ವಾಯುದೇವರು. ಅವರ ಅನಂತರ ಅನೇಕ ದೇವತೆಗಳು ಕ್ಷತ್ರಿಯ ವರ್ಣದ ಅಭಿಮಾನಿ ದೇವತೆಗಳಾಗಿದ್ದಾರೆ. ಗರುಡ-ಶೇಷ-ರುದ್ರರು, ಇಂದ್ರ-ಕಾಮರು, ಅನಿರುದ್ಧ, ಸ್ವಾಯಂಭುವ ಮನು, ದಕ್ಷ ಪ್ರಜಾಪತಿ, ವೈವಸ್ವತ ಮನು, ಯಮ, ಚಂದ್ರ, ಸೂರ್ಯ, ವರುಣ, ಇವರೆಲ್ಲರೂ ಕ್ಷತ್ರಿಯ ವರ್ಣದ ಅಭಿಮಾನಿ ದೇವತೆಗಳು. ಇದೇ ರೀತಿ ವೈಶ್ಯ ವರ್ಣದ ಮುಖ್ಯ ಅಭಿಮಾನಿ ದೇವತೆ ಅಹಂಪ್ರಾಣ. ನಂತರ ೪೯ ಮಂದಿ ಮರುತ್ತುಗಳು, ೭ ಮಂದಿ ವಸುಗಳು(ಅಷ್ಟ ವಸುಗಳಲ್ಲಿ ಅಗ್ನಿಯನ್ನು ಬಿಟ್ಟು ಇತರ ಏಳು ಮಂದಿ), ಹತ್ತು ಮಂದಿ ರುದ್ರರು(ಏಕಾದಶ ರುದ್ರರಲ್ಲಿ ಪ್ರಧಾನ ರುದ್ರನನ್ನು ಬಿಟ್ಟು ಇತರ ಹತ್ತು ಮಂದಿ), ಎಂಟು ಮಂದಿ ಆದಿತ್ಯರು(ದ್ವಾದಶಾದಿತ್ಯರಲ್ಲಿ ಇಂದ್ರ, ಸೂರ್ಯ, ವರುಣ ಮತ್ತು ವಿಷ್ಣುವನ್ನು ಬಿಟ್ಟು ಇತರ ಎಂಟು ಮಂದಿ), ಇವರೆಲ್ಲರೂ ವೈಶ್ಯ ವರ್ಣದ ಅಭಿಮಾನಿ ದೇವತೆಗಳು. ಇದೇ ರೀತಿ ಶೂದ್ರ ವರ್ಣದ ಅಭಿಮಾನಿ ದೇವತೆಗಳು: ನಿರ್ಋತಿ, ಅಶ್ವಿನಿಗಳು, ಪ್ರಥ್ವೀ, ಶನಿ, ಕಾಲಾಭಿಮಾನಿ ದೇವತೆಗಳು ಮತ್ತು ಮೃತ್ಯು ದೇವತೆಗಳು. ಹೀಗೆ ವರ್ಣ ಸೃಷ್ಟಿ ಎನ್ನುವುದರ ಮೂಲಭೂತ ಅರ್ಥ ಅಭಿಮಾನಿ ದೇವತೆಗಳ ಸೃಷ್ಟಿ ಎನ್ನುವುದು ಇನ್ನೊಂದು ಮುಖ. ಈ ಅರ್ಥ ವಿವರಣೆಯನ್ನು ನಾವು ಉಪನಿಷತ್ತುಗಳಲ್ಲಿ ಕಾಣಬಹುದು.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಪಂಚಮೋSಧ್ಯಾಯಃ ॥

ಭಾಗವತ ಮಹಾಪುರಾಣದ ಎರಡನೇ ಸ್ಕಂಧದ ಐದನೇ ಅಧ್ಯಾಯ ಮುಗಿಯಿತು

*********

# ಷಷ್ಠೋSಧ್ಯಾಯಃ

## ನಾರದ ಚತುರ್ಮುಖ ಸಂವಾದ ಮುಂದುವರಿದುದು

ಹಿಂದಿನ ಅಧ್ಯಾಯದಲ್ಲಿ ಬಂದಿರುವ ಮಹತತ್ತ್ವದ ಸೃಷ್ಟಿ, ಅಹಂಕಾರ ತತ್ತ್ವದ ಸೃಷ್ಟಿ , ಪಂಚಭೂತಗಳ ಸೃಷ್ಟಿ, ಇತ್ಯಾದಿ ಸೃಷ್ಟಿ ಪ್ರಕ್ರಿಯೆಗಳು ವೈಜ್ಞಾನಿಕ ಚಿಂತನೆಯಲ್ಲಿ ನಾವು ಅರ್ಥ ಮಾಡಿಕೊಳ್ಳಬಹುದಾದ ಸೃಷ್ಟಿಯ ಒಂದು ಪ್ರಕಾರ. ಆದರೆ ಈ ಅಧ್ಯಾಯದಲ್ಲಿ ಬರಲಿರುವ ವಿಚಾರಗಳು ವೈಜ್ಞಾನಿಕ ಚಿಂತನೆಗೆ ಸಿಗುವಂಥವುಗಳಲ್ಲ. ಭಗವಂತನ ಸೃಷ್ಟಿ ಕ್ರಿಯೆ ವಿಜ್ಞಾನದ ಎಲ್ಲಾ ಸೀಮೆಯನ್ನು ಮೀರಿ ನಿಂತಿರುವ ಸತ್ಯ.

ಹಿಂದಿನ ಅಧ್ಯಾಯದಲ್ಲಿ ಬಂದಿರುವ ಭಗವಂತನ ಅವಯವಗಳ ಕಲ್ಪನೆಯೇ ವಿಜ್ಞಾನಕ್ಕೆ ನಿಲುಕದ ವಿಚಾರ. ಭಗವಂತನ ಶರೀರ ಜ್ಞಾನಾನಂದಮಯ. ಹೀಗಿರುವಾಗ ಅಂತಹ ಜ್ಞಾನಾನಂದಮಯನ ಅಂಗಾಂಗಗಳನ್ನು ಕಲ್ಪಿಸುವುದು ಹೇಗೆ? ಜ್ಞಾನಾನಂದಮಯವಾದ ಮುಖ, ಜ್ಞಾನಾನಂದಮಯವಾದ ತೋಳು, ಜ್ಞಾನಾನಂದಮಯವಾದ ಕಾಲು, ಆ ಅವಯವಗಳಿಂದ ಸೃಷ್ಟಿ, ಇತ್ಯಾದಿಯನ್ನು ನಮ್ಮಿಂದ ಕಲ್ಪಿಸುವುದು ಸಾಧ್ಯವಿಲ್ಲ. ಇದು ನಮಗೆ ತಿಳಿದಿರುವ ಯಾವುದೇ ಪ್ರಾಪಂಚಿಕ ಚಿಂತನೆಗೂ ಒಳಪಡದಂತಹ ಸಂಗತಿಯಾಗಿರುವುದರಿಂದ, ಅಂತರಂಗ ಪ್ರಪಂಚದ ಅನುಭವ ಆಗುವ ತನಕ ಇದನ್ನು ನಮ್ಮಿಂದ ತಿಳಿಯುವುದು ಕಷ್ಟ.

ಮಣ್ಣು-ನೀರು-ಬೆಂಕಿಯಿಂದಾದ ಪದಾರ್ಥಗಳಿಗೆ ಬಣ್ಣವಿರುತ್ತದೆ ಆದರೆ ಗಾಳಿ ಮತ್ತು ಆಕಾಶಕ್ಕೆ ಬಣ್ಣವಿಲ್ಲ. ಇದಕ್ಕೂ ಭಿನ್ನವಾದ ಇನ್ನೊಂದು ವಿಷಯ ಏನೆಂದರೆ "ಶಕ್ತಿಗೂ ಬಣ್ಣವಿದೆ(Energy has color)". ಆದರೆ ಶಕ್ತಿ ಎನ್ನುವುದು ಮಣ್ಣು-ನೀರು-ಬೆಂಕಿಯಿಂದಾದ ಪದಾರ್ಥವಲ್ಲ. ಆದರೂ ಅದಕ್ಕೆ ಆಕಾರವಿದೆ, ಬಣ್ಣವಿದೆ! ಈ ಮಾತನ್ನು ನಾವು ಅರ್ಥ ಮಾಡಿಕೊಳ್ಳುವುದು ಕಷ್ಟ. ಈ ವಿಷಯ ಅನುಭವಕ್ಕೆ ಬರುವ ಒಂದು ಉದಾಹರಣೆ ಎಂದರೆ ನಮ್ಮ ದೇಹದ ಸುತ್ತಲೂ ಇರುವ ಪ್ರಭೆ(Physical aura). ಇದು ನಮ್ಮ ಬರಿಗಣ್ಣಿಗೆ ಕಾಣದಿದ್ದರೂ ಕೂಡಾ ಇದನ್ನು ವಿಜ್ಞಾನ ಪ್ರತಿಪಾದಿಸುತ್ತದೆ. ನಮ್ಮ ಸುತ್ತಲಿನ ಪ್ರಭೆ ನಮ್ಮ ಯೋಚನಾ ಲಹರಿಗನುಗುಣವಾಗಿ ಬದಲಾಗುತ್ತಿರುತ್ತದೆ. ಅಂತರಂಗ ಪ್ರಪಂಚದ ಸ್ಪರ್ಶವೇ ಇಲ್ಲದಿರುವ ವ್ಯಕ್ತಿಯ ಸುತ್ತಲಿನ ಪ್ರಭೆಯ ಬಣ್ಣ ಬೂದಿ ಬಣ್ಣದ್ದಾಗಿರುತ್ತದೆ. ಕೋಪ ಬಂದಾಗ ಈ ಪ್ರಭೆ ಕೆಂಪಾಗುತ್ತದೆ. ಪ್ರಸನ್ನತೆ ಅಥವಾ ಸಂತೋಷವಾದಾಗ ಇದು ಹಳದಿ ಬಣ್ಣವಾಗಿರುತ್ತದೆ. ಸಮೃದ್ಧಿ ಇದ್ದಾಗ ಹಸಿರಾಗಿರುವ ಈ ಪ್ರಭೆ, ಜ್ಞಾನದಲ್ಲಿ ಬಹಳ ಆಳಕ್ಕೆ ಹೋದಾಗ ನೀಲವಾಗಿರುತ್ತದೆ.[ಇದಕ್ಕಾಗಿ ಭಗವಂತ ನೀಲ ಮೇಘ ಶ್ಯಾಮ]. ಇದರಿಂದ ನಮಗೆ ತಿಳಿಯುವುದೇನೆಂದರೆ: ಪ್ರತಿಯೊಂದು ಭಾವನೆಗಳಿಗೂ ಒಂದೊಂದು ಶಕ್ತಿ ಇದೆ ಮತ್ತು ಆ ಶಕ್ತಿಗೆ ಒಂದೊಂದು ಬಣ್ಣವಿದೆ ಎನ್ನುವ ವಿಚಾರ. ನಮ್ಮ ಬೇರೆಬೇರೆ ಯೋಚನಾ ಲಹರಿ, ಭಾವನೆಗಳು(Thoughts) ಬೇರೆಬೇರೆ ಬಣ್ಣವಾಗಿ ನಮ್ಮ ದೇಹದಿಂದ ಹೊರಹೊಮ್ಮುತ್ತಿರುತ್ತವೆ.

ಜ್ಞಾನಾನಂದ ಸ್ವರೂಪನಾದ ಭಗವಂತ ಶಕ್ತಿ ಸ್ವರೂಪ. ಆದ್ದರಿಂದ ಅವನಿಗೆ ಬಣ್ಣವಿದೆ ಎನ್ನುವ ಮಾತನ್ನು ನಾವು ಮೇಲಿನ ವಿವರಣೆಯಂತೆ ಒಪ್ಪಿಕೊಳ್ಳಬಹುದು. ಆದರೆ ಸರ್ವವ್ಯಾಪ್ತ ಭಗವಂತನಿಗೆ ಎಲ್ಲಿಯ ಆಕಾರ? ಸರ್ವಗತನಾದ ಭಗವಂತನಿಗೆ ಆಕಾರವೇ ಇಲ್ಲಾ ಎಂದು ಕೆಲವರು ತಮ್ಮ ತರ್ಕವನ್ನು ಮಂಡಿಸುತ್ತಾರೆ. ಆದರೆ ಅದೇ ಯುಕ್ತಿಗೆ (logic) ಅನುಗುಣವಾಗಿ ನೋಡಿದರೆ ಭಗವಂತ ಸರ್ವ ಸಮರ್ಥ ಕೂಡಾ ಹೌದು. ಹಾಗಾಗಿ ಆತ ತಾನು ಬಯಸಿದ ಆಕಾರವನ್ನು ತಳೆಯಬಲ್ಲನಲ್ಲವೇ? ಹೀಗಾಗಿ ನಮ್ಮ ಬುದ್ಧಿಯ ಪರಿಮಿತಿಗೆ ಸಿಗದ ಭಗವಂತನನ್ನು ನಾವು ನಮ್ಮ ತರ್ಕದ ಪರಿಧಿಯಲ್ಲಿ ಕಟ್ಟಿಹಾಕಲು ಪ್ರಯತ್ನಿಸಬಾರದು. ಭಗವಂತ ಸಾಕಾರನೂ ಹೌದು, ಆತ ನಿರಾಕಾರನೂ ಹೌದು.

ಅವನು ಜ್ಞಾನಾನಂದಮಯ ಆದರೂ ಆತನಿಗೆ ಬಣ್ಣವಿದೆ. ಇದು ಪ್ರಾಪಂಚಿಕವಾಗಿ ನಮ್ಮ ಅನುಭವಕ್ಕೆ ಸಿಗದ ಸತ್ಯ. ಈ ಎಲ್ಲಾ ಹಿನ್ನೆಲೆಯಲ್ಲಿ ಈ ಅಧ್ಯಾಯವನ್ನು ನೋಡಿದಾಗ ನಮಗೆ ಇಲ್ಲಿ ಹೇಳಿರುವ ವಿಷಯ ಅರ್ಥವಾದೀತು! ಚತುರ್ಮುಖ ನಾರದನಿಗೆ ವಿವರಿಸಿದ ಸೃಷ್ಟಿಯ ವಿಸ್ತಾರದ ವಿವರಣೆಯನ್ನು ನಾವು ಈ ಅಧ್ಯಾಯದಲ್ಲಿ ಕಾಣಬಹುದು.

## ಭಗವಂತನ ಅಂಗಾಂಗಗಳಿಂದ ಸೃಷ್ಟಿಯ ವಿಸ್ತಾರ

**ರೂಪಾಣಾಂ ತೇಜಸಾಂ ಚಕ್ಷುರ್ದಿವಃ ಸೂರ್ಯಸ್ಯ ಚಾಕ್ಷಿಣೀ ।**
**ಕರ್ಣೌ ದಿಶಾಂ ಚ ತೀರ್ಥಾನಾಂ ಶ್ರೋತ್ರಮಾಕಾಶಶಬ್ದಯೋಃ ॥೦೩॥**

ಭಗವಂತ ತನ್ನ ಕಣ್ಣಿನಿಂದ(ಚಕ್ಷುರಿಂದ್ರಿಯದಿಂದ) ರೂಪ ಮತ್ತು ತೇಜಸ್ಸನ್ನೂ(ಬೆಳಕನ್ನೂ), ಚಕ್ಷುರಿಂದ್ರಿಯ ಗೋಲಕದಿಂದ ದ್ಯುಲೋಕಾಭಿಮಾನಿ ದೇವತೆ ಸೂರ್ಯನನ್ನೂ ಸೃಷ್ಟಿ ಮಾಡಿದ. ಇದನ್ನೇ ಪುರುಷಸೂಕ್ತ "***ಚಕ್ಷೋಃ ಸೂರ್ಯೋ ಅಜಾಯತ*** " ಎಂದು ವಿವರಿಸುತ್ತದೆ. ಸೂರ್ಯನಿಗೆ ಅಧಿಷ್ಠಾನವಾಗಿರುವ ದ್ವಿಲೋಕವೂ ಕೂಡಾ ಭಗವಂತನ ಕಣ್ಣಿನಿಂದ ಸೃಷ್ಟಿಯಾಯಿತು. ಇದೇ ರೀತಿ ಭಗವಂತನ ಕರ್ಣ ಗೋಲಕದಿಂದ ದಿಕ್ಕುಗಳ ಮತ್ತು ತೀರ್ಥಗಳ ಸೃಷ್ಟಿಯಾಯಿತು. ಇಲ್ಲಿ ತೀರ್ಥ ಎಂದರೆ ಗಂಗಾದಿ ತೀರ್ಥ ಎಂದು ಕೆಲವರು ಹೇಳುತ್ತಾರೆ ಮತ್ತು ಈ ಮಾತನ್ನೇ ನಂಬಿಕೊಂಡು ಶುದ್ಧತೆಗಾಗಿ ಕಿವಿ ಮುಟ್ಟಿಕೊಳ್ಳುವ ತಪ್ಪು ಸಂಪ್ರದಾಯವೂ ಕೆಲವರಲ್ಲಿದೆ. ಆದರೆ ಇಲ್ಲಿ ಹೇಳಿರುವುದು ಒಂದಕ್ಕೊಂದು ಸಂಬಂಧವಿರುವ ವಿಷಯವಾಗಿರುವುದರಿಂದ ಸಾಂಧರ್ಭಿಕ ಅರ್ಥಾನುಸಂಧಾನದಂತೆ ತೀರ್ಥಗಳು ಎಂದರೆ ಶಾಸ್ತ್ರಗಳೇ ಹೊರತು ನದಿಗಳಲ್ಲ. ದಿಕ್ಕುದಿಕ್ಕುಗಳಲ್ಲಿ ತುಂಬಿರುವ ಶಾಸ್ತ್ರವಾಣಿ ಮೊಟ್ಟಮೊದಲು ಭಗವಂತನ ಕರ್ಣ ಗೋಲಕದಿಂದ ಸೃಷ್ಟಿಯಾಯಿತು. ಭಗವಂತನ ಕರ್ಣೇಂದ್ರಿಯದಿಂದ ಶಬ್ದ ಮತ್ತು ಆಕಾಶದ ಸೃಷ್ಟಿಯಾಯಿತು.

**ರೋಮಾಣ್ಯುದ್ಭಿಜಜಾತೀನಾಂ ಯೈರ್ವಾ ಯಜ್ಞಸ್ತು ಸಂಭೃತಃ ।**
**ಕೇಶಶ್ಮಶ್ರುನಖಾನ್ಯಸ್ಯ ಶಿಲಾಲೋಹಾಭ್ರವಿದ್ಯುತಾಮ್ ॥೦೪॥**

ಭಗವಂತನ ರೋಮಮೂಲದಿಂದ ಯಜ್ಞಕ್ಕೆ ಬಳಕೆಯಾಗುವ ವನಸ್ಪತಿಗಳ ಸೃಷ್ಟಿಯಾಯಿತು. ಅಂದರೆ ಅಶ್ವತ್ಥ, ಹಲಸು, ದರ್ಭೆ ಇತ್ಯಾದಿ ಯಜ್ಞೋಪಯೋಗಿ ಪವಿತ್ರ ವನಸ್ಪತಿಗಳನ್ನು ಭಗವಂತ ತನ್ನ ರೋಮ ಮೂಲದಿಂದ ಸೃಷ್ಟಿಸಿದ. ಇದಲ್ಲದೆ ಇತರ ವನಸ್ಪತಿಗಳು ಭಗವಂತನ ರೋಮದ ತುದಿಯಿಂದ ಸೃಷ್ಟಿಸಲ್ಪಟ್ಟವು. ಇದೇ ಮಾತನ್ನು ಪಾದ್ಮಪುರಾಣ ಹೇಳುವುದನ್ನು ಕಾಣಬಹುದು. ***ಯಾಜ್ಞಿಕಾ ರೋಮಮೂಲಸ್ಥಾ ರೋಮಾಂತಸ್ಥಾಸ್ತು ತತ್ಪರೇ । ಉದ್ಭಿಜೋ ವಾಸುದೇವಸ್ಯ ಲಿಂಗಗಾಸ್ತು ಜರಾಯುಜಾಃ ॥ ಇತಿ ಪಾದ್ಮೇ ।***
ಭೂ-ವ್ಯೋಮಗಳಲ್ಲಿ ತುಂಬಿ ನಿಂತ ಭಗವಂತನ ಕೆದರಿದ ಕೂದಲುಗಳಿಂದ ಮೋಡದ ಸೃಷ್ಟಿಯಾದರೆ, ಭಗವಂತನ ಮೀಸೆಯಿಂದ ಮಿಂಚು ಮತ್ತು ಭಗವಂತನ ಉಗುರಿನಿಂದ ಬಂಡೆಗಳು, ಲೋಹಗಳು ಸೃಷ್ಟಿಯಾದವು. ಇದನ್ನು ಅಗ್ನಿಪುರಾಣ ಈ ರೀತಿ ಹೇಳುತ್ತದೆ: ***ಹರೇಃ ಶ್ಮಶ್ರ್ವಾಶ್ರಯಾ ವಿದ್ಯುಚ್ಛಿಲಾಲೋಹಾ ನಖಾಶ್ರಯಾಃ । ಇತ್ಯಾಗ್ನೇಯ ।***

**ಬಾಹವೋ ಲೋಕಪಾಲಾನಾಂ ಪ್ರಾಯಶಃ ಕ್ಷೇಮಕರ್ಮಣಾಮ್ ।**
**ವಿಕ್ರಮೋ ಭೂರ್ಭುವಃಸ್ವಶ್ಚ ಕ್ಷೇಮಸ್ಯ ಶರಣಸ್ಯ ಚ ।**
**ಸರ್ವಕಾಮವರಸ್ಯಾಪಿ ವಿಷ್ಣೋಃ(ಹರೇ)ಶ್ಚರಣ ಆಸ್ಪದಮ್ ॥೦೬॥**

ಭಗವಂತನ ತೋಳುಗಳಿಂದ ಲೋಕಪಾಲಕರ ಸೃಷ್ಟಿಯಾಯಿತು. ಇಲ್ಲಿ ಲೋಕಪಾಲಕರು ಎಂದರೆ ಲೋಕವನ್ನು ರಕ್ಷಣೆ ಮಾಡುವ ಪಾಲಕ ಶಕ್ತಿಗಳು. ಜಗತ್ತಿನ ಕ್ಷೇಮಕ್ಕೋಸ್ಕರ ತಮ್ಮ ಬದುಕನ್ನು ಮುಡಿಪಾಗಿಡುವ ಲೋಕಪಾಲಕರು ಎಂದರೆ ಕ್ಷತ್ರಿಯರೂ ಹೌದು, ದೇವತೆಗಳೂ ಹೌದು. ಇಲ್ಲಿ ಬಂದಿರುವ 'ಪ್ರಾಯಶಃ' ಎನ್ನುವ ಪದ 'ಬದುಕಿನ ಪೂರ್ಣ ಪ್ರಮಾಣವನ್ನು ಲೋಕ ಕ್ಷೇಮಕ್ಕಾಗಿ ಮುಡಿಪಾಗಿಟ್ಟವರು' ಎನ್ನುವ ಅರ್ಥವನ್ನು ಬಿಂಬಿಸುತ್ತದೆ.
ಭಗವಂತನ ಮೂರು ಹೆಜ್ಜೆಗಳಿಂದ ಮೂರು ಲೋಕಗಳು(ಭೂರ್ಲೋಕ, ಭುವೋಲೋಕ ಮತ್ತು ಸ್ವರ್ಲೋಕ) ಸೃಷ್ಟಿಯಾದವು. ಭಗವಂತನ ಪಾದಗಳಿಂದ ಕ್ಷೇಮ(ಪಡೆದುದನ್ನು ಉಳಿಸಿಕೊಳ್ಳುವ ಭಾಗ್ಯ ಮತ್ತು ಜ್ಞಾನಾನಂದಾದಿಗಳು), ಶರಣ(ಮೋಕ್ಷ) ಮತ್ತು ಸಕಲ ಇಷ್ಟ ಪ್ರಾಪ್ತಿಗಳು ಸೃಷ್ಟಿಯಾದವು.

**ಧರ್ಮಸ್ಯ ಮಮ ತುಭ್ಯಂ ಚ ಕುಮಾರಾಣಾಂ ಭವಸ್ಯ ಚ ।**
**ವಿಜ್ಞಾನಸ್ಯ ಚ ತತ್ತ್ವಸ್ಯ ಪರಸ್ಯಾತ್ಮಾ ಪರಾಯಣಮ್ ॥೧೧॥**

ಪರಮಾತ್ಮನ ಹೃದಯಭಾಗದಿಂದ(ಆತ್ಮಾ) ಧರ್ಮ ದೇವತೆಯಾದ ಯಮನ ಸೃಷ್ಟಿಯಾಯಿತು. "ಅಷ್ಟೇ ಅಲ್ಲಾ, ನನ್ನ ಹಾಗೂ ನಿಮ್ಮೆಲ್ಲರ(ನಾರದ ಹಾಗೂ ಸನಕ, ಸನಂದನ, ಸನತ್ಕುಮಾರ ಇತ್ಯಾದಿ ಊರ್ಧ್ವರೇತಸ್ಕರ) ಸೃಷ್ಟಿ ಕೂಡಾ ಭಗವಂತನ ಮಧ್ಯ ದೇಹದಿಂದಾಯಿತು" ಎನ್ನುತ್ತಾನೆ ಚತುರ್ಮುಖ. ಇಲ್ಲಿ ನಾವು ದೇವತೆಗಳಿಗೆ ಸೃಷ್ಟಿಯಲ್ಲಿ ಅನೇಕ ಹುಟ್ಟುಗಳಿವೆ ಎನ್ನುವುದನ್ನು ತಿಳಿದಿರಬೇಕು. ಉದಾಹರಣೆಗೆ ಚತುರ್ಮುಖ ಬ್ರಹ್ಮ ಭಗವಂತನ ನಾಭಿಯಿಂದ, ಲಕ್ಷ್ಮಿಯ ಹಣೆಯಿಂದ, ಭಗವಂತನ ಹೃದಯ ಭಾಗದಿಂದ, ಹೀಗೆ ಬೇರೆಬೇರೆ ರೂಪದಿಂದ ಹುಟ್ಟುವ ಭಾಗ್ಯ ಪಡೆದಿರುತ್ತಾನೆ. ಹೀಗಾಗಿ ಆತ ಹೇಳುತ್ತಾನೆ: "ನಾನೂ ಕೂಡಾ ಭಗವಂತನ ಆತ್ಮದಿಂದ ಹುಟ್ಟಿದೆ" ಎಂದು. ಇದೇ ರೀತಿ ಶಿವನ ಸೃಷ್ಟಿ, ವಿಜ್ಞಾನ ತತ್ತ್ವ ದೇವತೆಯಾದ ಸರಸ್ವತಿಯ ಸೃಷ್ಟಿ ಕೂಡಾ ಭಗವಂತನ ಹೃದಯ ಭಾಗದಿಂದಾಯಿತು.

## ಸೃಷ್ಟಿ ವಿಸ್ತಾರದ ವಿವರಣೆ ಪುರುಷಸೂಕ್ತದ ವಿವರಣೆಯೊಂದಿಗೆ

**ಸರ್ವಂ ಪುರುಷ ಏವೇದಂ ಭೂತಂ ಭವ್ಯಂ ಭವಚ್ಚ ಯತ್ ।**
**ತೇನೇದಮಾವೃತಂ ವಿಶ್ವಂ ವಿತಸ್ತಿಮಧಿತಿಷ್ಠತಾ ॥೧೫॥**

ಈ ಶ್ಲೋಕ ಪುರುಷಸೂಕ್ತದಲ್ಲಿನ ಒಂದು ಅಪೂರ್ವವಾದ ಉಪಾಸನೆಯ ಮುಖವನ್ನು ತೋರಿಸುತ್ತದೆ. ಪುರುಷಸೂಕ್ತದಲ್ಲಿ ಹೇಳುವಂತೆ: *"ಸ ಭೂಮಿಂ ವಿಶ್ವತೋ ವೃತ್ವಾSಅತ್ಯತಿಷ್ಠದ್ದಶಾಂಗುಲಂ ।। ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚಭವ್ಯಂ ।।"*. ಇದೇ ಮಾತನ್ನು ಇಲ್ಲಿ ಚತುರ್ಮುಖ ವಿವರಿಸಿರುವುದನ್ನು ಕಾಣುತ್ತೇವೆ.

ಚತುರ್ಮುಖ ಹೇಳುತ್ತಾನೆ: “ಹಿಂದಿನ ಕಲ್ಪಗಳಲ್ಲಿ ಆದ ಸೃಷ್ಟಿ, ಈಗಿನ ಕಲ್ಪದ ಸೃಷ್ಟಿ ಹಾಗೂ ಮುಂದಿನ ಕಲ್ಪಗಳಲ್ಲಿ ಆಗುವ ಎಲ್ಲಾ ಸೃಷ್ಟಿ ಕೂಡಾ ಆ ಭಗವಂತನಲ್ಲಿ (ಪುರುಷನಲ್ಲಿ )ಆಶ್ರಿತವಾಗಿವೆ” ಎಂದು. ಇಲ್ಲಿ ಬಳಕೆಯಾಗಿರುವ “ಪುರುಷ ಏವ” ಎನ್ನುವ ಪದವನ್ನು ಎರಡು ರೀತಿ ಪದಚ್ಛೇದ ಮಾಡಬಹುದು. ೧. ಪುರುಷೇ ಏವ ೨. ಪುರುಷಃ ಏವ. ‘ಪುರುಷೇ ಏವ’ ಎಂದರೆ ಎಲ್ಲವೂ ಪುರುಷನಲ್ಲಿ ಆಶ್ರಿತವಾಗಿದೆ ಎಂದರ್ಥ. ಇನ್ನು ‘ಪುರುಷಃ ಏವ’ ಎಂದರೆ ಎಲ್ಲವೂ ಪುರುಷನೇ ಆಗಿದ್ದಾನೆ ಎಂದಾಗುತ್ತದೆ. ಇದರರ್ಥ ಭಗವಂತನ ಇಚ್ಛೆಯಂತೆ ಎಲ್ಲವೂ ನಡೆಯುತ್ತದೆ ಮತ್ತು ಎಲ್ಲವೂ ಆತನ ಅಧೀನ ಎಂದರ್ಥ. ಇದನ್ನೇ ಗೀತೆಯಲ್ಲಿ ಅರ್ಜುನ ಹೀಗೆ ಹೇಳಿದ್ದಾನೆ: ***ಸರ್ವಂ ಸಮಾಪ್ನೋಷಿ ತತೋSಸಿ ಸರ್ವಃ ॥೧೧-೪೦॥*** “ನೀನು ಎಲ್ಲವನ್ನೂ ವ್ಯಾಪಿಸಿ ನಿಯಂತ್ರಿಸುತ್ತಿರುವುದರಿಂದ ಎಲ್ಲವೂ ನೀನೇ” ಎಂದು. ಇದನ್ನೇ ಶ್ರೀಕೃಷ್ಣ ಹೀಗೆ ಹೇಳುತ್ತಾನೆ: ***ನ ತದಸ್ತಿ ವಿನಾ ಯತ್ ಸ್ಯಾನ್ಮಯಾ ಭೂತಂ ಚರಾಚರಮ್ ॥೧೦-೩೯॥*** ಅಂದರೆ: “ಚರಾಚರಾತ್ಮಕ ಪ್ರಪಂಚದಲ್ಲಿ ನನ್ನನ್ನು ಬಿಟ್ಟು ಸ್ವತಂತ್ರವಾದುದು ಯಾವುದೂ ಇಲ್ಲಾ” ಎಂದರ್ಥ. ಇದೇ ಅರ್ಥದಲ್ಲಿ ಇಲ್ಲಿ ಚತುರ್ಮುಖ “ಎಲ್ಲವೂ ಆ ಪುರುಷನೇ” ಎಂದಿದ್ದಾನೆ.

ಭಗವಂತ ತಾನು ಸೃಷ್ಟಿಸಿದ ಬ್ರಹ್ಮಾಂಡವನ್ನೆಲ್ಲಾ ಆವರಿಸಿಕೊಂಡ. ಅದೇ ರೀತಿ ಪಿಂಡಾಂಡದಲ್ಲಿ ತುಂಬಿದ ಭಗವಂತ, ಅಲ್ಲಿ ಒಂದೊಂದು ಗೇಣು ಅಂಗುಲದಲ್ಲಿ ಅಧಿಕರಿಸಿಕೊಂಡು, ಶಿರಸ್ಸಿನಿಂದ ಒಂದು ಗೇಣು ಮೇಲೆ ಸಹಸ್ರಾರದಲ್ಲಿ ತನ್ನ ಒಂದು ರೂಪದಲ್ಲಿ ನೆಲೆನಿಂತ. [ಈ ಹಿಂದೆ ಹೇಳಿದಂತೆ ನಮ್ಮ ದೇಹದ ಸುತ್ತಲೂ ದೇಹಕ್ಕೆ ಸಂಬಂಧಿಸಿದ ಒಂದು ಪ್ರಭೆ ಇರುತ್ತದೆ **(Physical Aura).** ಅಂತಹ ಪ್ರಭೆಯಲ್ಲಿ ಶಿರಸ್ಸಿನಿಂದ ಒಂದು ಗೇಣು ಮೇಲೆ ಸಹಸ್ರಾರ ಎನ್ನುವ ಶಕ್ತಿ ಕೇಂದ್ರವಿರುತ್ತದೆ. ನಮ್ಮ ದೇಹದ ಸುತ್ತಲಿನ ಪ್ರಭೆ ಹೇಗಿರುತ್ತದೆ ಎನ್ನುವುದನ್ನು ನಾವು ಕಿರ್ಲಿನ್ ಛಾಯಾಗ್ರಹಣದಲ್ಲಿ ಕಾಣಬಹುದು] “ಹೀಗೆ ಪಿಂಡಾಂಡ ಬ್ರಹ್ಮಾಂಡದೊಳಗೆಲ್ಲಾ ಭಗವಂತ ತುಂಬಿ ನಿಂತ” ಎನ್ನುತ್ತಾನೆ ಚತುರ್ಮುಖ.

ಸ್ವಧಿಷ್ಣ್ಯಂ ಪ್ರತಪನ್ ಪ್ರಾಣೋ ಬಹಿಶ್ಚ ಪ್ರತಪತ್ಯಸೌ ।
ಏವಂ ವಿರಾಜಂ ಪ್ರತಪಂಸ್ತಪತ್ಯಂತರ್ಬಹಿಃ ಪುಮಾನ್ ॥೧೬॥

ನಮ್ಮ ದೇಹ ಭಗವಂತನ ವಾಸಸ್ಥಾನ. ಈ ಶರೀರವೇ ಆತನ ಮನೆ! “ಆತ ತನ್ನ ಮನೆಯನ್ನು ತಾನೇ ತುಂಬಿ ಬೆಳಗಿದ” ಎನ್ನುತ್ತಾನೆ ಚತುರ್ಮುಖ. ಬೆಳಕು ಹಾಯಿಸಿ ಆತ ಎಲ್ಲವನ್ನೂ ಕಂಡನಂತೆ. ಇದಕ್ಕಾಗಿ ಆತನನ್ನು ಕ್ಷೇತ್ರಜ್ಞ ಎನ್ನುತ್ತಾರೆ. ನಾವು ಕೇವಲ ಕ್ಷೇತ್ರಸ್ಥರು. ನಮ್ಮ ದೇಹದೊಳಗೇನಿದೆ, ಅದು ಹೇಗೆ ಕೆಲಸ ಮಾಡುತ್ತದೆ ಎನ್ನುವ ವಿಷಯವೇ ನಮಗೆ ತಿಳಿದಿಲ್ಲ. ಭಗವಂತ ಪ್ರಾಣಶಕ್ತಿಯಾಗಿ ನಮ್ಮ ದೇಹದೊಳಗೆ ತುಂಬಿ ನಮಗೆ ಚೈತನ್ಯ ಕೊಟ್ಟ, ಚಲನವಲನವನ್ನು ಕೊಟ್ಟ. ಹೀಗೆ ಪಿಂಡಾಂಡ ಬ್ರಹ್ಮಾಂಡದಲ್ಲೆಲ್ಲಾ ತುಂಬಿ, ಒಳಗೂ ಹೊರಗೂ ಬೆಳಕು ತುಂಬಿಸಿ, ಎಲ್ಲವನ್ನೂ ಕಾಣುತ್ತಾ, ಸಾಕ್ಷಿಯಾಗಿ ನಿಂತಿದ್ದಾನೆ ಭಗವಂತ.

ಸೋSಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।
ಮಹಿಮೈಷ ತತೋ ಬ್ರಹ್ಮನ್ ಪುರುಷಸ್ಯ ದುರತ್ಯಯಃ ॥೧೭॥

ಪುರುಷಸೂಕ್ತದಲ್ಲಿ ಹೇಳಿರುವ: "*ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥೨॥ ಏತಾವಾನಸ್ಯ ಮಹಿಮಾSತೋ ಜ್ಯಾಯಾಂಶ್ಚ ಪೂರುಷಃ।*" ಎನ್ನುವ ಮಾತನ್ನು ಇಲ್ಲಿ ಚತುರ್ಮುಖ ವಿವರಿಸುವುದನ್ನು ಕಾಣುತ್ತೇವೆ. ಸಾವಿಲ್ಲದ ಅಭಯ ಸ್ಥಿತಿ ಎಂದರೆ ಮೋಕ್ಷ. ಇಂತಹ ಮೋಕ್ಷ ಸ್ಥಿತಿಯಲ್ಲೂ ನಮ್ಮನ್ನು ನಿಯಂತ್ರಿಸುವವನು ಆ ಭಗವಂತ. ಇದನ್ನೇ ವಿಷ್ಣುಸಹಸ್ರನಾಮದಲ್ಲಿ "*ಮುಕ್ತಾನಾಂ ಪರಮಾಗತಿಃ*" ಎಂದು ಹೇಳಲಾಗಿದೆ. ಬ್ರಹ್ಮಸೂತ್ರ ಕೂಡಾ "*ಮುಕ್ತೋಪಸೃಪ್ಯವ್ಯಪದೇಶಾತ್*" (ಮುಕ್ತರು ಹೋಗಿ ಸೇರಬೇಕಾದ 'ಆಶ್ರಯ') ಎಂದು ಇದೇ ಮಾತನ್ನು ಹೇಳುತ್ತದೆ. ಒಟ್ಟಿನಲ್ಲಿ ಹೇಳಬೇಕೆಂದರೆ ಮುಕ್ತಾಮುಕ್ತ ನಿಯಾಮಕ ಆ ಭಗವಂತ.

ಮೇಲಿನ ಶ್ಲೋಕದಲ್ಲಿ "ಭಗವಂತ ಅನ್ನವನ್ನು ಮತ್ತು ಮರ್ತ್ಯವನ್ನು ಮೀರಿ ನಿಂತಿದ್ದಾನೆ" ಎಂದು ವರ್ಣಿಸಿದ್ದಾರೆ. ಇಲ್ಲಿ ಮರ್ತ್ಯ ಎಂದರೆ ಮರಣಶೀಲ ಮತ್ತು ಅನ್ನ (ಅದ್ಯತೇ) ಎಂದರೆ ನಾಶಕ್ಕೊಳಗಾಗುವಂಥಹದ್ದು ಎಂದರ್ಥ. ಆದರೆ ಈ ರೀತಿ ಅರ್ಥ ಮಾಡಿದರೆ ಈ ಎರಡೂ ಪದಗಳು ಸುಮಾರಾಗಿ ಒಂದೇ ಅರ್ಥವನ್ನು ನೀಡುತ್ತವೆ. ಹಾಗಾಗಿ ಇಲ್ಲಿ ಅನ್ನಂ ಎನ್ನುವ ಪದವನ್ನು ಒಂದು ವಿಶೇಷ ಅರ್ಥದಲ್ಲಿ ಬಳಸಲಾಗಿದೆ ಎನ್ನುವುದು ತಿಳಿಯುತ್ತದೆ. ಐತರೇಯ ಬ್ರಾಹ್ಮಣದಲ್ಲಿ ಹೇಳುವಂತೆ "*ಮೇ ಅನ್ನಂ ದಕ್ಷಿಣಾ*" "ನಾನು ಹೆಚ್ಚು ಆಸ್ವಾದಿಸುವ ತತ್ತ್ವ ದಕ್ಷಿಣಾ" ಎನ್ನುತ್ತಾನೆ ಭಗವಂತ. ಇಲ್ಲಿ ದಕ್ಷಿಣಾ ಎಂದರೆ ಶ್ರೀಲಕ್ಷ್ಮಿ. ಹೀಗಾಗಿ ಭಗವಂತ ಅನ್ನವನ್ನು ಮತ್ತು ಮರ್ತ್ಯವನ್ನು ಮೀರಿ ನಿಂತಿದ್ದಾನೆ ಅಂದರೆ ಹುಟ್ಟುಸಾವಿಗೆ ಒಳಗಾಗುವ ಬ್ರಹ್ಮಾದಿ ಸಮಸ್ತ ಜೀವರು(ಮರ್ತ್ಯರು) ಮತ್ತು ಜಗತ್ತಿನ ತಾಯಿಯಾದ ಚಿತ್ ಪ್ರಕೃತಿ(ಅನ್ನಂ) ರಮಾದೇವಿಯನ್ನೂ ಕೂಡಾ ಮೀರಿ ನಿಂತಿದ್ದಾನೆ ಎಂದರ್ಥ. ಚತುರ್ಮುಖನನ್ನು ಹಿಡಿದು ಸಮಸ್ತ ಜೀವರೂ ಕ್ಷರರು. ಚಿನ್ಮಯಿಯಾದ ಶ್ರೀಲಕ್ಷ್ಮಿ ನಿತ್ಯಮುಕ್ತಳು. ಎಲ್ಲರನ್ನೂ ಮೀರಿ ನಿಂತಿರುವ ಆ ಭಗವಂತ(ಅಕ್ಷರ) ಮುಕ್ತ ನಿಯಾಮಕ. "ಇಷ್ಟು ಹಿರಿದಾದ ತತ್ತ್ವವನ್ನು ಶಬ್ದಗಳಿಂದ ವರ್ಣಿಸುವುದಾಗಲೀ, ಆತನ ಮಹಿಮೆಯನ್ನು ಹೇಳಿ ಮುಗಿಸುವುದಾಗಲೀ ಯಾರಿಂದಲೂ ಸಾಧ್ಯವಿಲ್ಲ" ಎಂದಿದ್ದಾನೆ ಚತುರ್ಮುಖ.

**ಪಾದೋSಸ್ಯ ಸರ್ವಭೂತಾನಿ ಪುಂಸಃ ಸ್ಥಿತಿವಿದೋ ವಿದುಃ ।**
**ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋSಧಾಯಿ ಮೂರ್ಧಸು ॥೧೮॥**

ಪುರುಷಸೂಕ್ತದ ಮುಂದಿನ ಸಾಲಿನ ವಿವರಣೆಯೇ ಮೇಲಿನ ಶ್ಲೋಕ. ಪುರುಷ ಸೂಕ್ತ ಹೀಗೆ ಹೇಳುತ್ತದೆ: ***ಪಾದೋಽಸ್ಯ ವಿಶ್ವಾ ಭೂತಾನಿತ್ರಿಪಾದಸ್ಯಾಮೃತಂ ದಿವಿ ॥೩॥ ತ್ರಿಪಾದೂರ್ಧ್ವ ಉದೈತ್ಪುರುಷಃಪಾದೋಽಸ್ಯೇಹಾಭವಾತ್ಪುನಃ ।*** ಇದೇ ಮಾತನ್ನು ಇಲ್ಲಿ ಚತುರ್ಮುಖ ನಾರದರಿಗೆ ವಿವರಿಸಿ ಹೇಳುತ್ತಿದ್ದಾನೆ. "ಪ್ರಪಂಚದ ಸಮಸ್ತ ಜೀವಜಾತಗಳ ಒಳಗೆ ತುಂಬಿರುವುದು ಭಗವಂತನ ಒಂದು ಪಾದ" ಎಂದು. ಸಾಮಾನ್ಯವಾಗಿ ಪಾದ ಎಂದರೆ ನಾಲ್ಕನೇ ಒಂದು ಅಂಶ. ಆದರೆ ಮೇಲಿನ ಶ್ಲೋಕದಲ್ಲಿ ಆ ಅರ್ಥದಲ್ಲಿ ಈ ಶಬ್ದ ಬಳಕೆಯಾಗಿಲ್ಲ. ಇಲ್ಲಿ ಪಾದ ಎಂದರೆ ಒಂದು ಚಿಕ್ಕ ಅಂಶ. ಈ ಅಂಶವನ್ನು ನಾವು ಶಬ್ದದಿಂದ ವರ್ಣಿಸುವುದು ಸಾಧ್ಯವಿಲ್ಲ. ಅದು ಸಮುದ್ರದಲ್ಲಿನ ಒಂದು ಬಿಂದುವಿನಂತೆ, ಮಹಾ ಜ್ವಾಲೆಯ ಒಂದು ಕಿಡಿಯಂತೆ.

ನಮಗೆ ಪ್ರಪಂಚದ ಸಂಪೂರ್ಣ ವಸ್ತುಸ್ಥಿತಿ ತಿಳಿದಿಲ್ಲ. ಪ್ರಪಂಚದ ಸಮಸ್ತ ವಸ್ತುಸ್ಥಿತಿಯನ್ನು ತಿಳಿದವನು ಆ ಭಗವಂತನೊಬ್ಬನೇ. ನಾವು ತಿಳಿದಿರುವುದು ಕೇವಲ ಮಲ್ನೋಟವನ್ನಷ್ಟೇ. ಇಂದು ನಮ್ಮೆಲ್ಲಾ ಸಮಸ್ಯೆಗಳಿಗೆ ಕಾರಣ ನಾವು ಸಮಸ್ತ ವಸ್ತುಸ್ಥಿಯನ್ನು ತಿಳಿದಿಲ್ಲಾ ಎನ್ನುವ ವಿಷಯವನ್ನೂ ನಾವು ತಿಳಿಯದೇ ಇರುವುದು! ಏನೂ ತಿಳಿಯದೇ ಇರುವ ಮೂಢನಾಗಿದ್ದರೂ ತೊಂದರೆಯಿಲ್ಲಾ, ತನಗೆ ಎಲ್ಲವೂ ತಿಳಿದಿಲ್ಲಾ ಎನ್ನುವ ಸತ್ಯವನ್ನರಿತ ಜ್ಞಾನಿಯಾಗಿದ್ದರೂ

ಅಡ್ಡಿಯಿಲ್ಲಾ. ಆದರೆ ಇವೆರಡರ ಮಧ್ಯದಲ್ಲಿದ್ದು ಅಹಂಕಾರಿಯಾಗಿದ್ದರೆ ಕಷ್ಟ. ಭಾಗವತದ ಮೂರನೇ ಸ್ಕಂಧದಲ್ಲಿ ಬರುವ ಒಂದು ಶ್ಲೋಕ ಈ ರೀತಿ ಹೇಳುತ್ತದೆ: *ಯಶ್ಚ ಮೂಢತಮೋ ಲೋಕೇ ಯಶ್ಚ ಬುದ್ಧೇಃ ಪರಂ ಗತಃ । ತಾವುಭೌ ಸುಖಮೇಧೇತೇ ಕ್ಲಿಶ್ಯತ್ಯಂತರಿತೋ ಜನಃ* ||೩-೭-೧೭|| "ಮೂಢ ಮತ್ತು ಜ್ಞಾನಿ ಇವರಿಬ್ಬರು ಲೋಕದಲ್ಲಿ ಸುಖದಿಂದ ಬದುಕಬಲ್ಲರು. ಆದರೆ ಇವರಿಬ್ಬರ ಮಧ್ಯದಲ್ಲಿರುವವರು-ಜೀವನದ ಅರ್ಥ ತಿಳಿಯದೆ ಮೋಹಕ್ಕೆ ಬಲಿಯಾಗಿ ದುಃಖ ಅನುಭವಿಸುತ್ತಾರೆ" ಎಂದು! ಮೇಲಿನ ಶ್ಲೋಕದಲ್ಲಿ: "ಈ ಪ್ರಪಂಚದೊಳಗೆ ಭಗವಂತ ತುಂಬಿದ್ದಾನೆ ಎಂದು 'ಬಲ್ಲವರು' ಹೇಳುತ್ತಾರೆ" ಎಂದಿದ್ದಾನೆ ಚತುರ್ಮುಖ. ಭಗವಂತನಿಂದ ನೇರ ಉಪದೇಶ ಪಡೆದ, ಸಮಸ್ತ ಜ್ಞಾನಿಗಳಿಗೂ ಹಿರಿಯನಾದ ಚತುರ್ಮುಖ ಇಲ್ಲಿ 'ಬಲ್ಲವರು' ಎಂದು ಭಗವಂತನನ್ನು ಕುರಿತೇ ಹೇಳಿದ್ದಾನೆ.

"ಅಮೃತ, ಕ್ಷೇಮ ಮತ್ತು ಅಭಯ ಎನ್ನುವ ಮೂರು ಲೋಕಗಳನ್ನು ಭಗವಂತ ತನ್ನ ತಲೆಯ ಮೇಲೆ ಹೊತ್ತಿದ್ದಾನೆ" ಎಂದು ಚತುರ್ಮುಖ ಇಲ್ಲಿ ವಿವರಿಸುತ್ತಾನೆ. ಅಮೃತ, ಕ್ಷೇಮ ಮತ್ತು ಅಭಯ ಎನ್ನುವುದು ಮುಕ್ತರು ಮಾತ್ರ ಹೋಗಬಹುದಾದ ಎತ್ತರದ ಸ್ಥಾನ. ಈ ಮೂರು ಸ್ಥಾನಗಳನ್ನು ಶಾಸ್ತ್ರಕಾರರು ಶ್ವೇತದ್ವೀಪ, ಅನಂತಾಸನ, ವೈಕುಂಠ ಎಂದೂ ಕರೆಯುತ್ತಾರೆ. ಶ್ವೇತದ್ವೀಪ ಎನ್ನುವುದು ಭೂಮಿಯಲ್ಲೇ ಇರುವ ಮುಕ್ತಸ್ಥಾನವಾದರೂ ಕೂಡಾ ಅದು ನಮ್ಮ ಕಣ್ಣಿಗೆ ಕಾಣದು. ಭೂಮಿಯಲ್ಲೇ ಇರುವ ಸೂಕ್ಷ್ಮ ಸ್ಥಾನಗಳ ಕುರಿತು ವಿಷ್ಣುಪುರಾಣ ವಿವರಿಸುತ್ತದೆ. ಅಲ್ಲಿ ಹೇಳುವಂತೆ: ಭೂಮಿಯಲ್ಲಿ ಎರಡು ವಿಧವಾದ ಅಸ್ತಿತ್ವವಿದೆ. ಸ್ಥೂಲವಾಗಿ ನಮ್ಮ ಕಣ್ಣಿಗೆ ಕಾಣುವ ಭೂಮಿಯ ಭಾಗ ಒಂದಾದರೆ, ನಮ್ಮ ಕಣ್ಣಿಗೆ ಕಾಣದ ಸೂಕ್ಷ್ಮ ಲೋಕ ಕೂಡಾ ಭೂಮಿಯಲ್ಲಿದೆ. ಇಂತಹ ಒಂದು ಸೂಕ್ಷ್ಮಲೋಕ ಶ್ವೇತದ್ವೀಪ. ಶ್ವೇತದ್ವೀಪಕ್ಕೆ ಇನ್ನೊಂದು ಹೆಸರು ನಾರಾಯಣಪುರ. ಶಾಸ್ತ್ರಕಾರರು ಹೇಳುವಂತೆ ಮುಕ್ತಿಗೆ ಹೋಗುವಾಗ ಮೊಟ್ಟಮೊದಲು ಶ್ವೇತದ್ವೀಪದಲ್ಲೇ ಭಗವಂತನ ಮೊದಲ ದರ್ಶನ. ಶ್ವೇತದ್ವೀಪಕ್ಕೆ ಹೋಗದೇ ಮುಕ್ತಿ ಇಲ್ಲ. ಇದು ಭೂಮಿಗೆ ಸಂಬಂಧಿಸಿದ ಮುಕ್ತಸ್ಥಾನವಾದರೆ, ಇದೇ ರೀತಿ ಅಂತರಿಕ್ಷಕ್ಕೆ ಸಂಬಂಧಿಸಿದ ಮೋಕ್ಷ ಸ್ಥಾನ ಅನಂತಾಸನ. ಶ್ವೇತದ್ವೀಪದಲ್ಲಿನ ಭಗವಂತನ ರೂಪವನ್ನು ನಾರಾಯಣ ಹಾಗೂ ಪದ್ಮನಾಭ ಎಂದೂ ಕರೆಯುತ್ತಾರೆ. ಅನಂತಾಸನದಲ್ಲಿ ಭಗವಂತ ವಾಸುದೇವ ರೂಪದಿಂದಿದ್ದಾನೆ. ವೈಕುಂಠದಲ್ಲಿರುವ ಭಗವಂತನ ರೂಪಕ್ಕೆ ವೈಕುಂಠ ಎಂದೇ ಹೆಸರು. ಈ ಮೂರು ದಿವ್ಯ ರೂಪಗಳದ್ದೇ ನಾಮಾಂತರ: ಅಮೃತ, ಕ್ಷೇಮ ಮತ್ತು ಅಭಯ. ಈ ಅಪೂರ್ವವಾದ ಹೆಸರನ್ನು ಕೇವಲ ಭಾಗವತವಷ್ಟೇ ವಿವರಿಸಿ ಹೇಳುತ್ತದೆ.

ಲೋಕಾಸ್ತ್ರಯೋ ಬಹಿಶ್ಚಾಸನ್ನಪ್ರಜಾನಾಂ ಯ ಆಶ್ರಮಾಃ ।
ಅಂತಸ್ತ್ರಿಲೋಕ್ಯಾಸ್ತ್ವಪರೋ ಗೃಹಮೇಧೈರ್ಬೃಹದ್ ಹುತಃ ॥೧೯॥

ಮೇಲೆ ವಿವರಿಸಿದ ಮೂರು ಲೋಕಗಳು ವಿಶೇಷವಾಗಿ ಪ್ರಜೆಗಳಿಲ್ಲದವರು ಹೋಗಿ ಸೇರುವ ಸ್ಥಾನ. ಇಲ್ಲಿ ಪ್ರಜೆಗಳಿಲ್ಲದವರು ಎಂದರೆ ದೇವತೆಗಳು. ದೇವತೆಗಳಿಗೆ ಮಕ್ಕಳಿದ್ದರೂ ಕೂಡಾ ಮಕ್ಕಳಿಗೆ ತಂದೆ-ತಾಯಿಯ ದಾಯೆ(ಪಾಲುಪಟ್ಟಿ) ಇಲ್ಲದ ಕಾರಣ ಅವರನ್ನು ಪ್ರಜೆಗಳಿಲ್ಲದವರು ಎನ್ನುತ್ತಾರೆ. ಉದಾಹರಣೆಗೆ ಶಿವನ ಮಗ ಗಣಪತಿ. ಆದರೆ ಗಣಪತಿಗೆ ಎಂದೂ ಶಿವ ಪದವಿ ಸಿಗುವುದಿಲ್ಲ. ಶಿವ ಪದವಿ ಶಿವನಿಗೇ ಹೊರತು ಗಣಪತಿಗಲ್ಲ.

ಗೃಹಸ್ಥರಾದವರು ಹೋಗಿ ಸೇರುವ ಮುಕ್ತ ಸ್ಥಾನಗಳೂ ಇವೆ. ಅಗ್ನಿ ಮುಖದಿಂದ ಭಗವಂತನ ಆರಾಧನೆ ಮಾಡುವವರು ಇಂದ್ರ ಲೋಕದ ಸಮೀಪವಿರುವ ಭಗವಂತನ ಲೋಕವನ್ನು ಸೇರುತ್ತಾರೆ. ಅದೇ ರೀತಿ ಯತಿಗಳಾದವರು ಧ್ರುವಲೋಕದಲ್ಲಿ, ಬ್ರಹ್ಮಚಾರಿಗಳು ಸೂರ್ಯ ಮಂಡಲದಲ್ಲಿ, ವಾನಪ್ರಸ್ಥರು ಮೇರುಶಿಖರದಲ್ಲಿನ

ಭಗವಂತನ ಸ್ಥಾನವನ್ನು ಹೋಗಿ ಸೇರುತ್ತಾರೆ. ಈ ರೀತಿ ಬೇರೆಬೇರೆ ಸಾಧನೆ ಮಾಡಿದವರಿಗೆ ಬೇರೆಬೇರೆ ಸ್ಥಾನಗಳಿದ್ದರೂ ಸಹ, ಎಲ್ಲರೂ ಶ್ವೇತದ್ವೀಪದ ಮುಖೇನವೇ ಹೋಗಬೇಕು. ಇವೆಲ್ಲವೂ ಮುಕ್ತಿಗೆ ಸಂಬಂಧಿಸಿದ ಮತ್ತು ಮಾನುಷ ಕಲ್ಪನೆಗೆ ಮೀರಿದ ವಿಚಾರ.

ಸೃತೀ ವಿಚಕ್ರಮೇ ವಿಷ್ವಙ್ ಸಾಶನಾನಶನೇ ಅಭಿ ।
ಯದವಿದ್ಯಾ ಚ ವಿದ್ಯಾ ಚ ಪುರುಷಸ್ತೂಭಯಾಶ್ರಯಃ ॥೨೦॥

"*ತತೋ ವಿಷ್ವಙ್ ವ್ಯಕ್ರಾಮತ್ಸಾಶನಾನಶನೇ ಅಭಿ*" ಎಂದು ಪುರುಷ ಸೂಕ್ತ ಹೇಳಿದ ಮಾತನ್ನೇ ಇಲ್ಲಿ ಚತುರ್ಮುಖ ವಿವರಿಸಿದ್ದಾನೆ. ಇಲ್ಲಿ ಸಾಶನ ಎಂದರೆ ಕರ್ಮಫಲವನ್ನುಣ್ಣುವ ಅಜ್ಞಾನಿಗಳು ಹಾಗೂ ಅನಶನ ಎಂದರೆ ಕರ್ಮಬಂಧವನ್ನು ದಾಟಿದ ಅಪರೋಕ್ಷಜ್ಞಾನಿಗಳು. ಸಾಶನರು ಎಂದರೆ ಸಂಸಾರಿಗಳು, ಅನಶನರು ಎಂದರೆ ಮುಕ್ತರು ಎನ್ನುವುದೂ ಈ ವಿವರಣೆಯ ಇನ್ನೊಂದು ಅರ್ಥ. ಇಲ್ಲಿ ಚತುರ್ಮುಖ ಹೇಳುತ್ತಾನೆ: "ಅವಿದ್ಯೆಗೆ ಒಳಗಾದವರು ಮತ್ತು ವಿದ್ಯೆಯಿಂದ ಪಾರಾದವರು ಎಲ್ಲರಿಗೂ ಪುರುಷ ಶಬ್ದವಾಚ್ಯನಾದ ಭಗವಂತನೇ ಆಶ್ರಯ. ಭಗವಂತ ಸಾಶನಾನಶನರನ್ನೊಳಗೊಂಡ ಸಮಸ್ತ ಪ್ರಪಂಚವನ್ನು ವ್ಯಾಪಿಸಿ ನಿಂತಿದ್ದಾನೆ" ಎಂದು.

ತಸ್ಮಾದಂಡಾದ್ ವಿರಾಡ್ ಜಜ್ಞೇ ಭೂತೇಂದ್ರಿಯಗುಣಾಶ್ರಯಃ ।
ತದ್ ದ್ರವ್ಯಮತ್ಯಗಾದ್ ವಿಶ್ವಂ ಗೋಭಿಃ ಸೂರ್ಯ ಇವಾಶ್ರಯಮ್ ॥೨೧॥

ಪುರುಷಸೂಕ್ತದಲ್ಲಿ ಬಂದಿರುವ ಅಪೂರ್ವ ಸಂಗತಿಗಳನ್ನು ಬೇರೆ ಶಬ್ದಗಳಿಂದ ಚತುರ್ಮುಖ ಇಲ್ಲಿ ವಿವರಿಸುವುದನ್ನು ಕಾಣುತ್ತೇವೆ. ಪುರುಷಸೂಕ್ತ ಹೀಗೆ ಹೇಳುತ್ತದೆ: *ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷಃ । ಸ ಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ ॥೫॥* ಮೊಟ್ಟಮೊದಲು ಅಂಡದಲ್ಲಿ ತುಂಬಿರುವ ಭಗವಂತನಿಂದ ಚತುರ್ಮುಖ ಹುಟ್ಟಿದ. ಹೀಗೆ ಹುಟ್ಟಿದ ಚತುರ್ಮುಖ ಪ್ರಪಂಚದಲ್ಲಿನ ಪಂಚಭೂತಗಳು, ಪಂಚತನ್ಮಾತ್ರೆಗಳು, ಸರ್ವ ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು, ಇವೆಲ್ಲವಕ್ಕೂ ಅಧಿಷ್ಠಾನವಾಗಿರುವ ಸಮಸ್ತ ಜೀವಜಾತಗಳಿಗೆ ಆಶ್ರಯನಾಗಿ, ಬ್ರಹ್ಮಾಂಡ, ಪಿಂಡಾಂಡ, ಸಮಸ್ತ ದ್ರವ್ಯಗಳೆಲ್ಲವನ್ನೂ ಮೀರಿ ನಿಂತ. ಇಲ್ಲಿ ದ್ರವ್ಯ ಎಂದರೆ ಧಾವಿಸಿ ಪಡೆಯುವ/ಸೇರುವ ವಸ್ತು. ಅಂದರೆ ನಮ್ಮ ಚಲನೆಯಿಂದ ನಾವು ಹೋಗಿ ಪಡೆಯಬಹುದಾದ ಅಥವಾ ಮುಟ್ಟಬಹುದಾದ ವಸ್ತುಗಳು ದ್ರವ್ಯ. ಅಂದರೆ ಪಂಚಭೂತಗಳು ಮತ್ತು ಅದರಿಂದಾದ ಸಮಸ್ತ ಪದಾರ್ಥಗಳು ಎಂದರ್ಥ. ಹೇಗೆ ಸೂರ್ಯ ತನ್ನ ಕಿರಣಗಳಿಂದ ಅಂತರಿಕ್ಷವನ್ನು ಬೆಳಗಿಸಿ ಮೀರಿ ನಿಲ್ಲುತ್ತಾನೋ ಹಾಗೇ ಈ ಜಗತ್ತಿನ ಆದಿಜೀವನಾದ ಚತುರ್ಮುಖ ಸಮಸ್ತ ಬ್ರಹ್ಮಾಂಡ ಪಿಂಡಾಂಡವನ್ನು ಮೀರಿ ನಿಂತ. ಇಂತಹ ಚತುರ್ಮುಖನನ್ನೂ ಮೀರಿ ನಿಂತವನು ಪುರುಷ ಶಬ್ದವಾಚ್ಯನಾದ ಆ ಭಗವಂತ. ಇಲ್ಲಿ 'ವಿರಾಟ್' ಎನ್ನುವ ವಿಶೇಷಣ ಬಳಕೆಯಾಗಿದೆ. ವಿಶೇಷವಾಗಿ ವಿರಾಟ್ ಎಂದರೆ ಬೆಳಗುವವನು ಎಂದರ್ಥ.

ಪುರುಷಸೂಕ್ತದಲ್ಲಿ ಮುಂದೆ ಯಜ್ಞದ ಬಗ್ಗೆ ವಿವರಣೆ ಬರುತ್ತದೆ: *ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ । ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥೬॥ ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ । ತೇನ ದೇವಾ ಆಯಜಂತ ಸಾಧ್ಯಾ ಋಷಯಶ್ಚ ಯೇ ॥೭॥* ಇಲ್ಲಿ ವಸಂತವೇ ತುಪ್ಪ, ಗ್ರೀಷ್ಮವೇ

ಕಟ್ಟಿಗೆ, ಶರತ್ತೇ ಹವಿಸ್ಸು ಇತ್ಯಾದಿಯಾಗಿ ವಿವರಿಸಲಾಗಿದೆ. ಇಲ್ಲಿ ಬರುವ ಪ್ರತೀ ಶಬ್ದದ ಅರ್ಥವನ್ನು ಕೊಡತಕ್ಕ ವಿವರಣೆಯನ್ನು ಭಾಗವತ ನೀಡಿಲ್ಲವಾದರೂ ಕೂಡಾ ಯಜ್ಞದ ಪರಿಕಲ್ಪನೆಯನ್ನು ಮುಂದೆ ವಿವರಿಸುವುದನ್ನು ನಾವು ಕಾಣಬಹುದು.

## ಸೃಷ್ಟಿಯ ಆದಿಯಲ್ಲಿ ಚತುರ್ಮುಖ ನೆರವೇರಿಸಿದ ಆದಿಯಜ್ಞ

ಯದಾSಸ್ಯ ನಾಭ್ಯಾನ್ನಳಿನಾದಹಮಾಸಂ ಮಹಾತ್ಮನಃ ।
ನಾವಿಂದಂ ಯಜ್ಞಸಂಭಾರಾನ್ ಪುರುಷಾವಯವಾನೃತೇ ॥೨೨॥

ತೇಷು ಯಜ್ಞಾಶ್ಚ ಪಶವಃ ಸವನಸ್ಪತಯಃ ಕುಶಾಃ ।
ಇದಂ ಚ ದೇವಯಜನಂ ಕಾಲಶ್ಚೋರುಗುಣಾನ್ವಿತಃ ॥೨೩॥

ವಸೂನ್ಯೋಷಧಯಃ ಸ್ನೇಹಾ ರಸಲೋಹಮೃದೋ ಜಲಮ್ ।
ಋಚೋ ಯಜೂಂಷಿ ಸಾಮಾನಿ ಚಾತುರ್ಹೋತ್ರಂ ಚ ಸತ್ತಮ ॥೨೪॥

ಚತುರ್ಮುಖ ಹುಟ್ಟಿದ ತಕ್ಷಣ, ಏನೂ ಇಲ್ಲದ ಆ ಸಮಯದಲ್ಲಿ ಆತನಿಗೆ ತನ್ನನ್ನು ಹುಟ್ಟಿಸಿದ ತಂದೆಯನ್ನು ಯಾಜ್ಞಿಕವಾಗಿ ಪೂಜಿಸಬೇಕು ಎನ್ನುವ ಅನುಸಂಧಾನವಾಯಿತು. ಇಂತಹ ಸಮಯದಲ್ಲಿ ಸೃಷ್ಟಿ ಪ್ರಕ್ರಿಯೆಯನ್ನೇ ಯಾಜ್ಞಿಕ ಪ್ರಕ್ರಿಯೆಯಾಗಿ ಚತುರ್ಮುಖ ನೋಡಿರುವುದನ್ನು ಇಲ್ಲಿ ಕಾಣುತ್ತೇವೆ.

ಮೊದಲು ಚತುರ್ಮುಖ ಮೊಟ್ಟೆಯೊಳಗಿನಿಂದ ಹುಟ್ಟಿದ ಎನ್ನುವುದನ್ನು ಈ ಹಿಂದೆ ನೋಡಿದ್ದೇವೆ. ಹೀಗೆ ಮೊಟ್ಟೆಯೊಳಗಿದ್ದ ಚತುರ್ಮುಖ ಮೊಟ್ಟೆಯೊಡೆದು ಮತ್ತೊಮ್ಮೆ ಹುಟ್ಟಿದ. ಮೊಟ್ಟೆ ಒಡೆಯುವುದು ಅಂದರೆ ಕಮಲ ಅರಳುವುದು. "ಅರಳಿದ ಕಮಲದಲ್ಲಿ ನಾನು ಮತ್ತೆ ಹುಟ್ಟಿದೆ" ಎಂದಿದ್ದಾನೆ ಚತುರ್ಮುಖ. ಮೊಟ್ಟೆಯೊಡೆದು ಬಂದ ಚತುರ್ಮುಖನಿಗೆ ಸೃಷ್ಟಿಯ ಆದಿಯಲ್ಲಿ ಭಗವಂತನ ಪಾದಪೂಜೆಗೆ ಬೇಕಾದ ಸಾಮಗ್ರಿಗಳಿರಲಿಲ್ಲ. ಹೀಗಿರುವಾಗ ಆತನಿಗೆ ತನ್ನೆದುರು ಸಹಸ್ರಾರು ಕರಚರಣಗಳಿಂದ ತುಂಬಿ ನಿಂತಿರುವ ಭಗವಂತನ ಅವಯವಗಳಲ್ಲಿ ಪ್ರಪಂಚದ ಅನಂತ ವಸ್ತುಗಳೂ ಮೂಲರೂಪದಲ್ಲಿ ಸೃಷ್ಟಿಯಾಗುತ್ತಿರುವುದು ಕಾಣುತ್ತದೆ. ಇಂತಹ ಭಗವಂತನಿಗೆ ಹೊರಗಿನಿಂದ ಕೊಡುವುದಕ್ಕೇನಿದೆ? ಮುಂದೆ ಹುಟ್ಟಿ ಬರುವ ಸಮಸ್ತ ವಸ್ತುವೂ ಕೂಡಾ ಸೂಕ್ಷ್ಮರೂಪದಲ್ಲಿ ಭಗವಂತನಲ್ಲೇ ತುಂಬಿರುವುದನ್ನು ಚತುರ್ಮುಖ ಕಂಡ.

ಯಜ್ಞ ಅಂದ ಮೇಲೆ ಅಲ್ಲಿ ಬಲಿ ಎನ್ನುವುದೊಂದಿದೆ. ನಮ್ಮಲ್ಲಿರುವ ಪಶುತ್ವವನ್ನು ಬಲಿಕೊಡುವುದು ಈ ಬಲಿಯ ಹಿಂದಿನ ತಾತ್ಪರ್ಯ. ಇಲ್ಲಿ ಅದನ್ನೇ ಪುರುಷಮೇಧ ಎಂದಿದ್ದಾರೆ. ಪುರುಷಮೇಧ ಎಂದರೆ ನರಮೇಧ ಅಥವಾ ನರಬಲಿಯಲ್ಲ. ನಮ್ಮಲ್ಲಿರುವ ದೋಷವನ್ನು ಪರಿಹಾರ ಮಾಡು ಎಂದು ನಮ್ಮನ್ನು ನಾವು ಸಂಪೂರ್ಣವಾಗಿ ಭಗವಂತನಿಗೆ ಅರ್ಪಿಸಿಕೊಳ್ಳುವುದೇ ಪುರುಷಮೇಧ.

ನಾಮಧೇಯಾನಿ ಮಂತ್ರಾಶ್ಚ ದಕ್ಷಿಣಾಶ್ಚ ವ್ರತಾನಿ ಚ ।
ದೇವತಾನುಕ್ರಮಃ ಕಲ್ಪಃ ಸಂಕಲ್ಪ ಸೂತ್ರಮೇವ ಚ ॥೨೫॥

ಯಜ್ಞ ಮಾಡಲು ಅಲ್ಲಿ ನಾಮಧೇಯಗಳು ಬೇಕು, ದಕ್ಷಿಣೆ ಬೇಕು, ಮಂತ್ರಗಳು ಬೇಕು. ಸೃಷ್ಟಿಯ ಆದಿಯಲ್ಲಿ ನಡೆದ ಈ ಯಜ್ಞದಲ್ಲಿ ಭಗವಂತನ ಮುಖದಿಂದ ಹೊಮ್ಮಿದ ವೇದವಾಣಿಯೇ ನಾಮಧೇಯವಾಯಿತು. ಆ ಒಂದೊಂದು ಸೂಕ್ತವೇ ಮಂತ್ರವಾಯಿತು. ಪ್ರಪಂಚದಲ್ಲಿ ಭಗವಂತ ಸೃಷ್ಟಿಮಾಡಿದ ಅನಂತ ಸಂಪತ್ತೇ ಆ ಯಜ್ಞದ ದಕ್ಷಿಣೆಯಾಯಿತು. ಈ ರೀತಿ "ನೀನು ಕೊಟ್ಟ ಸಂಪತ್ತು ನಿನಗೆ ಅರ್ಪಿತ; ನಿನ್ನ ಬಾಯಿಯಿಂದ ಬಂದ ನಾಮಧೇಯಗಳೇ ನಿನ್ನ ನಾಮಧೇಯಗಳು; ಆ ಮಂತ್ರಗಳೇ ನಿನ್ನ ಸ್ತೋತ್ರಗಳು ಎನ್ನುವ ಅನುಸಂಧಾನದೊಂದಿಗೆ ಭಗವಂತನ ಅವಯವಗಳಿಂದ ಬಂದದ್ದನ್ನೇ ಅವನಿಗೆ ಅರ್ಪಿಸಿ ನಾನು ಯಜ್ಞಮಾಡಿದೆ" ಎನ್ನುತ್ತಾನೆ ಚತುರ್ಮುಖ.

ವ್ರತಗಳು ಸೃಷ್ಟಿಯಾದವು, ಯಜ್ಞದ ಹೆಸರುಗಳು ಸೃಷ್ಟಿಯಾದವು, ಯಜ್ಞದಿಂದ ಆರಾಧಿಸಲ್ಪಡುವ ದೇವ-ದೇವತೆಯರ ಹೆಸರು ಎಲ್ಲವೂ ಭಗವಂತನಿಂದ ಆವಿಷ್ಕಾರವಾದ ವೇದವಾಣಿಯಲ್ಲಿ ಸಿಕ್ಕಿತು. ಯಾರನ್ನು ಕುರಿತು ಯಜ್ಞಮಾಡಬೇಕೋ ಆತನೇ ಸಹಸ್ರಶೀರ್ಷಾ ಪುರುಷನಾಗಿ ಎದುರಿಗೇ ನಿಂತಿದ್ದಾನೆ. ಇನ್ನು ಪರಿವಾರ ದೇವತೆಗಳು, ಆವಾಂತರ ದೇವತೆಗಳು ಎಲ್ಲರೂ ಭಗವಂತನ ಅವಯವಗಳಿಂದ ದೇವತಾ ತಾರತಮ್ಯಕ್ಕನುಗುಣವಾಗಿ ಸೃಷ್ಟಿಯಾಗುತ್ತಿದ್ದಾರೆ. ದೇವ-ದೇವತೆಯರನ್ನು ಹೇಗೆ ಉಪಾಸನೆ ಮಾಡಬೇಕು, ಹೇಗೆ ಆಹುತಿಕೊಡಬೇಕು ಎನ್ನುವುದನ್ನು ತೋರಿಸುವುದಕ್ಕಾಗಿ ಆದಿಯಲ್ಲೇ ಸೃಷ್ಟಿಯನ್ನು ಭಗವಂತ ಒಂದು ಕ್ರಮದಲ್ಲಿ ಸೃಷ್ಟಿಸಿದ. [ಇದನ್ನೇ ಮುಂದೆ ದೇವಮೀಮಾಂಸೆ ಎನ್ನುವ ಗ್ರಂಥರೂಪದಲ್ಲಿ ಋಷಿಗಳು ನಮಗೆ ನೀಡಿದರು]. ಯಾವ ಕ್ರಮದಲ್ಲಿ ಹೋಮ ಮಾಡಬೇಕು, ಯಾವ ಮಂತ್ರವನ್ನು ಎಲ್ಲಿ ಬಳಸಬೇಕು, ಇತ್ಯಾದಿ ಭಗವದ್ ಸಂಕಲ್ಪದಿಂದ ವೇದೋಚ್ಛಾರ ಕಾಲದಲ್ಲೇ ವ್ಯವಸ್ಥೆಯಾಗಿ ಬಿಟ್ಟಿತು. ಯಾವುದನ್ನೂ ಹೊರಗಿನಿಂದ ತರಬೇಕಾಗಿರಲಿಲ್ಲ. ಎಲ್ಲವೂ ಭಗವಂತನಲ್ಲೇ ತುಂಬಿತ್ತು.

ಕಲ್ಪ ಸೂತ್ರಗಳ ಸಂಕಲ್ಪ ಭಗವಂತನಿಂದಾಯಿತು [ಇದನ್ನೇ ಮುಂದೆ ಗೃಹ್ಯಸೂತ್ರ, ಶ್ರುತಸೂತ್ರ ಇತ್ಯಾದಿ ಸೂತ್ರ(Rituals) ರೂಪದಲ್ಲಿ ರಚಿಸಿ ಋಷಿಗಳು ನಮ್ಮ ಮುಂದಿಟ್ಟರು]. ಹೀಗೆ ಮುಂದೆ ರಚನೆಯಾಗುವ ಗ್ರಂಥಗಳ, ವ್ಯಾಖ್ಯಾನಗಳ, ಭಾಷ್ಯಗಳ ಸಂಕಲ್ಪ ಭಗವಂತನಿಂದಾಯಿತು. ಬ್ರಹ್ಮಸೂತ್ರ ಕೂಡಾ ಇದೇ ಕಾಲದಲ್ಲಿ ನಿರ್ಮಾಣವಾಯಿತು.[ಇದನ್ನೇ ವೇದವ್ಯಾಸರು ದ್ವಾಪರದ ಅಂತ್ಯದಲ್ಲಿ ಮತ್ತೆ ರಚಿಸಿ ನಮಗೆ ಕೊಟ್ಟಿರುವುದು]. ಇವೆಲ್ಲವನ್ನೂ ಬಳಸಿ ಚತುರ್ಮುಖ ಆದಿ ಯಜ್ಞ ನೆರವೇರಿಸಿದ.

ನಮಗೆ ತಿಳಿದಂತೆ ಯಜ್ಞ ಎಂದ ಮೇಲೆ ಅಲ್ಲಿ 'ಸಂಕಲ್ಪ' ಮಾಡಬೇಕು. "*ಸಂಕಲ್ಪಃ ಕರ್ಮ ಮಾನಸಂ*" ಎನ್ನುವ ಮಾತಿದೆ. 'ಮಾಡಬೇಕು' ಎಂದು ಮನಸ್ಸಿನಲ್ಲಿ ನಿರ್ಧರಿಸುವುದೇ ಸಂಕಲ್ಪ. ಮೊದಲು ಮಾನಸಿಕವಾಗಿ ನಿರ್ಧರಿಸುವುದು, ಆಮೇಲೆ ದೈಹಿಕವಾಗಿ ಮಂತ್ರರೂಪದಲ್ಲಿ ಧೀಕ್ಷಾಬದ್ಧನಾಗುವುದೇ ನಿಜವಾದ ಸಂಕಲ್ಪ. ಇಲ್ಲಿ ಯಜ್ಞಕ್ಕೆ ಬೇಕಾದ ಸಂಕಲ್ಪ ಚತುರ್ಮುಖನಿಗೆ ಭಗವಂತನಿಂದ ದೊರೆಯಿತು. ಹೀಗೆ ಏನೂ ಇಲ್ಲದೇ ಇರುವಲ್ಲಿ ಎಲ್ಲವೂ ಇದ್ದು ಆದಿ ಯಜ್ಞ ನೆರವೇರಿತು. ಚತುರ್ಮುಖ ತನ್ನನ್ನೇ ತಾನು ಪಶುವಾಗಿ ಭಗವಂತನಿಗೆ ಅರ್ಪಿಸಿ ಯಜ್ಞ ನೆರವೇರಿಸಿದ.

ಈ ರೀತಿಯ ವ್ಯವಸ್ಥೆ ಕೇವಲ ಆದಿ ಯಜ್ಞಕ್ಕೆ ಮಾತ್ರ ಮೀಸಲಲ್ಲ. ಇಂದೂ ಕೂಡಾ ಇದು ಸಾಧ್ಯ. ಒಂದು ಒಳ್ಳೆಯ ಕಾರ್ಯ ಮಾಡಬೇಕು ಎನ್ನುವ ಅಚಲ ಸಂಕಲ್ಪ ಜೀವಕ್ಕೆ ಬಂದರೆ ಆ ಕಾರ್ಯಕ್ಕೆ ಬೇಕಾದ ಎಲ್ಲವನ್ನೂ ಭಗವಂತ ಒದಗಿಸಿ ಕೊಡುತ್ತಾನೆ. ಇದೇ ಈ ಆದಿ ಯಜ್ಞ ನಮಗೆ ಕೊಡುವ ಸಂದೇಶ.

ನಾರಾಯಣೇ ಭಗವತಿ ತದಿದಂ ವಿಶ್ವಮಾಹಿತಮ್ ।
ಗೃಹೀತಮಾಯೋರುಗುಣೇ ಸರ್ಗಾದಾವಗುಣೇ ಸ್ವತಃ ॥೩೦॥

ಸೃಷ್ಟಿಕರ್ತ ಯಾರು ಮತ್ತು ಈ ಸೃಷ್ಟಿ ಹೇಗೆ ನಿರ್ಮಾಣವಾಯಿತು ಎಂದು ನಾರದನಿಗೆ ವಿವರಿಸುತ್ತಿರುವ ಚತುರ್ಮುಖ ಮುಂದುವರಿದು ಹೇಳುತ್ತಾನೆ: "ಇಡೀ ವಿಶ್ವ, ಸಮಸ್ತ ಜೀವಜಾತ, ಜಡಪ್ರಪಂಚ ಎಲ್ಲವೂ ಭಗವಂತನಲ್ಲೇ ಇವೆ" ಎಂದು. ಚತುರ್ಮುಖ ಬ್ರಹ್ಮ, ಸಮಸ್ತ ದೇವತೆಗಳು, ಋಷಿಗಳು, ಎಲ್ಲರೂ ಭಗವಂತನಲ್ಲಿ ವಿಶ್ವವನ್ನು ಕಂಡು ಆರಾಧನೆ ಮಾಡಿದರು. ಈ ರೀತಿ ಭಗವಂತನಲ್ಲಿ ಎಲ್ಲವನ್ನೂ ಕಾಣುವುದು ಕೇವಲ ಸೃಷ್ಟಿಯ ಆದಿಗಷ್ಟೇ ಮೀಸಲಲ್ಲಾ. ಇದು ಇಂದಿಗೂ ಎಂದೆಂದಿಗೂ ಸತ್ಯ.

ಭಗವಂತ ಸ್ವಂತ ಇಚ್ಛೆಯಿಂದ ಪ್ರಕೃತಿಯ ಸತ್ವ-ರಜಸ್ಸು-ತಮಸ್ಸನ್ನು ಬಳಸಿ ಮೂರು ವಿಧವಾದ ಕ್ರಿಯೆ ಮಾಡಿಸುತ್ತಿದ್ದಾನೆ. ಆದರೆ ಆತನಿಗೆ ಈ ತ್ರಿಗುಣದ ಸ್ಪರ್ಶವೇ ಇಲ್ಲ. "ಸೃಷ್ಟಿಯ ಆದಿಯಲ್ಲೇ ಭಗವಂತ ಇಂಥ ಲೀಲೆ ಮಾಡಿ ತೋರಿದ" ಎನ್ನುತ್ತಾನೆ ಚತುರ್ಮುಖ.

**ಸೃಜಾಮಿ ತನ್ನಿಯುಕ್ತೋSಹಂ ಹರೋ ಹರತಿ ತದ್ವಶಃ ।**
**ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃಕ್ ॥೩೦॥**

ಚತುರ್ಮುಖನಿಂದಲೇ ಸೃಷ್ಟಿ ನಡೆಯುತ್ತದೆ ಎನ್ನುವಂತೆ ಪ್ರಶ್ನಿಸಿದ್ದ ನಾರದರಿಗೆ ಚತುರ್ಮುಖ ಉತ್ತರಿಸುತ್ತಾ ಹೇಳುತ್ತಾನೆ: "ನಾನು ಭಗವಂತನ ಕೈಯಲ್ಲಿನ ಒಂದು ಸಾಧನ(Instrument). ನನ್ನೊಳಗೆ ಕುಳಿತು ಭಗವಂತ ನನ್ನನ್ನು ಪ್ರೇರೇಪಿಸಿ ಸೃಷ್ಟಿ ಮಾಡುತ್ತಾನೆ. ಹೀಗಾಗಿ ನನ್ನ ಮುಖೇನ ಸೃಷ್ಟಿಯಾದಂತೆ ಕಾಣುತ್ತದೆ. ಇಲ್ಲಿ ನಾನು ಭಗವಂತನ ಆಜ್ಞಾಪಾಲಕ. ನಾನು ಸ್ವತಂತ್ರ ಸೃಷ್ಟಾರ ಅಲ್ಲ. ಇದೇ ರೀತಿ ಭಗವಂತ ಶಿವನೊಳಗೆ ಕುಳಿತು ಸಂಹಾರ ಮಾಡುತ್ತಾನೆ" ಎಂದು. ಸೃಷ್ಟಿ-ಸಂಹಾರವನ್ನು ಬ್ರಹ್ಮ-ಶಿವನೊಳಗೆ ನಿಂತು ಮಾಡಿಸುವ ಭಗವಂತ ಹುಟ್ಟು-ಸಾವಿನ ನಡುವಿನ ಪಾಲನೆಯನ್ನು ಮಾತ್ರ ತಾನೇ ನೇರವಾಗಿ ಮಾಡುತ್ತಾನೆ. ರಜಸ್ಸನ್ನು ಚತುರ್ಮುಖನಲ್ಲಿ ತುಂಬಿ ಆತನಲ್ಲಿ ಸೃಷ್ಟಿ ಕಾರ್ಯ ಹಾಗೂ ತಮಸ್ಸನ್ನು ಶಿವನಲ್ಲಿ ತುಂಬಿ ಆತನಿಂದ ಸಂಹಾರ ಕಾರ್ಯ ಮಾಡಿಸುವ ಭಗವಂತ, ಸತ್ತ್ವವನ್ನು ಬಳಸಿ, ಅದರಿಂದ ಪ್ರಭಾವಿತನಾಗದೇ ತಾನೇ ಸ್ವಯಂ ಪಾಲನೆ ಮಾಡುತ್ತಾನೆ.

**ಇತಿ ತೇSಭಿಹಿತಂ ತಾತ ಯಥೇದಮನುಪೃಚ್ಛಸಿ ।**
**ನಾನ್ಯದ್ ಭಗವತಃ ಕಿಂಚಿದ್ ಭಾವ್ಯಂ ಸದಸದಾತ್ಮಕಮ್ ॥೩೨॥**

"ನೀನು ಕೇಳಿದ್ದನ್ನೆಲ್ಲವನ್ನೂ ಹೇಳಿದೆ. 'ಚತುರ್ಮುಖನೇ ಸೃಷ್ಟಿ ಮಾಡುತ್ತಾನೆ ಎಂದು ನಾನು ತಿಳಿದಿದ್ದೇನೆ' ಎಂದು ನೀನು ಹೇಳಿದೆಯಲ್ಲಾ, ಆದರೆ ನಾನು ಏನನ್ನೂ ಸ್ವತಂತ್ರವಾಗಿ ಮಾಡುವುದಿಲ್ಲ. ಆ ಭಗವಂತ ನನ್ನನ್ನು ಸಾಧನವಾಗಿ ಬಳಸಿ ಏನನ್ನು ಮಾಡಿಸುತ್ತಾನೋ ಅದನ್ನಷ್ಟೇ ನಾನು ಮಾಡುತ್ತೇನೆ. ಅದೇ ರೀತಿ ಶಿವ ಕೂಡಾ. ಇದು ಸೃಷ್ಟಿ ರಹಸ್ಯ. ಹೀಗಾಗಿ ಸದಸದಾತ್ಮಕವಾದ ಈ ಪ್ರಪಂಚದಲ್ಲಿ ನಾವು ಚಿಂತಿಸಬೇಕಾದುದು ಎಲ್ಲವನ್ನೂ ನಿಯಂತ್ರಿಸುವ ಆ ಭಗವಂತನನ್ನೇ ಹೊರತು ಬೇರೇನನ್ನೂ ಅಲ್ಲ. ಭಗವಂತನನ್ನು ಬಿಟ್ಟು ಸ್ವತಂತ್ರವಾಗಿ ಯಾವ ದೇವತೆಗಳಾಗಲೀ, ಜೀವಜಾತಗಳಾಗಲೀ ಇಲ್ಲ. ಈ ಪ್ರಪಂಚದಲ್ಲಿನ ಎಲ್ಲವೂ ಭಗವಂತನಿಂದಲೇ ಬಂದವುಗಳು. ಅದನ್ನು ಅವನಿಗೇ ಅರ್ಪಿಸಿ ಅವನನ್ನು ನಾವು ಪೂಜಿಸಬೇಕು" ಎಂದು ಚತುರ್ಮುಖ ನಾರದರಿಗೆ ವಿವರಿಸುತ್ತಾನೆ.

ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಇನ್ಯಾರೋ ಹೊಣೆಗಾರರಲ್ಲ. ಎಲ್ಲವುದರ ಹಿಂದೆ ಆ ಭಗವಂತನಿದ್ದಾನೆ. ಪ್ರಪಂಚದಲ್ಲಿರುವ ಎಲ್ಲವೂ ಅವನಲ್ಲೇ ಇರುವಂತಹದ್ದು. ಆದ್ದರಿಂದ ನಾವು ಹೊರಗಿನಿಂದ ಆತನಿಗೆ ಕೊಡುವಂತಹದ್ದು

ಏನೂ ಇಲ್ಲ. "ನೀನು ನೀಡಿರುವುದನ್ನು ನಿನಗೆ ಅರ್ಪಿಸಿದ್ದೇನೆ. ನೀನು ನನ್ನನ್ನು ಉದ್ಧರಿಸು" ಎಂದು ಭಗವಂತನಿಗೆ ನಮ್ಮ ಇಡೀ ಬದುಕನ್ನು ಅರ್ಪಿಸಿಕೊಳ್ಳುವುದೇ ಒಂದು ಮಹಾಯಜ್ಞ. ಇದೇ ಸೃಷ್ಟಿಯ ಆದಿಯಿಂದ ಅಂತ್ಯದ ತನಕ ನಿರಂತರ ನಡೆಯಬೇಕಾದ ಮಹಾಪೂಜೆ. ಇದು ದ್ರವ್ಯಗಳಿಂದಲೇ ಮಾಡಬೇಕಾಗಿರುವ ಯಜ್ಞವಲ್ಲ. ಇದೊಂದು ಮಾನಸಪೂಜೆ. ಹಸುವಿಗೆ ತಿನ್ನಲು ಚಿಗುರನ್ನು ನೀಡುವ ವಸಂತಕಾಲವೇ ನಿನಗೆ ತುಪ್ಪ; ಬೇಸಿಗೆಯಲ್ಲಿ ಒಣಗುವ ಮರಗಳೇ ನಿನ್ನ ಯಜ್ಞದ ಕಟ್ಟಿಗೆ; ಶರತ್ಕಾಲದಲ್ಲಿ ಸಂಗ್ರಹಿಸುವ ಹೊಸ ದಾನ್ಯಗಳೇ ನಿನಗೆ ಹವಿಸ್ಸು; ಎಲ್ಲಾ ಕಾಲದ ಸಂಪತ್ತೂ ನಿನ್ನದೇ ಮತ್ತು ಅದು ನಿನಗೆ ಅರ್ಪಿತ ಎಂದು ಸಮಸ್ತ ವೇದಸಾರವಾದ ಪುರುಷಸೂಕ್ತದ ಅನುಸಂಧಾನದೊಂದಿಗೆ ನಾವು ಅಂದಿಗೂ ಇಂದಿಗೂ ಎಂದೆಂದಿಗೂ ಮಾಡಬೇಕಾದ ನಿತ್ಯಯಜ್ಞವಿದು.

## ಸೃಷ್ಟಿಕರ್ತ ಕಂಡ ಸೃಷ್ಟಿಕರ್ತ

**ನ ಭಾರತೀ ಮೇSಙ್ಗ ಮೃಷೋಪಲಕ್ಷ್ಯತೇ ನ ಕರ್ಹಿಚಿನ್ಮೇ ಮನಸೋ ಮೃಷಾ ಗತಿಃ ।**
**ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ ॥೩೩॥**

ನಾರದರಿಗೆ ಸೃಷ್ಟಿ ರಹಸ್ಯವನ್ನು ವಿವರಿಸುತ್ತಿರುವ ಚತುರ್ಮುಖ ಇಲ್ಲಿ ಒಂದು ರೋಚಕವಾದ ಮಾತನ್ನಾಡುತ್ತಾನೆ: "ನಾನೆಂದೂ ಹುಸಿ ನುಡಿಯುವುದಿಲ್ಲ ಮತ್ತು ನನ್ನ ನುಡಿ ಎಂದೂ ಹುಸಿ ಆಗುವುದಿಲ್ಲ" ಎನ್ನುತ್ತಾನೆ ಚತುರ್ಮುಖ. ಸಾಮಾನ್ಯವಾಗಿ ನಾವು ಹಿಂದೆ ನಡೆದದ್ದನ್ನು ಕಷ್ಟಪಟ್ಟು ನಮ್ಮ ತಿಳುವಳಿಕೆಯ ಮಟ್ಟದಲ್ಲಿ ಸತ್ಯ ನುಡಿಯಬಹುದು. ಆದರೆ ಮುಂದಿನದ್ದನ್ನು ಸತ್ಯವಾಗಿಸುವುದು ನಮ್ಮ ಕೈಯಲ್ಲಿರುವುದಿಲ್ಲ. ಉದಾಹರಣೆಗೆ ನಾವು ಒಬ್ಬರಿಗೆ "ಮುಂದೆ ಎಲ್ಲವೂ ಒಳ್ಳೆಯದಾಗುತ್ತದೆ" ಎನ್ನುತ್ತೇವೆ. ಆದರೆ ಅಲ್ಲಿ ಒಳ್ಳೆಯದಾಗದೇ ಕೆಟ್ಟದ್ದೂ ಆಗುವ ಸಾಧ್ಯತೆಗಳಿವೆ. ಆದರೆ ಚತುರ್ಮುಖನ ಮಾತು ಹಾಗಲ್ಲ. ಹಿಂದೆ ನಡೆದಿರುವುದಿರಲೀ ಅಥವಾ ಮುಂದಿನ ಭವಿಷ್ಯವಿರಲೀ. ಆತನ ಮಾತೆಂದೂ ಹುಸಿಯಾಗದು. ಸಾಮಾನ್ಯ ಮನುಷ್ಯರು ವಿಷಯಗಳಿಗೆ ಬೇಕಾದ ಶಬ್ದಗಳನ್ನು ಹುಡುಕಿ ಮಾತನಾಡುತ್ತಾರೆ. ಆದರೆ ಜ್ಞಾನಿಗಳು ಮಾತನಾಡಿದ್ದಕ್ಕೆ ಸರಿಯಾಗಿ ಅರ್ಥ ಬಂದು ಕೂಡುತ್ತದೆ. ಅವರು ಏನು ನುಡಿಯುತ್ತಾರೋ ಅದೇ ನಡೆಯುತ್ತದೆ. ಉತ್ತರ ರಾಮಚರಿತದಲ್ಲಿ ಭವಭೂತಿ ಇದೇ ಮಾತನ್ನು ಹೇಳುವುದನ್ನು ನಾವು ಕಾಣುತ್ತೇವೆ: ***ಲೌಕಿಕಾನಾಂ ಹಿ ಸಾಧೂನಾಂ ಅರ್ಥಂ ವಾಕ್ ಅನುವರ್ತತೇ । ಋಷೀನಾಂ ಪುನರಾದ್ಯಾನಾಂ ವಾಚಂ ಅರ್ಥೋSನುಧಾವತಿ ॥***

"ಕೇವಲ ಮಾತಷ್ಟೇ ಅಲ್ಲ, ನನ್ನ ಮನಸ್ಸೂ ಕೂಡಾ ಎಂದೂ ಅಲ್ಲದ್ದನ್ನು, ಇಲ್ಲದ್ದನ್ನು ಮತ್ತು ಸಲ್ಲದ್ದನ್ನು ಯೋಚಿಸುವುದಿಲ್ಲ; ಇಂದ್ರಿಯಗಳು ಎಂದೆಂದಿಗೂ ತಪ್ಪುದಾರಿಯಲ್ಲಿ ಸಾಗುವುದಿಲ್ಲ" ಎನ್ನುತ್ತಾನೆ ಚತುರ್ಮುಖ. ಎಲ್ಲಕ್ಕೂ ಮುಖ್ಯವಾದುದು ಮನಸ್ಸಿನ ನಿಯಂತ್ರಣ ಮತ್ತು ಶುದ್ಧತೆ. ನಮ್ಮ ಇಂದ್ರಿಯಗಳು ಕುದುರೆಗಳಿದ್ದಂತೆ ಹಾಗೂ ನಮ್ಮ ಮನಸ್ಸು ಅದರ ಕಡಿವಾಣವಿದ್ದಂತೆ. ಮನಸ್ಸು ನಮ್ಮ ನಿಯಂತ್ರಣದಲ್ಲಿದ್ದಾಗ ಇಂದ್ರಿಯಗಳು ದಾರಿತಪ್ಪುವ ಪ್ರಶ್ನೆಯೇ ಇಲ್ಲ. ಒಟ್ಟಿನಲ್ಲಿ "ನನ್ನ ಮನಸ್ಸು ಮತ್ತು ಇಂದ್ರಿಯಗಳು ತಪ್ಪು ದಾರಿಯಲ್ಲಿ ಸಾಗುವುದಿಲ್ಲ, ಬಾಯಿ ತಪ್ಪನ್ನು ನುಡಿಯುವುದಿಲ್ಲ, ನಾನು ನುಡಿದದ್ದು ಸುಳ್ಳಾಗುವುದಿಲ್ಲ. ನಾನು ಕಾಯೇನ-ವಾಚಾ-ಮನಸಾ ಶುದ್ಧ ಮತ್ತು ಸತ್ಯ" ಎಂದಿದ್ದಾನೆ ಚತುರ್ಮುಖ.

ಚತುರ್ಮುಖನ ಈ ಮೇಲಿನ ಮಾತುಗಳು ಆತ ಹೆಗ್ಗಳಿಕೆಯಿಂದ ಆಡಿದ ಮಾತುಗಳಲ್ಲ. ತಾನು ಏಕೆ ಹೀಗಿದ್ದೇನೆ ಎನ್ನುವುದನ್ನೂ ಆತ ಇಲ್ಲಿ ವಿವರಿಸಿದ್ದಾನೆ. ಚತುರ್ಮುಖ ಹೇಳುತ್ತಾನೆ: "ಇವೆಲ್ಲವುದಕ್ಕೂ ಕಾರಣ ನನ್ನೊಳಗೆ

ತುಂಬಿರುವ ಭಗವಂತ. ನಾನು ನನ್ನ ಹೃದಯದಲ್ಲಿ ತುಂಬಿರುವ ಹರಿಯನ್ನು ಸದಾ ಉತ್ಕಂಠ್ಯದಿಂದ ಚಿಂತನೆ ಮಾಡುತ್ತಿರುತ್ತೇನೆ" ಎಂದು. ಸದಾ ಭಕ್ತಿಯಿಂದ ಭಗವದ್ ಚಿಂತನೆ ಮಾಡುವವನಿಗೆ ಕೆಟ್ಟದ್ದನ್ನು ಯೋಚಿಸಲು ಸಾಧ್ಯವಿಲ್ಲ, ಕೆಟ್ಟದ್ದನ್ನು ಆಡಲು ಸಾಧ್ಯವಿಲ್ಲ. ಭಗವಂತನನ್ನೇ ಸರ್ವಸ್ವವಾಗಿರಿಸಿಕೊಂಡಿರುವ ವ್ಯಕ್ತಿ ಆಡುವ ಮಾತು ಸುಳ್ಳಾಗದು. "ನಾನು ನಿರಂತರ ಭಗವಂತನನ್ನು ನೋಡುತ್ತಾ ಆರಾಧಿಸುತ್ತಿರುತ್ತೇನೆ. ಆತ ನನ್ನಲ್ಲೂ ತುಂಬಿದ್ದಾನೆ, ಸರ್ವಸಾಕ್ಷಿಯಾಗಿ ಎಲ್ಲೆಡೆ ತುಂಬಿ ಎಲ್ಲವನ್ನೂ ನೋಡುತ್ತಿದ್ದಾನೆ ಎನ್ನುವ ಅರಿವು ನನ್ನಲ್ಲಿದೆ" ಎಂದಿದ್ದಾನೆ ಚತುರ್ಮುಖ. ಇದು ಬಹಳ ಮುಖ್ಯವಾದ ಮಾತು. ***ಅನನ್ಯಯೋಗೇನ ಭಕ್ತಿಃ ಅವ್ಯಭಿಚಾರಿಣೀ*** ಎಂದು ಶ್ರೀಕೃಷ್ಣ ಗೀತೆಯಲ್ಲಿ ಹೇಳುವಂತೆ, ಅನನ್ಯವಾದ ಭಗವದ್ಭಕ್ತಿ ಇಲ್ಲದೆ ಪೂರ್ಣ ಪ್ರಾಮಾಣಿಕತೆ ಸಾಧ್ಯವಿಲ್ಲ. ಭಗವಂತ ನನ್ನಲ್ಲೂ ತುಂಬಿದ್ದಾನೆ ಮತ್ತು ಎಲ್ಲೆಲ್ಲೂ ತುಂಬಿದ್ದಾನೆ ಎನ್ನುವ ಅರಿವು ಗಟ್ಟಿಗೊಂಡಾಗ ನಿಜವಾದ ಪ್ರಾಮಾಣಿಕತೆಯ ಅರ್ಥ ನಮಗಾಗುತ್ತದೆ. ಭಗವದ್ ಪ್ರಜ್ಞೆಯಿಂದ ಬರುವ ನೈತಿಕತೆಯೊಂದೇ ಸಹಜವಾದ ನೈತಿಕತೆ.

> ನತೋಽಸ್ಮ್ಯಹಂ ತಚ್ಚರಣಂ ಸಮೀಯುಷಾಂ ಭವಚ್ಛಿದಂ ಸ್ವಸ್ತ್ಯಯನಂ ಸುಮಂಗಲಮ್ ।
> ಯಃ ಸ್ವಾತ್ಮಮಾಯಾವಿಭವಂ ಸ್ವಯಂ ಗತೋ ನಾಹಂ ನಭಸ್ವಾಂಸ್ತಮಥಾಪರೇ ಕುತಃ ॥೩೫॥

"ಭಗವಂತನಿಗೆ ನಮಸ್ಕಾರ" ಎಂದಿದ್ದಾನೆ ಚತುರ್ಮುಖ. 'ನಮಸ್ಕಾರ' ಎನ್ನುವ ಪದಕ್ಕೆ ಸಂಸ್ಕೃತದಲ್ಲಿ ವಿಶೇಷ ಅರ್ಥವಿದೆ. ನಮಃ ಎನ್ನುವ ಪದವೂ ಕೂಡಾ ಈ ಅರ್ಥವನ್ನೇ ಕೊಡುತ್ತದೆ. ನಮ್ಮಲ್ಲಿ ದಾನ ಮಾಡುವಾಗ ***ತುಭ್ಯಮಹಮ್ ಸಂಪ್ರತತೆ ನ ಮಮ ನ ಮಮ*** ಎಂದು ಹೇಳುತ್ತಾರೆ. ಇಲ್ಲಿ '***ನ ಮಮ***' ಎನ್ನುವ ಪದ " ನಾನು ಕೊಡುತ್ತಿರುವ ಈ ವಸ್ತು ಕೊಡುವ ಮೊದಲೂ ನನ್ನದಲ್ಲ, ಕೊಟ್ಟ ಮೇಲೂ ನನ್ನದಲ್ಲ, ಈ ವಸ್ತುವಿನ ಮೇಲೆ ನಾನು ಯಾವ ಹಕ್ಕನ್ನೂ ಸಾಧಿಸುವುದಿಲ್ಲ" ಎನ್ನುವ ಅರ್ಥವನ್ನು ಕೊಡುತ್ತದೆ. ಇದೇ ಅರ್ಥದಲ್ಲಿ ನಮಸ್ಕಾರ ಪದವಿದೆ. 'ನಮಸ್ಕಾರ' ಎಂದರೆ "ನನ್ನ ಸರ್ವಸ್ವವೂ ನಿನ್ನದು" ಎಂದರ್ಥ. ಇಲ್ಲಿ ಜಗತ್ತಿನ ಸೃಷ್ಟಿಕರ್ತನಾದ ಚತುರ್ಮುಖ "ನನ್ನದು ಎನ್ನುವುದು ಯಾವುದೂ ಇಲ್ಲಾ, ಎಲ್ಲವೂ ಆ ಭಗವಂತನ ವ್ಯಾಪಾರ, ನಾನು ಕೇವಲ ಆತನ ಕೈಯ ಸಲಕರಣೆ" ಎಂದು ತನ್ನನ್ನು ತಾನು ಭಗವಂತನಿಗೆ ಅರ್ಪಿಸಿಕೊಳ್ಳುತ್ತಿರುವುದನ್ನು ಕಾಣುತ್ತೇವೆ. ಇದು ಜೀವೊತ್ತಮನಾದ ಚತುರ್ಮುಖನ ಮಾತು. ಅಷ್ಟೊಂದು ದೊಡ್ಡ ಪದವಿ, ಇಡೀ ಪ್ರಪಂಚವನ್ನು ಸೃಷ್ಟಿಸುವ ಶಕ್ತಿ, ಆದರೂ "ತಾನು ಭಗವಂತನ ಕೈಯ ಉಪಕರಣ" ಎನ್ನುವುದನ್ನು ಆತ ಮರೆತಿಲ್ಲ. ತಾನು ದೊಡ್ಡವನಲ್ಲಾ ಎಂದು ತಿಳಿದುಕೊಂಡಿರುವುದರಿಂದಲೇ ಆತ ಅಷ್ಟು ದೊಡ್ಡವನಾಗಿರುವುದು. ಆದರೆ ನಾವು 'ನಾನು-ನನ್ನದು' ಎಂದುಕೊಂಡು ಸಣ್ಣವರಾಗುತ್ತಾ ಹೋಗುತ್ತೇವೆ.

"ಸಂಸಾರದ ಸಮಸ್ತ ದುಃಖವನ್ನು ಪರಿಹರಿಸುವ ಶಕ್ತಿ ಇರುವುದು ಆ ಭಗವಂತನ ಪಾದಗಳಿಗೆ ಮಾತ್ರ. ಅಂತಹ ಪಾದಮೂಲಕ್ಕೆ ನನ್ನನ್ನು ನಾನು ಅರ್ಪಿಸಿಕೊಂಡಿದ್ದೇನೆ" ಎಂದಿದ್ದಾನೆ ಚತುರ್ಮುಖ. ಹೀಗೆ ಹೇಳುವಾಗ ಇಲ್ಲಿ ಚತುರ್ಮುಖ 'ಸ್ವಸ್ತಿ' ಎನ್ನುವ ಪದ ಬಳಸಿದ್ದಾನೆ. ಸ್ವಸ್ತಿ ಎಂದರೆ ಸಮೀಚೀನವಾದ ಬದುಕು ಅಥವಾ ಆನಂದವಾಗಿರುವುದು ಎಂದರ್ಥ. ನಮಗೆ ಇಂತಹ ಆನಂದ ಸಿಗುವುದು ಕೇವಲ ನಿದ್ದೆಯಲ್ಲಿ ಮಾತ್ರ. ಎಚ್ಚರ-ಕನಸಿನಲ್ಲಿ ದುಃಖದ ಸ್ಪರ್ಶವಿಲ್ಲದ ಆನಂದದ ಅನುಭವ ನಮಗಾಗುವುದಿಲ್ಲ. ನಿದ್ದೆಯಲ್ಲಿ ಭಗವಂತನ ಮಡಿಲಲ್ಲಿ ನಾವಿದ್ದೇವೆ ಎನ್ನುವ ಅರಿವಿಲ್ಲದಿದ್ದರೂ, ಆ ಆನಂದವನ್ನು ನಾವು ಅನುಭವಿಸುತ್ತೇವೆ. ಆದರೆ ಚತುರ್ಮುಖ ಬ್ರಹ್ಮ ಭಗವಂತನ ಜೊತೆಗೆ ಸದಾ ಎಚ್ಚರವಾಗಿರುವ ಶಕ್ತಿ. ಹೀಗಿರುವಾಗ ಆತ ಇಲ್ಲಿ ಹೇಳುತ್ತಿರುವ ಆನಂದದ ಮಟ್ಟ ಅದೆಷ್ಟು

ಹಿರಿದಾಗಿರಬೇಕು ಯೋಚಿಸಿ. ಅಂತಹ ಆನಂದವನ್ನು ಪರಿಪೂರ್ಣ ಅನುಭವಿಸುವ ಜೀವ ಆ ಚತುರ್ಮುಖ. ಜೀವನದಲ್ಲಿ ಮಂಗಲ, ಮಾಂಗಲಿಕ, ಶುಭ ಎನ್ನುವುದು ಏನಾದರೂ ಇದ್ದರೆ ಅದು ಭಗವಂತನ ಪಾದಮೂಲದಿಂದ ಬಂದದ್ದು. ಭಗವಂತನ ಪಾದ ಸುಮಂಗಲ. ಅದು ಸುಖದ ನೆಲೆ. ಅದು ಭಯ-ದುಃಖಗಳನ್ನು ತುಂಡರಿಸಿ ಅದರಿಂದ ನಮ್ಮನ್ನು ಬೇರ್ಪಡಿಸುವ ಶಕ್ತಿ. "ಇಂತಹ ಭಗವಂತನಿಗೆ ನನ್ನನ್ನು ನಾನು ಅರ್ಪಿಸಿಕೊಂಡಿದ್ದೇನೆ" ಎಂದಿದ್ದಾನೆ ಚತುರ್ಮುಖ.
ಭಗವಂತನ ಮಹಿಮೆಯ ಬಿತ್ತರ ತಿಳಿದಿರುವುದು ಅವನಿಗೊಬ್ಬನಿಗೇ. ಆತ ಏನು ಎನ್ನುವುದು ಪೂರ್ಣವಾಗಿ ನನಗಾಗಲೀ, ನನ್ನ ಸಮಾನಸ್ಕಂಧನಾದ ಪ್ರಾಣನಿಗಾಗಲೀ ತಿಳಿದಿಲ್ಲ. ಹೀಗಿರುವಾಗ ಉಳಿದವರ ಪಾಡೇನು? ಒಟ್ಟಿನಲ್ಲಿ ಆತನ ಮಹಿಮೆಯ ಹರವು ಯಾರಿಗೂ ಪೂರ್ಣವಾಗಿ ತಿಳಿದಿಲ್ಲ" ಎಂದಿದ್ದಾನೆ ಚತುರ್ಮುಖ.

**ಸ ಏಷ ಆದ್ಯಃ ಪುರುಷಃ ಕಲ್ಪೇಕಲ್ಪೇ ಸೃಜತ್ಯಜಃ ।**
**ಆತ್ಮಾSSತ್ಮನ್ಯಾತ್ಮನಾSSತ್ಮಾನಂ ಸ ಸಂಯಚ್ಛತಿ ಪಾತಿ ಚ ॥೩೮॥**

ಚತುರ್ಮುಖ ಹೇಳುತ್ತಾನೆ: "ಭಗವಂತನ ಬಗೆಗೆ ಸಂಪೂರ್ಣ ತಿಳಿದಿಲ್ಲ, ಆದರೆ ಇಷ್ಟು ಮಾತ್ರ ತಿಳಿದಿದೆ: ಭಗವಂತ ಪ್ರತೀಕಲ್ಪದಲ್ಲೂ ಒಬ್ಬ ಚತುರ್ಮುಖನನ್ನು ಸೃಷ್ಟಿ ಮಾಡುತ್ತಾನೆ. ಆತ ದೇವತೆಗಳನ್ನು ಸೃಷ್ಟಿ ಮಾಡುತ್ತಾನೆ, ಮನುಷ್ಯ-ಪ್ರಾಣಿ-ಪಕ್ಷಿ-ಜಂತುಗಳನ್ನು-ಲೋಕಗಳನ್ನು ಸೃಷ್ಟಿ ಮಾಡುತ್ತಾನೆ. ಹೀಗೆ ಪ್ರತಿ ಕಲ್ಪದಲ್ಲೂ ಒಬ್ಬ ಚತುರ್ಮುಖ ಪದವಿಗೆ ಬರುತ್ತಾನೆ" ಎಂದು. ಚತುರ್ಮುಖನ ಈ ಮಾತಿನಲ್ಲಿ ನಮಗೆ ಸ್ಪಷ್ಟವಾಗಿ ತಿಳಿಯುವುದೇನೆಂದರೆ "ತನ್ನ ಪದವಿ ಶಾಶ್ವತವಲ್ಲ, ಇದು ಕೇವಲ ಒಂದು ಬ್ರಹ್ಮಕಲ್ಪಕ್ಕೆ ಸೀಮಿತ" ಎನ್ನುವ ಸಂಪೂರ್ಣ ಅರಿವು ಚತುರ್ಮುಖನಿಗಿದೆ. ಆದರೆ ಮಾನವರಾದ ನಾವು ಯಾವುದೋ ಒಂದು ಪದವಿ ಸಿಕ್ಕಾಗ ಆ ಪದವಿಗೆ ಅಂಟಿಕೊಂಡು ಅಹಂಕಾರಿಗಳಾಗಿ ಕಾರ್ಯ ನಿರ್ವಹಿಸುತ್ತೇವೆ. ಅಲ್ಲಿ ನಮಗೆ ನಿವೃತ್ತಿ ಭಯಂಕರವಾಗಿ ಕಾಣಲಾರಂಭಿಸುತ್ತದೆ. ಆದರೆ ನಿಜವಾದ ಪ್ರವೃತ್ತಿ ಪ್ರಾರಂಭವಾಗುವುದು ನಿವೃತ್ತಿಯ ನಂತರ. ವೃತ್ತಿ ಕಾಲದಲ್ಲಿ ನಮ್ಮ ಪಾಲಿಗೆ ಬಂದ ಕರ್ತವ್ಯ ಕರ್ಮವನ್ನು ಪ್ರಾಮಾಣಿಕವಾಗಿ ಮಾಡಿ, ನಿವೃತ್ತಿಯ ನಂತರ ಭಗವದ್ ಚಿಂತನೆಯಲ್ಲಿ ನಾವು ಪ್ರವೃತ್ತಿ ಬೆಳೆಸಿಕೊಳ್ಳಬೇಕು. "ನಿವೃತ್ತಿಯಲ್ಲಾದರೂ ನಿನ್ನತ್ತ ಹೊರಳುವ ಅವಕಾಶ ಕೊಟ್ಟೆಯಲ್ಲಾ ಭಗವಂತಾ" ಎಂದು ಯೋಚಿಸಿದರೆ ನಿವೃತ್ತಿ ಎನ್ನುವುದು ಒಂದು ಆನಂದದ ಅನುಭವವಾಗುತ್ತದೆ. ಜೀವನದಲ್ಲಿ ಯಾವುದು ಅನಿವಾರ್ಯವೋ ಅದರ ಒಳ್ಳೆಯತನವನ್ನು ಗ್ರಹಿಸಿ ಆನಂದ ಪಡಬೇಕೇ ವಿನಃ ದುಃಖಪಡುವುದಲ್ಲ.
ಎಲ್ಲರನ್ನೂ ಸೃಷ್ಟಿಸುವ ಭಗವಂತ 'ಅಜಃ'. ಅಂದರೆ ಹುಟ್ಟಿಲ್ಲದವನು. ಆತ ಜಗತ್ತಿನ ಮೊಟ್ಟಮೊದಲ 'ಪುರುಷ'. ಆತ ಯಾರೂ ಇಲ್ಲದೇ ಇರುವಾಗ ಇದ್ದ ಪುರುಷ. ಎಲ್ಲರಿಗೂ ಆದಿಮೂಲನಾಗಿರುವ ಪುರುಷ. ಬ್ರಹ್ಮಾಂಡ-ಪಿಂಡಾಂಡದಲ್ಲಿ ತುಂಬಿ, ಈ ಪುರವನ್ನು(ಬ್ರಹ್ಮಾಂಡ- ಪಿಂಡಾಂಡವನ್ನು) ಸಂಪೂರ್ಣ ತಿಳಿದ ಪುರುಷ.
ಪ್ರತೀ ಕಲ್ಪದಲ್ಲಿ ಭಗವಂತ ತನ್ನನ್ನು ತಾನು ಸೃಷ್ಟಿ ಮಾಡಿಕೊಂಡು ಅನೇಕ ಅವತಾರಗಳಿಂದ, ಅನೇಕ ವಿಭೂತಿರೂಪಗಳಿಂದ ಕಾಣಿಸಿಕೊಳ್ಳುತ್ತಾನೆ. ಭಗವಂತ ತಾನೇ, ತನ್ನ ಅಧಿಷ್ಠಾನದಲ್ಲೇ, ತನ್ನಿಂದಲೇ(ಸ್ವಂತ ಇಚ್ಛೆಯಿಂದ), ತನ್ನನ್ನೇ ತಾನು ಸೃಷ್ಟಿ ಮಾಡಿಕೊಳ್ಳುತ್ತಾನೆ. ಏನೂ ಇಲ್ಲದೇ ಇದ್ದಾಗ ನಾರಾಯಣನಿದ್ದ. ಆತ ಸಮಸ್ತ ಜೀವಾಣುಗಳನ್ನು ತನ್ನ ಉದರದಲ್ಲಿ ಧರಿಸಿ, ಪ್ರಕೃತಿಯ ಸೂಕ್ಷ್ಮಾಣು ಸಮುದ್ರ (ಪ್ರಳಯ-ಸಮುದ್ರ)ದಲ್ಲಿ ಪವಡಿಸಿದ್ದ. ಆತ ಮೊತ್ತಮೊದಲು ಪುರುಷರೂಪದಿಂದ ತನ್ನನ್ನು ತಾನು ಸೃಷ್ಟಿಮಾಡಿಕೊಂಡ. ಭಗವಂತನ ದಾಂಪತ್ಯ ಪ್ರಕೃತಿಮಾತೆ ಶ್ರೀಲಕ್ಷ್ಮಿಯೊಂದಿಗೆ. ಇಂತಹ ಪುರುಷ=ಪ್ರಕೃತಿ ದಾಂಪತ್ಯದಲ್ಲಿ ಹುಟ್ಟಿದವನೇ ಚತುರ್ಮುಖ.

ಚತುರ್ಮುಖನ ನಂತರ ಸರಸ್ವತಿ(ಶ್ರದ್ಧಾ), ಸಮಸ್ತ ದೇವತೆಗಳು, ಜೀವಜಾತಗಳು ಸೃಷ್ಟಿಯಾದವು. ಪ್ರತೀ ಕಲ್ಪದಲ್ಲಿ, ಪ್ರತೀ ಮನ್ವಂತರದಲ್ಲಿ, ಪ್ರತೀ ಯುಗದಲ್ಲಿ ಭಗವಂತ ಅವತರಿಸಿ ಬರುತ್ತಾನೆ. ಅಥವಾ ತನ್ನ ಅಸ್ತಿತ್ವವನ್ನು ಜನರಿಗೆ ತಿಳಿಸುವ ಜ್ಞಾನದ ಸೃಷ್ಟಿ ಮಾಡುತ್ತಾನೆ. ಆಚಾರ್ಯಪುರುಷರನ್ನು ಕಳುಹಿಸಿ ಸತ್ಯದ ಆವಿಷ್ಕಾರ ಮಾಡುತ್ತಾನೆ ಭಗವಂತ.

ವಿಶುದ್ಧಂ ಕೇವಲಂ ಜ್ಞಾನಂ ಪ್ರತ್ಯಕ್ ಸಮ್ಯಗವಸ್ಥಿತಮ್ ।
ಸತ್ಯಂ ಪೂರ್ಣಮನಾದ್ಯಂತಂ ನಿರ್ಗುಣಂ ನಿತ್ಯಮದ್ವಯಮ್ ॥೩೯॥

ಋತಂ ವಿಂದಂತಿ ಮುನಯಃ ಪ್ರಶಾಂತಾತ್ಮೇಂದ್ರಿಯಾಶಯಾಃ ।
ಯದಾ ತದೈವಾಸತ್ತರ್ಕೈಸ್ತಿರೋಧೀಯೇತ ವಿಪ್ಲುತಮ್ ॥೪೦॥

ಇಲ್ಲಿ ಚತುರ್ಮುಖ ತಾನು ನಿರಂತರ ಹೃದಯದಲ್ಲಿ ಕಾಣುವ ಭಗವಂತನ ವರ್ಣನೆ ಮಾಡುವುದನ್ನು ಕಾಣುತ್ತೇವೆ. ಭಗವಂತ 'ವಿಶುದ್ಧಃ' ಅಂದರೆ ಅವನಿಗೆ ದೋಷದ ಸ್ಪರ್ಶವಿಲ್ಲ. ಆತ ಅತ್ಯಂತ ಪವಿತ್ರ. ***"ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ"*** ಭಗವಂತನೊಬ್ಬನೇ ಪೂರ್ಣ ಶುದ್ಧ, ಪವಿತ್ರ. ಆತನನ್ನು ಬಿಟ್ಟು ಅಂತಹದ್ದೇ ಇನ್ನೊಂದಿಲ್ಲ. ಏಕೆಂದರೆ: ಆತ ಜ್ಞಾನಸ್ವರೂಪ. ಎಲ್ಲಾ ಅಶುದ್ಧತೆಯನ್ನೂ ಸುಡುವ ಜ್ಞಾನಶಕ್ತಿ ಆ ಭಗವಂತ. ಅಂತಹ ಭಗವಂತನನ್ನು ನಾವು ಎಲ್ಲೋ ಹುಡುಕುವ ಅಗತ್ಯವಿಲ್ಲ. ಏಕೆಂದರೆ ಆತ ನಮ್ಮ ಅಂತರ್ಯಾಮಿಯಾಗಿ ನಮ್ಮೊಳಗೇ ತುಂಬಿದ್ದಾನೆ.

ಭಗವಂತ ಎಲ್ಲೇ ಇದ್ದರೂ ಕೂಡಾ ದೋಷದ ಸ್ಪರ್ಶ ಅವನಿಗಿಲ್ಲ. ಎಲ್ಲಾ ಮಂಗಲದ ನೆಲೆ, ಜ್ಞಾನಾನಂದ ಸ್ವರೂಪ ಆ ಭಗವಂತ. ಮುಕ್ತರು-ಅಮುಕ್ತರು, ಆನಂದದಲ್ಲಿರುವವರು, ದುಃಖಿಗಳು, ಹೀಗೆ ಎಲ್ಲರಿಗೂ ನೆಲೆ ಆ ಭಗವಂತ. ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಕ್ಕೆ ಕಾರಣ ಆ ಭಗವಂತ. ಆತನೊಬ್ಬನೇ ಈ ಪ್ರಪಂಚದಲ್ಲಿ ಪೂರ್ಣ, ಉಳಿದದ್ದೆಲ್ಲವೂ ಅಪೂರ್ಣ.

ಭಗವಂತನಿಗೆ ಆದಿ-ಅಂತ್ಯ ಎನ್ನುವುದಿಲ್ಲ. ಆದಿ-ತುದಿ ಎನ್ನುವುದು, ಹುಟ್ಟು-ಸಾವು ಎನ್ನುವುದು ಗುಣತ್ರಯಗಳ ಸ್ಪರ್ಶದಿಂದ ಬರುವಂತಹದ್ದು. ಜೀವ ಅನಾದ್ಯಂತವಾದರೂ ಕೂಡಾ, ಆತನಿಗೆ ತ್ರೈಗುಣ್ಯದ ಸ್ಪರ್ಶವಿರುವ ದೇಹ ಬಂದು ಹೋಗುತ್ತಿರುತ್ತದೆ. ಆದರೆ ಭಗವಂತನಿಗೆ ಎಂದೂ ತ್ರೈಗುಣ್ಯಗಳ ಸ್ಪರ್ಶವಿಲ್ಲ. ಇಂತಹ ಭಗವಂತನಿಗೆ ಸಾಟಿಯಾದ ಇನ್ನೊಂದು ಶಕ್ತಿ ಇಂದೂ ಇಲ್ಲಾ, ಇನ್ನೆಂದಿಗೂ ಇಲ್ಲ. ಭಗವಂತ ತನಗೆ ಮಾತ್ರ ತಾನು ಪೂರ್ಣ ತಿಳಿದವನು. ಆತನನ್ನು ಇತರರು ಎಂದೆಂದಿಗೂ ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಭಗವಂತನ ಕುರಿತು ಈ ಎಲ್ಲಾ ವಿಷಯವನ್ನು ಅರಿತವನು ಆತನನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲ.

ನಮ್ಮ ದೇಹ-ಮಾತು-ಮನಸ್ಸು ಎಲ್ಲವೂ ಪ್ರಶಾಂತವಾಗಿ ಭಗವಂತನಲ್ಲಿ ನೆಲೆಗೊಳ್ಳಬೇಕು. ದೇಹ ಭಗವಂತನ ಆರಾಧನೆಗೋಸ್ಕರ, ಇಂದ್ರಿಯಗಳು ಭಗವಂತನ ಅರಿವಿಗೋಸ್ಕರ, ಮನಸ್ಸು ಭಗವಂತನ ಚಿಂತನೆಗೋಸ್ಕರ. ಹೀಗೆ ಸರ್ವಸ್ವವೂ ಭಗವನ್ಮಯವಾದಾಗ ಸತ್ಯದ ಸಾಕ್ಷಾತ್ಕಾರವಾಗುತ್ತದೆ. ಆಗ ಮನಸ್ಸಿನಲ್ಲಿನ ಗೊಂದಲ ಪರಿಹಾರವಾಗುತ್ತದೆ. ಅರ್ಥಶೂನ್ಯವಾದ ಪ್ರಾಪಂಚಿಕ ತರ್ಕಗಳಿಂದ ಗೊಂದಲಕ್ಕೊಳಗಾದ ಮನಸ್ಸು ಸ್ವಚ್ಛವಾಗುತ್ತದೆ. ಭಗವಂತನ ಅರಿವು ಬರಲು, ಎಲ್ಲಾ ಗೊಂದಲಗಳಿಂದ ಪಾರಾಗಲು ನಾವು ಭಗವಂತನಲ್ಲಿ ಶರಣಾಗಬೇಕು. ಸತ್ಯದ ಅರಿವು ಕೊಡು ಎಂದು ಆತನನ್ನು ಪ್ರಾರ್ಥಿಸಬೇಕು. ಸತ್ಯವನ್ನು ನಾವೇ ಆವಿಷ್ಕಾರ ಮಾಡುತ್ತೇವೆ ಎಂದರೆ ಅದು ಸಾಧ್ಯವಿಲ್ಲ. ಅದನ್ನು ಭಗವಂತ ನಮ್ಮ ತಲೆಯಲ್ಲಿ ಹೊಳೆಸಬೇಕು(**Intuitive flash**, ನ್ಯೂಟನ್ ನಿಗೆ ಸೇಬುಹಣ್ಣು

ಬಿದ್ದಾಗ ವಿಷಯ ಹೊಳೆದಂತೆ, ಆರ್ಕೀಮೆಡಿಸ್ ನಿಗೆ ನೀರಿನತೊಟ್ಟಿಯಲ್ಲಿ ವಿಷಯ ಹೊಳೆದಂತೆ). ಹೀಗೆ ಭಗವಂತನಿಂದ ಬರುವ ಅರಿವು ನಮ್ಮನ್ನು ಎಲ್ಲಾ ಗೊಂದಲಗಳಿಂದ ಪಾರು ಮಾಡಬಲ್ಲದು.

ಆದ್ಯೋSವತಾರಃ ಪುರುಷಃ ಪರಸ್ಯ ಕಾಲಃ ಸ್ವಭಾವಃ ಸದಸನ್ಮನಶ್ಚ ।
ದ್ರವ್ಯಂ ವಿಕಾರೋ ಗುಣ ಇಂದ್ರಿಯಾಣಿ ವಿರಾಟ್ ಸ್ವರಾಟ್ ಸ್ಥಾಸ್ನು ಚರಿಷ್ಣು ಭೂಮ್ನಃ ॥೪೧॥

ಅಹಂ ಭವೋ ಯಜ್ಞ ಇಮೇ ಪ್ರಜೇಶಾ ದಕ್ಷಾದಯೋ ಯೇ ಭವದಾದಯಶ್ಚ ।
ಸ್ವರ್ಲೋಕಪಾಲಾಃ ಖಗಲೋಕಪಾಲಾ ನೃಲೋಕಪಾಲಾಸ್ತಲಲೋಕಪಾಲಾಃ ॥೪೨॥

ಗಂಧರ್ವವಿದ್ಯಾಧರಚಾರಣೇಶಾ ಯೇ ಯಕ್ಷರಕ್ಷೋರಗನಾಗನಾಥಾಃ ।
ಯೇ ವಾ ಋಷೀಣಾಂ ಋಷಭಾಃ ಪಿತೃಣಾಂ ದೈತ್ಯೇಂದ್ರಸಿದ್ಧೇಶ್ವರದಾನವೇಂದ್ರಾಃ ॥೪೩॥

ಅನ್ಯೇ ಚ ಯೇ ಪ್ರೇತಪಿಶಾಚಭೂತ ಕೂಷ್ಮಾಂಡಯಾದೋಮೃಗಪಶ್ವಧೀಶಾಃ ।
ಯತ್ ಕಿಂ ಚ ಲೋಕೇ ಭಗವನ್ಮಹಸ್ವದೋಜಃಸಹಸ್ವದ್ ಬಲವತ್ ಕ್ಷಮಾವತ್ ।
ಹ್ರೀಶ್ರೀವಿಭೂತ್ಯಾತ್ಮವದದ್ಭುತಾರ್ಣಂ ತತ್ ತತ್ವರಂ ರೂಪವದಸ್ವರೂಪಮ್ ॥೪೪॥

ಪ್ರಾಧಾನ್ಯತೋ ಯಾನೃಷಯ ಆಮನಂತಿ ಲೀಲಾವತಾರಾನ್ ಪುರುಷಸ್ಯ ಭೂಮ್ನಃ ।
ಆಪೀಯತಾಂ ಕರ್ಮಕಷಾಯಶೋಷಾನನುಕ್ರಮಿಷ್ಯೇ ತ ಇಮಾನ್ ಸುಪೇಶಲಾನ್ ॥೪೫॥

ಭಗವಂತನಿಗೆ ಮುಖ್ಯವಾಗಿ ಮೂರು ರೂಪಗಳು. ೧. ಸ್ವರೂಪ (ರಾಮ, ಕೃಷ್ಣ, ನರಸಿಂಹ..ಇತ್ಯಾದಿ), ೨. ವಿಭೂತಿ (ಉದಾ: ಅರ್ಜುನನನಲ್ಲಿ ಭಗವಂತ ವಿಶೇಷ ವಿಭೂತಿಯಾಗಿ ನಿಂತಿದ್ದ) ಮತ್ತು ೩. ಅಂತರ್ಯಾಮಿ ರೂಪ. ಭಗವಂತನ ಪುರುಷರೂಪ ಆತನ ಮೊಟ್ಟಮೊದಲ ಸ್ವರೂಪ ಅವತಾರ.

ಭಗವಂತ 'ಕಾಲ'ದಲ್ಲಿ ತುಂಬಿದ್ದಾನೆ. ಕಾಲ ಎನ್ನುವುದು ತುಂಬಾ ವಿಚಿತ್ರವಾದುದು. ಯಾವುದ್ಯಾವುದೋ ಕಾಲದಲ್ಲಿ ಏನೇನೋ ನಡೆಯುತ್ತದೆ. ಯಾವ ಕಾಲದಲ್ಲಿ ಏನೇನು ನಡೆಯಬೇಕೋ ಅದು ಆ ಕಾಲದಲ್ಲಿ ನಡೆದೇ ನಡೆಯುತ್ತದೆ. ಹೀಗೆ ಕಾಲ ಎನ್ನುವುದು ಜಗತ್ತಿನ ಮೂಲಶಕ್ತಿಯಾಗಿ ನಿಂತುಬಿಟ್ಟಿದೆ. ಭಗವಂತ ಕಾಲನಿಯಾಮಕನಾಗಿ ಕಾಲದೊಳಗೆ ನಿಂತಿದ್ದಾನೆ. ಇನ್ನು ಸ್ವಭಾವ. ಪ್ರತಿಯೊಂದು ವಸ್ತುವಿಗೂ ಅದರದ್ದೇ ಆದ ಸ್ವಭಾವವಿದೆ. ಆ ಸ್ವಭಾವವನ್ನು ಬದಲಿಸಲು ಯಾರಿಂದಲೂ ಸಾಧ್ಯವಿಲ್ಲ. "ಅಂತಹ ಸ್ವಭಾವದೊಳಗೆ ಸ್ವಭಾವ ನಿಯಾಮಕನಾಗಿ ಭಗವಂತನ ವಿಭೂತಿ ತುಂಬಿದೆ" ಎನ್ನುತ್ತಾನೆ ಚತುರ್ಮುಖ.

"ಸತ್, ಅಸತ್ ಮತ್ತು ಮನಸ್ಸಿನಲ್ಲಿ ಭಗವಂತನ ವಿಭೂತಿ ತುಂಬಿದೆ" ಎಂದಿದ್ದಾನೆ ಚತುರ್ಮುಖ. ಉಪನಿಷತ್ತಿನಲ್ಲಿ ಹೇಳುವಂತೆ 'ಸತ್' ಎಂದರೆ ಪ್ರಾಣಶಕ್ತಿ ( "ಸದಿತಿ ಪ್ರಾಣಃ"). ಭಗವಂತ ಪ್ರಾಣತತ್ತ್ವದಲ್ಲಿ ತುಂಬಿ ಇಡೀ ಜಗತ್ತನ್ನು ಉಸಿರಾಡಿಸುವ ಮಹಾಶಕ್ತಿಯಾಗಿ ನಿಂತಿದ್ದಾನೆ. ಅಸತ್ ಎಂದರೆ ಮೂಲಪ್ರಕೃತಿ. ಪ್ರಳಯಕಾಲದಲ್ಲಿ ಜಡಪ್ರಕೃತಿ

ಕಣ್ಣಿಗೆ ಕಾಣದ ಪರಮಾಣು ಸಮುದ್ರ ರೂಪದಲ್ಲಿತ್ತು. ಮೂಲಪ್ರಕೃತಿಯಲ್ಲಿ ವಿಭೂತಿಯಾಗಿ ನಿಂತ ಭಗವಂತನಿಂದಾಗಿ ಅದು ಸತ್ತ್ವ-ರಜಸ್ಸು-ತಮೋಗುಣಗಳ ಜೊತೆಗೆ ಕಂಪನಗೊಂಡು ಬ್ರಹ್ಮಾಂಡ ರೂಪದಲ್ಲಿ ಬೆಳೆದು ನಿಂತಿತು.

ಮನಸ್ಸೆನ್ನುವುದು ಒಂದು ಅತ್ಯಂತ ವಿಸ್ಮಯವಾದ ವಸ್ತು. ಅನೇಕಾನೇಕ ವಿಷಯಗಳನ್ನು ಗ್ರಹಿಸಿ ಅದನ್ನು ಹಿಡಿದಿಟ್ಟುಕೊಳ್ಳುವ ಶಕ್ತಿ ಮನಸ್ಸಿಗಿದೆ. ಮಾನವನ ಮೆದುಳಿನಲ್ಲಿ ಸುಮಾರು ಹನ್ನೆರಡು ಬಿಲಿಯನ್ ಜೀವಕೋಶಗಳಿವೆ. ಇವು ಅಷ್ಟೇ ಸಂಖ್ಯೆಯ ವಿಷಯಗಳನ್ನು ಹಿಡಿದಿಟ್ಟುಕೊಳ್ಳಬಲ್ಲವು. ಎಲ್ಲಿಯತನಕ ಎಂದರೆ: ಮುಂದೆ ಏನಾಗುತ್ತದೆ ಎನ್ನುವ ವಿಷಯವನ್ನೂ ಕೂಡಾ ಮನಸ್ಸು ಗ್ರಹಿಸಬಲ್ಲುದು. "ಈ ಶಕ್ತಿ ಮನಸ್ಸಿನಲ್ಲಿ ಭಗವಂತನ ವಿಭೂತಿಯಿಂದಾಗಿ ಅಭಿವ್ಯಕ್ತವಾಗಿದೆ" ಎಂದಿದ್ದಾನೆ ಚತುರ್ಮುಖ.

"ಪಂಚಭೂತಗಳಲ್ಲಿ, ಗುಣತ್ರಯಗಳಲ್ಲಿ, ಇಂದ್ರಿಯಗಳಲ್ಲಿ ಭಗವಂತನ ವಿಭೂತಿ ತುಂಬಿದೆ". ಈ ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಕಾಣುವುದು ಪಂಚಭೂತಗಳ ಅನಂತ ವೈಭವ. ಪಂಚಭೂತಗಳು ಹೀಗೆ ಅನಂತ ವೈವಿಧ್ಯಗಳಿಂದ ರೂಪುಗೊಳ್ಳುವಂತೆ ಅದರಲ್ಲಿ ಶಕ್ತಿಯಾಗಿ ಭಗವಂತನ ವಿಭೂತಿ ಅಡಗಿದೆ. ಈ ಪಂಚಭೂತಗಳು ವಿಕಾರಗೊಂಡು ಬ್ರಹ್ಮಾಂಡ ರಚನೆಯಾಗುವಂತೆ ಮಾಡಿರುವುದು ಆ ವಿಶಿಷ್ಟವಾದ ವಿಭೂತಿ. ಇದೇ ರೀತಿ ಪ್ರತೀ ಇಂದ್ರಿಯಗಳ ಒಳಗೆ ಇಂದ್ರಿಯ ಶಕ್ತಿಯಾಗಿ ಭಗವಂತನ ವಿಭೂತಿ ಅಡಗಿದೆ.

ಸಮಸ್ತ ವೇದಗಳ ನಿಯಾಮಕಶಕ್ತಿಯಾಗಿ ವಿಭೂತಿ ರೂಪದಲ್ಲಿ ಭಗವಂತ ಗರುಡನಲ್ಲಿ ತುಂಬಿದ್ದಾನೆ. ಇಂದ್ರನಲ್ಲಿ ವಿಶಿಷ್ಠ ಶಕ್ತಿಯಾಗಿ ತುಂಬಿರುವ ಭಗವಂತ ಆತನಿಗೆ ದೇವಲೋಕದ ಒಡೆತನವನ್ನು ನೀಡಿದ್ದಾನೆ. ಸ್ಥಿರ ಜಗತ್ತು(ಉದಾ: ಅಶ್ವತ್ಥ, ನೆಲ್ಲಿ, ದರ್ಭೆ ಇತ್ಯಾದಿ ಮರಗಳು) ಚಲಿಸುವ ಜಗತ್ತು(ಉದಾ: ನದಿಗಳು, ಪ್ರಾಣಿ-ಪಕ್ಷಿಗಳು) ಎಲ್ಲದರಲ್ಲೂ ಭಗವಂತ ವಿಭೂತಿಯಾಗಿ ತುಂಬಿದ್ದಾನೆ. "ಇಷ್ಟೇ ಅಲ್ಲ, ನನ್ನಲ್ಲಿ, ಶಿವನಲ್ಲಿ, ಯಜ್ಞಾಭಿಮಾನಿ ಜಯಂತನಲ್ಲಿ, ಲೋಕಪಾಲಕರಲ್ಲಿ, ಪ್ರಜಾಪತಿಗಳಲ್ಲಿ, ಅಪರೋಕ್ಷಜ್ಞಾನಿಗಳಲ್ಲಿ, ಮೂರು ಲೋಕಗಳಲ್ಲಿ, ಹೀಗೆ ಎಲ್ಲೆಡೆ ಭಗವಂತ ವಿಶೇಷ ವಿಭೂತಿಯಾಗಿ ತುಂಬಿದ್ದಾನೆ" ಎಂದಿದ್ದಾನೆ ಚತುರ್ಮುಖ.

ಒಬ್ಬನಲ್ಲಿ ಇನ್ನೊಬ್ಬರಲ್ಲಿಲ್ಲದ ಅಸಾಧಾರಣ ಶಕ್ತಿ ತುಂಬಿದ್ದರೆ ಅದು ಭಗವಂತನ ವಿಶೇಷ ವಿಭೂತಿಯ ಅಭಿವ್ಯಕ್ತಿ. ಉದಾಹರಣೆಗೆ ಭಾಗ್ಯಶಾಲಿ/ಒಳ್ಳೆಯವ್ಯಕ್ತಿ ಎನಿಸುವುದು, ಇನ್ನೊಬ್ಬರನ್ನು ಮಣಿಸುವ ಶಕ್ತಿ, ಇನ್ನೊಬ್ಬರಿಗೆ ಮಣಿಯದ ಶಕ್ತಿ, ಶಾಂತ ಸ್ವಭಾವ (ಧರ್ಮರಾಯನಂತೆ), ತನ್ನ ತಪ್ಪಿನ ಅರಿವಾದಾಗ ಅದಕ್ಕಾಗಿ ನಾಚುವ ಸ್ವಭಾವ, ಸೌಂದರ್ಯ, ಗಟ್ಟಿಮನಸ್ಸು, ಛಲ, ಜ್ಞಾನ, ಬಲ, ಸಂಪತ್ತು, ಎಲ್ಲವೂ ಭಗವಂತನ ವಿಭೂತಿಯ ಅಭಿವ್ಯಕ್ತಿ. ಭಗವಂತ ಎಲ್ಲಾ ಗುಣಗಳ ಹಾಗೂ ವಿಸ್ಮಯಗಳ ನೆಲೆ. ಆತನ ಒಂದೊಂದು ಗುಣಗಳ ಕಿಡಿ ಒಂದೊಂದು ವಸ್ತುವಿನಲ್ಲಿ ಅಭಿವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಹೇಳಬೇಕೆಂದರೆ: ಎಲ್ಲಿ ಮೂಗಿನ ಮೇಲೆ ಬೆರಳನ್ನಿಟ್ಟು ಕಣ್ಣರಳಿಸಿ ನೋಡುವ ವಿಸ್ಮಯವಿದೆಯೋ ಅಲ್ಲಿ ಆ ಶಕ್ತಿಯಾಗಿ ಭಗವಂತ ತುಂಬಿದ್ದಾನೆ ಎಂದು ತಿಳಿಯಬೇಕು. ಆದರೆ ಇದು ಭಗವಂತನ ವಿಶೇಷ ಶಕ್ತಿಯ ಪ್ರತೀಕ(ವಿಭೂತಿ) ಅಷ್ಟೇ ಹೊರತು ಅದೇ ಭಗವಂತನ ಸ್ವರೂಪರೂಪವಲ್ಲ.

ಭಗವಂತನ ವಿಭೂತಿಯನ್ನು ಹೇಳಿ ಮುಗಿಸಲು ಸಾಧ್ಯವಿಲ್ಲ. ಅದು ಅನಂತ. ಆದರೆ ಜ್ಞಾನಿಗಳು ಭಗವಂತನ ಸ್ವರೂಪಾವತಾರಗಳು ಎಂದು ಪರಿಗಣನೆ ಮಾಡಿರುವುವಂತಹ, ಈ ಕಲ್ಪದ ಮುಖ್ಯವಾದ ಸುಮಾರು ಮೂವತ್ತು ಸ್ವರೂಪಾವತಾರಗಳನ್ನು ಭಾಗವತ ಉಲ್ಲೇಖ ಮಾಡುತ್ತದೆ. ಆದರೆ ಅವಷ್ಟೇ ಭಗವಂತನ ಸ್ವರೂಪಭೂತ ರೂಪಗಳಲ್ಲ. ಇವು ಆತನ ಸ್ವರೂಪರೂಪಗಳಲ್ಲಿ ಸದಾ ಉಪಾಸನೆ ಮಾಡಬೇಕಾದ ಪ್ರಧಾನ ರೂಪಗಳು. ಯುಗ-ಯುಗಗಳಲ್ಲಿ ಒಂದು ವಿಶೇಷ ರೂಪದಲ್ಲಿ ಭೂಮಿಯಲ್ಲಿ ಮನುಷ್ಯರ ಕಣ್ಣಿಗೆ ಗೋಚರನಾಗಿ, ಮನುಷ್ಯರಂತೆ ನಲಿದಾಡಿದ್ದಾನೆ ಭಗವಂತ. "ಕಿವಿ ಬೊಗಸೆಯಲ್ಲಿ ಭಗವಂತನ ಚರಿತೆಯನ್ನು ಪಾನಮಾಡುವವರಲ್ಲಿರುವ

ಸಮಸ್ತಕೊಳೆಯನ್ನು ತೊಳೆದುಬಿಡುವ ಆ ಭಗವಂತನ ಅವತಾರದ ಜ್ಞಾನಧಾರೆಯನ್ನು ನಾನೀಗ ನಿನಗೆ ಹೇಳುತ್ತೇನೆ" ಎಂದು ಚತುರ್ಮುಖ ನಾರದರಿಗೆ ಹೇಳಿದ ಎನ್ನುವಲ್ಲಿಗೆ ಈ ಅಧ್ಯಾಯ ಕೊನೆಗೊಳ್ಳುತ್ತದೆ.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಷಷ್ಠೋSಧ್ಯಾಯಃ ॥**

ಭಾಗವತ ಮಹಾಪುರಾಣದ ಎರಡನೇ ಸ್ಕಂಧದ ಆರನೇ ಅಧ್ಯಾಯ ಮುಗಿಯಿತು

**********

# ಸಪ್ತಮೋಽಧ್ಯಾಯಃ

ಜಗತ್ತನ್ನು ಸೃಷ್ಟಿಸಿದ ಭಗವಂತ ಈ ಪ್ರಪಂಚದಲ್ಲಿ ತನ್ನನ್ನೇ ತಾನು ಸೃಷ್ಟಿಸಿಕೊಂಡು ನಾನಾ ರೂಪಗಳಿಂದ ಅವತರಿಸಿ ಬಂದಿದ್ದಾನೆ. ಅಂತಹ ಭಗವಂತನ ವಿವಿಧ ಅವತಾರ ವಿಶೇಷಗಳ ಸಮೀಕ್ಷೆಯನ್ನು ವ್ಯಾಸರು ಚತುರ್ಮುಖ-ನಾರದ ಸಂವಾದ ರೂಪದಲ್ಲಿ ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ನೀಡಿದ್ದಾರೆ. ಭಗವಂತನ ಅವತಾರದ ಕುರಿತಾದ ಚುಟುಕಾದ ವಿವರಣೆ ಈಗಾಗಲೇ ಒಂದನೇ ಸ್ಕಂಧದ ಮೂರನೇ ಅಧ್ಯಾಯದಲ್ಲಿ ಬಂದಿದ್ದು, ಇಲ್ಲಿ ಅದರ ವಿಸ್ತಾರವನ್ನು ನಾವು ಕಾಣುತ್ತೇವೆ. ಆದರೆ ಭಗವಂತನ ಪ್ರತಿಯೊಂದು ಅವತಾರದ ವಿಸ್ತೃತ ವಿವರಣೆಯನ್ನು ನಾವು ಮುಂದಿನ ಸ್ಕಂಧಗಳಲ್ಲಿ ಕಾಣಲಿದ್ದೇವೆ. ಇಲ್ಲಿ ಭಗವಂತನ ಇಪ್ಪತ್ನಾಲ್ಕು ಅವತಾರಗಳ ವಿವರಣೆ ಬಂದಿದ್ದು, ಈ ಇಪ್ಪತ್ನಾಲ್ಕು ಅವತಾರಗಳನ್ನು ಗಾಯತ್ರಿಯ ಇಪ್ಪತ್ನಾಲ್ಕು ಅಕ್ಷರಗಳಿಂದ ಅನುಸಂಧಾನ ಮಾಡಬಹುದು.

## ೦೧. ಭೂ-ವರಾಹ ವಿಷ್ಣು

ಅಧ್ಯಾಯ ಪ್ರವೇಶಿಸುವ ಮುನ್ನ ಇಲ್ಲಿ ನಾವು ವರಾಹ ಅವತಾರದ ಬಗ್ಗೆ ಸ್ವಲ್ಪ ವಿಶ್ಲೇಷಣೆ ಮಾಡೋಣ. ಈ ಅಧ್ಯಾಯದ ಮೊದಲ ಶ್ಲೋಕದಲ್ಲಿ ವರಾಹ ಅವತಾರದ ಕುರಿತಾದ ವಿವರಣೆಯನ್ನು ನಾವು ಮುಂದೆ ಕಾಣಲಿದ್ದೇವೆ. ಆದರೆ ಆ ವಿವರಣೆ ನಾವು ದಶಾವತಾರದಲ್ಲಿ ಕಾಣುವ ವೈವಸ್ವತ ಮನ್ವಂತರದ ವರಾಹ ಅವತಾರದ ವಿವರಣೆ ಅಲ್ಲ. ಭಗವಂತ ಎರಡು ಬಾರಿ ವರಾಹ ಅವತಾರದಲ್ಲಿ ಕಾಣಿಸಿದ್ದು, ಇಲ್ಲಿ ಹೇಳಲಿರುವ ವರಾಹ ಅವತಾರ ಸ್ವಾಯಂಭುವ ಮನ್ವಂತರದಲ್ಲಿ ನಡೆದ ಮೊತ್ತ ಮೊದಲ ಭಗವಂತನ ಅವತಾರ. ಆನಂತರ ವೈವಸ್ವತ ಮನ್ವಂತರದಲ್ಲಿ ಮತ್ತೆ ಎರಡನೇ ಬಾರಿ ವರಾಹನಾಗಿ ಭಗವಂತ ಕಾಣಿಸಿಕೊಂಡಿರುವ ಕಥೆಯನ್ನು ಭಾಗವತದಲ್ಲೇ ಮುಂದೆ ಕಾಣಬಹುದು. ಸ್ವಾಯಂಭುವ ಮನ್ವಂತರದಲ್ಲಿ ಚತುರ್ಮುಖ ಬ್ರಹ್ಮನಿಂದ ಸೃಷ್ಟಿಯಾದ ಹಿರಣ್ಯಾಕ್ಷ-ಹಿರಣ್ಯಕಶಿಪು ಎನ್ನುವ ಆದಿದೈತ್ಯರೇ ಮರಳಿ ವೈವಸ್ವತ ಮನ್ವಂತರದಲ್ಲಿ ಅದೇ ಹೆಸರಿನಿಂದ ದಿತಿ-ಕಾಶ್ಯಪರಲ್ಲಿ ಹುಟ್ಟಿ ಬರುತ್ತಾರೆ.[ಕೆಲವರು **'ಕಾಶ್ಯಪ'** ಎನ್ನುವ ನಾಮವನ್ನು ***'ಕಶ್ಯಪ'*** ಎಂದು ತಪ್ಪಾಗಿ ಉಚ್ಚರಿಸುತ್ತಾರೆ. ಆದರೆ ಹಾಗೆ ಉಚ್ಚರಿಸಬಾರದು. ಏಕೆಂದರೆ ಕಶ್ಯಪ ಎನ್ನುವ ಪದಕ್ಕೆ ಕೆಟ್ಟ ಅರ್ಥವಿದೆ. ಸಂಸ್ಕೃತದಲ್ಲಿ **'ಕಶ್ಯ'** ಎಂದರೆ ಮದ್ಯ**(liquor)**. ಆದ್ದರಿಂದ ಕಶ್ಯಪ ಎಂದರೆ 'ಮದ್ಯಸೇವಕ' ಎಂದಾಗುತ್ತದೆ! ಆದರೆ ಕಾಶ್ಯಪ ಎನ್ನುವುದಕ್ಕೆ ಸಂಸ್ಕೃತದಲ್ಲಿ ಅಪೂರ್ವ ಅರ್ಥವಿದೆ. ***ಕಾಶ್ಯಮ್ ಪಿಬತೀತಿ ಕಾಶ್ಯಪಃ.*** ಸಮಸ್ತ ವೇದೋಪನಿಷತ್ತುಗಳಿಂದ ಪ್ರಕಾಶ್ಯಮಾನವಾದ ಭಗವದ್ ತತ್ತ್ವದ ಗುಣಗಾನ ಮಾಡಿದವನು ಕಾಶ್ಯಪ]. ಭಗವಂತ ಆದಿದೈತ್ಯ ಹಿರಣ್ಯಾಕ್ಷನನ್ನು ಕೊಲ್ಲುವುದಕ್ಕಾಗಿ ವರಾಹ ಅವತಾರ ತಾಳಿದರೆ, ದಿತಿ-ಕಾಶ್ಯಪರ ಪುತ್ರ ಹಿರಣ್ಯಾಕ್ಷನ ವದೆಗಾಗಿ ವೈವಸ್ವತ ಮನ್ವಂತರದಲ್ಲಿ ಮರಳಿ ಅದೇ ರೂಪದಿಂದ ಕಾಣಿಸಿಕೊಂಡ. ಮೊದಲ ವರಾಹ ಅವತಾರದಲ್ಲಿ ಭಗವಂತ ಹಿರಣ್ಯಾಕ್ಷನನ್ನು ತನ್ನ ಕೋರೆ ದಾಡೆಗಳಿಂದ ಸೀಳಿ ಕೊಂದರೆ, ಎರಡನೇ ಬಾರಿ ಆತನ ಕಿವಿಯ ಮರ್ಮಸ್ಥಾನಕ್ಕೆ ಮುಷ್ಟಿಯಿಂದ ಗುದ್ದಿ ಕೊಂದ ಎನ್ನುವ ವಿವರವನ್ನು ನಾವು ಭಾಗವತದಲ್ಲೇ ಕಾಣುತ್ತೇವೆ. ಈ ಎರಡರ ನಡುವಿನ ವ್ಯತ್ಯಾಸ ತಿಳಿಯದೇ ಇದ್ದಾಗ ವರಾಹ ಅವತಾರ ಗೊಂದಲವಾಗುತ್ತದೆ. ಇದನ್ನು ಸ್ಪಷ್ಟಪಡಿಸುತ್ತಾ ಆಚಾರ್ಯ ಮಧ್ವರು ಹೇಳುತ್ತಾರೆ: "***ಪ್ರಥಮಂ ದಂಷ್ಟ್ರಯಾ ಹತಃ, ದ್ವಿತಿಯಾತ್ ಕರ್ಣ ತಾಡನಾತ್***" ಎಂದು. ಇನ್ನೊಂದು ಮುಖ್ಯ ವಿಷಯ ಏನೆಂದರೆ: ಸ್ವಾಯಂಭುವ ಮನ್ವಂತರದಲ್ಲಿ ತಳೆದ ವರಾಹವೇ ವೈವಸ್ವತ

ಮನ್ವಂತರದಲ್ಲಿ ಬಂದಿದ್ದೇ ಹೊರತು, ಮೊದಲ ಅವತಾರ ಸಮಾಪ್ತಿಮಾಡಿ ಭಗವಂತ ಇನ್ನೊಮ್ಮೆ ವರಾಹನಾಗಿ ಅವತರಿಸಿ ಬಂದಿರುವುದಲ್ಲ. ಹೀಗಾಗಿ ವರಾಹ ಅವತಾರವನ್ನು ಎರಡು ಬಾರಿ ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ.

'ದೈತ್ಯ' ಎನ್ನುವ ಪದವನ್ನು ನಾವು ಕೇವಲ ದಿತಿಯ ಮಕ್ಕಳು ಎಂದಷ್ಟೇ ತಿಳಿದಾಗ ನಮಗೆ ಮತ್ತೆ ಗೊಂದಲವಾಗುತ್ತದೆ. ದೈತ್ಯ ಎನ್ನುವುದಕ್ಕೆ ದಿತಿಯ ಮಕ್ಕಳು ಎನ್ನುವುದು ಒಂದು ಅರ್ಥ. ಆದರೆ ಅದೇ ಅರ್ಥದಲ್ಲಿ ಅದನ್ನು ಶಾಸ್ತ್ರಕಾರರು ಬಳಸುವುದಿಲ್ಲ. ಆ ಶಬ್ದಕ್ಕೆ ಬೇರೊಂದು ವ್ಯುತ್ಪತ್ತಿ ಕೂಡಾ ಇದೆ. ಉದಾಹರಣೆಗೆ: ಶ್ರೀಕೃಷ್ಣನನ್ನು ವಾಸುದೇವ ಎಂದು ಕರೆಯುತ್ತಾರೆ. ಇಲ್ಲಿ ವಾಸುದೇವ ಎಂದರೆ ವಸುದೇವನ ಮಗ ಎನ್ನುವುದು ಒಂದು ಅರ್ಥ. ಆದರೆ ವಸುದೇವನ ಮಗನಾಗಿ ಹುಟ್ಟುವ ಮೊದಲು, ಸೃಷ್ಟಿಯ ಆದಿಯಲ್ಲೇ ಭಗವಂತ ವಾಸುದೇವ ರೂಪ ಧರಿಸಿರುವುದು ನಮಗೆಲ್ಲಾ ತಿಳಿದೇ ಇದೆ. ಹೀಗೆ ಒಂದು ಶಬ್ದ ಒಂದು ವಿಶಿಷ್ಠ ಅರ್ಥದಲ್ಲಿ ಈಗ ಬಳಕೆಯಲ್ಲಿದ್ದರೂ ಸಹ, ಅದನ್ನು ಪ್ರಾಚೀನ ಕಾಲದಲ್ಲಿ ಬೇರೊಂದು ಅರ್ಥದಲ್ಲಿ ಬಳಸಿರುವ ಸಾಧ್ಯತೆಯನ್ನೂ ನಾವು ಸಂದರ್ಭಕ್ಕನುಗುಣವಾಗಿ ತಿಳಿದುಕೊಳ್ಳಬೇಕು. ದಿತಿ, ಅದಿತಿ ಎನ್ನುವ ಪದಗಳಿಗೆ ಅನೇಕ ಅರ್ಥಗಳಿವೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳುವಂತೆ: "***ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಮ್***". ಇಲ್ಲಿ 'ದಿತಿ' ಅಂದರೆ ತುಂಡರಿಸುವ ಅಥವಾ ನಾಶಮಾಡುವ ಸ್ವಭಾವ. ಅಂತಹ ಸ್ವಭಾವ ಉಳ್ಳವರು ದೈತ್ಯರು. ಅಂದರೆ ಲೋಕಕಂಟಕರು ಎಂದರ್ಥ. ಸೃಷ್ಟಿಯ ಆದಿಯಲ್ಲೇ ಇಂತಹ ಲೋಕಕಂಟಕರ ಸೃಷ್ಟಿಯಾಗಿತ್ತು . ಸ್ವಾಯಂಭುವ ಮನ್ವಂತರದ ಆದಿದೈತ್ಯರಿಗೂ ಮತ್ತು ವೈವಸ್ವತ ಮನ್ವಂತರದ ದಿತಿಯ ಮಕ್ಕಳಿಗೂ ಇದ್ದ ಇನ್ನೊಂದು ವ್ಯತ್ಯಾಸ ಏನೆಂದರೆ: ವೈವಸ್ವತ ಮನ್ವಂತರದಲ್ಲಿನ ಹಿರಣ್ಯಕಶಿಪು ಮತ್ತು ಹಿರಣ್ಯಾಕ್ಷರಲ್ಲಿ ಪುಣ್ಯಜೀವಿಗಳಾದ ಜಯ-ವಿಜಯರಿದ್ದಂತೆ(ನಾಲ್ಕು ಜೀವಗಳು ಎರಡು ಶರೀರದಲ್ಲಿ) ಆದಿ ದೈತ್ಯರಲ್ಲಿ ಇರಲಿಲ್ಲ.

ಎರಡು ಬಾರಿ ಭಗವಂತ ವರಾಹ ಅವತಾರ ತಾಳಲು ಕಾರಣ ಮಾತ್ರ ಒಂದೇ ಆಗಿರುವುದು ಈ ಅವತಾರದ ವಿಶೇಷ. ಭೂಮಿ ತನ್ನ ಕಕ್ಷೆಯಿಂದ ಜಾರಿದಾಗ ಅದನ್ನು ರಕ್ಷಿಸಿ, ಮರಳಿ ಕಕ್ಷೆಯಲ್ಲಿಡಲು ಭಗವಂತನ ವರಾಹ ಅವತಾರವಾಗಿದೆ. ಸ್ವಾಯಂಭುವ ಮನ್ವಂತರದಲ್ಲಿ ಯಾರೂ ಭೂಮಿಯನ್ನು ಕಕ್ಷೆಯಿಂದ ಜಾರಿಸಿರಲಿಲ್ಲ. ಅದು ತನ್ನಷ್ಟಕ್ಕೇ ತಾನು ಜಾರಿದಾಗ ಭಗವಂತ ಅದನ್ನು ರಕ್ಷಿಸಿದ. ಹೀಗೆ ರಕ್ಷಿಸುವಾಗ ತಡೆದ ಆದಿದೈತ್ಯ ಹಿರಣ್ಯಾಕ್ಷನನ್ನು ಭಗವಂತ ವರಾಹ ರೂಪದಲ್ಲಿ, ಕೋರೆದಾಡೆಗಳಿಂದ ತಿವಿದು ಸಂಹಾರ ಮಾಡಿದ. ಎರಡನೇ ಬಾರಿ ವೈವಸ್ವತ ಮನ್ವಂತರದಲ್ಲಿ ಹಿರಣ್ಯಾಕ್ಷನೇ ಭೂಮಿಯನ್ನು ಕಕ್ಷೆಯಿಂದ ಜಾರಿಸಿ ನಾಶ ಮಾಡಲು ಪ್ರಯತ್ನಿಸಿದಾಗ, ಭಗವಂತ ಮರಳಿ ವರಾಹ ಅವತಾರಿಯಾಗಿ ಬಂದು ಹಿರಣ್ಯಾಕ್ಷನ ಕಿವಿಯ ಮೂಲಕ್ಕೆ ಗುದ್ದಿ ಆತನನ್ನು ಕೊಂದು ಭೂಮಿಯನ್ನು ರಕ್ಷಿಸಿ ಮರಳಿ ಕಕ್ಷೆಯಲ್ಲಿಟ್ಟ. ವಿಶೇಷ ಏನೆಂದರೆ ಈ ರೀತಿ ಎರಡು ಬಾರಿ ಭೂಮಿ ಕಕ್ಷೆಯಿಂದ ಜಾರಿದ ವಿಷಯವನ್ನು ಇಂದು ವಿಜ್ಞಾನ ಕೂಡಾ ಒಪ್ಪುತ್ತದೆ. ರಷ್ಯನ್ ವಿಜ್ಞಾನಿ ವಿಲಿಕೋವಸ್ಕಿ(Velikovsky) ತನ್ನ "Worlds in collision" ಎನ್ನುವ ಪುಸ್ತಕದಲ್ಲಿ ಹೇಳುತ್ತಾನೆ : "ವೈಜ್ಞಾನಿಕವಾಗಿ ಎರಡು ಬಾರಿ ಭೂಮಿ ತನ್ನ ಕಕ್ಷೆಯಿಂದ ಜಾರಿದ್ದು ನಿಜ, ಆದರೆ ನಮಗೆ ಅದು ಏಕೆ ಎನ್ನುವುದು ತಿಳಿದಿಲ್ಲ" ಎಂದು. ಆತ ಅಲ್ಲಿ ಭಾಗವತವನ್ನು ಉಲ್ಲೇಖಿಸಿ ಹೇಳುತ್ತಾನೆ: "ಭಾರತದ ಋಷಿಗಳು ಈ ವಿಚಾರವನ್ನು ತಿಳಿದಿದ್ದರು" ಎಂದು. [ಇಂದು ನಾವು ಇಂತಹ ಅಪೂರ್ವ ಅಧ್ಯಾತ್ಮ ವಿಜ್ಞಾನವನ್ನು ಬಿಟ್ಟು ಪಾಶ್ಚಾತ್ಯ ವಿಜ್ಞಾನಕ್ಕೆ ಮರುಳಾಗಿ ಬದುಕುತ್ತಿರುವುದು ದುರಾದೃಷ್ಟಕರ].

ಇಲ್ಲಿ ಭಗವಂತ ಏಕೆ ವರಾಹರೂಪವನ್ನೇ ತೊಟ್ಟ ? ಬೇರೆ ರೂಪ ಏಕೆ ತೊಡಲಿಲ್ಲ ಎನ್ನುವುದು ಕೆಲವರ ಪ್ರಶ್ನೆ. ಈ ರೀತಿ ಪ್ರಶ್ನಿಸುವ ಮೊದಲು ನಾವು ತಿಳಿಯಬೇಕಾದ ವಿಷಯ ಏನೆಂದರೆ: ಭಗವಂತ ತಾನು ಯಾವ ರೂಪದಲ್ಲಿ ಬರಬೇಕು ಎನ್ನುವುದನ್ನು ಆತನೇ ನಿರ್ಧರಿಸುತ್ತಾನೆ. ಅದು ಅವನ ಇಚ್ಛೆ. ಭಗವಂತನ ವರಾಹ ರೂಪ ಎಲ್ಲರಿಗೂ ಹೊರಗಣ್ಣಿಗೆ

ಕಾಣಿಸಿಕೊಂಡ ರೂಪವಲ್ಲ. ಈ ರೂಪವನ್ನು ಚತುರ್ಮುಖ, ಸ್ವಾಯಂಭುವ ಮನು, ಹಿರಣ್ಯಾಕ್ಷ ಕಂಡಿದ್ದಾರೆ. ಅದೇ ರೂಪವನ್ನು ಜ್ಞಾನಿಗಳು ಧ್ಯಾನದಲ್ಲಿ ಕಂಡು ನಮಗೆ 'ವರಾಹ' ಎಂದು ವಿವರಿಸಿದ್ದಾರೆ.

ವರಾಹ ಅವತಾರಕ್ಕೆ ಸಂಬಂಧಿಸಿ ಒಂದು ತಪ್ಪು ಕಲ್ಪನೆ ಸಾಮಾನ್ಯ ಜನರಲ್ಲಿದೆ. ಅದೇನೆಂದರೆ: ಭಾರತೀಯರು ಭೂಮಿ ಚಪ್ಪಟೆಯಾಗಿದೆ ಎಂದು ತಿಳಿದಿದ್ದರು ಮತ್ತು ವರಾಹ ಅವತಾರಕ್ಕೆ ಯಾವುದೇ ವೈಜ್ಞಾನಿಕ ಪುಷ್ಟೀಕರಣ ಇಲ್ಲ ಎಂದು. ಇದಕ್ಕೆ ಒಂದು ಕಾರಣವೂ ಇದೆ. ಅದೇನೆಂದರೆ: ಭಗವಂತನ ಈ ಅವತಾರವನ್ನು ಕಕ್ಷೆ, ಗುರುತ್ವಾಕರ್ಷಣ ಶಕ್ತಿ, ಇತ್ಯಾದಿ ವಿಷಯದ ಅರಿವಿಲ್ಲದ ಚಿಕ್ಕ ಮಕ್ಕಳಿಗೆ ವಿವರಿಸುವಾಗ, ಅವರಿಗೆ ಗ್ರಹಣವಾಗುವಂತೆ ಸರಳೀಕರಣ ಮಾಡಿ "ಹಿರಣ್ಯಾಕ್ಷ ಭೂಮಿಯನ್ನು ಚಾಪೆಯಂತೆ ಮಡಚಿ ಬಗಲಿನಲ್ಲಿಟ್ಟುಕೊಂಡು ಹೋದ" ಎಂದು ವಿವರಿಸಿದ್ದಾರೆ. ಆದರೆ ಇದೇ ನಿಜವಲ್ಲ. ನಮ್ಮ ಪ್ರಾಚೀನ ಋಷಿಗಳಿಗೆ ಭೂಮಿಯ ಆಕಾರದ ಬಗ್ಗೆ, ಭೂಮಿಯ ಗುರುತ್ವಾಕರ್ಷಣ ಶಕ್ತಿಯ ಬಗ್ಗೆ ಪೂರ್ಣ ತಿಳುವಳಿಕೆ ಇತ್ತು. ಅದು ಇಂದಿನ ಪಾಶ್ಚ್ಯಾತ್ಯರು ಕಂಡುಕೊಂಡ ಹೊಸ ವಿಚಾರವೇನೂ ಅಲ್ಲ. ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಆರ್ಯಭಟ "***ಆಕೃಷ್ಟಿ ಶಕ್ತಿಶ್ಚ ಮಹೀ***" ಎಂದು ಭೂಮಿಯ ಗುರುತ್ವಾಕರ್ಷಣ ಶಕ್ತಿಯ ಬಗ್ಗೆ ಹೇಳಿರುವುದನ್ನು ಇಲ್ಲಿ ನಾವು ನೆನಪಿಸಿಕೊಳ್ಳಬೇಕು. ಭೂಮಿಯನ್ನು 'ಭೂಗೋಲ' ಎಂದು ಕರೆದಿದ್ದ ನಮ್ಮ ಪ್ರಾಚೀನ ಋಷಿಗಳು, ಭೂಮಿ ದುಂಡಗಿದೆ ಎಂದು ತಿಳಿದಿದ್ದರು ಎನ್ನುವುದು ಅವರು ಬಳಸಿರುವ 'ಗೋಲ' ಎನ್ನುವ ಪದದಿಂದಲೇ ತಿಳಿಯುತ್ತದೆ. ದುರಾದೃಷ್ಟವಶಾತ್ ಇಂದು ನಮಗೆ ನಮ್ಮ ಪೂರ್ವಿಕರು ಕೊಟ್ಟ ಅಪೂರ್ವ ವಿಜ್ಞಾನದ ಬಗ್ಗೆ ಯಾವುದೇ ತಿಳುವಳಿಕೆ/ಗೌರವ ಇಲ್ಲ. ಭೂಮಿಯಲ್ಲಿ ಅಪಾನಶಕ್ತಿ(ಗುರುತ್ವಾಕರ್ಷಣ ಶಕ್ತಿ) ಇರುವುದರಿಂದ ಅದು ತನ್ನ ಕಕ್ಷೆಯಲ್ಲಿ, ಭೌತಿಕವಾಗಿ, ನಿರಾಲಂಬವಾಗಿ ನಿಂತಿದೆ. ಇಂತಹ ಪ್ರಕೃತಿಸತ್ಯ ಹಿಂದೆ ಋಷಿಗಳಿಗೆ ಸ್ಫುರಣವಾಗುತ್ತಿತ್ತು. ಭಾರತದ ಗಣಿತಪದ್ಧತಿ (ಜ್ಯೋತಿಷ್ಯ ಶಾಸ್ತ್ರ) ಸಂಪೂರ್ಣ ಭೂಮಿಯ ಹಾಗೂ ಗ್ರಹಗೋಲಗಳ ಚಲನೆಗೆ ಅನುಗುಣವಾಗಿದೆ. ಇದು ಇಂದಿನ ಪಾಶ್ಚ್ಯಾತ್ಯ ಗಣಿತದಿಂದ ಬಂದಿದ್ದಲ್ಲ. ಸುಮಾರು ೫೦೦೦ ವರ್ಷಗಳ ಹಿಂದೆ ಮಹಾಭಾರತ ಯುದ್ಧದ ಸಮಯದಲ್ಲಿ ಹದಿಮೂರು ದಿನಗಳ ಅಂತರದಲ್ಲಿ ಎರಡು ಗ್ರಹಣ ಸಂಭವಿಸುತ್ತದೆ ಹಾಗೂ ಅದು ಯುದ್ಧ ಮತ್ತು ಯುದ್ಧದ ಪರಿಣಾಮ(ಸರ್ವನಾಶ)ವನ್ನು ಸೂಚಿಸುತ್ತದೆ ಎಂದು ವೇದವ್ಯಾಸರು ಯುದ್ಧಕ್ಕೂ ಮೊದಲೇ ಧೃತರಾಷ್ಟ್ರನಿಗೆ ಹೇಳಿರುವುದನ್ನು ನಾವಿಲ್ಲಿ ನೆನಪಿಸಿಕೊಳ್ಳಬೇಕು. ಪ್ರಾಚೀನ ಕಾಲದಿಂದಲೂ ಭಾರತದ ಜ್ಯೋತಿಷ್ಯಶಾಸ್ತ್ರ ಕರಾರುವಕ್ಕಾಗಿ ಗ್ರಹಣ ಸಂಭವಿಸುವ ಕಾಲವನ್ನು ಗುರುತಿಸುವ ಗಣಿತವಾಗಿತ್ತು. ಹೀಗಾಗಿ ಭಾರತೀಯರು ಎಂದೂ ಭೂಮಿ ಚಪ್ಪಟೆಯಾಗಿದೆ ಎಂದು ತಿಳಿದಿರಲಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ.

ವರಾಹ ಅವತಾರದಲ್ಲಿ ಬರುವ ಇನ್ನೊಂದು ಸಂಶಯ ಎಂದರೆ: ಅಲ್ಲಿ ಭೂಮಿ ಕಕ್ಷೆಯಿಂದ ಕಳಚಿಕೊಂಡು ನೀರಿನಲ್ಲಿ ಮುಳುಗುವ ಪ್ರಸಂಗ ಬಂದಾಗ ವರಾಹ ಅವತಾರವಾಯಿತು ಎನ್ನುತ್ತಾರೆ. ಇಲ್ಲಿ ಎಲ್ಲರಿಗೂ ಬರುವ ಸರ್ವೇ ಸಾಮಾನ್ಯ ಪ್ರಶ್ನೆ ಎಂದರೆ: "ಸಮುದ್ರಗಳಿರುವುದು ಭೂಮಿಯ ಮೇಲೆ. ಹೀಗಿರುವಾಗ ಅನೇಕ ಸಮುದ್ರಗಳಿರುವ ಇಂತಹ ಭೂಮಿ ಮುಳುಗುವ ಇನ್ನೊಂದು ಸಮುದ್ರ ಎಲ್ಲಿದೆ" ಎನ್ನುವುದು. ಈ ರೀತಿ ಪ್ರಶ್ನೆ ಮಾಡುವವರಿಗೆ ಪ್ರಳಯ ಸಮುದ್ರದ ಕಲ್ಪನೆ ಇರುವುದಿಲ್ಲ. ಶಾಸ್ತ್ರಕಾರರು ಎಂದೂ ಭೂಮಿ ನೀರಿನ ಸಮುದ್ರದಲ್ಲಿ ಮುಳುಗುವ ಪರಿಸ್ಥಿತಿ ಬಂತು ಎಂದು ಹೇಳಲಿಲ್ಲ. ಬದಲಾಗಿ ಅವರು "***ಕಾರಣೋದಕ***" ಎಂದಿದ್ದಾರೆ. ಅಂದರೆ ನೀರು ಯಾವುದರಿಂದ ಮುಂದೆ ನಿಷ್ಪನ್ನವಾಗುತ್ತದೋ ಅದಕ್ಕೆ ಕಾರಣೀಭೂತವಾದ ಮೂಲದ್ರವ್ಯ ವಾತಾವರಣದಲ್ಲಿ ತುಂಬಿರುವ ಸ್ಥಿತಿ. ಸೃಷ್ಟಿ ಪೂರ್ವದಲ್ಲಿ ಸೃಷ್ಟಿಗೆ ಬೇಕಾದ ಸಮಸ್ತ ಮೂಲದ್ರವ್ಯಗಳೂ ಪರಮಾಣು ಸಮುದ್ರ ರೂಪದಲ್ಲಿದ್ದು, ಸೃಷ್ಟಿಕರ್ತ ನಾರಾಯಣ ಆ ಪ್ರಳಯಸಮುದ್ರದಲ್ಲಿ ಪವಡಿಸಿದ್ದ ಎನ್ನುವ ಮಾತನ್ನು ನಾವಿಲ್ಲಿ ನೆನಪಿಸಿಕೊಳ್ಳಬೇಕು. ವರಾಹ ಅವತಾರ ಆಗುವಾಗ ಪೂರ್ಣಪ್ರಮಾಣದ ಸ್ಥೂಲ ಪ್ರಪಂಚ ನಿರ್ಮಾಣ ಆಗಿರಲಿಲ್ಲ. ಅಂತಹ ಸಂದರ್ಭದಲ್ಲಿ ಈ ಘಟನೆ

ನಡೆದಿರುವುದು. ನಮಗೆ ತಿಳಿದಂತೆ ಭೂಮಿ ಕಕ್ಷೆಯಿಂದ ಸ್ವಲ್ಪ ಜಾರಿದರೂ ಸಾಕು. ಅದು ಇತರ ಗ್ರಹ-ಗೋಲಗಳಿಗೆ ಡಿಕ್ಕಿ ಹೊಡೆದು ನಾಶವಾಗಿ ಹೋಗುತ್ತದೆ. ವಿಶ್ವದ ರಚನೆ ಯಶಸ್ವಿಯಾಗಬಾರದು ಎಂದು ಬಯಸಿದವನು ಹಿರಣ್ಯಾಕ್ಷ. ಆದರೆ ಭೂಮಿಯನ್ನು ಮರಳಿ ಕಕ್ಷೆಯಲ್ಲಿಟ್ಟು ವಿಶ್ವ ರಚನೆ ಮಾಡಿದ ವಿಶ್ವಕರ್ಮ ಆ ಭಗವಂತ.

ಗಾಯತ್ರಿ ಮಂತ್ರದಲ್ಲಿ '***ತತ್ಸವಿತುರ್ವರೇಣ್ಯಮ್***' ಎನ್ನುವಲ್ಲಿನ '***ವರೇಣ್ಯಮ್***' ಎನ್ನುವ ಪದದ ಅರ್ಥ ಹಾಗೂ ವರಾಹ ಎನ್ನುವ ಪದದ ಅರ್ಥ ಒಂದೇ ಆಗಿದೆ. ವರೇಣ್ಯಂ/ವರಾಹ ಎಂದರೆ ಎಲ್ಲರೂ ಆಶ್ರಯಿಸಬೇಕಾದ, ಎಲ್ಲಕ್ಕಿಂತ ಹಿರಿದಾದ ಶಕ್ತಿ ಎಂದರ್ಥ. ವೈದಿಕ ಸಂಸ್ಕೃತದಲ್ಲಿ ಮೋಡವನ್ನೂ ಕೂಡಾ ವರಾಹ ಎಂದು ಕರೆಯುತ್ತಾರೆ. ಮೋಡವೂ ಕೂಡಾ ಎತ್ತರದಲ್ಲಿರುತ್ತದೆ ಮತ್ತು ನಾವೆಲ್ಲರೂ ಅದನ್ನು ಆಶ್ರಯಿಸಿಕೊಂಡೇ ಬದುಕುತಿದ್ದೇವೆ. ಹಾಗಾಗಿ ಮೋಡಕ್ಕೆ ಆ ಹೆಸರು. ಭೂಮಿಯನ್ನು ಮರಳಿ ಕಕ್ಷೆಯಲ್ಲಿಟ್ಟು ನಮಗೆಲ್ಲರಿಗೂ ರಕ್ಷಣೆ ನೀಡಿರುವ ಭಗವಂತ ಜ್ಞಾನಿಗಳಿಗೆ ಕಾಣಿಸಿಕೊಂಡ ರೂಪದಲ್ಲೇ ಹಂದಿ ಇರುವುದರಿಂದ ಅದಕ್ಕೂ ವರಾಹ ಎನ್ನುವ ಹೆಸರು ಬಂತೇ ವಿನಃ ಈ ಪದದ ವ್ಯುತ್ಪತ್ತಿಗೂ ಮತ್ತು ಆ ಪ್ರಾಣಿಗೂ ಯಾವುದೇ ಸಂಬಂಧವಿಲ್ಲ. ಕೇವಲ ರೂಪ ಸಾಮ್ಯದಿಂದ ಆ ಪ್ರಾಣಿಗೂ ಆ ಹೆಸರು ಬಂತು ಅಷ್ಟೇ. ಬನ್ನಿ, ಈ ಹಿನ್ನೆಲೆಯೊಂದಿಗೆ ಚತುರ್ಮುಖ-ನಾರದ ಸಂವಾದವನ್ನಾಲಿಸೋಣ.

**ಬ್ರಹ್ಮೋವಾಚ--**

**ಯತ್ರೋದ್ಯತಃ ಕ್ಷಿತಿತಲೋದ್ಧರಣಾಯ ಬಿಭ್ರತ್ ಕ್ರೌಡೀಂ ತನುಂ ಸಕಲಯಜ್ಞಮಯೀಮನಂತಃ ।**
**ಅಂತರ್ಮಹಾರ್ಣವ ಉಪಾಗತಮಾದಿದೈತ್ಯಂತಂ ದಂಷ್ಟ್ರಯಾSದ್ರಿಮಿವ ವಜ್ರಧರೋ ದದಾರ ॥೦೧॥**

ಸ್ವಾಯಂಭುವ ಮನ್ವಂತರದ ವರಾಹ ಅವತಾರವನ್ನು ವಿವರಿಸುತ್ತಾ ಚತುರ್ಮುಖ ಹೇಳುತ್ತಾನೆ: "ಭೂಮಿ ಕಕ್ಷೆಯಿಂದ ಕಳಚಿ ನಾಶವಾಗುವ ಸಂದರ್ಭದಲ್ಲಿ ಭಗವಂತ ವರಾಹ ಅವತಾರಿಯಾಗಿ ಬಂದು ಭೂಮಿಯನ್ನು ರಕ್ಷಿಸಿದ ಮತ್ತು ತಡೆಯಲು ಬಂದ ಆದಿದೈತ್ಯ ಹಿರಣ್ಯಾಕ್ಷನನ್ನು ಹೇಗೆ ಇಂದ್ರ ವಜ್ರಾಯುಧದಿಂದ ಪರ್ವತವನ್ನು ಭೇದಿಸಿದನೋ ಹಾಗೇ ವರಾಹ ತನ್ನ ಕೋರೆದಾಡೆಯಿಂದ ಸೀಳಿ ಕೊಂದ" ಎಂದು.

ಭಗವಂತನ ಈ ಅವತಾರದಲ್ಲಿ ಇನ್ನೊಂದು ವಿಶೇಷವಿರುವುದನ್ನು ಈ ಶ್ಲೋಕ ವಿವರಿಸುತ್ತದೆ. ಈ ವರಾಹನನ್ನು ಯಜ್ಞವರಾಹ ಎಂದೂ ಕರೆಯುತ್ತಾರೆ. ಭಗವಂತ ಕೇವಲ ಭೂಮಿಯನ್ನು ಮರಳಿ ಕಕ್ಷೆಯಲ್ಲಿಟ್ಟು ರಕ್ಷಿಸಿದ್ದಷ್ಟೇ ಅಲ್ಲ, ಆತ ಈ ಅವತಾರದಲ್ಲಿ ತನ್ನ ರೋಮಕೂಪಗಳನ್ನು ಜಾಡಿಸಿ ಯಜ್ಞಕ್ಕೆ ಬೇಕಾದ ಸಕಲ ಸಲಕರಣೆಗಳನ್ನು ಸೃಷ್ಟಿಮಾಡಿದ. ಹೀಗಾಗಿ ಈತ ಯಜ್ಞವರಾಹ ಎಂದು ಹೆಸರಾದ.

ಮೇಲಿನ ಶ್ಲೋಕದಲ್ಲಿ ಚತುರ್ಮುಖನು ವರಾಹನನ್ನು ಅನಂತಃ ಎಂದು ಸಂಬೋಧಿಸಿದ್ದಾನೆ. ಏಕೆಂದರೆ: ಈ ಅವತಾರ ರಾಮ-ಕೃಷ್ಣಾವತಾರಗಳಿಗಿಂತ ಭಿನ್ನ. ಈ ಹಿಂದೆ ಹೇಳಿದಂತೆ ಸ್ವಾಯಂಭುವ ಮನ್ವಂತರದಲ್ಲಿ ಆದ ವರಾಹ ಅವತಾರವನ್ನು ಭಗವಂತ ಇನ್ನೂ ಸಮಾಪ್ತಿಗೊಳಿಸಿಲ್ಲ. ಪರಶುರಾಮ, ವೇದವ್ಯಾಸ ಅವತಾರಗಳಂತೆ ವರಾಹ ಅವತಾರ ಕೂಡಾ ಕಣ್ಮರೆಯಾಗಿ ಇಂದಿಗೂ ಬ್ರಹ್ಮಾಂಡದಲ್ಲಿದೆ.

## ೦೨. ಯಜ್ಞಾವತಾರದಲ್ಲಿ ದೇವೇಂದ್ರನಾಗಿ ಲೋಕ ರಕ್ಷಣೆ ಮಾಡಿದ ಭಗವಂತ

**ಜಾತೋ ರುಚೇರಜನಯತ್ ಸುಯಶಾಃಸುಯಜ್ಞ ಆಕೂತಿಸೂನುರಮರಾನಥ ದಕ್ಷಿಣಾಯಾಮ್ ।**
**ಲೋಕತ್ರಯಸ್ಯ ಮಹತೀಮಹರದ್ ಯ ಆರ್ತಿಂ ಸ್ವಾಯಂಭುವೇನ ಮನುನಾ ಹರಿರಿತ್ಯನೂಕ್ತಃ ॥೦೨॥**

ಸ್ವಾಯಂಭುವ ಮನ್ವಂತರದಲ್ಲೇ ನಡೆದ ಭಗವಂತನ ಇನ್ನೊಂದು ಅವತಾರ ಯಜ್ಞಾವತಾರ. ಸ್ವಾಯಂಭುವ ಮನುವಿಗೆ ಮೂರು ಮಂದಿ ಹೆಣ್ಣು ಮಕ್ಕಳು(ಆಕೂತಿ, ದೇವಹೂತಿ ಮತ್ತು ಪ್ರಸೂತಿ) ಮತ್ತು ಇಬ್ಬರು ಗಂಡು ಮಕ್ಕಳು. (ಉತ್ತಾನಪಾದ ಮತ್ತು ಪ್ರಿಯವ್ರತ). ಸ್ವಾಯಂಭುವ ಮನುವಿನ ಮಗಳು ಆಕೂತಿಯನ್ನು ರುಚಿಪ್ರಜಾಪತಿ ವಿವಾಹವಾಗುತ್ತಾನೆ ಮತ್ತು ಅವರ ದಾಂಪತ್ಯ ಫಲವಾಗಿ ಅವರಿಗೆ ಯಜ್ಞ ನಾಮಕ ಗಂಡು ಮಗುವಾಗುತ್ತದೆ. ಆತನೇ ಯಜ್ಞ ನಾರಾಯಣ. ಈ ಯಜ್ಞ ನಾಮಕ ಮಗುವನ್ನು ಸ್ವಾಯಂಭುವ ಮನು ದತ್ತಕ್ಕೆ ಪಡೆಯುತ್ತಾನೆ. ಇದೇ ಸಮಯದಲ್ಲಿ ಶ್ರೀಲಕ್ಷ್ಮಿಯೂ ಕೂಡಾ ದಕ್ಷಿಣಾ ಎನ್ನುವ ಹೆಸರಿನಲ್ಲಿ ಲೋಕದಲ್ಲಿ ಅವತರಿಸಿ ಬರುತ್ತಾಳೆ. ಮುಂದೆ ಯಜ್ಞ ಮತ್ತು ದಕ್ಷಿಣೆಯ ಮದುವೆಯಾಗುತ್ತದೆ ಹಾಗೂ ಅವರಲ್ಲಿ ಆ ಮನ್ವಂತರದ ದೇವತಾಗಣವಾದ ತುಷಿತರ ಸೃಷ್ಟಿಯಾಗುತ್ತದೆ. ಯಜ್ಞ ಆ ಮನ್ವಂತರದ ದೇವೇಂದ್ರನಾಗಿ ದುಷ್ಟ ರಾಕ್ಷಸರನ್ನು ನಿಗ್ರಹಮಾಡಿ ಲೋಕಕಲ್ಯಾಣ ಮಾಡುತ್ತಾನೆ.

ಇಲ್ಲಿ "ಶ್ರೀಲಕ್ಷ್ಮಿ ದಕ್ಷಿಣಾ ಎನ್ನುವ ಹೆಸರಿನಲ್ಲಿ ಅವತರಿಸಿದಳು" ಎನ್ನುವ ಮಾತನ್ನು ನೋಡಿದೆವು. ಶ್ರೀಲಕ್ಷ್ಮಿಯ ದಕ್ಷಿಣಾ ಎನ್ನುವ ನಾಮಕ್ಕೆ ವಿಶೇಷವಾದ ಅರ್ಥವಿದೆ. ದಕ್ಷ-ಇನಾ=ದಕ್ಷಿಣಾ; '*ದಕ್ಷ ಭಾಗ ಸ್ಥಿತೇನತ್ವಾತ್ ದಕ್ಷಿಣಾ*'. ಅಂದರೆ ಬಲಬದಿ(ದಕ್ಷ)ಯಲ್ಲಿ ಗಂಡ(ಇನಾ) ಇರುವವಳು ಎಂದರ್ಥ. *ವಾ ಭಾರ್ಯಾ ಭಾಗೋ ವಾ ಮೇತಿ ಪ್ರಸಿದ್ಧಃ.* ಗಂಡಿನ ಎಡಬದಿಯಲ್ಲಿ ಕುಳಿತವಳನ್ನು ಹೆಂಡತಿ ಎಂದು ಗುರುತಿಸುವುದು ಈ ದೇಶದ ಸಾಂಸ್ಕೃತಿಕ ಪರಂಪರೆ. ಹೀಗಾಗಿ ನಾರಾಯಣನ ಅರ್ಧಾಂಗಿಯಾಗಿ ಆತನ ಎಡತೊಡೆಯ ಮೇಲೆ ಕುಳಿತಿರುವ ಶ್ರೀಲಕ್ಷ್ಮಿಗೆ ದಕ್ಷಿಣಾ ಎಂದು ಹೆಸರು.

ಸ್ವಾಯಂಭುವ ಮನ್ವಂತರದಲ್ಲಿ ಒಂದು ವ್ಯವಸ್ಥಿತವಾಗಿರುವಂತಹ ಸಾತ್ವಿಕರ ಜೀವನದ ನಡೆ ರೂಪುಗೊಳ್ಳುವ ಮೊದಲೇ ಆಸುರೀ ಶಕ್ತಿಗಳು ಲೋಕನಾಶ ಮಾಡಬೇಕೆಂದು ಸಂಕಲ್ಪ ಮಾಡಿ, ಅದಕ್ಕೆ ಮುನ್ನುಡಿಯಾಗಿ ಆ ಸಂವತ್ಸರದ ಅಧಿಪತಿಯಾದ ಸ್ವಾಯಂಭುವ ಮನುವನ್ನೇ ಮುಗಿಸಿಬಿಡಬೇಕು ಎನ್ನುವ ಹುನ್ನಾರ ನಡೆಸುತ್ತಿರುತ್ತವೆ. ಆಗ ಅಸಹಾಯಕನಾದ ಮನು ಲೋಕ ರಕ್ಷಣೆಗಾಗಿ ತಪಸ್ಸನ್ನು ಮಾಡುತ್ತಾನೆ. ತನ್ನ ಮೊಮ್ಮಗನಾಗಿ, ಯಜ್ಞ ನಾಮಕನಾಗಿ ಅವತರಿಸಿದ ಹರಿಯನ್ನು ಧ್ಯಾನಿಸುತ್ತಾ ಸ್ವಾಯಂಭುವ ಮನು ಧ್ಯಾನದಲ್ಲಿ ಕಂಡ ಹದಿನೆಂಟು ಮಂತ್ರಗಳೇ ಇಂದು ಈಶಾವಾಸ್ಯ ಉಪನಿಷತ್ತು ಎಂದು ಕರೆಯಲ್ಪಟ್ಟಿದೆ. "*ಈಶಾವಾಸ್ಯಂ ಇದಂ ಸರ್ವಂ ಯತ್ ಕಿಞ್ಚ ಜಗತ್ಯಾಂ ಜಗತ್, ತೇನ ತ್ಯಕ್ತೇನ ಭುಞ್ಜೀಥಾಃ ಮಾ ಗೃಧಃ ಕಸ್ಯ ಸ್ವಿತ್ ಧನಮ್*....." ಎಂದು ಪ್ರಾರಂಭವಾಗುವ ಈ ಉಪನಿಷತ್ತಿನ ನಿಜವಾದ ಹೆಸರು ***ಯಾಜ್ಞಿಕಮಂತ್ರೋಪನಿಷತ್ತು***. "ನೀನು ಏನು ಕರ್ಮವನ್ನು ಮಾಡಿದರೂ ಅದನ್ನೆಲ್ಲವನ್ನೂ ಭಗವಂತನಲ್ಲಿ ಅರ್ಪಿಸಿ ಮಾಡು, ಭಗವದರ್ಪಣ ಬುದ್ಧಿಯಿಂದ ಮಾಡು" ಎನ್ನುವ ಸಂದೇಶದೊಂದಿಗೆ ಯಾಜ್ಞಿಕಮಂತ್ರೋಪನಿಷತ್ತು ಆರಂಭವಾಗುತ್ತದೆ. ಸ್ವಾಯಂಭುವ ಮನು ಏಕೆ ಈ ರೀತಿ ಧ್ಯಾನಿಸಿದ್ದಾನೆ ಎಂದರೆ: ಆತನಿಗೆ ಅಸುರರು ಎಲ್ಲವನ್ನು ನಾಶ ಮಾಡಬೇಕು ಎನ್ನುವ ಸಂಕಲ್ಪ ತೊಟ್ಟ ವಿಷಯ ತಿಳಿದಿತ್ತು. ಆ ಮನ್ವಂತರದ ಅಧಿಪತಿಯಾಗಿ ಭಗವಂತನಿಂದ ನಿಯಮಿಸಲ್ಪಟ್ಟಿದ್ದ ಆತ ಎಲ್ಲವನ್ನೂ ಆ ಭಗವಂತನಿಗೆ ಅರ್ಪಿಸಿ, "ಎಲ್ಲವೂ ನಿನ್ನಿಚ್ಛೆಯಂತೆಯೇ ಆಗಲಿ" ಎಂದು ಪ್ರಾರ್ಥಿಸಿದ್ದಾನೆ. ಮುಂದೆ ಭಾಗವತದಲ್ಲೇ ಹೇಳುವಂತೆ: ಅಸುರರು ಮೊತ್ತಮೊದಲು ಸ್ವಾಯಂಭುವ ಮನುವನ್ನೇ ಕೊಲ್ಲಬೇಕೆಂದು ಹೊಂಚು ಹಾಕಿ ಬಂದರೆ ಆತ "***ಪೂಷನ್ನೇಕಋಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ ಸಮೂಹ, ತೇಜೋ ಯತ್ ತೇ ರೂಪಂ ಕಲ್ಯಾಣತಮಂ ತತ್ ತೇ ಪಶ್ಯಾಮಿ, ಯೋಽಸಾವಸೌ ಪುರುಷಃ ಸೋಽಹಮಸ್ಮಿ .....***" ಎಂದು ತನ್ನೊಳಗಿನ ಬಿಂಬರೂಪಿ ಭಗವಂತನನ್ನು ಕಾಣುತ್ತಾ ಆನಂದದಿಂದಿದ್ದಾನೆ! ಈ ರೀತಿ ಬಾಹ್ಯ ಪ್ರಪಂಚದ ಎಚ್ಚರ ಮರೆತು ಕುಳಿತಿರುವ ಮನುವನ್ನು ಯಾರು

ಬೇಕಾದರೂ ಸುಲಭವಾಗಿ ಕೊಲ್ಲಬಹುದಿತ್ತು. ಆದರೆ ಹಾಗಾಗುವುದಿಲ್ಲ. ಅಲ್ಲಿ ಯಜ್ಞನಾಮಕ ಭಗವಂತ ಪ್ರತ್ಯಕ್ಷನಾಗಿ, ಅಸುರರನ್ನು ನಿಗ್ರಹಿಸಿ, ಮೂರು ಲೋಕಗಳನ್ನು ಉದ್ಧರಿಸುತ್ತಾನೆ.

ಇಲ್ಲಿ ಸ್ವಾಯಂಭುವ ಮನು ವೇದ ಮಂತ್ರಗಳಿಂದ ಭಗವಂತನ ಧ್ಯಾನ ಮಾಡುವಾಗ "ಯಜ್ಞ ಕೇವಲ ತನ್ನ ಮೊಮ್ಮಗನಲ್ಲ, ಅವನು ಹರಿ" ಎನ್ನುವ ಅರಿವಿನಿಂದ ಧ್ಯಾನ ಮಾಡಿದ್ದಾನೆ. ಭಾಗವತದ ಈ ಮೇಲಿನ ಶ್ಲೋಕದ ಹಿನ್ನೆಲೆಯೊಂದಿಗೆ ನಾವು ಈಶಾವಾಸ್ಯ ಉಪನಿಷತ್ತಿನ ಮಂತ್ರಗಳನ್ನು ಅರ್ಥ ಮಾಡಿಕೊಂಡರೆ ಈ ವಿಷಯ ಸ್ಪಷ್ಟವಾಗಿ ತಿಳಿಯುತ್ತದೆ. ಈ ವಿಷಯವನ್ನು ಸ್ಪಷ್ಟಪಡಿಸುವುದಕ್ಕೋಸ್ಕರ ಆಚಾರ್ಯ ಮಧ್ವರು ತಮ್ಮ ಉಪನಿಷತ್ ಭಾಷ್ಯದ ಮಂಗಲಾಚರಣೆಯಲ್ಲಿ "***ಹರಯೇ ಸರ್ವಯಜ್ಞ ಭುಜೇ ನಮಃ***" ಎನ್ನುತ್ತಾರೆ. ಅಲ್ಲಿ ವಿಶೇಷವಾಗಿ ಹರಿ ಎನ್ನುವ ಶಬ್ದದ ಬಳಕೆ ಏಕೆಂದರೆ: '***ಸ್ವಾಯಂಭುವೇನ ಮನುನಾ ಹರಿರಿತ್ಯನೂಕ್ತಃ***' "ಸ್ವಾಯಂಭುವ ಮನು ಯಾರನ್ನು ಹರಿ ಎಂದು ಸಾಕ್ಷಾತ್ಕರಿಸಿದನೋ ಅಂತಹ ಹರಿಗೆ ನಮಸ್ಕಾರ" ಎಂದು ಹೇಳುವುದಕ್ಕಾಗಿ ಹಾಗೆ ಹೇಳಿ, ಆನಂತರ ***ಯಸ್ಮಾದ್ಬ್ರಹ್ಮೇನ್ದ್ರರುದ್ರಾದಿದೇವತಾನಾಂ ಶ್ರೀಯೋSಪಿ ಚ, ಜ್ಞಾನಃಸ್ಫೂರ್ತಿಃ ಸದಾ ತಸ್ಮೈ ಹರಯೇ ಗುರುವೇ ನಮಃ.*** ಎಂದು "ನನಗೆ ಗುರುವಾದ ಆ ಹರಿಗೆ ನಮಸ್ಕಾರ" ಎಂದಿದ್ದಾರೆ ಆಚಾರ್ಯರು. ಭಾಗವತವನ್ನು ಓದಿ, ಉಪನಿಷತ್ತನ್ನು ನೋಡಿ ಸಮನ್ವಯ ಮಾಡಿದವರಿಗೆ ಈ ವಿಷಯ ಸ್ಪಷ್ಟವಾಗಿ ತಿಳಿಯುತ್ತದೆ.

ಯಜ್ಞ ನಾಮಕ ಭಗವಂತನನ್ನು ಸ್ತೋತ್ರ ಮಾಡುವುದಕ್ಕೋಸ್ಕರ ಸ್ವಾಯಂಭುವ ಮನು ಕಂಡ ಉಪನಿಷತ್ತೇ ಯಾಜ್ಞೀಯಮಂತ್ರೋಪನಿಷತ್ತು ಎನ್ನುವ ವಿಷಯವನ್ನು ನೋಡಿದೆವು. ಆದರೆ ಅಲ್ಲಿ ನಿಮಗೊಂದು ಪ್ರಶ್ನೆ ಬರಬಹುದು. ಅದೇನೆಂದರೆ: ಇತರ ಉಪನಿಷತ್ತುಗಳೂ ಕೂಡಾ ಮಂತ್ರರೂಪದಲ್ಲಿದ್ದರೂ, ವಿಶೇಷವಾಗಿ ಈ ಉಪನಿಷತ್ತನ್ನು ಮಾತ್ರ ಏಕೆ ಮಂತ್ರೋಪನಿಷತ್ತು ಎಂದು ಕರೆದಿದ್ದಾರೆ ಎಂದು. ಇದಕ್ಕೆ ಒಂದು ವಿಶೇಷ ಕಾರಣವಿದೆ. ವೇದದಲ್ಲಿ ಸಂಹಿತ, ಬ್ರಾಹ್ಮಣ ಮತ್ತು ಆರಣ್ಯಕ ಎನ್ನುವ ಮೂರು ವಿಭಾಗಗಳಿವೆ. ವೇದದ ಸಂಹಿತಾ ಭಾಗ ಮಂತ್ರ ಭಾಗವಾದರೆ, ಬ್ರಾಹ್ಮಣ, ಆರಣ್ಯಕ ಪರಿಶಿಷ್ಠ. ಈಗ ಲಭ್ಯವಿರುವ ಪ್ರಮುಖವಾದ ಒಂಬತ್ತು ಉಪನಿಷತ್ತುಗಳೂ ವೇದದ ಪರಿಶಿಷ್ಠ ಭಾಗದಲ್ಲಿದ್ದರೆ, ಸ್ವಾಯಂಭುವ ಮನು ಕಂಡ, ಯಜ್ಞನಾಮಕ ಭಗವಂತನನ್ನು ಸ್ತುತಿಸುವ ಈ ಉಪನಿಷತ್ತು ಮಾತ್ರ ಕಣ್ವಶಾಖೆಗೆ ಸೇರಿದ ಶುಕ್ಲ ಯಜುರ್ವೇದದ ಸಂಹಿತಾ ಭಾಗದಲ್ಲಿದೆ. ಹೀಗಾಗಿ ವಿಶೇಷವಾಗಿ ಈ ಉಪನಿಷತ್ತಿಗೆ ಮಂತ್ರೋಪನಿಷತ್ತು ಎನ್ನುವ ಹೆಸರು ಬಂದಿದೆ. ಹೀಗೆ ಸ್ವಾಯಂಭುವ ಮನುವಿನ ಮಗಳ ಮಗನಾಗಿ, ಲೋಕದ ವ್ಯವಸ್ಥೆಯನ್ನು ರಕ್ಷಿಸಲು ಬಂದ ರೂಪ ಭಗವಂತನ ಯಜ್ಞ ನಾಮಕ ರೂಪ. ಇದು ಸ್ವಾಯಂಭುವ ಮನ್ವಂತರದಲ್ಲಿ ನಡೆದ ಭಗವಂತನ ಎರಡನೇ ಅವತಾರ.

ಯಜ್ಞ ಎನ್ನುವುದು ಭಗವಂತನ ಎಲ್ಲಾ ರೂಪಗಳಿಗೂ ಅನ್ವಯವಾದ ನಾಮ. "***ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ***" ಎಂದು ಶ್ರೀಕೃಷ್ಣ ಹೇಳಿದಂತೆ, ಯಜ್ಞ ಶಬ್ದ ವಾಚ್ಯತ್ವ ಭಗವಂತನ ಎಲ್ಲಾ ರೂಪಗಳಿಗೂ ಇದೆ. ಇದನ್ನು ಸರಳೀಕರಿಸಿ ವೇದಗಳು ಹೇಳುತ್ತವೆ: "***ಯಜ್ಞೋ ವೈ ವಿಷ್ಣುಃ***" ಎಂದು. [ಈ ಶ್ರುತಿಯನ್ನು ನೆನಪಿಸುವುದಕ್ಕೋಸ್ಕರ ಆಚಾರ್ಯ ಮಧ್ವರು ತಮ್ಮ ಈಶಾವಾಸ್ಯ ಉಪನಿಷತ್ ಭಾಷ್ಯದಲ್ಲಿ ***ಆಕೂತಿಸೂನುಂ ಯಜ್ಞನಾಮಾನಂ ವಿಷ್ಣುಂ ತುಷ್ಟವ*** ಎಂದಿರುವುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು] .ಯಜ್ಞ ಶಬ್ದ ವಾಚ್ಯನಾದವನು ವಿಷ್ಣು. ಏಕೆಂದರೆ ವಿಷ್ಣುವಿನ ಎಲ್ಲಾ ರೂಪಗಳೂ ಯಜ್ಞ ಭೋಕ್ತಾರಗಳೇ. ಆದರೆ ವಿಶೇಷವಾಗಿ ಯಜ್ಞವನ್ನು ಸ್ವೀಕಾರ ಮಾಡುವುದಕ್ಕೋಸ್ಕರವೇ ಆದ ಭಗವಂತನ ಅವತಾರ ಸ್ವಾಯಂಭುವ ಮನ್ವಂತರದಲ್ಲಿ ನಡೆದ ಯಜ್ಞ ನಾಮಕ ಅವತಾರ.

# ಶ್ರದ್ಧೆ-ಜ್ಞಾನವಿಲ್ಲದ ಕರ್ಮ ಕೇವಲ ಪ್ರಾರಾಬ್ಧಕರ್ಮ

ವರಾಹ ರೂಪಿಯಾಗಿ ಬಂದು ಕರ್ಮಕ್ಕೆ ಬೇಕಾದ ಸಮಗ್ರ ಸಾಮಗ್ರಿಯನ್ನು ಸೃಷ್ಟಿ ಮಾಡಿದ ಭಗವಂತ, ಯಜ್ಞ ರೂಪಿಯಾಗಿ ಬಂದು ಕರ್ಮಾಚರಣೆ ಸ್ವೀಕಾರ ಮಾಡಿದ. ಇದರಿಂದ ಕರ್ಮ ಸಾಂಗವಾಗಿ ನಡೆಯಿತು. ಆದರೆ ಕೇವಲ ಕರ್ಮವಾದರೆ ಅದರಿಂದ ಉಪಯೋಗ ಬಹಳ ಕಡಿಮೆ. ಕರ್ಮ ಶಕ್ತಿಶಾಲಿಯಾಗಬೇಕಾದರೆ ಅದು ಜ್ಞಾನಪೂರ್ವಕವಾಗಿರಬೇಕು. ನಮ್ಮಲ್ಲಿ ಎಷ್ಟೋ ಜನ ವ್ರತ, ನಿಯಮ, ಪೂಜೆ, ಪುನಸ್ಕಾರ, ಇತ್ಯಾದಿ ಕರ್ಮ ಮಾಡುತ್ತಾರೆ. ಆದರೆ ಅವರು ಅದನ್ನು ಏಕೆ ಮಾಡುತ್ತಿದ್ದಾರೆ ಎನ್ನುವುದು ಅವರಿಗೇ ತಿಳಿದಿರುವುದಿಲ್ಲ. ಛಾಂಧೋಕ್ಯ ಉಪನಿಷತ್ತಿನಲ್ಲಿ ಹೇಳುವಂತೆ: "***ಯದೇವ ವಿದ್ಯಯಾ ಕರೋತಿ ಶ್ರದ್ಧೆಯ ಉಪನಿಷದಾ, ತದೇವ ವೀರ್ಯವತ್ತರಂ ಭವತಿ , ವಿಜ್ಞಾನಂ ಯಜ್ಞಾಂ ತನುತೇ***". ಅಂದರೆ: "ನೀನು ಏನನ್ನು ಮಾಡಿದರೂ ತಿಳಿದು ಮಾಡು. ಜ್ಞಾನ ಪೂರ್ವಕವಾಗಿ ಮಾಡಿದ ಕರ್ಮ ಸಫಲ. ಇಲ್ಲದಿದ್ದರೆ ಅದು ವ್ಯರ್ಥ". ಮಾಡುವ ಕರ್ಮವನ್ನು ಏತಕ್ಕಾಗಿ ಮಾಡುತ್ತಿದ್ದೇವೆ, ಮಾಡುವುದರ ಫಲವೇನು, ಮಾಡುವುದು ಹೇಗೆ ಎನ್ನುವುದು ನಮಗೆ ಗೊತ್ತಿರಬೇಕು. ಅಜ್ಞಾನದಿಂದ ಮಾಡುವ ಕರ್ಮ ವ್ಯರ್ಥ. ಹಾಗಾಗಿ ಏನೇ ಮಾಡುವುದಿದ್ದರೂ ತಿಳಿದು-ನಂಬಿ ಮಾಡಬೇಕು. ತಿಳಿಯದೇ ಮಾಡಿದರೆ ಅದು ಮೂಢನಂಬಿಕೆಯಾಗುತ್ತದೆ, ನಂಬದೇ ಮಾಡಿದರೆ ಡಂಭಾಚಾರವಾಗುತ್ತದೆ. ಕ್ರಿಯೆಯ ಹಿಂದೆ ತಿಳುವಳಿಕೆ ಮತ್ತು ನಂಬಿಕೆ ಅತ್ಯಗತ್ಯ.

ಇಂದು ನಮ್ಮೆಲ್ಲಾ ಸಮಸ್ಯೆಗಳಿಗೂ ಕಾರಣ ತಿಳುವಳಿಕೆ ಇಲ್ಲದಿರುವುದು. ಕೆಲವರಿಗೆ ತುಂಬಾ ಶ್ರದ್ಧೆ ಇರುತ್ತದೆ. ಆದರೆ ತಿಳುವಳಿಕೆ ಇರುವುದಿಲ್ಲ. ಇದರಿಂದ ಆಗುವ ಅನಾಹುತ ಏನೆಂದರೆ: ನಾವು ನಂಬಿರುವ ಸತ್ಯವನ್ನು ನಮ್ಮ ಮಕ್ಕಳಿಗೆ ನಂಬಿಸಲು ನಮಗೆ ಸಾಧ್ಯವಾಗುವುದಿಲ್ಲ. ಮಕ್ಕಳು "ಏಕೆ ಹೀಗೆ ಮಾಡಬೇಕು" ಎಂದು ಕೇಳಿದರೆ ನಮ್ಮಲ್ಲಿ ಉತ್ತರ ಇರುವುದಿಲ್ಲ. ಇನ್ನು ಕೆಲವರಿಗೆ ಶ್ರದ್ಧೆಯೇ ಇರುವುದಿಲ್ಲ. ಕೇವಲ ಡಂಭಾಚಾರಕ್ಕಾಗಿ ಎಲ್ಲವನ್ನೂ ಮಾಡುತ್ತಾರೆ. ಈ ಎಲ್ಲಾ ಕಾರಣದಿಂದ ನಮ್ಮ ದೇಶದ ಅಪೂರ್ವ ವೀರ್ಯವತ್ತರವಾದ ಪರಂಪರೆ ಮಲಿನವಾಗಿ ನಾಶವಾಗುತ್ತಿದೆ. ಇದಕ್ಕೆ ಬೇರೆ ಯಾರೂ ಕಾರಣರಲ್ಲ. ನಾವು ನಮ್ಮ ಪರಂಪರೆಯನ್ನು ಅರ್ಥ ಮಾಡಿಕೊಂಡು, ನಮ್ಮ ಮುಂದಿನ ಜನಾಂಗಕ್ಕೆ ಹೇಳಿಕೊಡದೇ ಇದ್ದುದರಿಂದ ಅದು ಶಿಥಿಲಗೊಳ್ಳುತ್ತಿದೆ. ಯಜುರ್ವೇದದ ಶಾಂತಿ ಮಂತ್ರ ಹೀಗೆ ಹೇಳಿದೆ: ***ಓಂ ಸಹ ನಾವವತು । ಸಹ ನೌ ಭುನಕ್ತು । ಸಹವೀರ್ಯಂ ಕರವಾವಹೈ । ತೇಜಸ್ವಿ ನಾವಧೀತಮಸ್ತು । ಮಾ ವಿದ್ವಿಷಾವಹೈ ।*** ನಾವು ಮಾಡುವ ಕರ್ಮ ಶಕ್ತಿಶಾಲಿಯಾಗಲು ನಾವದನ್ನು ತಿಳಿದು ಮಾಡೋಣ. ಮೊದಲು ತಿಳಿಯೋಣ, ತಿಳಿದು ಮಾಡೋಣ, ಮಾಡಿ ಇನ್ನೊಬ್ಬರಿಗೆ ತಿಳಿಸೋಣ.

ಜ್ಞಾನವಿಲ್ಲದೇ ಮಾಡುವ ಕರ್ಮ ನಿಷ್ಫಲವೆಂದೇನೂ ಅಲ್ಲ. ಆದರೆ ಅದರಿಂದ ಫಲ ಬಹಳ ಕಡಿಮೆ. ಲಕ್ಷ ಸಿಗುವಲ್ಲಿ ಹತ್ತು ಸಿಕ್ಕಂತೆ. ಗೀತೆಯಲ್ಲಿ ಶ್ರೀಕೃಷ್ಣ ಹೇಳುವಂತೆ: ***ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ.*** ಜ್ಞಾನ ಎನ್ನುವುದು ಸದಾ ಪ್ರಜ್ವಲಿಸುವ ಬೆಂಕಿ. ಅದಕ್ಕಿಂತ ಹೆಚ್ಚು ಶಕ್ತಿಶಾಲಿಯಾದ ಬೆಂಕಿ ಇನ್ನೊಂದಿಲ್ಲ. ಹೇಗೆ ಉರಿಯುವ ಬೆಂಕಿ ಕಟ್ಟಿಗೆಯನ್ನು ಸುಟ್ಟುಬಿಡುತ್ತದೋ, ಹಾಗೇ ಜ್ಞಾನದ ಬೆಂಕಿ ಎಲ್ಲಾ ಪಾಪ ಕರ್ಮಗಳನ್ನೂ ಸುಟ್ಟುಬಿಡುತ್ತದೆ. ***ಕರ್ಮಣಾ ಜ್ಞಾನ ಮಾತನೋತಿ, ಜ್ಞಾನೇನಾಮೃತಿ ಭವತಿ.*** ಕರ್ಮ ಕೇವಲ ಕರ್ಮಕ್ಕೋಸ್ಕರ ಅಲ್ಲ. ಅದು ಜ್ಞಾನಕ್ಕೋಸ್ಕರ. ಯಾವ ಕರ್ಮದಿಂದ ನಮ್ಮ ಜ್ಞಾನ ಬೆಳೆಯುವುದಿಲ್ಲವೋ, ಅದು ನಮ್ಮ ಪ್ರರಾಬ್ಧಕರ್ಮ ಎನಿಸುತ್ತದೆ. ಹೀಗಾಗಿ ಯಜ್ಞಮೂರ್ತಿಯಾಗಿ ಭಗವಂತನ ಯಜ್ಞಾವತಾರವಾದ ಮೇಲೆ, ಜ್ಞಾನವನ್ನು ಕೊಡುವುದಕ್ಕಾಗಿ ಭಗವಂತ

ಜ್ಞಾನಮೂರ್ತಿ ಕಪಿಲವಾಸುದೇವನಾಗಿ ಅವತರಿಸಿ ಬರುತ್ತಾನೆ. ಬನ್ನಿ, ಭಗವಂತನ ಕಪಿಲಾವತಾರದ ವಿಶ್ಲೇಷಣೆಯನ್ನು ಚತುರ್ಮುಖನಿಂದ ಕೇಳಿ ತಿಳಿಯೋಣ.

## ೦೩. ಕಪಿಲ ವಾಸುದೇವನಾಗಿ ಸಾಂಖ್ಯವನ್ನು ಜಗತ್ತಿಗೆ ನೀಡಿದ ಭಗವಂತ

**ಜಜ್ಞೇ ಚ ಕರ್ದಮಗೃಹೇ ದ್ವಿಜ ದೇವಹೂತ್ಯಾಂ ಸ್ತ್ರೀಭಿಃ ಸಮಂ ನವಭಿರಾತ್ಮಗತಿಂ ಸ್ವಮಾತ್ರೇ ।**
**ಊಚೇ ಯ ಆತ್ಮಶಮಲಂ ಗುಣಸಂಗಪಂಕಮಸ್ಮಿನ್ ವಿಧೂಯ ಕಪಿಲಃ ಸ್ವಗತಿಂ ಪ್ರಪೇದೇ ॥೦೩॥**

ಸ್ವಾಯಂಭುವ ಮನುವಿನ ಮಗಳಾದ ದೇವಹೂತಿಯ ಮದುವೆ ಕರ್ದಮ ಪ್ರಜಾಪತಿಯೊಂದಿಗೆ ನಡೆಯುತ್ತದೆ. ಈ ದಂಪತಿಗಳ ದಾಂಪತ್ಯ ಫಲವಾಗಿ, ಒಂಬತ್ತು ಮಂದಿ ಹೆಣ್ಣು ಮಕ್ಕಳ ನಂತರ ಹುಟ್ಟಿದ ಗಂಡು ಮಗುವೇ ಭಗವಂತನ ಕಪಿಲ ಅವತಾರ. ಈತನೇ '*ಸೇಶ್ವರ ಸಾಂಖ್ಯ*' ವನ್ನು ತನ್ನ ತಾಯಿಗೆ ಉಪದೇಶಿಸಿ ಲೋಕಕ್ಕೆ ಸಾಂಖ್ಯವನ್ನು ಕೊಟ್ಟ ಕಪಿಲವಾಸುದೇವ.

ಕರ್ದಮರ ಮನೆಯಲ್ಲಿ ಕಪಿಲ ಅವತರಿಸಿ ಬಂದ ಎನ್ನುವ ಮಾತನ್ನು ನೋಡಿದೆವು. ಇಲ್ಲಿ ಕರ್ದಮ ಎನ್ನುವ ಹೆಸರಿನ ಅರ್ಥ ನಮಗೆ ಪರಿಚಿತವಾದುದಲ್ಲ. ಈ ಪದದ ಅರ್ಥವನ್ನು ಕೋಶದಲ್ಲಿ ಹುಡುಕಿದರೆ ಅಲ್ಲಿ 'ಕೆಸರು' ಎನ್ನುವ ಅರ್ಥವನ್ನು ಕಾಣುತ್ತೇವೆ. ಆದರೆ ಈ ನಾಮಕ್ಕೆ ವಿಶೇಷವಾದ ನಿರ್ವಚನವಿದೆ. ಕರ್+ದಮ=ಕರ್ದಮ. ಅಂದರೆ ಇಂದ್ರಿಯ ನಿಗ್ರಹದ ಜೊತೆಗೆ(ದಮ) ಕರ್ತವ್ಯ ಕರ್ಮದಲ್ಲಿ(ಕರ್, ಕರೋತಿ) ನಿರತನಾದವನು ಕರ್ದಮ. ಈ ನಾಮವನ್ನು ಭಗವಂತನಿಗೆ ಅನ್ವಹಿಸಿ ನೋಡಿದರೆ: ದುಷ್ಟಶಕ್ತಿಯನ್ನು ದಮನ ಮಾಡಿ ವಿಶ್ವವನ್ನು ರಕ್ಷಣೆ ಮಾಡುವ ಭಗವಂತ ಕರ್ದಮ.

ಈ ಹಿಂದೆ ಹೇಳಿದಂತೆ ಕರ್ದಮ-ದೇವಹೂತಿಯರಿಗೆ ಮೊದಲು ಹುಟ್ಟಿದ್ದು ಒಂಬತ್ತು ಮಂದಿ ಹೆಣ್ಣು ಮಕ್ಕಳು. ಹೀಗೆ ಒಂಬತ್ತು ಮಂದಿ ಹೆಣ್ಣು ಮಕ್ಕಳೇ ಹುಟ್ಟಿದಾಗ ದೇವಹೂತಿಗೆ ಪಶ್ಚಾತ್ತಾಪವಾಯಿತಂತೆ. ತಪಸ್ವಿಯಾದ ತನ್ನ ಗಂಡನಿಗೆ ಜ್ಞಾನಿಯಾದ ಒಬ್ಬ ಮಗ ಹುಟ್ಟಲಿಲ್ಲವಲ್ಲಾ ಎಂದು ಆಕೆ ಚಿಂತಿಸಿದಾಗ, ಕರ್ದಮರು ಹೇಳುತ್ತಾರೆ: "ನೀನು ಪಶ್ಚಾತ್ತಾಪ ಪಡುವ ಅಗತ್ಯವಿಲ್ಲ. ಸೃಷ್ಟಿಯಲ್ಲಿ ಯಾವುದೂ ಆಗಬಾರದ್ದು ಆಗುವುದಿಲ್ಲ. ಹೆಣ್ಣು ಹುಟ್ಟುವುದು ಕೀಳಲ್ಲ, ಗಂಡು ಹುಟ್ಟುವುದೇ ಮೇಲಲ್ಲ. ಪ್ರತಿಯೊಂದಕ್ಕೂ ಒಂದು ಉದ್ದೇಶ ಇರುತ್ತದೆ. ಈ ಒಂಬತ್ತು ಮಂದಿ ಹೆಣ್ಣು ಮಕ್ಕಳು ಭಗವಂತನ ಸೃಷ್ಟಿ ವಿಸ್ತಾರದಲ್ಲಿ ಮಹತ್ವದ ಪಾತ್ರ ವಹಿಸುತ್ತಾರೆ. ಇದಲ್ಲದೇ ನೀನು ಜಗತ್ತಿಗೆ ಗಂಡು ಮಗುವೊಂದನ್ನು ಕೂಡಾ ಕೊಡಲಿದ್ದೀಯ" ಎಂದು. ಕರ್ದಮರ ಮಾತು ಸುಳ್ಳಾಗಲಿಲ್ಲ. ಒಂಬತ್ತು ಮಂದಿ ಹೆಣ್ಣು ಮಕ್ಕಳ ನಂತರ ಸ್ವಯಂ ಭಗವಂತನೇ ದೇವಹೂತಿಯಲ್ಲಿ ಕಪಿಲ ನಾಮಕನಾಗಿ ಅವತರಿಸಿ ಬಂದ.

ಕರ್ದಮ ತನ್ನ ಒಂಬತ್ತು ಮಂದಿ ಹೆಣ್ಣು ಮಕ್ಕಳನ್ನು ಒಂಬತ್ತು ಮಂದಿ ಪ್ರಜಾಪತಿಗಳಿಗೆ ಮದುವೆ ಮಾಡಿ ಕೊಟ್ಟ. ಅವರೆಂದರೆ: ಸಪ್ತರ್ಷಿಗಳು(ಮರೀಚಿ, ಅತ್ರಿ, ಆಂಗೀರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ), ಭೃಗು ಮತ್ತು ಅಥರ್ವ. ಈ ನವಪ್ರಜಾಪತಿಗಳಿಂದ ಪ್ರಜಾ ವಿಸ್ತಾರವಾಯಿತು. ಈ ಘಟನೆಯಿಂದ ನಮಗೆ ತಿಳಿಯುವುದೇನೆಂದರೆ: ಸೃಷ್ಟಿಯ ವಿಸ್ತಾರಕ್ಕೆ ಗಂಡು ಮಾತ್ರ ಸಾಲದು. ಎಂದೂ ಯಾವುದೂ ಅನುಪಯುಕ್ತವಲ್ಲ. ಯಾವಾಗ ಎಲ್ಲಿ ಏನು ಬೇಕೋ ಅದಕ್ಕನುಗುಣವಾಗಿ ಭಗವಂತ ಸೃಷ್ಟಿ ಮಾಡುತ್ತಾನೆ. ಹೀಗಾಗಿ ಎಂದೂ ಹೆಣ್ಣು ಮಗು ಎಂದು ಯಾರೂ ಪಶ್ಚಾತ್ತಾಪ ಪಡುವ ಅಗತ್ಯವಿಲ್ಲ.

ಕಪಿಲ ಎನ್ನುವುದು ಭಗವಂತನ ವಿಶೇಷ ನಾಮ. ಕಪಿ+ಲ=ಕಪಿಲ. ಬಾಹ್ಯಾನಂದದ ಸ್ಪರ್ಶವೇ ಇಲ್ಲದೆ, ಅಂತರಂಗದ ಆನಂದವನ್ನು ಸದಾ ಪಾನ ಮಾಡುತ್ತಿರುವವನು 'ಕಪಿ' (ಕಂ-ಪಿಬತಿ=>ಕಪಿ). ಈ ರೀತಿ ಅಂತರಂಗದ ಆನಂದವನ್ನು ಹಂಬಲಿಸುವವರಿಗೆ ಅದನ್ನು ನೀಡಿ, ಅವರನ್ನು ಸ್ವೀಕಾರ(ಲಾತಿ) ಮಾಡುವ, ಸ್ವರೂಪಾನಂದದಲ್ಲೇ ಮುಳುಗಿರುವ ಮೋಕ್ಷಪ್ರದ ಭಗವಂತ ಕಪಿಲ. ಇಂತಹ ಕಪಿಲ ಶುದ್ಧ ಆತ್ಮತತ್ತ್ವ ವಿಜ್ಞಾನ(ಸಾಂಖ್ಯ)ವನ್ನು ಮೊಟ್ಟಮೊದಲು ತನ್ನ ತಾಯಿ ದೇವಹೂತಿಗೆ ಉಪದೇಶಿಸಿದ. ಇದೇ ಮುಂದೆ 'ಸಾಂಖ್ಯ' ಎಂದು ಹೆಸರಾಯಿತು.

ಇಲ್ಲಿ ನಾವು ಇನ್ನೊಂದು ವಿಷಯವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಭಗವಂತ ಕಪಿಲನಾಗಿ ಬಂದು ಸಾಂಖ್ಯವನ್ನು ಪ್ರಪಂಚಕ್ಕೆ ನೀಡಿರುವುದು ಸ್ವಾಯಂಭುವ ಮನ್ವಂತರದಲ್ಲಿ. ಆದರೆ ವೈವಸ್ವತ ಮನ್ವಂತರದಲ್ಲಿ ಕಪಿಲ ಎನ್ನುವ ಹೆಸರಿನ ಒಬ್ಬ ಋಷಿ ಕೂಡಾ ಒಂದು ಸಾಂಖ್ಯವನ್ನು ನೀಡಿದ್ದಾನೆ. ಆದರೆ ಆ ಸಾಂಖ್ಯ ನಿರೀಶ್ವರ ಸಾಂಖ್ಯ. ಅಲ್ಲಿ ಆತ ಭಗವಂತನನ್ನೇ ನಂಬುವುದಿಲ್ಲ! ಭಾಗವತ ಹೇಳುವುದು ಆ ಕಪಿಲನನ್ನಲ್ಲ, ಬದಲಿಗೆ ಸ್ವಾಯಂಭುವ ಮನ್ವಂತರದಲ್ಲಿ ಅವತರಿಸಿ ಸೇಶ್ವರ ಸಾಂಖ್ಯವನ್ನು ನೀಡಿದ ಕಪಿಲ ವಾಸುದೇವನನ್ನು.

ಕಪಿಲ ಮೊತ್ತಮೊದಲು ಸಾಂಖ್ಯವನ್ನು ಉಪದೇಶ ಮಾಡಿದ್ದು ತನ್ನ ತಾಯಿಗೆ. ಇದಕ್ಕೆ ಕಾರಣ ತಾಯಿ ದೇವಹೂತಿಯ ಕೋರಿಕೆ. "ನನಗೆ ಮತ್ತೆ ಈ ಸಂಸಾರ ಬೇಡ, ಇದರಿಂದ ಪಾರಾಗುವ ದಾರಿ ತೋರಿಸು" ಎಂದು ಕಪಿಲನನ್ನು ಕೇಳಿದ ತಾಯಿಗೆ ಕಪಿಲ ಅಧ್ಯಾತ್ಮ ತತ್ತ್ವವನ್ನು ಉಪದೇಶಿಸಿದ. ಮೇಲಿನ ಶ್ಲೋಕದಲ್ಲಿ '*ಸ್ವಮಾತ್ರೇ*' ಎನ್ನುವ ಪದ ಬಳಕೆಯಾಗಿದೆ. ಸಂಸ್ಕೃತದಲ್ಲಿ 'ಮಾತೃ' ಶಬ್ದ ಸ್ತ್ರೀಲಿಂಗವಾದಾಗ 'ತಾಯಿ' ಎನ್ನುವ ಅರ್ಥವನ್ನು ಕೊಡುತ್ತದೆ. ಅದನ್ನೇ ಪುಲ್ಲಿಂಗದಲ್ಲಿ ನೋಡಿದರೆ 'ಭಗವಂತನನ್ನು ತಿಳಿದವನು ಅಥವಾ ಜ್ಞಾನದ ಮಾರ್ಗದಲ್ಲಿ ಸಾಗುವವನು' ಎನ್ನುವ ಅರ್ಥವನ್ನು ಮಾತೃ ಪದ ಕೊಡುತ್ತದೆ. ಇದು ಸಂಸ್ಕೃತ ಭಾಷೆಯ ಸೊಬಗು. ಒಟ್ಟಿನಲ್ಲಿ ಹೇಳಬೇಕೆಂದರೆ: ಅತ್ಯದ್ಭುತವಾದ ಅಧ್ಯಾತ್ಮ ತತ್ತ್ವವನ್ನು ತನ್ನ ತಾಯಿಯ ಮುಖೇನ ಜ್ಞಾನವನ್ನು ಬಯಸುವ ಪ್ರತಿಯೊಬ್ಬರಿಗೂ ಭಗವಂತ ಕಪಿಲ ರೂಪದಲ್ಲಿ ಅವತರಿಸಿ ನೀಡಿದ. .

'ಸಾಂಖ್ಯ' ಎಂದರೆ ಸರಿಯಾದ ತಿಳುವಳಿಕೆ. ಪ್ರಾಚೀನರು ಸಂಖ್ಯಾಶಾಸ್ತ್ರ(**Numerology**) ಮತ್ತು ಅಧ್ಯಾತ್ಮ ವಿದ್ಯೆ(**Spiritual wisdom**) ಎರಡನ್ನೂ ಜೊತೆಯಾಗಿ ಬಳಸುತ್ತಿದ್ದರು. ಹೀಗಾಗಿ ಎರಡಕ್ಕೂ ಸಾಂಖ್ಯಾ ಎನ್ನುವ ಹೆಸರು ಬಂತು. ಭಾಷೆ ಸ್ಪಷ್ಟತೆಯನ್ನು ಕೊಡುತ್ತದಾದರೂ ಸಹ ಅಲ್ಲಿ ಖಚಿತತೆ ಇರುವುದಿಲ್ಲ. ಒಬ್ಬ ವ್ಯಕ್ತಿ ಯಾವ ಅರ್ಥವನ್ನು ಅನುಸಂಧಾನ ಮಾಡಿ ಯಾವ ಶಾಸ್ತ್ರದ ಹಿನ್ನೆಲೆಯಲ್ಲಿ ಮಾತನಾಡಿದ ಎನ್ನುವುದು ತಕ್ಷಣ ಇನ್ನೊಬ್ಬರಿಗೆ ತಿಳಿಯದೇ ಹೋಗಬಹುದು. ಇದರಿಂದ ಒಬ್ಬ ವ್ಯಕ್ತಿ ಆಡಿದ ಮಾತನ್ನು ಒಬ್ಬೊಬ್ಬರು ಅವರವರ ಅನುಭವದ ಹಿನ್ನೆಲೆಯಲ್ಲಿ ಒಂದೊಂದು ರೀತಿ ಅರ್ಥಮಾಡಿಕೊಳ್ಳಬಹುದು. ಹೀಗಾಗಿ ಭಾಷೆಗೆ ಒಂದು ಖಚಿತತೆಯನ್ನು ಕೊಡಬೇಕಾದರೆ ಅಲ್ಲಿ ಸಂಖ್ಯೆಯನ್ನು ಬಳಸಬೇಕಾಗುತ್ತದೆ. ಇಂತಹ ಒಂದು ಹೊಸ ವಿಧಾನವನ್ನು ಪ್ರಾಚೀನರು ಆರಂಭಿಸಿ ಬೆಳೆಸಿದರು. ಇಂತಹ ವಿಧಾನವನ್ನು ಲೋಕಕ್ಕೆ ಕೊಟ್ಟವನು ಕಪಿಲವಾಸುದೇವ. ಆತ ತನ್ನ ತಾಯಿಗೆ ವಿವರಿಸಿದ ಸಾಂಖ್ಯದ ಒಂದು ಉದಾಹರಣೆ ಹೀಗಿದೆ: *ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ* (ಭಾಗವತ: ೩-೨೬-೧೧). ಇದರ ಸಂಕ್ಷಿಪ್ತ ಅರ್ಥ ಹೀಗಿದೆ: ಮೊದಲು ಐದು ತತ್ವಗಳಿದ್ದವು(ಪಂಚಭೂತಗಳು), ಆ ಐದರಲ್ಲಿ ಐದು ಗುಣಗಳಿವೆ(ಪಂಚತನ್ಮಾತ್ರೆಗಳು). ಈ ಐದು ಗುಣಗಳನ್ನು ಗ್ರಹಣ ಮಾಡಿ ಕಾರ್ಯಗತಗೊಳಿಸಲು ಹತ್ತು ಇಂದ್ರಿಯಗಳಿವೆ(ಪಂಚಜ್ಞಾನೇಂದ್ರಿಯಗಳು ಮತ್ತು ಪಂಚಕರ್ಮೇಂದ್ರಿಯಗಳು). ಈ ಇಂದ್ರಿಯಗಳ ನಿರ್ವಹಣೆಯಾಗುವುದು ನಾಲ್ಕು ಅಂತಃಕರಣದಿಂದ(ಮನಸ್ಸು, ಬುದ್ಧಿ, ಅಹಂಕಾರ ಮತ್ತು ಚಿತ್ತ). ಪ್ರಪಂಚ ಎಂದರೆ ಈ ಇಪ್ಪತ್ತನಾಲ್ಕು. ಈ ೨೪ ಜಡಗಳನ್ನು ಅನುಭವಿಸುವ ಚೇತನ

ಇಪ್ಪತ್ತೈದು ಮತ್ತು ಚೇತನಾಚೇತನ ಪ್ರಪಂಚವನ್ನು ನಿಯಂತ್ರಿಸುವವನು ಇಪ್ಪತ್ತಾರನೇ ಭಗವಂತ. ಇದು ಸಂಖ್ಯೆಯ ಮುಖೇನ ಭಗವಂತ ನೀಡಿದ ಬ್ರಹ್ಮಾಂಡದ ವಿವರಣೆ. (ಈ ಕುರಿತು ಹೆಚ್ಚಿನ ವಿವರಣೆ ಮುಂದಿನ ಸ್ಕಂಧದಲ್ಲಿ ಬರುತ್ತದೆ). ತ್ರಿಗುಣಗಳಿಂದ ಕೊಳೆಯಾಗಿರುವ ನಮ್ಮ ಆತ್ಮತತ್ತ್ವವನ್ನು ತೊಳೆದು ಸ್ವಚ್ಛಗೊಳಿಸುವುದಕ್ಕಾಗಿ ಭಗವಂತ ಕಪಿಲ ರೂಪದಲ್ಲಿ ಬಂದು ಸಾಂಖ್ಯವನ್ನು ಜಗತ್ತಿಗೆ ನೀಡಿದ.

## ೦೪. ಯೋಗ ಪ್ರವರ್ತಕ ರೂಪ-ಭಗವಂತನ ದತ್ತ ನಾಮಕ ರೂಪ

**ಅತ್ರೇರಪತ್ಯಮಭಿಕಾಂಕ್ಷತ ಆಹ ತುಷ್ಟೋ ದತ್ತೋ ಮಯಾSಹಮಿತಿ ಯದ್ ಭಗವಾನ್ ಸ ದತ್ತಃ**
**ಯತ್ಪಾದಪಂಕಜಪರಾಗಪವಿತ್ರದೇಹಾ ಯೋಗರ್ದ್ಧಿಮಾಪುರಮಯೀಂ ಯದುಹೈಹಯಾದ್ಯಾಃ ॥೦೪॥**

ಸ್ವಾಯಂಭುವ ಮನುವಿನ ಮಗಳಾದ ದೇವಹೂತಿಯ ಒಂಬತ್ತು ಮಂದಿ ಹೆಣ್ಣುಮಕ್ಕಳಲ್ಲಿ ಒಬ್ಬಳಾದ ಅನಸೂಯೆಯ ಮದುವೆ ಅತ್ರಿಯೊಂದಿಗೆ ನಡೆಯುತ್ತದೆ. ಅತ್ರಿ-ಅನಸೂಯೆಯರು ಸೃಷ್ಟಿ-ಸ್ಥಿತಿ-ಸಂಹಾರ ಮಾಡಿ ಜಗತ್ತನ್ನು ನಿಯಂತ್ರಣ ಮಾಡುವ ಭಗವದ್ ಶಕ್ತಿಯೇ ತಮ್ಮಲ್ಲಿ ಮಗುವಾಗಿ ಹುಟ್ಟಿ ಬರಬೇಕೆಂದು ಬಯಸಿ ತಪಸ್ಸು ಮಾಡಿದಾಗ, ಅದಕ್ಕೆ ಮೆಚ್ಚಿದ ಭಗವಂತ ಪ್ರಸನ್ನನಾಗಿ ಹೇಳುತ್ತಾನೆ: "ನಿಮ್ಮ ತಪಸ್ಸಿಗೆ ನಾನು ಮೆಚ್ಚಿಕೊಂಡಿದ್ದೇನೆ ಮತ್ತು ನಾನು ನಿಮಗೆ ನನ್ನನ್ನು ಕೊಟ್ಟುಕೊಂಡಿದ್ದೇನೆ(ದತ್ತನಾಗಿದ್ದೇನೆ)" ಎಂದು. ಇದರಿಂದಾಗಿ ಅತ್ರಿ-ಅನಸೂಯೆಯರ ದಾಂಪತ್ಯದ ಫಲದಲ್ಲಿ ಹುಟ್ಟಿದ ಶಿಶುವಿಗೆ ದತ್ತ ಎನ್ನುವ ಹೆಸರು ಬರುತ್ತದೆ. ದತ್ತ ಅತ್ರಿಯ ಮಗನಾಗಿ ಹುಟ್ಟಿ ಬಂದುದರಿಂದ ಆತ ದತ್ತಾತ್ರೇಯನೆಂದು ಹೆಸರಾಗುತ್ತಾನೆ.

ಅತ್ರಿ-ಅನಸೂಯೆಯರು ಸೃಷ್ಟಿ-ಸ್ಥಿತಿ-ಸಂಹಾರ ಮಾಡುವ ಸಮಸ್ತ ಶಕ್ತಿಗಳೂ ಮೈದಾಳಿ ತಮ್ಮ ಸಂತಾನವಾಗಿ ಬರಬೇಕೆಂದು ಕೇಳಿಕೊಂಡಿರುವುದರಿಂದ, ಭಗವಂತ ಚತುರ್ಮುಖ ಬ್ರಹ್ಮ ಮತ್ತು ಶಿವನನ್ನೂ ಕೂಡಾ ಅವರ ಮಕ್ಕಳಾಗಿ ಹುಟ್ಟಿ ಬರುವಂತೆ ತಿಳಿಸುತ್ತಾನೆ[ಭಗವಂತ ಬ್ರಹ್ಮನೊಳಗೆ ನಿಂತು ಸೃಷ್ಟಿಯನ್ನೂ ಹಾಗೂ ಶಿವನೊಳಗೆ ನಿಂತು ಸಂಹಾರವನ್ನೂ ಮಾಡುವ ವಿಷಯವನ್ನು ನಾವು ಈ ಹಿಂದೆ ನೋಡಿದ್ದೇವೆ]. ಇಲ್ಲಿ ಚತುರ್ಮುಖ ಬ್ರಹ್ಮ ಅವತಾರ ರೂಪಿಯಾಗಿ ಹುಟ್ಟಿ ಬರುವಂತಿಲ್ಲವಾದ್ದರಿಂದ, ಜಗತ್ತಿನ ಸೃಷ್ಟಿ ವಿಸ್ತಾರಕ್ಕೆ ಮೂಲ ಕಾರಣಶಕ್ತಿಯಾದ ಚಂದ್ರ ಅತ್ರಿಯ ಮಗನಾಗಿ ಹುಟ್ಟುತ್ತಾನೆ ಮತ್ತು ಚತುರ್ಮುಖ ಆತನಲ್ಲಿ ಆವಿಷ್ಟನಾಗಿರುತ್ತಾನೆ. ಶಿವ ದುರ್ವಾಸನಾಗಿ ಅವತರಿಸಿ ಬರುತ್ತಾನೆ.

ಇಲ್ಲಿ ಚಂದ್ರನೊಂದಿಗೆ ಚತುರ್ಮುಖ ಆವಿಷ್ಟನಾಗಿ ಅವತರಿಸಿದ ವಿಷಯವನ್ನು ನೋಡಿದೆವು. ಸೋಮಶಕ್ತಿ ಸೃಷ್ಟಿವಿಸ್ತಾರದಲ್ಲಿನ ಒಂದು ಮಹತ್ತಾದ ಕಾರಣಶಕ್ತಿ. ***ಅಗ್ನಿ-ಸೋಮಾತ್ಮಕಂ ಜಗತ್.*** ಈ ಜಗತ್ತಿನಲ್ಲಿರುವ ಸಮಸ್ತ ವನಸ್ಪತಿಗಳು, ಸಮಸ್ತ ಆಹಾರಗಳು ಸೋಮನಿಗೆ ಸಂಬಂಧಿಸಿರುವಂತಹದ್ದು. ಅದನ್ನು ಬೇಯಿಸಿ ತಿನ್ನುವುದಕ್ಕೆ ಬೇಕಾದ ಶಕ್ತಿ ಅಗ್ನಿಶಕ್ತಿ. [ಹೀಗಾಗಿ ಹೋಮಮಾಡುವಾಗ ಮೊದಲು ಚಕ್ಷುರ್ ಹೋಮ ಮಾಡುತ್ತಾರೆ. ಅಲ್ಲಿ ಪುರೋಹಿತರು ***ಅಗ್ನಿ-ಸೋಮಾಭ್ಯಂ ಸ್ವಾಹಾ*** ಎಂದು ಹೇಳಿ ಅಗ್ನಿಯ ಕಣ್ಣಿಗೆ ಆಹುತಿ ಕೊಡುತ್ತಾರೆ. ಹೋಮ ಕುಂಡದಲ್ಲಿ ಅಗ್ನಿಯ ಮುಖವನ್ನು ಮನಸ್ಸಿನಲ್ಲಿ ರೂಪಿಸಿಕೊಂಡು ಕಣ್ಣಿನ ಭಾಗಕ್ಕೆ ತುಪ್ಪವನ್ನು ಹಾಕುತ್ತಾರೆ. ಇದಾದ ನಂತರವೇ ವ್ಯಾಹೃತಿ ಮಂತ್ರಗಳಿಂದ ಅಗ್ನಿಯ ಬಾಯಿಗೆ ಆಹುತಿ ಕೊಡುತ್ತಾರೆ. ಇದು ಯಜ್ಞದಲ್ಲಿ ಆಹುತಿ ಕೊಡುವ ಕ್ರಮ. ಊಟ ಮಾಡುವುದೂ ಕೂಡಾ ಒಂದು ಬಗೆಯ ಹೋಮ. ಇದು ನಮ್ಮೊಳಗಿರುವ ಪ್ರಾಣನಲ್ಲಿ

ಸನ್ನಿಹಿತನಾಗಿರುವ, ಪಂಚರೂಪಿಯಾದ ನಾರಾಯಣನಿಗೆ ಮಾಡುವ ಹೋಮ. ಇಲ್ಲಿಯೂ ಕೂಡಾ ಆಹುತಿ ಕೊಡುವ ಮೊದಲು ಚಕ್ಷುರ್ ಹೋಮ ನಡೆಯಬೇಕಲ್ಲವೇ ? ಇದಕ್ಕಾಗಿಯೇ ತುಪ್ಪ ಬಡಿಸುವುದು. ಹೀಗೆ ಬಡಿಸುವಾಗ ಒಂದು ಬಾರಿ ಬಡಿಸದೇ ಅಗ್ನಿ-ಸೋಮರ ಪ್ರೀತಿಗಾಗಿ ಎರಡು ಬಾರಿ ಬಡಿಸಬೇಕು. ಇದನ್ನು 'ಅಭಿಘಾರ' ಎನ್ನುತ್ತಾರೆ].

ಅತ್ರಿ-ಅನಸೂಯೆಯರ ತಪಸ್ಸಿನ ಫಲವಾಗಿ ವಿಷ್ಣು 'ದತ್ತ'ನಾಗಿ, ಬ್ರಹ್ಮ 'ಸೋಮ'ನಾಗಿ ಮತ್ತು ಶಿವ 'ದುರ್ವಾಸ'ನಾಗಿ ಭೂಮಿಯಲ್ಲಿ ಅವತರಿಸಿ ಬರುತ್ತಾರೆ [ಈ ಹಿಂದೆ, ಮೊದಲ ಸ್ಕಂಧದಲ್ಲಿ ಹೇಳಿರುವಂತೆ: ಸಾಮಾನ್ಯವಾಗಿ ದತ್ತಾತ್ರೇಯ ಎಂದಾಗ ಮೂರು ತಲೆ ಏಕ ಶರೀರ ಮತ್ತು ತಲೆಯಲ್ಲಿ ಚಂದ್ರನಿರುವ ಚಿತ್ರವನ್ನು ಚಿತ್ರಕಾರರು ಚಿತ್ರಿಸುತ್ತಾರೆ. ಆದರೆ ಶಾಸ್ತ್ರದಲ್ಲಿ ಎಲ್ಲೂ ಈ ರೀತಿ ರೂಪದ ವಿವರಣೆ ಇಲ್ಲ. ದತ್ತ, ದುರ್ವಾಸ ಮತ್ತು ಚಂದ್ರ ಈ ಮೂವರು ಮೂರು ಶರೀರದಲ್ಲಿ ಅವತರಿಸಿ ಬಂದ ರೂಪಗಳು. ಇಲ್ಲಿ ಚಂದ್ರ ಎಂದರೆ ಚಂದ್ರ ಗ್ರಹವಲ್ಲ, ದೇವತೆ] .

'ದತ್ತ' ಯೋಗ ಮಾರ್ಗದ ಮಹಾ ಪ್ರವರ್ತಕ. ಆತ ಕರ್ಮವನ್ನು ಕರ್ಮಯೋಗವನ್ನಾಗಿಯೂ, ಜ್ಞಾನವನ್ನು ಜ್ಞಾನಯೋಗವಾಗಿಯೂ ಮಾಡಿದ. ಬದುಕಿನಲ್ಲಿ ಯೋಗ ಸಾಧನೆಯಿಂದ ಎತ್ತರಕ್ಕೇರುವ ವಿಧಾನವನ್ನು ಉಪದೇಶ ಮಾಡಿದ ಭಗವಂತನ ರೂಪ ಈ ದತ್ತರೂಪ. ದತ್ತಾತ್ರೇಯ ಯೋಗ ಸಾಧನೆಯ ಅತ್ಯುನ್ನತ ಸ್ಥಿತಿಯನ್ನು ತಾನು ಮಾಡಿ ತೋರಿದ ಮತ್ತು ಪ್ರಪಂಚಕ್ಕೆ ಉಪದೇಶಿಸಿದ. ದತ್ತಾತ್ರೇಯ ನಡೆದಾಡಿದ ಸ್ಥಳದಲ್ಲಿ ಹೊರಳಾಡಿದರೂ ಸಾಕು, ಯೋಗ ಸಿದ್ಧಿಯಾಗುತ್ತದೆ ಎನ್ನುವ ಮಾತಿದೆ. ಅಂತಹ ಮಹಾ ಯೋಗಪ್ರವರ್ತಕ ದತ್ತಾತ್ರೇಯ.

ಇಲ್ಲಿ ನಾರದರಿಗೆ ಭಗವಂತನ ಅವತಾರದ ಕಥೆಯನ್ನು ವಿವರಿಸುತ್ತಿರುವ ಚತುರ್ಮುಖ ಹೇಳುತ್ತಾನೆ: "***ಅಮಯೀ ಯೋಗರ್ಧಿ***" ಎಂದು. ದತ್ತಾತ್ರೇಯ ಅ-ಕಾರ ವಾಚ್ಯನಾದ ನಾರಾಯಣನನ್ನು ಪ್ರತಿಪಾದಿಸುವ ಯೋಗವನ್ನು ಲೋಕಕ್ಕೆ ಬಿತ್ತರಿಸಿದ. ಇದು ಸ್ವಾಯಂಭುವ ಮನ್ವಂತರದಲ್ಲಿ ಆದ ಅವತಾರ. ಆದರೆ ವೈವಸ್ವತ ಮನ್ವಂತರಲ್ಲೂ ಕೂಡಾ ದತ್ತಾತ್ರೇಯನ ಶಿಷ್ಯರನ್ನು ನಾವು ಕಾಣುತ್ತೇವೆ. ಯಾದವ ಕುಲದ ಮೂಲ ಪುರುಷನಾದ ಯದು, ಕಾರ್ತವೀರ್ಯಾರ್ಜುನ, ಹೀಗೆ ಅನೇಕ ಮಂದಿಗೆ ಜ್ಞಾನಮಾರ್ಗವನ್ನು ಉಪದೇಶ ಮಾಡಿದ ಯೋಗಮೂರ್ತಿಯಾಗಿ ದತ್ತಾತ್ರೇಯ ನಿಲ್ಲುತ್ತಾನೆ.

## ೦೫. ಪಾಲನೆ ಹಾಗೂ ಜ್ಞಾನ ಪ್ರವರ್ತಕ ರೂಪ-ಭಗವಂತನ ವಿಷ್ಣು ನಾಮಕ ರೂಪ

**ತಪ್ತಂ ತಪೋ ವಿವಿಧಲೋಕಸಿಸೃಕ್ಷಯಾ ಮ ಆದೌ ಸನಾತ್ ಸುತಪಸಸ್ತಪತಃ ಸ ನೋSಭೂತ್ ।**
**ಪ್ರಾಕ್ಕಲ್ಪಸಂಪ್ಲವವಿನಷ್ಟಮಿಹಾತ್ಮತತ್ತ್ವಂ ಸಮ್ಯಗ್ ಜಗಾದ ಮುನಯೋ ಯದಚಕ್ಷತಾತ್ಮನ್ ॥೦೫॥**

ಚತುರ್ಮುಖ ಬ್ರಹ್ಮ ಸೃಷ್ಟಿ ವಿಸ್ತಾರಕ್ಕೆ ಬೇಕಾದ ಶಕ್ತಿಯನ್ನು ಪಡೆಯುವುದಕ್ಕೋಸ್ಕರ ಭಗವಂತನನ್ನು ಕುರಿತು ತಪಸ್ಸು ಮಾಡಿದಾಗ, ಭಗವಂತ ವಿಷ್ಣು ನಾಮಕನಾಗಿ ಚತುರ್ಮುಖನಿಂದ ಆವಿರ್ಭಾವನಾಗಿ ಬಂದ. ಈ ಅವತಾರ ಸನಕಾದಿಗಳ ಸೃಷ್ಟಿಯಾಗುವ ಮೊದಲೇ ನಡೆದ ಅವತಾರ. "ಇದು ಕೇವಲ ಪಾಲನೆ ಮಾಡುವ ಅವತಾರವಷ್ಟೇ ಅಲ್ಲ, ಈ ಅವತಾರದಲ್ಲಿ ಭಗವಂತ ನಷ್ಟವಾಗಿದ್ದ ಹಿಂದಿನ ಕಲ್ಪದಲ್ಲಿದ್ದ ಜ್ಞಾನ ಪರಂಪರೆಯನ್ನು ನನಗೆ ಉಪದೇಶ ಮಾಡಿದ. ಅದನ್ನು ಎಲ್ಲಾ ಋಷಿಗಳು ತಮ್ಮ ಅಂತರಾತ್ಮದಲ್ಲಿ ಕಂಡು ಉಪಾಸನೆ ಮಾಡಿದರು" ಎಂದಿದ್ದಾನೆ ಚತುರ್ಮುಖ.

## ೦೬. ತಪಸ್ಸು ಅಂದರೇನು ಎಂದು ತೋರಿದ ಭಗವಂತನ ನರ-ನಾರಾಯಣ ರೂಪ

ಧರ್ಮಸ್ಯ ದಕ್ಷದುಹಿತರ್ಯಜನಿ ಸ್ವಮೂರ್ತ್ಯಾಂ ನಾರಾಯಣೋ ನರ ಇತಿ ಸ್ವತಪಃಪ್ರಭಾವಃ ।
ದೃಷ್ಟ್ವಾತ್ಮನೋ ಭಗವತೋ ನಿಯಮಾವಲೋಪಂ ದೇವ್ಯಸ್ತ್ವನಂಗಪೃತನಾ ಘಟಿತುಂ ನ ಶೇಕುಃ ॥೦೬॥

ಕಾಮಂ ದಹಂತಿ ಕೃತಿನೋ ನನು ರೋಷದೃಷ್ಟ್ಯಾ ರೋಷಂ ದಹಂತಮುತ ತೇ ನ ದಹಂತ್ಯಸಹ್ಯಮ್ ।
ಸೋSಯಂ ಯದಂತರಮಲಂ ನಿವಿಶನ್ ಬಿಭೇತಿ ಕಾಮಃ ಕಥಂ ನು ಪುನರಸ್ಯ ಮನಃ ಶ್ರಯೇತ ॥೦೭॥

ಸ್ವಾಯಂಭುವ ಮನುವಿನ ಕೊನೇಯ ಮಗಳು 'ಪ್ರಸೂತಿ' ದಕ್ಷಪ್ರಜಾಪತಿಯ ಹೆಂಡತಿ. ಇವರ ದಾಂಪತ್ಯದಲ್ಲಿ ಹುಟ್ಟಿದ ಹದಿಮೂರು ಮಂದಿ ಹೆಣ್ಣು ಮಕ್ಕಳನ್ನು 'ಧರ್ಮ' ಮದುವೆಯಾದ. ಈ ಹದಿಮೂರು ಮಂದಿಯಲ್ಲಿ ಕೊನೆಯವಳಾದ 'ಮೂರ್ತಿ' ಎನ್ನುವವಳಲ್ಲಿ ಭಗವಂತ ನರ-ನಾರಾಯಣನಾಗಿ ಅವತರಿಸಿದ. ಒಂದು ಆವೇಶ ರೂಪ(ನರ) ಹಾಗೂ ಇನ್ನೊಂದು ಸ್ವರೂಪರೂಪ(ನಾರಾಯಣ). ನರ ಶೇಷನ ಸ್ವರೂಪರೂಪ. ಆತನಲ್ಲಿ ಭಗವಂತನ ಆವೇಶವಿತ್ತು. ನಾರಾಯಣ ಎನ್ನುವುದು ಭಗವಂತನ ಸ್ವರೂಪರೂಪ. [ಇದೇ ದಂಪತಿಗಳಲ್ಲಿ ಹರಿ ಮತ್ತು ಕೃಷ್ಣ ಎನ್ನುವ ಎರಡು ಭಗವಂತನ ರೂಪಗಳ ಅವತಾರವಾಗಿದ್ದು, ಅದನ್ನು ಇಲ್ಲಿ ವಿವರಿಸಿಲ್ಲ]. ನರ-ನಾರಾಯಣ ರೂಪ ತಪಸ್ಸು ಅಂದರೆ ಏನು ಎಂದು ಜಗತ್ತಿಗೆ ತೋರಿದ ಲೋಕೋದ್ಧಾರಕ ರೂಪ. ***ಲೋಕ ಸಂಗ್ರಹಃ ಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ.*** ಲೋಕಶಿಕ್ಷಣಕ್ಕಾಗಿ ತಪಸ್ಸು ಮಾಡಿ ಆತ್ಮಸಾಕ್ಷಾತ್ಕಾರ ಪಡೆಯುವುದು ಹೇಗೆ ಎಂದು ತೋರಿದ ಭಗವಂತನ ರೂಪವಿದು. ಆತ ತಪಸ್ಸು ಮಾಡಿ ಆತ್ಮಸಾಕ್ಷಾತ್ಕಾರ ಪಡೆದವನಂತೆ ಕುಳಿತಿರುವಾಗ ಆತನ ತಪಸ್ಸನ್ನು ಭಂಗಗೊಳಿಸಲು ಕಾಮದೇವನ ಸೈನ್ಯ ಆತನ ಮೇಲೆ ಲಗ್ಗೆ ಇಟ್ಟಿತಂತೆ. ಆದರೆ ನರ-ನಾರಾಯಣರ ನಿಯಮ ಲೋಪ ಮಾಡಲು ಯಾರಿಂದಲೂ ಸಾಧ್ಯವಾಗಲಿಲ್ಲ. ಅವರು ಕಾಮಕ್ಕೂ ಬಲಿಯಾಗಲಿಲ್ಲ, ಕೋಪಕ್ಕೂ ಬಲಿಯಾಗಲಿಲ್ಲ. ಹೀಗೆ ನಿಜವಾದ ತಪಸ್ಸು ಎಂದರೆ ಏನು ಎನ್ನುವುದನ್ನು ಭಗವಂತ ತನ್ನ ನರ-ನಾರಾಯಣ ರೂಪದಲ್ಲಿ ಜಗತ್ತಿಗೆ ತೋರಿಸಿಕೊಟ್ಟ.

## ೦೭. ಬಾಲಕನಿಗೊಲಿದ 'ಧ್ರುವ ವರದ ವಾಸುದೇವ' ರೂಪ

ವಿದ್ಧಃ ಸಪತ್ನ್ಯುದಿತಪತ್ರಿಭಿರಂತಿ ರಾಜ್ಞೋ ಬಾಲೋSಪಿ ಸನ್ನುಪಗತಸ್ತಪಸೇ ವನಾಯ ।
ತಸ್ಮಾ ಅದಾದ್ ಧ್ರುವಗತಿಂ ಗೃಣತೇ ಪ್ರಸನ್ನೋ ದಿವ್ಯಾಃ ಸ್ತುವಂತಿ ಮುನಯೋ ಯದುಪರ್ಯಧಸ್ತಾತ್ ॥೮॥

ಸ್ವಾಯಂಭುವ ಮನುವಿನ ಮಗನಾದ ಉತ್ತಾನಪಾದನಿಗೆ ಇಬ್ಬರು ಹೆಂಡದಿರು. ಹಿರಿಯ ರಾಣಿ ಸುನೀತಿ ಹಾಗೂ ಕಿರಿಯವಳು ಸುರುಚಿ. ಸುನೀತಿಯ ಮಗ ಧ್ರುವ. ಈ ಧ್ರುವನ ತಪಸ್ಸಿಗೆ ಮೆಚ್ಚಿ ಒಲಿದು ಬಂದ ಭಗವಂತನ ರೂಪವೇ ಧ್ರುವವರದ ವಾಸುದೇವ ರೂಪ. ಸಾಮಾನ್ಯವಾಗಿ ತಪಸ್ಸು ಮಾಡಿದವರಿಗೆ ಭಗವಂತ ಕೊಡುವ ದರ್ಶನರೂಪವನ್ನು ಒಂದು ಅವತಾರ ರೂಪ ಎಂದು ಪರಿಗಣಿಸುವುದಿಲ್ಲ. ಆದರೆ ಧ್ರುವನಿಗೊಲಿದ ವಾಸುದೇವ ರೂಪವನ್ನು ಒಂದು ಅವತಾರವಾಗಿ ಪರಿಗಣಿಸಿರುವುದು ವಿಶೇಷ. ಈ ವಾಸುದೇವ ರೂಪ ಭಗವಂತನ ಮೂಲ ವಾಸುದೇವ ರೂಪವಲ್ಲ.

ಕೇಶವಾದಿ ಚತುರ್ವಿಂಶತಿ ರೂಪದಲ್ಲಿ ಸೇರಿದ ವಾಸುದೇವ ರೂಪ ಮತ್ತು ವಿಷ್ಣು ಸಹಸ್ರನಾಮದಲ್ಲಿ ಬರುವ ವಾಸುದೇವ ರೂಪ ಇದಲ್ಲ. ಇದು ಧ್ರುವನಿಗಾಗಿ ಭಗವಂತ ತಳೆದ ಅವತಾರ ರೂಪ. ಇದು ಧ್ರುವನ ಮೇಲೆ ಭಗವಂತ ತೋರಿದ ವಿಶಿಷ್ಠ ಕರುಣೆಯನ್ನು ತೋರಿಸುತ್ತದೆ. ಪ್ರಕಾಶಸಂಹಿತದಲ್ಲಿ ಹೇಳುವಂತೆ: ***ಅವತಾರೋ ಮಹಾವಿಷ್ಣೋರ್ವಾಸುದೇವ ಇತೀರಿತಃ, ಯೋ ಧ್ರುವಾಯ ನಿಜಂ ಪ್ರಾದಾತ್ ಸ್ಥಾನಮನ್ಯಾನಧಿಷ್ಠಿತಮ್***. ತನ್ನ ಒಂದು ಲೋಕವನ್ನು ಧ್ರುವನಿಗೆ ಕೊಟ್ಟ ವಿಷ್ಣುವಿನ ಅವತಾರ ಈ ವಾಸುದೇವ ಅವತಾರ.

ಧ್ರುವನ ಕುರಿತಾದ ಕಥೆ ಮುಂದೆ ವಿಸ್ತಾರವಾಗಿ ಬರುತ್ತದೆ. ಸಂಕ್ಷಿಪ್ತವಾಗಿ ಧ್ರುವನ ಕಥೆಯನ್ನು ಹೇಳಬೇಕೆಂದರೆ: ಧ್ರುವ ಉತ್ತಾನಪಾದನ ಹಿರಿಯ ಹೆಂಡತಿ ಸುನೀತಿಯ ಮಗ. ಉತ್ತಾನಪಾದನಿಗೆ ಇಬ್ಬರು ಹೆಂಡತಿಯರು. ಹಿರಿಯವಳು ಸುನೀತಿ ಹಾಗೂ ಕಿರಿಯವಳು ಸುರುಚಿ. ಈ ಹೆಸರುಗಳೇ ಸೂಚಿಸುವಂತೆ ಇವರು ಈ ಕಥೆಯಲ್ಲಿ ಹೆಣ್ಣಿನ ಗುಣದ ಎರಡು ಮುಖಗಳನ್ನು ಪ್ರತಿನಿಧಿಸುತ್ತಾರೆ. ಸುನೀತಿ ತುಂಬಾ ನೀತಿವಂತೆ. ಇದು ಹೆಣ್ಣಿನಲ್ಲಿರಬಹುದಾದ ವಿಶೇಷ ಗುಣ. ಗಂಡು ನೀತಿ ತಪ್ಪಬಹುದು ಆದರೆ ನೀತಿವಂತ ಹೆಣ್ಣು ಎಂದೂ, ಯಾವ ಸಂದರ್ಭದಲ್ಲೂ ನೀತಿ ತಪ್ಪಲಾರಳು. ಇನ್ನು ಸುರುಚಿ ಹೆಣ್ಣಿನ ವೇಷಭೂಷಣ, ಅಭಿರುಚಿ, ಆಸೆ-ಆಕಾಂಕ್ಷೆ, ಸ್ವಾಮ್ಯತೆ**(Possessiveness),** ಇತ್ಯಾದಿ ಗುಣಗಳನ್ನು ಪ್ರತಿನಿಧಿಸುವ ಗುಣದಾಕೆ. ಎಲ್ಲವೂ ತಾನು ಅಂದುಕೊಂಡಂತೆ ಆಗಬೇಕು ಎನ್ನುವ ಮನೋಭಾವ ಸುರುಚಿಯದು. ಹಾಗೆ ಆಗದಿದ್ದಾಗ ಆಕೆ ಚಂಡಿಯಾಗುತ್ತಿದ್ದಳು! ಇನ್ನು ಗಂಡಿನ ದೌರ್ಬಲ್ಯವನ್ನು ಪ್ರತಿನಿಧಿಸುವ ಪಾತ್ರ ಉತ್ತಾನಪಾದನದು. ಆತ ತಲೆ ಕೆಳಗೆ ಕಾಲು ಮೇಲೆ ಎಂಬಂತೆ ನೀತಿಗಿಂತ ಮುಖ್ಯವಾಗಿ ಅಭಿರುಚಿಯನ್ನು ಬಯಸಿ, ರೂಪಕ್ಕೆ ಮರುಳಾಗಿ, ಸುನೀತಿಗಿಂತ ಹೆಚ್ಚಾಗಿ ಸುರುಚಿಯನ್ನು ಬಯಸಿದ. ಇದರ ಪರಿಣಾಮ ಸುರುಚಿಗೆ ಅಹಂಕಾರ ಬೆಳೆಯಿತು.

ಒಮ್ಮೆ ಧ್ರುವ ತನ್ನ ತಂದೆಯ ತೊಡೆಯಮೇಲೆ ಕುಳಿತುಕೊಳ್ಳಬೇಕು ಎಂದು ಆಸೆಪಟ್ಟ . ಇದನ್ನು ಕಂಡ ಸುರುಚಿ ಆತನಿಗೆ ಗದರಿ, ಆತನನ್ನು ಉತ್ತಾನಪಾದನ ತೊಡೆಯಿಂದ ಕೆಳಗಿಳಿಸಿ, "ನೀನು ಆ ತೊಡೆಯೇರಬೇಕಾದರೆ ನನ್ನ ಹೊಟ್ಟೆಯಲ್ಲಿ ಹುಟ್ಟಬೇಕಿತ್ತು" ಎಂದು ತೀಕ್ಷ್ಣವಾಗಿ ಹೇಳಿ, "ಹೋಗು, ದೇವರಲ್ಲಿ ಆ ರೀತಿ ಪ್ರಾರ್ಥಿಸು" ಎಂದು ಕಳುಹಿಸಿಬಿಟ್ಟಳು. ಈ ಸಂದರ್ಭದಲ್ಲಿ ಹೆಂಡತಿಯ ದಾಸನಾಗಿದ್ದ ಉತ್ತಾನಪಾದ ಏನನ್ನೂ ಹೇಳಲಿಲ್ಲ! ಇದರಿಂದ ದುಃಖಿತನಾದ ಧ್ರುವ ತಾಯಿ ಸುನೀತಿಯ ಬಳಿ ಬಂದು ನಡೆದ ಘಟನೆಯನ್ನು ವಿವರಿಸಿದ. ಆತನನ್ನು ಸಾಂತ್ವಾನಗೊಳಿಸಿದ ಸುನೀತಿ, "ದೇವರನ್ನು ಅನನ್ಯವಾಗಿ ಪ್ರಾರ್ಥಿಸಿದರೆ ಆತ ನಮ್ಮ ಕಷ್ಟವನ್ನು ಪರಿಹರಿಸಿ ಇಷ್ಟಾರ್ಥವನ್ನು ಪೂರೈಸುತ್ತಾನೆ" ಎಂದು ಸಹಜವಾಗಿ ಹೇಳಿದಳು. ಇದನ್ನು ಗಾಢವಾಗಿ ಮನಸ್ಸಿನಲ್ಲಿಟ್ಟುಕೊಂಡ ಐದು ವರ್ಷದ ಬಾಲಕ ಧ್ರುವ, ಭಗವಂತನನ್ನು ಕಾಣಬೇಕು ಎಂದು ಮನೆ ಬಿಟ್ಟು ಕಾಡಿಗೆ ನಡೆದೇಬಿಟ್ಟ. ಈ ರೀತಿ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬೇಕು ಎನ್ನುವ ಧೃಡಮನಸ್ಸಿನಿಂದ ಕಾಡಿನಲ್ಲಿ ನಡೆಯುತ್ತಿದ್ದ ಧ್ರುವನನ್ನು ಋಷಿಗಳು ಹರಸಿದರು. ನಾರದರು ಬಂದು ಆತನಿಗೆ "***ಓಂ ನಮೋ ಭಗವತೇ ವಾಸುದೇವಾಯ***" ಎನ್ನುವ ವಾಸುದೇವ ದ್ವಾದಶಾಕ್ಷರ ಮಂತ್ರ ಉಪದೇಶ ಮಾಡಿ ಹರಸಿದರು. [ಐದು ವರ್ಷದ ಧ್ರುವನಿಗೆ ಉಪನಯನವಾಗದೇ ಇದ್ದರೂ ಸಹ, ಸಿದ್ಧಪುರುಷರಾದ ನಾರದರು ಆ ಕೊರತೆಯನ್ನು ನೀಗಿಸಿ ಉಪದೇಶ ಮಾಡಿದರು ಎನ್ನುವುದನ್ನು ನಾವಿಲ್ಲಿ ತಿಳಿದುಕೊಳ್ಳಬೇಕು. ಸಿದ್ಧಪುರುಷರು ಯಾವ ಕೊರತೆಯನ್ನು ಕೂಡಾ ನೀಗಿಸಬಲ್ಲರು] ಹೀಗೆ ಮುನ್ನಡೆದ ಧ್ರುವ ಅನ್ನ-ನೀರನ್ನು ತೊರೆದು, ಭಗವಂತನ ಕುರಿತು ಐದು ತಿಂಗಳು ತಪಸ್ಸು ಮಾಡಿ, ಆತನನ್ನು ಒಲಿಸಿಕೊಂಡ. ಧ್ರುವನ ಭಕ್ತಿಗೆ ಮೆಚ್ಚಿದ ಭಗವಂತ ಪ್ರತ್ಯಕ್ಷನಾಗಿ ಮಗುವನ್ನು ಸಂತೈಸುತ್ತಾ ಹೇಳುತ್ತಾನೆ: ನೀನು ತಂದೆಯ ತೊಡೆಯಲ್ಲಿ ಮಾತ್ರವಲ್ಲ, ಸಿಂಹಾಸನದಲ್ಲೇ ಕೂಡುತ್ತಿ; ಮುಂದೆ ಇಡಿಯ ಜ್ಯೋತಿಶ್ಚಕ್ರದ ಒಡೆತನ ನಿನ್ನದಾಗುತ್ತದೆ. ಎಲ್ಲಕ್ಕಿಂತ ಎತ್ತರದಲ್ಲಿ ನೀನಿರುವೆ" ಎಂದು.

ಹೀಗೆ ಕೇವಲ ತಂದೆಯ ತೊಡೆ ಮತ್ತು ಸಿಂಹಾಸನವನ್ನಷ್ಟೇ ಅಲ್ಲದೇ, ದೇವತೆಗಳು, ಮುನಿಗಳು ಸ್ತುತಿಸುವ ಶಿಂಶುಮಾರರೂಪಿಯಾದ ಭಗವಂತನ ಸ್ಥಾನವಾದ ಧ್ರುವಲೋಕವನ್ನು ಆತ ಪಡೆಯುತ್ತಾನೆ.

## ೦೮. ಪೃಥುವಿನಲ್ಲಿ ಪೃಥುವಾದ ಭಗವಂತ

ಯದ್ ವೇನಮುತ್ಪಥಗತಂ ದ್ವಿಜವಾಕ್ಯವಜ್ರ ನಿಷ್ಪ್ಲಿಷ್ಟಪೌರುಷಭಗಂ ನಿರಯೇ ಪತಂತಮ್ ।
ಜ್ಞಾತ್ವಾSರ್ಥಿತೋ ಜಗತಿ ಪುತ್ರಪದಂ ಚ ಲೇಭೇ ದುಗ್ಧಾ ವಸೂನಿ ವಸುಧಾ ಸಕಲಾನಿ ಯೇನ ॥೦೯॥

ಧ್ರುವನ ವಂಶದಲ್ಲೇ ಸುಮಾರು ೮-೧೦ ತಲೆಮಾರಿನ ನಂತರ ಭಗವಂತ ಆವೇಶಾವತಾರ ರೂಪಿಯಾಗಿ ಬಂದಿರುವುದನ್ನು ನಾವು ಕಾಣುತ್ತೇವೆ. ಧ್ರುವನ ವಂಶಸ್ಥನಾದ ಅಂಗರಾಜ ಒಬ್ಬ ಒಳ್ಳೆಯ ಅರಸನಾಗಿದ್ದ. ಆದರೆ ಆತನಿಗೆ 'ವೇನ' ಎನ್ನುವ ಅತ್ಯಂತ ಕೆಟ್ಟ ಸ್ವಭಾವದ ಮಗ ಹುಟ್ಟಿದ. "***ವೇನ ಪೀಡಾಯಾಮ್***" ಹೆಸರೇ ಹೇಳುವಂತೆ ವೇನ ಅದೆಷ್ಟು ಕ್ರೂರಿಯಾಗಿದ್ದ ಎಂದರೆ, ಆಟವಾಡುವಾಗ ಚಿಕ್ಕ-ಚಿಕ್ಕ ಮಕ್ಕಳನ್ನು ನೀರಿಗೆ ತಳ್ಳಿ ಅಲ್ಲಿ ಅವರು ಒದ್ದಾಡಿ ಸಾಯುವುದನ್ನು ಕಂಡು ಆತ ಖುಶಿ ಪಡುತ್ತಿದ್ದ.[ವೇನ ಎನ್ನುವ ಪದಕ್ಕೆ ಜ್ಞಾನ-ಬಲಗಳ ಒಡೆಯ ಎನ್ನುವ ಅರ್ಥವೂ ಇದೆ. ಪ್ರಾಯಃ ಅಂಗರಾಜ ಈ ಅರ್ಥದಲ್ಲಿ ಮಗನಿಗೆ ವೇನ ಎನ್ನುವ ನಾಮಕರಣ ಮಾಡಿರಬೇಕು. ಆದರೆ ಆತ ಸಮಾಜ ಕಂಟಕ ವೇನನಾದ]. ಇಂತಹ ಮಗನನ್ನು ಸರಿಪಡಿಸಲು ಅಂಗರಾಜನಿಂದ ಸಾಧ್ಯವಾಗಲಿಲ್ಲ. ಮಕ್ಕಳಾಗಲಿಲ್ಲ ಎಂದು ಕೊರಗುವವರಿದ್ದಾರೆ, ಆದರೆ ಅಂಗರಾಜ ಮಕ್ಕಳಾಯಿತಲ್ಲಾ ಎಂದು ಕೊರಗುವಂತಾಯಿತು! "ಇಂತಹ ನೀಚ ಮಗ ಹುಟ್ಟುವುದಕ್ಕಿಂತ ನಾನು ಅಪ್ಪನಾಗದೇ ಇದ್ದಿದ್ದರೆ ಚೆನ್ನಾಗಿರುತ್ತಿತ್ತು" ಎಂದು ಆತ ಮರುಗುವಂತಾಯಿತು.

ಮಗನ ದೂರ್ತತನವನ್ನು ನೋಡಲಾಗದೇ ಒಂದು ದಿನ ಅಂಗರಾಜ ಯಾರಿಗೂ ಹೇಳದೇ ಅರಮನೆ ಬಿಟ್ಟು ಹೊರಟು ಹೋದ. ಆತ ಎಲ್ಲಿಗೆ ಹೋದ ಮತ್ತು ಏನಾದ ಎನ್ನುವುದನ್ನು ಪುರಾಣ ದಾಖಲಿಸುವುದಿಲ್ಲ. ಅಂಗರಾಜ ಹೊರಟುಹೋದ ಮೇಲೆ ವೇನ ತಾನೇ ರಾಜ್ಯಭಾರವನ್ನು ಕೈಗೆತ್ತಿಕೊಂಡ. ಸಿಂಹಾಸನವೇರಿದ ಆತ ಮೊದಲು ಮಾಡಿದ ಆಜ್ಞೆ ಏನೆಂದರೆ: "ಯಾರೂ ದೇವರನ್ನು ಪೂಜಿಸಕೂಡದು. ಎಲ್ಲರಿಗೂ ದೇವರು ನಾನೇ" ಎಂದು. ದೇಶದಲ್ಲಿ ಬರಗಾಲದಿಂದಾಗಿ, ಹಸಿವಿನಿಂದ ಜನ ಸಾಯುವ ಪರಿಸ್ಥಿತಿ ಬಂದು ಜನ ತತ್ತರಿಸಲಾರಂಭಿಸಿದರು. ಆದರೆ ಕ್ರೂರಿಯಾಗಿದ್ದ ವೇನ ಮಾತ್ರ ಬದಲಾಗಲಿಲ್ಲ. ಈ ಸಂದರ್ಭದಲ್ಲಿ ಋಷಿಗಳು ವೇನನಿಗೆ ಬುದ್ಧಿ ಕಲಿಸುವ ಸಂಕಲ್ಪ ಮಾಡಿದರು. ಹಿಂದೆ ರಾಜಸತ್ತೆ ಇದ್ದರೂ ಅದಕ್ಕೊಂದು ಗಣತಂತ್ರದ ಮುಖವಿತ್ತು. ರಾಜ ದಾರಿತಪ್ಪಿದಾಗ ಆತನನ್ನು ಅಧಿಕಾರದಿಂದ ಇಳಿಸುವ ಹಕ್ಕು ಪ್ರಜೆಗಳಿಗಿತ್ತು. ಹೀಗೆ ಋಷಿಗಳೆಲ್ಲರೂ ಸೇರಿ, ಭಗವಂತನನ್ನು ಪ್ರಾರ್ಥಿಸಿಕೊಂಡರು. ಅವರು ತಮ್ಮ ತಪಃಶಕ್ತಿಯನ್ನು ಬಳಸಿ, ಹೂಂಕಾರದಿಂದ ವೇನನನ್ನು ನಿಗ್ರಹಿಸಿ, ಅವನ ತೊಡೆಯ ಮಥನ ಮಾಡಿ, ಅಲ್ಲಿಂದ ಒಂದು ತೇಜಸ್ಸನ್ನು ತೆಗೆದು ಆತನನ್ನು ತಮ್ಮ ರಾಜನನ್ನಾಗಿ ಮಾಡಿದರು. ಆತನೇ ಪೃಥು. ಇದು ಭಗವಂತನ ಆವೇಶಾವತಾರ. ಋಷಿಗಳ ಪ್ರಾರ್ಥನೆಯನ್ನು ಮನ್ನಿಸಿ, ಪೃಥು ಚಕ್ರವರ್ತಿಯೊಳಗೆ ಪೃಥುವಾಗಿ ನಿಂತು, ನಾಗರೀಕತೆಯನ್ನು ಬೆಳೆಸಿ, ದೇಶವನ್ನು ಸಮೃದ್ಧ ಮಾಡಿದ ಭಗವಂತನ ಅವತಾರವಿದು. ಈ ಕಾರಣದಿಂದಾಗಿಯೇ ಭೂಮಿಗೆ ಪೃಥಿವಿ (ಪೃಥು ರಾಜನ ಮಗಳು) ಎನ್ನುವ ಹೆಸರು ಬಂತು.

# ೦೯. ವೈರಾಗ್ಯಮೂರ್ತಿ ವೃಷಭದೇವ

ನಾಭೇರಸಾವೃಷಭ ಆಸ ಸುದೇವಿಸೂನುರ್ಯೋ ವೈ ಚಚಾರ ಸಮದೃಗ್ ಹೃದಿ ಯೋಗಚರ್ಯಾಮ್ ।
ಯತ್ ಪಾರಮಹಂಸ್ಯಮೃಷಯಃ ಪದಮಾಮನಂತಿ ಸ್ವಸ್ಥಃ ಪ್ರಶಾಂತಕರಣಃ ಪರಿಮುಕ್ತಸಂಗಃ ॥೧೦॥

ಉತ್ತಾನಪಾದನ ಸಹೋದರ ಪ್ರಿಯವ್ರತ. ಈತ ಏನೂ ಬೇಡ ಎಂದು ವೈರಾಗ್ಯದಿಂದ ತಪಸ್ಸನ್ನಾಚರಿಸುತ್ತಿದ್ದ. ಆಗ ಬ್ರಹ್ಮದೇವರು ಬಂದು ಆತನ ತಪಸ್ಸಿನ ಉದ್ದೇಶ ಏನು ಎಂದು ಕೇಳುತ್ತಾರೆ. ಆಗ ಆತ "ಎಲ್ಲವನ್ನೂ ತೊರೆದು ನಿವೃತ್ತ ಜೀವನದಿಂದ ಭಗವಂತನ ಅನುಗ್ರಹ ಪಡೆಯಬೇಕು ಎನ್ನುವ ಉದ್ದೇಶದಿಂದ ತಾನು ತಪಸ್ಸನ್ನಾಚರಿಸುತ್ತಿದ್ದೇನೆ" ಎಂದನಂತೆ. ಆಗ ಬ್ರಹ್ಮದೇವರು ಹೇಳುತ್ತಾರೆ: "ಕೇವಲ ಸಂನ್ಯಾಸ ಜೀವನದಿಂದ ಮಾತ್ರ ಭಗವಂತನ ಒಲುಮೆ ಸಾಧ್ಯ ಎನ್ನುವ ನಿನ್ನ ಕಲ್ಪನೆ ತಪ್ಪು. ಕೆಲವರಿಗೆ ಸಂನ್ಯಾಸದಿಂದ ಭಗವಂತನ ಅನುಗ್ರಹ, ಇನ್ನು ಕೆಲವರಿಗೆ ಗ್ರಹಸ್ತ ಜೀವನದಿಂದ ಅನುಗ್ರಹ. ಯಾರು ಭಗವಂತನ ಉಪಾಸನೆ ಮಾಡುತ್ತಾರೋ ಅವರನ್ನು ಭಗವಂತ ಉದ್ಧಾರ ಮಾಡುತ್ತಾನೆ. ಜೀವಯೋಗ್ಯತೆಗೆ ಅನುಕೂಲವಾದಂತಹ ಸಾಧನೆ ಶ್ರೇಷ್ಠ. ನೀನು ಸಂನ್ಯಾಸಿಯಾಗಿ ಸಾಧನೆ ಮಾಡಲು ಹುಟ್ಟಿದವನಲ್ಲ. ನೀನು ಗ್ರಹಸ್ಥನಾಗು, ರಾಜ್ಯಭಾರ ಮಾಡಿ ಅದರ ಮೂಲಕ ಭಗವಂತನ ಸೇವೆ ಮಾಡು" ಎಂದು. ಬ್ರಹ್ಮದೇವರ ಆದೇಶದಂತೆ ಪ್ರಿಯವ್ರತ ಗ್ರಹಸ್ತನಾದ. ಚಕ್ರವರ್ತಿಯಾಗಿ ಮೆರೆದ. ಪ್ರಿಯವ್ರತನ ಹೆಂಡದಿರರಲ್ಲಿ ಒಬ್ಬಳಾದ ***'ಬರ್ಹಿಷ್ಮತಿ'*** ಎನ್ನುವವಳಲ್ಲಿ ***'ಆಗ್ನೀಂಧ್ರ'*** ಎನ್ನುವ ಮಗ ಹುಟ್ಟಿದ. ಈ ಆಗ್ನೀಂಧ್ರನ ಮಗನ ಹೆಸರು ***ನಾಭಿ***. ಈ ನಾಭಿ ರಾಜನ ಹೆಂಡತಿ ಸುದೇವಿ/ಸುಮೇರು. ಈ ದಂಪತಿಗಳು ತಮಗೆ ಭಗವಂತನಂತಹ ಮಗ ಹುಟ್ಟಬೇಕು ಎಂದು ಅಪೇಕ್ಷೆಪಟ್ಟು ಯಜ್ಞ ಮಾಡುತ್ತಾರೆ. ಭಗವಂತನಂತಹ ಇನ್ನೊಬ್ಬ ಮಗ ಇರಲು ಸಾಧ್ಯವೇ? ಹೀಗಾಗಿ ದಂಪತಿಗಳ ಅಪೇಕ್ಷೆಯಂತೆ ಸ್ವಯಂ ಭಗವಂತನೇ ಅವರ ಮಗನಾಗಿ ಹುಟ್ಟಬೇಕಾಯಿತು. ಅವನೇ ವೃಷಭದೇವ. ಈತ ಮುಂದೆ ಚಕ್ರವರ್ತಿಯಾಗಿ ಮೆರೆದ. ಈತನ ಮಗನ ಹೆಸರು ಭರತ. ಈ ಭರತ ಚಕ್ರವರ್ತಿಯಿಂದಾಗಿ ಈ ದೇಶಕ್ಕೆ ಭಾರತ ಎನ್ನುವ ಹೆಸರು ಬಂತು[ದುಃಷಂತನ ಮಗ ಭರತ ಮತ್ತು ವೃಷಭದೇವನ ಮಗ ಭರತ ಬೇರೆಬೇರೆ.(ಸೂಚನೆ: ದುಷ್ಯಂತ ಎನ್ನುವುದು ಅಪಶಬ್ದ. ಸರಿಯಾದ ಬಳಕೆ ದುಃಷಂತ) ದುಃಷಂತನ ಮಗ ಭರತನಿಂದಾಗಿ ಈ ದೇಶವನ್ನಾಳಿದ ರಾಜವಂಶಕ್ಕೆ ಭಾರತವಂಶ ಎನ್ನುವ ಹೆಸರು ಬಂತು] ಈ ಹಿಂದೆ ಹೇಳಿದಂತೆ ಈ ದೇಶದ ಹೆಸರು ಅಂಜನಾಭ ಎಂದಿದ್ದು, ಭರತ ಚಕ್ರವರ್ತಿಯ ಆಡಳಿತ ಕಾಲದ ನಂತರ ಅದು ಭಾರತ ಎನ್ನುವ ಹೆಸರಿನಿಂದ ಕರೆಯಲ್ಪಟ್ಟಿತು.

ವೃಷಭದೇವನಾಗಿ ಭಗವಂತನ ಅವತಾರ ಸ್ವಾಯಂಭುವ ಮನ್ವಂತರದ ಒಂದು ವಿಶೇಷ. ಜೈನಧರ್ಮದ ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ವೃಷಭದೇವನೂ ಒಬ್ಬ ಮತ್ತು ಆತನನ್ನು ಆದಿ ತೀರ್ಥಂಕರ ಎಂದು ಕರೆಯುತ್ತಾರೆ. ವೃಷಭದೇವನ ಕಾಲದ ನಂತರ ವೈದಿಕ ಮತಕ್ಕಿಂತ ಭಿನ್ನವಾದ ಒಂದು ಕವಲು ಪ್ರಾರಂಭವಾಯಿತು. ಕೆಲವರು ವೃಷಭನನ್ನು ನೋಡಿ ತಮ್ಮದೇ ಆದ ಒಂದು ಪಂಥ ಕಟ್ಟಿದರು. ಹೀಗೆ ಮಾಡಿದವರಲ್ಲಿ ಮೊದಲಿಗ 'ಜಿನ'. ಹೀಗಾಗಿ ಆ ಪಂಥಕ್ಕೆ 'ಜೈನ' ಎನ್ನುವ ಹೆಸರು ಬಂತು. ವೃಷಭದೇವನಿಂದಾಗಿ ಈ ದೇಶದ ಆಧ್ಯಾತ್ಮಿಕ ವಿಚಾರಧಾರೆ ಎರಡು ಕವಲಾಯಿತು.

ವೃಷಭದೇವ ಚಕ್ರವರ್ತಿಯಾಗಿ ಮೆರೆದ, ಆದರೂ ಕೂಡಾ ಸಂನ್ಯಾಸಿಯಂತೆ ಬದುಕಿ ತೋರಿಸಿದ. ಜನರಿಗೆ ಸರಿಯಾದ ಆಡಳಿತ ಕೊಟ್ಟು ಅವರನ್ನು ಸರಿಯಾದ ರೀತಿಯಲ್ಲಿ ಇರಗೊಳಿಸಿದ ವೃಷಭದೇವ, ಅರಮನೆಯ ಭೋಗದಲ್ಲಿ ಆಸಕ್ತಿ ತೋರದೇ ಸಂನ್ಯಾಸಿಯಂತೆ ಬದುಕಿ ತೋರಿದ. ವೃಷಭದೇವನ ಬದುಕು ಸಂನ್ಯಾಸಿಗಳಲ್ಲಿ ಅತ್ಯಂತ ಎತ್ತರದ ಸ್ಥಾನದಲ್ಲಿರುವ ಪರಮಹಂಸರಿಗೆ ಉದಾಸ್ಯವಾಯಿತು. [ಸಂನ್ಯಾಸದಲ್ಲಿ ನಾಲ್ಕು ಬಗೆ. ಕುಟೀಚಕ, ಬಹೂದಕ, ಹಂಸ, ಪರಮಹಂಸ. ಮನೆಯಲ್ಲಿ ಇದ್ದು ಸಂನ್ಯಾಸ ಮಾಡುವವ ಕುಟೀಚಕ. ಮನೆಯನ್ನು ತೊರೆಯದೆ ಹತ್ತೂರು ತಿರುಗುವವನು ಬಹೂದಕ. ಯಜ್ಞೋಪವೀತ ತೊರೆಯದ ದಂಡಿ ಹಂಸ. ಅಗ್ನಿಮುಖದಲ್ಲಿ ಕ್ರಿಯೆ ಇರದ, ಯಜ್ಞೋಪವೀತ ತೊರೆದ ಏಕದಂಡಿ ಪರಮಹಂಸ]

ಸಂನ್ಯಾಸ ಪದ್ಧತಿಗೆ ಮೂಲ ವೃಷಭದೇವ. ಸಂನ್ಯಾಸಿಯಾಗುವವನು ಎಲ್ಲಾ ಸಂಪರ್ಕಗಳನ್ನು ಕಳೆದುಕೊಂಡು, ***ಸರ್ವಭೂತೇಭ್ಯೋ ಭಯಂ ದತ್ತಂ ಮಯಾ, ಭೂಃ ಅನಿರುದ್ಧಾಯ ಸ್ವಾಹಾ-ಸಂನ್ಯಸ್ತಮ್ ಮಯಾ; ಭುವಃ ಪ್ರದ್ಯುಮ್ನಾಯ ಸ್ವಾಹಾ- ಸಂನ್ಯಸ್ತಮ್ ಮಯಾ; ಸುವಃ ಸಂಕರ್ಷಣಾಯ ಸ್ವಾಹಾ-ಸಂನ್ಯಸ್ತಮ್ ಮಯಾ; ಭೂರ್ಭುವಃ ಸುವಃ ವಾಸುದೇವಾಯ ಸಂನ್ಯಸ್ತಮ್ ಮಯಾ.*** ಈ ರೀತಿ ತೋಳೆತ್ತಿ ಘೋಷಣೆ ಮಾಡಬೇಕು. "ಅನಿರುದ್ಧ ನಾಮಕ ಭಗವಂತನನ್ನು ನೆನೆದು ಭೌತಿಕ ಪ್ರಪಂಚದ ಎಲ್ಲಾ ಸಂಪರ್ಕಗಳನ್ನು ತೊರೆವ ಪ್ರತಿಜ್ಞೆ; ಪ್ರದ್ಯುಮ್ನ ನಾಮಕ ಭಗವಂತನನ್ನು ನೆನೆದು ಅಂತರಿಕ್ಷದ ಸಂಪತ್ತನ್ನು ತೊರೆವ ಪ್ರತಿಜ್ಞೆ; ಸಂಕರ್ಷಣ ನಾಮಕ ಭಗವಂತನನ್ನು ನೆನೆದು ಮನಸ್ಸು-ಬುದ್ಧಿ-ಚಿತ್ತವನ್ನು ಭಗವಂತನಿಗೆ ಅರ್ಪಿಸಿ ; ಕೊನೆಗೆ ಎಲ್ಲವನ್ನೂ ನಾರಾಯಣನಿಗೆ ಅರ್ಪಿಸಿ, "ಇನ್ನು ಮೇಲೆ 'ನನಗೆ ಬೇಕು' ಎಂದು ನಾನು ಬಯಸುವುದಿಲ್ಲ" ಎಂದು ಪ್ರತಿಜ್ಞೆ ಮಾಡಿ, ಯಾವ ಪ್ರಾಣಿಗೂ ಭಯ ಬರುವಂತೆ ನಾನು ವರ್ತಿಸುವುದಿಲ್ಲ ಎಂದು ಎಲ್ಲರಿಗೂ ಅಭಯವನ್ನು ಕೊಟ್ಟು, ಕೇಶ ಮಂಡನ ಮಾಡಿ, ಉಟ್ಟ ಬಟ್ಟೆ, ಯಜ್ಞೋಪವೀತ, ಎಲ್ಲವನ್ನೂ ನೀರಿನಲ್ಲಿ ಬಿಟ್ಟು, ಬತ್ತಲಾಗಿ ಬಂದು ಗುರುಗಳಿಗೆ ದಂಡ ಪ್ರಣಾಮ ಮಾಡಬೇಕು. ಗುರುಗಳು ಆತನಿಗೆ ಬಟ್ಟೆ ತೊಡಿಸಿ ಪ್ರಣವ ಧೀಕ್ಷೆ ಕೊಡಬೇಕು. ಇದು ಪ್ರಾಚೀನ ಸಂನ್ಯಾಸ ಪದ್ಧತಿ. ಇದಕ್ಕೆ ಮೂಲ ವೃಷಭದೇವ. ಎಲ್ಲವನ್ನೂ, ಉಟ್ಟ ಬಟ್ಟೆಯನ್ನೂ ತೊರೆದು ಸಾಗುವವ ಪರಮಹಂಸ. ಈ ರೀತಿ ಎಲ್ಲವನ್ನೂ ತೊರೆದು ಹೋಗುವ ಸಂಪ್ರದಾಯವನ್ನು ಪ್ರಾರಂಭ ಮಾಡಿದವನು ವೃಷಭದೇವ. ಈ ಕಾರಣದಿಂದಲೇ ಭಗವಂತನ ಈ ರೂಪ ಪರಮಹಂಸರಿಗೆ ಉಪಾಸ್ಯವಾದ ಮತ್ತು ಗಮ್ಯವಾದ ರೂಪವೆನಿಸಿತು.

ವೃಷಭದೇವ ಏಕೆ ಸಂನ್ಯಾಸಿಗಳಿಗೆ ಸ್ಫೂರ್ತಿ ಎನ್ನುವುದಕ್ಕೆ ಒಂದು ಕಥೆ ಇದೆ. ತನ್ನ ಮಗ ಭರತ ಪ್ರಾಯಕ್ಕೆ ಬಂದ ತಕ್ಷಣ ವೃಷಭದೇವ ಆತನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ, ಸಮಸ್ತವನ್ನೂ ತೊರೆದು, "ತನ್ನದು ಎನ್ನುವುದು ಯಾವುದೂ ಇಲ್ಲಾ" ಎಂದು ಹೇಳಿ, ಉಟ್ಟ ಬಟ್ಟೆಯನ್ನೂ ತೊರೆದು ಬತ್ತಲಾಗಿ ಕಾಡಿಗೆ ಹೊರಟುಹೋದ. ಇದೇ ಸಂನ್ಯಾಸ ವಿಧಿಯಾಗಿ ಆನಂತರ ಧರ್ಮಶಾಸ್ತ್ರದಲ್ಲಿ ದಾಖಲೆಯಾಯಿತು. ಸಂಪೂರ್ಣ ಬಟ್ಟೆ ತೊರೆದು ತಿರುಗುವ ಜೈನ ಧರ್ಮದ ದಿಗಂಬರ ಸಂನ್ಯಾಸಿಗಳಿಗೂ ಕೂಡಾ ಈ ವೃಷಭದೇವನೇ ಸ್ಫೂರ್ತಿ. ಇದು ನಿರ್ಲಿಪ್ತತೆಯ ಆಳವನ್ನು ಜಗತ್ತಿಗೆ ತೋರಿದ ಭಗವಂತನ ರೂಪ. ಆದರೆ ಈ ಸತ್ಯವನ್ನು ಅರಿಯದ ಅಂದಿನ ಜನ "ಈತನಿಗೆ ಬುದ್ಧಿ ಕೆಟ್ಟಿದೆ" ಎಂದು ಮಾತನಾಡಿಕೊಂಡರು. ಆದರೆ ನಿರ್ಲಿಪ್ತತೆಯ ಪರಾಕಾಷ್ಠೆಯಾದ ವೃಷಭದೇವ ಅಂತರಂಗದ ಆನಂದದಲ್ಲಿ ಹೇಗೆ ನಿರ್ಲಿಪ್ತತೆ ಸಾಧ್ಯ ಎನ್ನುವುದನ್ನು ಲೋಕಕ್ಕೆ ತೋರಿದ. ಈ ರೀತಿ ಎಲ್ಲವನ್ನೂ ತೊರೆದ ವೃಷಭದೇವ ಕುಟಕಾಚಲಕ್ಕೆ (ಇಂದಿನ ಕೊಲ್ಲೂರಿನ ಕೊಡಚಾದ್ರಿ) ಬಂದು ಅಲ್ಲಿ ಅಜಗರ ವೃತ್ತಿಯಲ್ಲಿ ಬದುಕಿದ. ಜನ ಏನಾದರೂ ಕೊಟ್ಟರೆ ಅದನ್ನು ತಿನ್ನುವುದು, ಇಲ್ಲದಿದ್ದರೆ ಇಲ್ಲ. ತಿನ್ನುವಾಗ ಸದಾ ಕರಪಾತ್ರೆಯಲ್ಲೇ ತಿನ್ನುತ್ತಿದ್ದ. (ಹೀಗಾಗಿ

ಸಂನ್ಯಾಸಿಗಳು ತಿನ್ನುವಾಗ ಯಾವುದೇ ಪಾತ್ರೆ ಉಪಯೋಗಿಸದೇ ಕರಪಾತ್ರೆಯಲ್ಲಿ ತಿನ್ನುತ್ತಾರೆ). ಕೂದಲನ್ನು ಕೈಯಿಂದ ಕಿತ್ತುಕೊಂಡ(ಜೈನ ಸಂನ್ಯಾಸಿಗಳು ಇಂದಿಗೂ ತಮ್ಮ ಕೂದಲನ್ನು ಕೈಯಿಂದ ಕಿತ್ತುಕೊಳ್ಳುತ್ತಾರೆ).
ಒಂದು ದಿನ ಕುಟಕಾಚಲದ ಕಾಡಿಗೆ ಭಯಂಕರವಾದ ಕಾಳ್ಗಿಚ್ಚು ಹರಡಿತು. ವೇದವ್ಯಾಸರು ಹೇಳುವಂತೆ: ಭಗವಂತ ಯೋಗಾಗ್ನಿಯನ್ನು ಸೃಷ್ಟಿಮಾಡಿ, ಅದರಲ್ಲಿ ಅದೃಷ್ಯನಾಗಿ, ವಿಚಿತ್ರವಾಗಿ ತನ್ನ ಅವತಾರ ಸಮಾಪ್ತಿ ಮಾಡಿದ.

## ೧೦. ಹಯಗ್ರೀವರೂಪಿಯಾಗಿ ಚತುರ್ಮುಖನಿಗೆ ವೇದೋಪದೇಶ ಮಾಡಿದ ಭಗವಂತ

**ಸತ್ರೇ ಮಮಾಸ ಭಗವಾನ್ ಹಯಶೀರ್ಷ ಏಷಃ ಸಾಕ್ಷಾತ್ ಸ ಯಜ್ಞಪುರುಷಸ್ತಪನೀಯವರ್ಣಃ ।**
**ಛಂದೋಮಯೋ ಮಖಮಯೋಽಖಿಲದೇವತಾತ್ಮಾ ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ ॥೧೧॥**

ಚತುರ್ಮುಖನಿಗೆ ವೇದೋಪದೇಶ ಮಾಡಿದ ಭಗವಂತನ ಅವತಾರ ಹಯಗ್ರೀವ ಅವತಾರ. ಇಲ್ಲಿ ಚತುರ್ಮುಖ ಹೇಳುತ್ತಾನೆ: " ನಾನು ಭಗವಂತನನ್ನು ಯಜ್ಞದಲ್ಲಿ ಆರಾಧನೆ ಮಾಡಬೇಕು ಎಂದು ಸಂಕಲ್ಪ ಮಾಡಿದಾಗ, ನನ್ನ ಯಜ್ಞವನ್ನು ಸ್ವೀಕರಿಸಲು ಭಗವಂತ ಯಜ್ಞಪುರುಷ ಹಯಗ್ರೀವನಾಗಿ ಕಾಣಿಸಿಕೊಂಡ" ಎಂದು. ಮುಂದುವರಿದು ಬ್ರಹ್ಮದೇವರು ಹೇಳುತ್ತಾರೆ: ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುತ್ತಿದ್ದ ಆ ಹಯಗ್ರೀವ ಮೂರ್ತಿಗೆ ನಾನು ಯಜ್ಞದ ಹವಿಸ್ಸನ್ನು ತಿನ್ನಿಸಿದೆ" ಎಂದು.
ಎಲ್ಲಾ ವೇದೋಪದೇಶಗಳೂ ಭಗವಂತನ ಹಯಗ್ರೀವ ರೂಪದಿಂದಲೇ ಆಗಿರುವುದನ್ನು ನಾವು ಕಾಣುತ್ತೇವೆ. ಶುಕ್ಲ ಯಜುರ್ವೇದವನ್ನು ಸೂರ್ಯನ ಅಂತರ್ಯಾಮಿಯಾಗಿ ಯಾಜ್ಞವಲ್ಕ್ಯರಿಗೆ ಉಪದೇಶಿಸಿದಾಗಲೂ ಸಹ ಭಗವಂತ ಯಾಜ್ಞವಲ್ಕ್ಯರಿಗೆ ದರ್ಶನ ಕೊಟ್ಟಿದ್ದು ಹಯಗ್ರೀವ ರೂಪದಿಂದಲೇ. ಕುದುರೆ(ಹಯ) ವೇಗದ ಸಂಕೇತ. ಇದು ಮನುಷ್ಯರು 'ಪ್ರಯಾಣಕ್ಕೆ ಬಳಸುವ ಪ್ರಾಣಿ' ಗಳಲ್ಲೇ ವೇಗವಾಗಿ ಸಾಗಬಲ್ಲ ಪ್ರಾಣಿ. ಆಧ್ಯಾತ್ಮಿಕವಾಗಿ ನೋಡಿದರೆ ವೇದ ಅರ್ಥವಾಗಲು ಬೇಕಾಗಿರುವುದು ಬುದ್ಧಿಶಕ್ತಿಯ ವೇಗ. ವೇದ ನಮಗೆ ಅರ್ಥವಾಗಬೇಕಾದರೆ ಹತ್ತಾರು ಜನ್ಮಗಳ ಸಾಧನೆ ಬೇಕು. ಭಗವಂತನ ಹಯಗ್ರೀವ ರೂಪ ಬುದ್ಧಿಶಕ್ತಿಯ ವೇಗವನ್ನು ಪ್ರತಿನಿಧಿಸುವ ರೂಪ ಎನ್ನಬಹುದು.
ಹೊಂಬಣ್ಣದ ಪುತ್ತಳಿಯಂತೆ ಕಾಣಿಸಿಕೊಂಡ ಭಗವಂತ ಚತುರ್ಮುಖನಿಗೆ ಹಯಗ್ರೀವ ರೂಪದಿಂದ ದರ್ಶನ ಕೊಟ್ಟ. "ಸಮಸ್ತ ವೇದಗಳಿಂದ ಪ್ರತಿಪಾದ್ಯನಾದ, ಸಮಸ್ತ ಯಜ್ಞಗಳಿಂದ ಆರಾಧ್ಯನಾದ, ಸಮಸ್ತ ದೇವತೆಗಳ ಒಳಗೆ ಅಂತರ್ಯಾಮಿಯಾಗಿ ನೆಲೆಸಿರುವ, ಸರ್ವಶಬ್ದವಾಚ್ಯ ಭಗವಂತ ಹಯಗ್ರೀವ ರೂಪದಲ್ಲಿ ಕಾಣಿಸಿಕೊಂಡು ನನಗೆ ವೇದೋಪದೇಶ ಮಾಡಿದ" ಎನ್ನುತ್ತಾನೆ ಚತುರ್ಮುಖ. ಯಾವ ರೀತಿ ಕುದುರೆ ವೇದವನ್ನು ಉಪದೇಶ ಮಾಡಬಲ್ಲದು ಎಂದು ನೀವಿಲ್ಲಿ ಪ್ರಶ್ನಿಸಬಹುದು. ಇದಕ್ಕೆ ಚತುರ್ಮುಖ ಹೇಳುತ್ತಾನೆ: " ಭಗವಂತನ ಉಸಿರಿನಿಂದ ವೇದ ನನ್ನ ಕಿವಿಗೆ ಹರಿದು ಬಂತು" ಎಂದು. ಹೀಗೆ ಸ್ವಾಯಂಭುವ ಮನ್ವಂತರದಲ್ಲಿ ವಿಶೇಷವಾಗಿ ಚತುರ್ಮುಖನಿಗೆ ಅನುಗ್ರಹ ಮಾಡಿದ ಭಗವಂತನ ರೂಪ ಈ ಹಯಗ್ರೀವ ರೂಪ. [ಇಲ್ಲಿಗೆ ಸ್ವಾಯಂಭುವ ಮನ್ವಂತರದಲ್ಲಿನ ಭಗವಂತನ ಅವತಾರಗಳ ವಿವರಣೆ ಮುಗಿಯಿತು. ಸ್ವಾಯಂಭುವ ಮನ್ವಂತರದಲ್ಲಿನ ಐತರೇಯ ನಾಮಕ ಅವತಾರ ಮತ್ತು ತಾಪಸ ಮನ್ವಂತರದಲ್ಲಿ ಭಗವಂತ ತಾಪಸ ಮನುವಾಗಿ ಅವತರಿಸಿರುವ ವಿವರಣೆಯನ್ನು ಇಲ್ಲಿ ವಿವರಿಸಿಲ್ಲ. ಇದರ ವಿವರಣೆಯನ್ನು ಭಾಗವತದಲ್ಲಿ ಮುಂದಿನ ಸ್ಕಂಧಗಳಲ್ಲಿ ನಾವು ಕಾಣಬಹುದು. ಆದರೆ ಇಲ್ಲಿ ಇನ್ನು ಮುಂದೆ ನಾವು ವೈವಸ್ವತ ಮನ್ವಂತರದಲ್ಲಿ ನಡೆದಿರುವ ಭಗವಂತನ ಅವತಾರಗಳ ವಿವರಣೆಯನ್ನು ಕಾಣುತ್ತೇವೆ].

ಈವರೆಗೆ ಸ್ವಾಯಂಭುವ ಮನ್ವಂತರದಲ್ಲಿ ನಡೆದ ಹಲವು ಅವತಾರಗಳ ವಿವರಣೆಯನ್ನು ನೋಡಿದೆವು. ಇವುಗಳಲ್ಲಿ ಕೆಲವು ಅವತಾರಗಳನ್ನು ಪುನಃ ವಿಸ್ತಾರವಾಗಿ ಭಾಗವತ ಮುಂದೆ ವಿವರಿಸುತ್ತದೆ. ಆದರೆ ಇನ್ನು ಕೆಲವು ಅವತಾರಗಳ ವಿವರಣೆ/ಉಲ್ಲೇಖ ಮುಂದೆ ಬರುವುದಿಲ್ಲ. ವಿಶೇಷವಾಗಿ ಭಾಗವತ ಈ ಮನ್ವಂತರದ ದಶಾವತಾರದ ವಿವರಣೆಯನ್ನು ವಿಸ್ತಾರವಾಗಿ ನೀಡುತ್ತದೆ. ದಶಾವತಾರಕ್ಕೆ ಸೇರದ ಮೂರು ಅವತಾರಗಳಿವೆ. ಅವುಗಳೆಂದರೆ: ಸಮುದ್ರ ಮಥನ ಕಾಲದಲ್ಲಿ ನಡೆದ ಧನ್ವಂತರಿ ಮತ್ತು ಮೋಹಿನಿ ಅವತಾರ ಹಾಗೂ ಈ ಮನ್ವಂತರದ ಬಹಳ ಮುಖ್ಯವಾದ ಅವತಾರವಾದ ವ್ಯಾಸಾವತಾರ. ಮೋಹಿನಿ ಭಗವಂತನ ಮೋಹಕ ರೂಪಗಳಲ್ಲಿ ಒಂದಾಗಿರುವುದರಿಂದ ಆ ಕುರಿತ ವಿವರಣೆ ಈ ಅಧ್ಯಾಯದಲ್ಲಿ ಬರುವುದಿಲ್ಲ. ಉಳಿದಂತೆ ಧನ್ವಂತರಿ ಮತ್ತು ವ್ಯಾಸಾವತಾರ ಕುರಿತಾದ ವಿವರಣೆಯೊಂದಿಗೆ ದಶಾವತಾರದ ಸಂಕ್ಷಿಪ್ತ ವಿವರಣೆಯನ್ನು ಈ ಅಧ್ಯಾಯದಲ್ಲಿ ಇನ್ನು ಮುಂದೆ ಕಾಣಬಹುದು.

ಸ್ವಾಯಂಭುವ ಮನ್ವಂತರದಲ್ಲಿ ನಡೆದ ವರಾಹ ಅವತಾರವನ್ನು ಭಗವಂತ ಸಮಾಪ್ತಿಗೊಳಿಸದೇ ಇರುವುದರಿಂದ ಇದು ದಶಾವತಾರಗಳಲ್ಲಿ ಮೊದಲನೇ ಅವತಾರವೆಂದು ಪರಿಗಣಿಸಿದ್ದಾರೆ ಎನ್ನುವುದನ್ನು ಈ ಹಿಂದೆ ನೋಡಿದ್ದೆವು. ಆದರೆ ಈ ರೀತಿ ನೋಡಿದರೆ ಅನುಕ್ರಮವಾಗಿ ಮತ್ಸ್ಯಾವತಾರಕ್ಕೂ ಮೊದಲು ಕೂರ್ಮಾವತಾರವನ್ನು ಹೇಳಬೇಕಾಗುತ್ತದೆ. ಏಕೆಂದರೆ ಕೂರ್ಮಾವತಾರವಾಗಿರುವುದು ಮೊದಲು ರೈವತ ಮನ್ವಂತರದಲ್ಲಾದರೆ, ವೈವಸ್ವತ ಮನ್ವಂತರದಲ್ಲಿ ಎರಡನೇ ಬಾರಿ ಭಗವಂತ ಕೂರ್ಮರೂಪಿಯಾಗಿ ಬಂದಿರುವುದನ್ನು ನಾವು ಕಾಣುತ್ತೇವೆ. ಹೀಗೆ ನೋಡಿದಾಗ ಇನ್ನೊಂದು ಸಮಸ್ಯೆ ಬರುತ್ತದೆ. ಅದೇನೆಂದರೆ ಭಾಗವತದ ಎಂಟನೇ ಸ್ಕಂಧದಲ್ಲಿ ಹೇಳುವಂತೆ: ಮತ್ಸ್ಯಾವತಾರ ಕೂರ್ಮಾವತಾರಕ್ಕಿಂತ ಮೊದಲು ಕಲ್ಪಾದಿಯಲ್ಲೇ ಒಮ್ಮೆ ನಡೆದಿದೆ. ಹೀಗಾಗಿ ನಾವು ಅನುಕ್ರಮದಲ್ಲಿ ನೋಡುವಾಗ ಹಿಂದೆ ನಡೆದ ಅವತಾರವನ್ನು ತೆಗೆದುಕೊಂಡು ಹೇಳಿದರೆ ಸರಿ ಹೊಂದುವುದಿಲ್ಲ. ಈ ಮಾತಿಗೆ ವರಾಹ ಅವತಾರ ಮಾತ್ರ ಅಪವಾದ. ಏಕೆಂದರೆ: ಕೆಲವೊಮ್ಮೆ ಭಗವಂತ ತನ್ನ ಅವತಾರ ರೂಪವನ್ನು ಮೂಲ ರೂಪದಲ್ಲಿ ಅಂತರ್ಭಾವಗೊಳಿಸಿಬಿಡುತ್ತಾನೆ. ಆಗ ನಾವು ಅವತಾರ ಸಮಾಪ್ತಿಯಾಯಿತು ಎನ್ನುತ್ತೇವೆ. ಆದರೆ ಈ ಹಿಂದೆ ಹೇಳಿದಂತೆ: ಸ್ವಾಯಂಭುವ ಮನ್ವಂತರದಲ್ಲಿ ನಡೆದ ವರಾಹ ಅವತಾರವನ್ನು ಭಗವಂತ ಸಮಾಪ್ತಿಗೊಳಿಸಿಲ್ಲ. ಆದರೆ ಕಲ್ಪಾದಿಯಲ್ಲಿ ನಡೆದ ಮತ್ಸ್ಯಾವತಾರ, ರೈವತ ಮನ್ವಂತರದಲ್ಲಿ ನಡೆದ ಕೂರ್ಮಾವತಾರವನ್ನು ಭಗವಂತ ಸಮಾಪ್ತಿಗೊಳಿಸಿ, ಮರಳಿ ವೈವಸ್ವತ ಮನ್ವಂತರದಲ್ಲಿ ಅದೇ ರೂಪದಿಂದ ಅವತರಿಸಿದ್ದಾನೆ. ಈ ಹಿನ್ನೆಲೆಯಲ್ಲಿ ನೋಡಿದಾಗ: ಚಾಕ್ಷುಷ ಮನ್ವಂತರ ಮತ್ತು ವೈವಸ್ವತ ಮನ್ವಂತರದ ಸಂಧಿಕಾಲದಲ್ಲಿ ನಡೆದ ಮತ್ಸ್ಯಾವತಾರದ ನಂತರ ವೈವಸ್ವತ ಮನ್ವಂತರದಲ್ಲಿ ಕೂರ್ಮಾವತಾರವಾಗಿದೆ. ಈ ಅನುಕ್ರಮಣಿಕೆಯಲ್ಲಿ ನೋಡಿದಾಗ, ಈ ಮನ್ವಂತರದಲ್ಲಿ ಮೊದಲು ಮತ್ಸ್ಯಾವತಾರವಾಗಿದ್ದು, ಆನಂತರ ಕೂರ್ಮಾವತಾರವಾಗಿರುವುದನ್ನು ನಾವು ಕಾಣಬಹುದು. ಬನ್ನಿ, ಈ ಹಿನ್ನೆಲೆಯೊಂದಿಗೆ ನಾವು ಚತುರ್ಮುಖ-ನಾರದ ಸಂವಾದವನ್ನಾಲಿಸೋಣ.

## ೧೧. ಮತ್ಸ್ಯಾವತಾರ

**ಮತ್ಸ್ಯೋ ಯುಗಾಂತಸಮಯೇ ಮನುನೋಪಲಬ್ಧಃ ಕ್ಷೋಣೀಮಯೋ ನಿಖಿಲಜೀವನಿಕಾಯಕೇತಃ ।**
**ವಿಸ್ರಂಸಿತಾನುರುಭಯೇ ಸಲಿಲೇ ಮುಖಾನ್ಮ ಆದಾಯ ತತ್ರ ವಿಜಹಾರ ಹ ವೇದಮಾರ್ಗಾನ್ ॥೧೨॥**

ಈಗ ನಡೆಯುತ್ತಿರುವುದು ಏಳನೇ ವೈವಸ್ವತ ಮನ್ವಂತರ. ಈ ಮನ್ವಂತರದ ಆದಿಯಲ್ಲಿ ನಡೆದ ಭಗವಂತನ ಅವತಾರವೇ ಮತ್ಸ್ಯಾವತಾರ. ಸೂರ್ಯಪುತ್ರನಾದ ವೈವಸ್ವತ ಮನು ಪೂರ್ವ ಜನ್ಮದಲ್ಲಿ ಸತ್ಯವ್ರತನೆಂಬ ಹೆಸರಿನ ರಾಜರ್ಷಿಯಾಗಿದ್ದ. ಒಮ್ಮೆ ಆತ ಅರ್ಘ್ಯ ನೀಡುತ್ತಿದ್ದಾಗ ಬೊಗಸೆಯಲ್ಲಿನ ಅರ್ಘ್ಯಜಲದಲ್ಲಿ ಒಂದು ಪುಟ್ಟ ಮೀನು ಕಾಣಿಸಿತು. ಆ ಮೀನನ್ನು ಆತ ಒಂದು ಪಾತ್ರೆಯಲ್ಲಿಟ್ಟ. ಮೀನು ಪಾತ್ರೆಯ ಗಾತ್ರಕ್ಕೆ ಬೆಳೆಯಿತು. ಕೊಳಕ್ಕೆ ಬಿಟ್ಟ. ಅದು ಕೊಳದ ಆಕಾರದಷ್ಟು ಬೆಳೆದು ನಿಂತಿತು. ನಂತರ ಕಡಲಿಗೆ ಬಿಟ್ಟ. ಅಲ್ಲಿ ಮಹಾ ಮತ್ಸ್ಯವಾಗಿ ಭಗವಂತ ಮನುವಿಗೆ ವಿಶ್ವರೂಪದರ್ಶನ ನೀಡಿದ. ಈ ರೀತಿ ಕಾಣಿಸಿಕೊಂಡ ಭಗವಂತ ಮನುವಿಗೆ ಹೇಳುತ್ತಾನೆ: "ಇನ್ನು ಪ್ರಳಯವಾಗಿ ಎಲ್ಲವೂ ಮುಳುಗಿ ಹೋಗುತ್ತದೆ. ಆದರೆ ನೀನು ಆ ಪ್ರಳಯಕ್ಕೆ ಸಿಕ್ಕಿ ಸಾಯುವ ಅಗತ್ಯವಿಲ್ಲ. ನಿನ್ನನ್ನು ನಾನು ರಕ್ಷಣೆ ಮಾಡುತ್ತೇನೆ. ನೀನು ಮುಂದಿನ ಮನ್ವಂತರದ ಪ್ರವೃತ್ತಿಗೆ ಬೇಕಾದ ಎಲ್ಲಾ ಸಾರ ಸಂಗ್ರಹವನ್ನು ಹಿಡಿದುಕೊಂಡು, ಮುಂದಿನ ಮನ್ವಂತರದಲ್ಲಿ ಜ್ಞಾನದಾನ ಮಾಡಬೇಕಾದ ಋಷಿಗಳ ಜೊತೆಗೆ ಸಮುದ್ರ ತೀರದಲ್ಲಿ ನಿಂತು ಕಾಯುತ್ತಿರು. ಪ್ರಳಯ ಕಾಲದಲ್ಲಿ ಸಮುದ್ರ ಉಕ್ಕೇರಿ ಊರೂರು ಮುಳುಗುತ್ತದೆ. ಆಗ ನೀನು ನಿಂತಲ್ಲಿಗೆ ಒಂದು ದೋಣಿ ಬರುತ್ತದೆ. ಆ ಭೂ ರೂಪದ ದೋಣಿಯನ್ನು ನನ್ನ ಮೂಗಿನ ಮೇಲಿನ ಕೊಂಬಿಗೆ ಕಟ್ಟಿಬಿಡು. ನಾನು ನಿನ್ನನ್ನು ರಕ್ಷಿಸುತ್ತೇನೆ" ಎಂದು. ಹೀಗೆ ಪ್ರಳಯಕಾಲದಲ್ಲಿ ಮತ್ಸ್ಯ ರೂಪದಲ್ಲಿ ಕಾಣಿಸಿಕೊಂಡ ಭಗವಂತ ಮನುವನ್ನು ರಕ್ಷಿಸಿದ್ದಷ್ಟೇ ಅಲ್ಲ, ಮನುವಿಗೆ ಮತ್ತು ಋಷಿಗಳಿಗೆ ಜ್ಞಾನೋಪದೇಶವನ್ನೂ ಮಾಡಿದ. ಹೀಗೆ ಭಗವಂತ ಮನುವಿಗೆ ಮಾಡಿದ ಉಪದೇಶವೇ ಮತ್ಸ್ಯಪುರಾಣ. ಪ್ರಳಯಕಾಲದಲ್ಲಿ ಮನುವನ್ನು ರಕ್ಷಣೆ ಮಾಡಿ, ಪ್ರಳಯದಿಂದ ಪಾರು ಮಾಡಿಸಿ, ಮುಂದಿನ ಮನ್ವಂತರಕ್ಕೆ ಅನುವು ಮಾಡಿಕೊಟ್ಟು ಅದೃಶ್ಯನಾದ ಭಗವಂತ. ಹೀಗೆ ಸಮಸ್ತ ಜೀವ ನಿಕಾಯಗಳಿಗಾಗಿ ಪ್ರಳಯಕಾಲದಲ್ಲೂ ಜ್ಞಾನೋಪದೇಶ ಮಾಡಿದ ಅವತಾರ ಈ ಮತ್ಸ್ಯಾವತಾರ.

ಇದಲ್ಲದೆ ಕಲ್ಪ ಪ್ರಳಯ ಕಾಲದಲ್ಲಿ ಚತುರ್ಮುಖನ ಬಾಯಿಯಿಂದ ಕೆಳಕ್ಕೆ ಜಾರಿದ ವೇದಗಳನ್ನು ಹಯಗ್ರೀವ ಎನ್ನುವ ಅಸುರ ಅಪಹಾರ ಮಾಡುತ್ತಾನೆ. ಇದರಿಂದಾಗಿ ಮುಂದಿನ ಕಲ್ಪದಲ್ಲಿ ವೇದ ಪರಂಪರೆಯೇ ನಾಶವಾಗುವ ಪರಿಸ್ಥಿತಿ ಎದುರಾಗುತ್ತದೆ. ಆಗ ಭಗವಂತ ಮತ್ಸ್ಯರೂಪನಾಗಿ ಬಂದು ಹಯಗ್ರೀವಾಸುರನನ್ನು ಕೊಂದು, ವೇದಾಭಿಮಾನಿ ದೇವತೆಗಳನ್ನು ರಕ್ಷಿಸಿದ ಮತ್ತು ಸೃಷ್ಟಿಯ ಆದಿಯಲ್ಲಿ ವೇದವನ್ನು ಚತುರ್ಮುಖನಿಗೆ ನೀಡಿದ. ಈ ಕುರಿತಾದ ಹೆಚ್ಚಿನ ವಿವರಣೆಯನ್ನು ಎಂಟನೇ ಸ್ಕಂಧದಲ್ಲಿ ಕಾಣಬಹುದು.

ಇಲ್ಲಿ "ಚತುರ್ಮುಖನ ಬಾಯಿಯಿಂದ ವೇದ ಕೆಳಕ್ಕೆ ಜಾರಿತು ಮತ್ತು ಅದನ್ನು ಅಸುರ ಅಪಹರಿಸಿದ" ಎನ್ನುವ ಮಾತನ್ನು ಕೆಲವರು ಗೊಂದಲ ಮಾಡಿಕೊಳ್ಳುತ್ತಾರೆ. ವೇದ ಈ ರೀತಿ ಜಾರಿ ಬೀಳುವ ವಸ್ತು ಅಥವಾ ಪುಸ್ತಕವೇ ? ಇತ್ಯಾದಿ ಪ್ರಶ್ನೆ ಕೆಲವರದ್ದು. ಈ ಮಾತು ಅರ್ಥವಾಗಬೇಕಾದರೆ ಈ ಹಿಂದೆ ಒಂದನೇ ಸ್ಕಂಧದಲ್ಲಿ ವಿವರಿಸಿದ ಪುರಾಣದ ಮೂರು ಭಾಷೆ ಮತ್ತು ನಿರೂಪಣೆಯ ಏಳು ವಿಧ ನಮಗೆ ತಿಳಿದಿರಬೇಕಾಗುತ್ತದೆ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ: ಇಲ್ಲಿ ವೇದಗಳ ಅಪಹಾರ ಎಂದರೆ ವೇದಾಭಿಮಾನಿ ದೇವತೆಗಳ ಅಪಹಾರ.

## ೧೨. ಕೂರ್ಮಾವತಾರ

**ಕ್ಷೀರೋದಧಾವಮರದಾನವಯೂಥಪಾನಾ ಮನ್ಮಥ್ನತಾಮಮೃತಲಬ್ಧಯ ಆದಿದೇವಃ ।**

**ಪೃಷ್ಠೇನ ಕಚ್ಛಪವಪುರ್ವಿದಧಾರ ಗೋತ್ರಂ ನಿದ್ರೇಕ್ಷಣೋSದ್ರಿಪರಿವರ್ತಕಷಾಣಕಂಡೂಃ ॥೧೩॥**

ಇಲ್ಲಿ ಚತುರ್ಮುಖ ನಾರದರಿಗೆ ಭಗವಂತನ ಕೂರ್ಮಾವತಾರವನ್ನು ವಿವರಿಸುವುದನ್ನು ಕಾಣುತ್ತೇವೆ. ಇದು ಸಮುದ್ರಮಥನದ ಕಥೆ. ಕಡೆಯಲು ಮಂದರವೇ ಕಡೆಗೋಲು. ಮಂದರ ಪರ್ವತ ಕಡಲಲ್ಲಿ ಮುಳುಗಿಹೋಗದಂತೆ ಎತ್ತಿ ಹಿಡಿದವ ಕೂರ್ಮರೂಪಿ ಭಗವಂತ. ಈ ಮಥನ ನಡೆದಿರುವುದು ಭೂಮಿಯಲ್ಲಿ ಅಲ್ಲ. ಇಲ್ಲಿ ಸಮುದ್ರ ಎಂದರೆ ಅದು ಕ್ಷೀರ ಸಮುದ್ರ. ಸೂಕ್ಷ್ಮಪ್ರಪಂಚದಲ್ಲಿ ಸೂಕ್ಷ್ಮಜೀವಿಗಳಿಂದ ನಡೆದ ಮಥನವಿದು. ಈ ರೀತಿ ಮಂದರ ಪರ್ವತವನ್ನು ಬೆನ್ನಮೇಲೆ ಹೊತ್ತ ಭಗವಂತ, ತುರಿಕೆಯ ಬೆನ್ನನ್ನು ತುರಿಸಿದಾಗ ಸಿಗುವ ಆನಂದವನ್ನು, ನಿದ್ದೆಯ ಕ್ಷಣದ ಆನಂದವನ್ನು ಅನುಭವಿಸಿದ ಎಂದು ಆಲಂಕಾರಿಕವಾಗಿ ಇಲ್ಲಿ ಹೇಳಿದ್ದಾರೆ.

ಈ ಸಮುದ್ರ ಮಥನವನ್ನು ನಮ್ಮ ಪಿಂಡಾಂಡದಲ್ಲಿ ಅನ್ವಯ ಮಾಡಿ ನೋಡಿದರೆ: ಇದು ನಮ್ಮ ಹೃದಯ ಸಮುದ್ರದಲ್ಲಿ ನಡೆಯಬೇಕಾದ ಶಾಸ್ತ್ರಗಳ ಮಥನ. ನಾವು ನಮ್ಮ ಕುಂಡಲಿಯಲ್ಲಿನ ವಾಸುಕಿಯನ್ನು ಮನಸ್ಸೆಂಬ ಮಂದರ ಪರ್ವತಕ್ಕೆ ಸುತ್ತಿ ಮಥನ ಮಾಡಬೇಕು. ಹೀಗೆ ಮಥನ ಮಾಡುವಾಗ ಮನಸ್ಸು ಕುಸಿಯದಂತೆ ಭಗವಂತನ ಆಶ್ರಯ ಪಡೆಯಬೇಕು. ಈ ರೀತಿ ಶಾಸ್ತ್ರಗಳ ಮಥನ ಮಾಡಿದಾಗ ಮೊದಲು ಬರುವುದು ಸಂಶಯ/ಅಪನಂಬಿಕೆ ಎನ್ನುವ ವಿಷ. ಹೃದಯದಲ್ಲಿನ ಈ ವಿಷವನ್ನು ಮೊದಲು ಹೊರಕ್ಕೆ ತೆಗೆಯಬೇಕು. ಆನಂತರ ಅಧ್ಯಾತ್ಮದ ಅಮೃತಕ್ಕಾಗಿ ಮಥನ ನಮ್ಮೊಳಗಿರುವ ದೇವಾಸುರರಿಂದ ನಿರಂತರ ನಡೆಯಬೇಕು.

ಮೇಲೆ ಹೇಳಿದಂತೆ ಇದು ಎಂದೋ ನಡೆದು ಹೋದ ಸಮುದ್ರ ಮಥನವಷ್ಟೇ ಅಲ್ಲ. ಅನುದಿನ ನಮ್ಮೊಳಗೆ ನಡೆಯಬೇಕಾದ ಮಥನ. ಇದನ್ನೇ ಪುರಂದರದಾಸರು " ಶೇಷ ಶಯನನೇ, ಏಳು ಸಮುದ್ರ ಮಥನವ ಮಾಡು" ಎಂದಿದ್ದಾರೆ. ನಮ್ಮ ದೇಹದೊಳಗೆ ಏಳು ಸಮುದ್ರಗಳಿವೆ. ಇವೇ ಏಳು ಶಕ್ತಿಚಕ್ರಗಳು**(spiritual centers/**ನಿರ್ನಾಳ ಗ್ರಂಥಿಗಳು**)**. ಇದರಲ್ಲಿ ಮೊದಲನೆಯದ್ದು ನಮ್ಮ ಮಲ-ಮೂತ್ರದ್ವಾರದ ಮಧ್ಯದಲ್ಲಿರುವ 'ಮೂಲಾಧಾರ ಚಕ್ರ'. ಇದೇ 'ಉಪ್ಪಿನ ಸಮುದ್ರ'. ಎರಡನೆಯದ್ದು ಹೊಕ್ಕುಳಿನಿಂದ ಸ್ವಲ್ಪ ಕೆಳಗಿರುವ 'ಸ್ವಾಧಿಷ್ಠಾನಚಕ್ರ'; ಇದು 'ಕಬ್ಬಿನಹಾಲಿನ ಸಮುದ್ರ'. ಇದು ಬದುಕಿನಲ್ಲಿ ಐಹಿಕ ಸುಖದ ಖುಷಿ ಕೊಡುವ ಚಕ್ರ. ಇದಕ್ಕೂ ಮೇಲೆ ಹೊಕ್ಕುಳಿನ ಭಾಗದಲ್ಲಿ 'ಮಣಿಪೂರ ಚಕ್ರವಿದೆ. ಇದು ಕಾಮದ ಅಮಲಿನ ಸುಖ ಕೊಡುವ 'ಸುರ ಸಮುದ್ರ'. ಇದಕ್ಕೂ ಮೇಲೆ 'ಅನಾಹತ ಚಕ್ರ'. ಇದನ್ನೇ ತುಪ್ಪ/ಬೆಣ್ಣೆಯ ಸಮುದ್ರ ಅಥವಾ ಹೃದಯ ಸಮುದ್ರ ಎನ್ನುತ್ತಾರೆ. ಇಲ್ಲಿಂದ ಮೇಲೆ ಅಧ್ಯಾತ್ಮದ ವಿಶ್ವ **(Spiritual world)** ತೆರೆದುಕೊಳ್ಳುತ್ತದೆ. ಮೊತ್ತ ಮೊದಲು ಭಕ್ತಿಯ ನವನೀತವನ್ನು ಹೃದಯದಲ್ಲಿ ತುಂಬಿ ಭಗವಂತನಿಗೋಸ್ಕರ ಕಾಯುವ ಸಾಧನೆ ಪ್ರಾರಂಭವಾಗುವುದೇ ಇಲ್ಲಿಂದ. ಇನ್ನೂ ಮೇಲಕ್ಕೆ ಹೋದರೆ 'ವಿಶುದ್ಧಿಚಕ್ರ'. ಅಥವಾ ಮೊಸರಿನ ಸಮುದ್ರ. ಇಲ್ಲಿ ಜ್ಞಾನಿಯು ತ್ರಿಕಾಲದರ್ಶಿಯಾಗುತ್ತಾನೆ. ಅದರಿಂದಾಚೆಗೆ ಕ್ಷೀರಸಾಗರ ಅಥವಾ ಆಜ್ಞಾಚಕ್ರ. ಇದು ಭ್ರೂ- ಮಧ್ಯದಲ್ಲಿ ಭಗವಂತನನ್ನು ಕಾಣುವಂತಹದ್ದು. ಇದೇ ಕ್ಷೀರ ಶಾಯಿಯಾದ ಭಗವಂತನ ದರ್ಶನ. ಇದರಿಂದಾಚೆಗೆ ಸಹಸ್ರಾರ ಅಥವಾ ಅಮೃತಸಾಗರ. ಇವು ಮನುಷ್ಯನ ಬದುಕನ್ನು ನಿರ್ಧರಿಸುವ ಏಳು ಮಹಾಸಮುದ್ರಗಳು. ಇಂತಹ ಅಂತರಂಗದ ಸಮುದ್ರದಲ್ಲಿ ನೆಲೆಸಿ ನಮ್ಮನ್ನು ಎತ್ತರಕ್ಕೇರಿಸುವ ಭಗವಂತ ಮಹೋದಧಿಶಯಃ. ನಮ್ಮೊಳಗಿನ ದೇವಾಸುರರಿಂದ ಮಥನ ನಡೆದು, ವಿಷ ಕಳೆದು ಅಮೃತ ಬರಲು ನಮಗೆ ಈ ಭಗವಂತನ ನೆರವು ಬೇಕು. ಕೂರ್ಮನಾಗಿ, ಮೂಲಾಧಾರನಾಗಿ ನಿಂತು ಆತ ನಡೆಸಬೇಕು. ಸಪ್ತಸಾಗರಗಳ ಮಥನ ನಡೆದಾಗ ಅಲ್ಲಿ ಅಮೃತಕಲಶ ಹಿಡಿದು ಧನ್ವಂತರಿ ಮೇಲೆದ್ದು ಬರುತ್ತಾನೆ.

[ಕೂರ್ಮಾವತಾರ ಕುರಿತಾದ ಸಂಕ್ಷಿಪ್ತ ವಿವರಣೆಯನ್ನು ಇಲ್ಲಿ ನೀಡಲಾಗಿದ್ದು, ಇದರ ಪೂರ್ಣ ವಿವರಣೆಯನ್ನು ಮುಂದೆ ಎಂಟನೇ ಸ್ಕಂಧದಲ್ಲಿ ಕಾಣಬಹುದು. ಕೂರ್ಮಾವತಾರದ ಜೊತೆಗೆ ನಡೆದ ಮೋಹಿನಿ ಅವತಾರವನ್ನು ಇಲ್ಲಿ ವಿವರಿಸಿಲ್ಲ. ಧನ್ವಂತರಿ ಅವತಾರ ಎರಡು ಬಾರಿ ನಡೆದಿದ್ದು ಅದನ್ನು ಸಮೀಕರಿಸಿ ಮುಂದೆ ಹೇಳುತ್ತಾರೆ. ಎರಡು

ಧನ್ವಂತರಿಯಲ್ಲಿ ಮೊದಲನೆಯದು ಸಮುದ್ರಮಥನದಲ್ಲಿ ಬಂದ ಸಾಕ್ಷಾತ್ ಭಗವಂತನ ಅವತಾರ ಹಾಗೂ ಎರಡನೆಯದು ವೈದ್ಯಶಾಸ್ತ್ರವನ್ನು ಪರಿಚಯಿಸಿದ, ಆಯುರ್ವೇದ ಪ್ರವರ್ತಕನಾದ ಕಾಶೀರಾಜನಲ್ಲಿ ಧನ್ವಂತರಿಯಾಗಿ ನಡೆದ ಭಗವಂತನ ಆವೇಶಾವತಾರ].

ಭಗವಂತನ ಅವತಾರಗಳನ್ನು ಕಾಲಾನುಕ್ರಮವಾಗಿ ನೋಡುವಾಗ ಕೂರ್ಮಾವತಾರ ಮತ್ತು ವಾಮನ ಅವತಾರಕ್ಕೆ ಸಂಬಂಧಿಸಿದಂತೆ ಒಂದು ಸಮಸ್ಯೆ ಎದುರಾಗುತ್ತದೆ. ನಮಗೆ ತಿಳಿದಂತೆ ಕೂರ್ಮಾವತಾರದ ನಂತರ ನರಸಿಂಹ ಅವತಾರವಾಗಿದೆ. ಆ ನಂತರ ವಾಮನ ಅವತಾರ. ಹೀಗಾಗಿ ಕಾಲಕ್ರಮಕ್ಕನುಗುಣವಾಗಿ ಇಲ್ಲಿ ಸಮುದ್ರಮಥನವನ್ನು ನರಸಿಂಹ ಮತ್ತು ವಾಮನ ಅವತಾರಕ್ಕೂ ಮೊದಲು ಹೇಳಿದ್ದಾರೆ. ಆದರೆ ಒಂದು ಕಡೆ "ಬಲಿಚಕ್ರವರ್ತಿ ಸಮುದ್ರಮಥನ ಕಾಲದಲ್ಲಿ ದೇವತೆಗಳ ವಿರುದ್ಧ ಹೋರಾಡಿದ್ದ" ಎನ್ನುವ ಕಥೆಯೊಂದಿದೆ. ಈ ಕಥೆ ನಮ್ಮನ್ನು ಗೊಂದಲಗೊಳಿಸುತ್ತದೆ. ವಾಮನಾವತಾರ ಕಾಲದ ಬಲಿಚಕ್ರವರ್ತಿ ಕೂರ್ಮಾವತಾರ ಕಾಲದಲ್ಲಿ ಹೇಗೆ ಬಂದ ಎನ್ನುವುದು ನಮ್ಮ ಗೊಂದಲ. ಈ ವಿಷಯ ಸ್ಪಷ್ಟವಾಗಬೇಕಾದರೆ ನಮಗೆ ಇತಿಹಾಸದಲ್ಲಿ ನಡೆದ ಎರಡು ಸಮುದ್ರಮಥನ ತಿಳಿದಿರಬೇಕು. ಎರಡು ಸಮುದ್ರಮಥನಗಳಲ್ಲಿ ಒಂದು ರೈವತ ಮನ್ವಂತರದಲ್ಲಿ ಹಾಗೂ ಇನ್ನೊಂದು ವೈವಸ್ವತ ಮನ್ವಂತರದಲ್ಲಿ ನಡೆದಿದೆ. ಬಲಿ ದೇವತೆಗಳೊಂದಿಗೆ ಹೋರಾಡಿದ ಕಥೆ ರೈವತ ಮನ್ವಂತರಕ್ಕೆ ಸಂಬಂಧಿಸಿದ್ದು. ಆದರೆ ಮೇಲೆ ಹೇಳಿರುವ ಭಗವಂತನ ಕೂರ್ಮಾವತಾರ ಮತ್ತು ಸಮುದ್ರಮಥನ ವೈವಸ್ವತ ಮನ್ವಂತರದಲ್ಲಿ ನಡೆದಿರುವುದು. ಆದ್ದರಿಂದ ವೈವಸ್ವತ ಮನ್ವಂತರದಲ್ಲಿ ನಡೆದ ಸಮುದ್ರಮಥನ ಪ್ರಹ್ಲಾದನ ಜನನಕ್ಕಿಂತ ಮೊದಲು ಹಾಗೂ ವೈವಸ್ವತ ಮನ್ವಂತರದ ಮತ್ಸ್ಯಾವತಾರದ ನಂತರ ನಡೆದ ಘಟನೆ. ಈ ಕಾಲದಲ್ಲಿ ಬಲಿ ದೇವತೆಗಳ ವಿರುದ್ಧ ಹೋರಾಡಿರಲಿಲ್ಲ. ಏಕೆಂದರೆ ವೈವಸ್ವತ ಮನ್ವಂತರದ ಸಮುದ್ರಮಥನ ಕಾಲದಲ್ಲಿ ಇನ್ನೂ ಬಲಿಯ ಜನನವೇ ಆಗಿರಲಿಲ್ಲ. ಇನ್ನು ರೈವತ ಮನ್ವಂತರದಲ್ಲಿ ಹೇಗೆ ಬಲಿಚಕ್ರವರ್ತಿ ಸಮುದ್ರಮಥನದಲ್ಲಿ ಪಾಲ್ಗೊಂಡಿದ್ದ ಎನ್ನುವುದನ್ನು ವಿವರಿಸುತ್ತಾ ಆಚಾರ್ಯ ಮಧ್ವರು ಹೇಳುತ್ತಾರೆ: "*ಪ್ರತಿ ಮನ್ವಂತರಂ ಪ್ರಾಯಃ ಪ್ರಹ್ಲಾದಾದ್ಯಾಃ ಪ್ರಜಾತಿರೆ*" ಎಂದು. ಅಂದರೆ ಪ್ರಹ್ಲಾದನ ಸಂತತಿ ಪ್ರತೀ ಮನ್ವಂತರದಲ್ಲಿ ಹುಟ್ಟುತ್ತಾರೆ ಎಂದು. ಪ್ರತೀ ಮನ್ವಂತರದಲ್ಲಿ, ಪ್ರತೀ ಯುಗದಲ್ಲಿ, ಪ್ರತಿ ಕಲ್ಪದಲ್ಲಿ ಕೆಲವು ಘಟನೆಗಳು ಪುನರಾವರ್ತನೆಗೊಳ್ಳುತ್ತವೆ. ಒಟ್ಟಿನಲ್ಲಿ ಹೇಳಬೇಕೆಂದರೆ ರೈವತ ಮನ್ವಂತರದಲ್ಲಿಯೂ ಕೂಡಾ ಒಬ್ಬ ಬಲಿಚಕ್ರವರ್ತಿ ಇದ್ದ ಹಾಗೂ ಆತ ಸಮುದ್ರ ಮಥನದಲ್ಲಿ ಪಾಲ್ಗೊಂಡಿದ್ದ. ಈ ಎಲ್ಲಾ ವಿಷಯಗಳನ್ನು ಸಮಷ್ಟಿಯಾಗಿ ನೋಡಿದಾಗ ನಮ್ಮ ಗೊಂದಲ ಪರಿಹಾರವಾಗುತ್ತದೆ.

ಈ ಹಿಂದೆ ಹೇಳಿದಂತೆ ವರಾಹ ಅವತಾರ ಸ್ವಾಯಂಭುವ ಮನ್ವಂತರದಲ್ಲೇ ನಡೆದಿದ್ದು, ಅದೇ ರೂಪ ಮರಳಿ ವೈವಸ್ವತ ಮನ್ವಂತರದಲ್ಲಿ ಕಾಣಿಸಿಕೊಂಡಿರುವುದರಿಂದ, ಮತ್ಸ್ಯಾವತಾರ ಮತ್ತು ಕೂರ್ಮಾವತಾರದ ನಂತರ ವೈವಸ್ವತ ಮನ್ವಂತರದಲ್ಲಿನ ವರಾಹನ ಕುರಿತು ಇಲ್ಲಿ ಮತ್ತೆ ವಿವರಿಸುವುದಿಲ್ಲ. ಇಲ್ಲಿ ಕೂರ್ಮಾವತಾರದ ನಂತರ ನೇರವಾಗಿ ನರಸಿಂಹ ಅವತಾರವನ್ನು ಹೇಳುತ್ತಾರೆ. ಆದರೆ ನಮಗೆ ತಿಳಿದಂತೆ ವರಾಹನನ್ನು ಬಿಟ್ಟು ನರಸಿಂಹನಿಲ್ಲ. ಕೃಷ್ಣ-ರಾಮರು ಒಂದು ಜೋಡಿಯಾದರೆ ವರಾಹ-ನರಸಿಂಹ ಇನ್ನೊಂದು ಜೋಡಿ. ಓಂಕಾರದಲ್ಲಿ ಅ-ಕಾರ ಮತ್ತು ಉ-ಕಾರವಾಚ್ಯರಾಗಿ ಕೃಷ್ಣ-ರಾಮರಿದ್ದರೆ, ಮ-ಕಾರ ಮತ್ತು ನಾದ-ವಾಚ್ಯರಾಗಿ ನರಸಿಂಹ-ವರಾಹರಿದ್ದಾರೆ. ಭಗವಂತನ ಈ ನಾಲ್ಕು ರೂಪಗಳು ಪ್ರಣವ(ಓಂಕಾರ) ಪ್ರತಿಪಾದ್ಯ ರೂಪಗಳಾಗಿವೆ. ಮುಖ್ಯವಾಗಿ ಹಿರಣ್ಯಕಶಿಪು ಮತ್ತು ಹಿರಣ್ಯಾಕ್ಷರ ಸಂಹಾರಕ್ಕಾಗಿ ಹಾಗೂ ಜಯ-ವಿಜಯರ ಉದ್ಧಾರಕ್ಕಾಗಿಯೇ ಆದ ಭಗವಂತನ ರೂಪಗಳಿವು. ಭಗವಂತ ವರಾಹನಾಗಿ ಹಿರಣ್ಯಾಕ್ಷನನ್ನು ಕೊಂದ ಮತ್ತು ನರಸಿಂಹನಾಗಿ ಹಿರಣ್ಯಕಷಿಪುವನ್ನು ಕೊಂದ. ಈ ದೈತ್ಯರೇ

ಪುನಃ ರಾವಣ-ಕುಂಭಕರ್ಣರಾಗಿ ಬಂದಾಗ ಭಗವಂತ ರಾಮನಾಗಿ ಬಂದು ಅವರನ್ನು ನಿಗ್ರಹಿಸಿದ. ನಂತರ ಅದೇ ದೈತ್ಯರು ಶಿಶುಪಾಲ-ದಂತವಕ್ರರಾಗಿ ಬಂದಾಗ ಭಗವಂತ ಶ್ರೀಕೃಷ್ಣ ರೂಪದಲ್ಲಿ ಬಂದು ಅವರ ಹರಣ ಮಾಡಿದ.

ಹಿರಣ್ಯಾಕ್ಷ-ಹಿರಣ್ಯಕಶಿಪು, ಹೆಸರೇ ಸೂಚಿಸುವಂತೆ ಒಬ್ಬ ಚಿನ್ನದ ಮೇಲೆ ಕಣ್ಣಿಟ್ಟವನು ಹಾಗೂ ಇನ್ನೊಬ್ಬ ಚಿನ್ನವನ್ನು ತನ್ನ ತಲೆದಿಂಬಾಗಿರಿಸಿಕೊಂಡವನು. ನಮ್ಮೊಳಗೂ ಈ ದೈತ್ಯರಿದ್ದಾರೆ. ಉಪನಿಷತ್ತಿನಲ್ಲಿ ಹೇಳುವಂತೆ: ***ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್, ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ.*** ಸತ್ಯದ ಮೋರೆಯನ್ನು ಚಿನ್ನದ ತಳಿಗೆಯಿಂದ ಮುಚ್ಚಿಕೊಂಡು ನಾವಿಂದು ಬದುಕುತ್ತಿದ್ದೇವೆ. ಆದ್ದರಿಂದ ಇಂದು ನಮಗೆ ಸತ್ಯ ಬೇಡವಾಗಿದೆ. ಈ ರೀತಿ ಚಿನ್ನದ ಮೇಲೆ ಕಣ್ಣಿಡದೇ ಚಿನ್ಮಯನ ಮೇಲೆ ಕಣ್ಣಿಡುವಂತಾಗಲು ನಾವು ವರಾಹ-ನರಸಿಂಹನನ್ನು ನಮ್ಮೊಳಗೆ ಆವಿರ್ಭಾವಗೊಳಿಸಿಕೊಳ್ಳಬೇಕು. ಆದರೆ ನರಸಿಂಹ-ವರಾಹ ಉಪಾಸನೆ ಕೃಷ್ಣ-ರಾಮರ ಉಪಾಸನೆಗಿಂತ ಕ್ಲಿಷ್ಟವಾದುದು. ಈ ಉಪಾಸನೆ ಮಾಡುವಾಗ ತುಂಬಾ ಎಚ್ಚರ ಅಗತ್ಯ. ನಮ್ಮಲ್ಲಿ ದೋಷವಿದ್ದಾಗ ಅದು ನಮ್ಮನ್ನೇ ಸುಟ್ಟುಬಿಡುವ ಸಾಧ್ಯತೆ ಇದೆ. ಆದರೂ ಕೂಡಾ ಪ್ರಹ್ಲಾದವರದ ನರಸಿಂಹ ***"ಅಭಕ್ತ-ಜನ-ಸಂಹಾರೀ ಭಕ್ತಾನಾಮಭಯಪ್ರದಃ"*** ಎನ್ನುವ ಮಾತನ್ನು ನೆನೆದು ನಾವು ನಮ್ಮ ಪ್ರಯತ್ನವನ್ನು ಮುಂದುವರಿಸಬೇಕು. ಬನ್ನಿ, ಈ ಹಿನ್ನೆಲೆಯೊಂದಿಗೆ ಚತುರ್ಮುಖನ ಮುಂದಿನ ಮಾತನ್ನಾಲಿಸೋಣ.

## ೧೩. ಪ್ರಹ್ಲಾದವರದ ನರಸಿಂಹ

**ತ್ರೈವಿಷ್ಟಪೋರುಭಯಹಾರಿ ನೃಸಿಂಹರೂಪಂ ಕೃತ್ವಾ ಭ್ರಮದ್ ಭ್ರುಕುಟಿದಂಷ್ಟ್ರಕರಾಳವಕ್ತ್ರಮ್ ।**
**ದೈತ್ಯೇಂದ್ರಮಾಶು ಗದಯಾSಭಿಪತಂತಮಾರಾ ದೂರೌ ನಿಪಾತ್ಯ ವಿದದಾರ ನಖೈಃ ಸ್ಫುರಂತಮ್ ॥೧೪॥**

ಇಲ್ಲಿ ಚತುರ್ಮುಖನು ಭಗವಂತನ ನರಸಿಂಹ ಅವತಾರವನ್ನು ನಾರದರಿಗೆ ವಿವರಿಸುತ್ತಾ ಹೇಳುತ್ತಾನೆ: " ಇದು ಮೂರು ಲೋಕದ ಭಯವನ್ನು ಪರಿಹರಿಸಿದ ರೂಪ" ಎಂದು. ಹಿರಣ್ಯಕಶಿಪು ಬ್ರಹ್ಮನಿಂದ ವರ ಪಡೆದು ಮೂರು ಲೋಕಗಳಿಗೂ ಕಂಟಕನಾಗಿ ಬೆಳೆದಾಗ ಭಗವಂತ: ಕಿಡಿಕಾರುವ ಕಣ್ಣು, ಕೋರೆದಾಡೆಗಳು, ಗಂಟಿಕ್ಕಿದ ಹುಬ್ಬು, ಸಿಟ್ಟಿನಿಂದ ಬೆಂಕಿಯನ್ನುಗುಳುವ ಭಯಂಕರ ಮೋರೆಯ ನರಸಿಂಹ ರೂಪದಿಂದ ಕಾಣಿಸಿಕೊಂಡ. "ಭಯಂಕರ ರೂಪಿ ಆದರೆ ಭಯಹಾರಿ" ಎನ್ನುತ್ತಾನೆ ಚತುರ್ಮುಖ. ಮೂರುಲೋಕದ ಭಯ ಪರಿಹಾರಕ್ಕಾಗಿಯೇ ಭಗವಂತ ತೊಟ್ಟ ಭಯಂಕರ ರೂಪ ಈ ನರಸಿಂಹ ರೂಪ.

ಭಗವಂತ ಏಕೆ ಈ ರೀತಿ ಭಯಂಕರ ರೂಪಿಯಾಗಿ ಬಂದ ಎಂದರೆ: ಅದು ಅವನಿಗೆ ಅನಿವಾರ್ಯವಾಗಿತ್ತು. ಇದು ಆತನ ಭಕ್ತರೇ ತಂದಿಟ್ಟ ಪರಿಸ್ಥಿತಿ. ಹಿರಣ್ಯಕಶಿಪು ಘೋರ ತಪಸ್ಸು ಮಾಡಿ ಚತುರ್ಮುಖನಲ್ಲಿ ವರವನ್ನು ಬೇಡಿದ್ದ: "ನನ್ನನ್ನು ಯಾರೂ ಯಾವ ಆಯುಧದಿಂದಲೂ ಕೊಲ್ಲಬಾರದು, ಹಗಲೂ ಕೊಲ್ಲಬಾರದು, ರಾತ್ರಿಯೂ ಕೊಲ್ಲಬಾರದು. ದೇವತೆಗಳು-ಮನುಷ್ಯರು ಅಥವಾ ಪ್ರಾಣಿಗಳಿಂದ ನನಗೆ ಸಾವು ಬರಬಾರದು. ಕೆಳಗೆ, ಒಳಗೆ, ಭೂಮಿಯ ಮೇಲೆ, ಆಕಾಶದಲ್ಲಿ ನಾನು ಸಾಯಬಾರದು" ಎನ್ನುವ ವರವದು. ಈ ಕಾರಣಕ್ಕಾಗಿಯೇ ಭಗವಂತ ಪ್ರಾಣಿಯ ಮುಖವಿರುವ, ಆದರೆ ಮನುಷ್ಯ ದೇಹವಿರುವ ನರಸಿಂಹನಾಗಿ ಬರಬೇಕಾಯಿತು. ಒಳಗೂ ಅಲ್ಲ, ಹೊರಗೂ ಅಲ್ಲ- ಹೊಸ್ತಿಲಲ್ಲಿ; ಹಗಲೂ ಅಲ್ಲ, ರಾತ್ರಿಯೂ ಅಲ್ಲ- ಮುಸ್ಸಂಜೆಯಲ್ಲಿ, ಭೂಮಿಯ ಮೇಲೂ ಅಲ್ಲ, ಆಕಾಶದಲ್ಲೂ ಅಲ್ಲ-ತೊಡೆಯಮೇಲೆ; ಯಾವುದೇ ಆಯುಧ ಬಳಸದೇ ತನ್ನ ಕೈ ಉಗುರಿನಿಂದ ಹಿರಣ್ಯಾಕ್ಷನ ಉದರವನ್ನು ಸೀಳಿ ಕೊಂದ ಭಗವಂತ.

ಚತುರ್ಮುಖ ಕೊಟ್ಟ ವರಕ್ಕೆ ಯಾವುದೇ ಭಂಗ ಬಾರದಂತೆ ಅದನ್ನು ಉಳಿಸಿ ದುಷ್ಟ ಸಂಹಾರ ಮಾಡಿದ ಭಗವಂತನ ವಿಶಿಷ್ಠ ರೂಪ ಈ ನರಸಿಂಹ ರೂಪ.

ಈ ಹಿಂದೆ ಹೇಳಿದಂತೆ ದೇವರು ಮತ್ತು ಧರ್ಮವನ್ನು ಅಧ್ಯಯನ ಮಾಡಬಾರದು ಎಂದು ನಿಷೇಧ ಹೇರಿದವರಲ್ಲಿ ಮೊದಲಿಗ 'ವೇನ'. ಆತನ ನಂತರ ಈ ರೀತಿಯ ಕಾನೂನನ್ನು ತಂದವ ಹಿರಣ್ಯಕಶಿಪು. ಈತ ತನ್ನ ಮಗನಿಗೆ ಪಾಠ ಹೇಳುವ ಅಧ್ಯಾಪಕರಾದ ಶಂಡಾಮರ್ಕರಿಗೆ ದೇವರು ಮತ್ತು ಧರ್ಮವನ್ನು ಮಕ್ಕಳ ತಲೆಗೆ ಹಾಕಕೂಡದು ಎಂದು ಕಟ್ಟಪ್ಪಣೆ ಮಾಡಿದ್ದ. ಈ ರೀತಿ ಪ್ರಹ್ಲಾದನ ವಿದ್ಯಾಭ್ಯಾಸ ಗುರುಕುಲದಲ್ಲಿ ನಡೆಯುತ್ತಿರುವಾಗ ಒಮ್ಮೆ ಹಿರಣ್ಯಕಶಿಪು ತನ್ನ ಮಗ ಏನನ್ನು ಕಲಿತಿದ್ದಾನೆ ಎಂದು ತಿಳಿಯಲಿಕ್ಕೋಸ್ಕರ ಆತನನ್ನು ಕರೆದು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು: "ಗುರುಕುಲದಲ್ಲಿ ಏನನ್ನು ಕಲಿತೆ" ಎಂದು ಕೇಳುತ್ತಾನೆ. ಆಗ ಪ್ರಹ್ಲಾದ ಹೇಳುತ್ತಾನೆ: "***ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ, ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಂ***"(ಭಾಗವತ: ೭-೫-೨೩). "ನಾನು ನವವಿಧ ಭಕ್ತಿಯನ್ನು ಕಲಿತೆ" ಎಂದು ಪ್ರಹ್ಲಾದ ಹೇಳಿದಾಗ, ಹಿರಣ್ಯಕಶಿಪು ಕೋಪಗೊಂಡು ಆತನ ಗುರುಗಳಾದ ಶಂಡಾಮರ್ಕರನ್ನು ಗದರಿಸುತ್ತಾನೆ. ಅವರು ಹೇಳುತ್ತಾರೆ: "ಇದ್ಯಾವುದನ್ನೂ ನಾವು ಹೇಳಿ ಕೊಟ್ಟಿಲ್ಲ, ಆದರೆ ಹೇಗೋ ಆತನೇ ಕಲಿತಿದ್ದಾನೆ" ಎಂದು. ಆಗ ತೊಡೆಯಲ್ಲಿ ಕುಳಿತಿದ್ದ ಪ್ರಹ್ಲಾದನನ್ನು ತಳ್ಳಿ, ಅಂತಹ ವಿದ್ಯೆಯನ್ನು ಕಲಿಯಕೂಡದು ಎಂದು ಎಚ್ಚರಿಕೆಯನ್ನು ಕೊಟ್ಟು ಕಳಿಸುತ್ತಾನೆ ಹಿರಣ್ಯಕಶಿಪು. ನಂತರ ಮರಳಿ ಆರು ತಿಂಗಳ ನಂತರ ಪುನಃ ಮಗನ ವಿದ್ಯೆಯನ್ನು ಪರೀಕ್ಷಿಸಿದಾಗ ಪ್ರಹ್ಲಾದ ಮರಳಿ ಭಗವಂತನ ಕುರಿತು ಮಾತನಾಡುತ್ತಾನೆ. ಆಗ ಕೋಪಗೊಂಡ ಹಿರಣ್ಯಕಶಿಪು "ಯಾರು ನಿನಗೆ ನನ್ನ ಮುಂದೆ ಈ ಮಾತನ್ನಾಡುವ ಧೈರ್ಯ ಕೊಟ್ಟವನು" ಎಂದು ಕೇಳುತ್ತಾನೆ. ಇದಕ್ಕೆ ಉತ್ತರಿಸುತ್ತಾ ಪ್ರಹ್ಲಾದ ಹೇಳುತ್ತಾನೆ: "ನಿನ್ನೊಳಗಿದ್ದು ನಿನಗೆ ಯಾರು ಬಲ ಕೊಟ್ಟಿದ್ದಾನೋ ಅವನೇ ನನ್ನೊಳಗಿದ್ದು ನನಗೆ ಈ ಧೈರ್ಯವನ್ನು ಕೊಟ್ಟಿದ್ದಾನೆ" ಎಂದು. ***ನ ಕೇವಲಂ ಮೇ ಭವತಶ್ಚ ರಾಜನ್, ಸ ವೈ ಬಲಂ ಬಲಿನಾಂ ಚಾಪರೇಷಾಂ*** (ಭಾಗವತ: ೭-೮-೮). ಈ ಮಾತನ್ನು ಕೇಳಿ ಕೋಪಗೊಂಡ ಹಿರಣ್ಯಾಕ್ಷ ಅನೇಕ ವಿಧದಲ್ಲಿ ಪ್ರಹ್ಲಾದನನ್ನು ಕೊಲ್ಲಿಸುವ ಪ್ರಯತ್ನ ಮಾಡುತ್ತಾನೆ. ಆದರೆ ಎಲ್ಲಾ ಪ್ರಯತ್ನದಲ್ಲೂ ಆತ ಸೋಲುತ್ತಾನೆ. ಕೊನೆಗೆ ಭಯಭೀತನಾಗಿದ್ದರೂ ಧೈರ್ಯದ ಅಭಿನಯ ಮಾಡುತ್ತಾ ಪ್ರಹ್ಲಾದನಲ್ಲಿ "ನಿನ್ನನ್ನು ಕಾಯುವ ಆ ನಿನ್ನ ಭಗವಂತ ಎಲ್ಲೆಡೆ ಇದ್ದಾನೆ ಎಂದಿಯಲ್ಲಾ, ಆತ ಈ ಕಂಬದಲ್ಲಿಯೂ ಇದ್ದಾನೆಯೋ" ಎಂದು ಕೇಳುತ್ತಾನೆ. ಆಗ ಪ್ರಹ್ಲಾದ: "ಭಗವಂತ ನನ್ನಲ್ಲಿ, ನಿನ್ನಲ್ಲಿ, ಎಲ್ಲಾಕಡೆ, ಈ ಕಂಬದಲ್ಲಿಯೂ ಕೂಡಾ ಇದ್ದಾನೆ" ಎಂದಾಗ, ಹಿರಣ್ಯಕಶಿಪು ಅಹಂಕಾರ ಮತ್ತು ಭಯದಿಂದ ಕಂಬವನ್ನು ತನ್ನ ಗದೆಯಿಂದ ಚಚ್ಚಲು, ಕಂಬ ಒಡೆದು ನರಸಿಂಹ ಪ್ರತ್ಯಕ್ಷನಾಗುತ್ತಾನೆ. ಈ ರೀತಿ ಉಗ್ರರೂಪದಲ್ಲಿ ಬಂದು ಹಿರಣ್ಯಕಶಿಪುವನ್ನು ಎತ್ತಿ ತನ್ನ ತೊಡೆಯಮೇಲಿಟ್ಟುಕೊಂಡು ಉಗುರಿನಿಂದ ಆತನ ದೇಹವನ್ನು ಬಗೆದು, ಆತನ ಕರುಳನ್ನು ತನ್ನ ಕೊರಳಲ್ಲಿ ಧರಿಸುತ್ತಾನೆ ನರಸಿಂಹ.

ಆಚಾರ್ಯ ಮಧ್ವರು ಭಗವಂತನ ಈ ನರಸಿಂಹ ಅವತಾರವನ್ನು ೧. ಶಾರ್ದೂಲ ವಿಕ್ರೀಡಿತ ಮತ್ತು ೨. ಸ್ರಗ್ಧರಾ ಎನ್ನುವ ಎರಡು ಛಂದಸ್ಸಿನಲ್ಲಿ ಅದ್ಭುತವಾಗಿ ಸೆರೆ ಹಿಡಿದು ಈ ರೀತಿ ವರ್ಣಿಸಿದ್ದಾರೆ: ೧. ***ಪಾಂತ್ವಸ್ಮಾನ್ ಪುರುಹೂತ ವೈರಿಬಲವನ್ ಮಾತಂಗಮಾದ್ಯಧ್ಘಟಾ ಕುಂಭೋಚ್ಚಾದ್ರಿ ವಿಪಾಟನಾಧಿಕಪಟು ಪ್ರತ್ಯೇಕ ವಜ್ರಾಯಿತಾಃ*** ೨. ***ಶ್ರೀಮತ್ಕಂಠೀರವಾಸ್ಯ ಪ್ರತತಸುನಖರಾ ದಾರಿತಾರಾತಿದೂರ ಪ್ರಧ್ವಸ್ತಧ್ವಾನ್ತಶಾಂತ ಪ್ರವಿತತಮನಸಾ ಭಾವಿತಾಭೂರಿಭಾಗೈಃ.*** ಇದು ನರಸಿಂಹ ಅವತಾರವನ್ನು ಎರಡು ಛಂದಸ್ಸಿನಲ್ಲಿ ಸೆರೆ ಹಿಡಿದ ಅತ್ಯದ್ಭುತ ರಚನೆ.

ಹಿರಣ್ಯಕಶಿಪುವಿನ ಅಂತ್ಯದಿಂದ ತಲೆದಿಂಬಿನ ಕೆಳಗಿನ ವಿತ್ತ ಮೋಹ ಕಳೆಯುವಂತಾಗುತ್ತದೆ. ಸಾಧಕರಿಗೆ ಮೋಹವನ್ನು ಮೀರುವ ಹಂತದಲ್ಲಿ ಹಾಸಿಗೆಯ ಕೆಳಗೆ, ತಲೆದಿಂಬಿನ ಕೆಳಗೆ ಏನಾದರೂ ಧನವನ್ನು ಇಟ್ಟರೆ ನಿದ್ದೆ ಬರುವುದಿಲ್ಲವಂತೆ. ಹಿರಣ್ಯಕಶಿಪು ಹೊರ ಹೋಗುವಾಗ ಆತ ನಮ್ಮನ್ನು ನಡುಗಿಸಿ ಬಿಡುತ್ತಾನೆ. ಆದರೆ ನಾವು ವಿಚಲಿತರಾಗದೇ ಇದ್ದರೆ ಆಗ ಹಿರಣ್ಯಕಶಿಪು ಹೊರಟುಹೋಗಿ ನಮ್ಮೊಳಗೆ ನರಸಿಂಹ ಬಂದು ಕೂರುತ್ತಾನೆ. ಮೊದಲು ಮತ್ಸ್ಯನಾಗಿ ಬಂದು ವೇದ ವಾಙ್ಮಯವನ್ನು ಕೊಟ್ಟ ಭಗವಂತ, ಕೂರ್ಮನಾಗಿ ಸಮಸ್ತ ಶಾಸ್ತ್ರದ ಮಥನ ಮಾಡಲು ನಿಂತ. ಆದರೂ ವೇದಾರ್ಥಕ್ಕಿಂತ ದುಡ್ಡು ಮುಖ್ಯವಾದಾಗ ವರಾಹ-ನರಸಿಂಹನಾಗಿ ಬಂದು ವಿತ್ತ(ಹಿರಣ್ಯ) ಮೋಹದಿಂದ ಬಿಡುಗಡೆ ಮಾಡಿದ. [ನರಸಿಂಹ ಅವತಾರದ ಕುರಿತಾದ ಸಂಕ್ಷಿಪ್ತ ವಿವರಣೆಯನ್ನಷ್ಟೇ ಇಲ್ಲಿ ನೀಡಲಾಗಿದ್ದು, ಇದರ ಪೂರ್ಣ ವಿವರಣೆಯನ್ನು ಮುಂದೆ ಏಳನೇ ಸ್ಕಂಧದಲ್ಲಿ ಕಾಣಬಹುದು]

## ೧೪. ಗಜೇಂದ್ರನಿಗೆ ಮೋಕ್ಷ ನೀಡಿದ ತಾಪಸ ನಾಮಕ ಹರಿಃ

ಮುಂದಿನ ಶ್ಲೋಕದಲ್ಲಿ ಚತುರ್ಮುಖ ಬ್ರಹ್ಮ ನಾರದರಿಗೆ ವಿವರಿಸುವ ಭಗವಂತನ ಅವತಾರ ಗಜೇಂದ್ರನನ್ನು ಉದ್ಧಾರ ಮಾಡಿದ 'ಹರಿ' ನಾಮಕ ರೂಪ. ಈ ರೂಪ ಯಾವುದು ಎನ್ನುವ ಬಗ್ಗೆ ವ್ಯಾಖ್ಯಾನಕಾರದಲ್ಲಿ ಗೊಂದಲವಿತ್ತು. ಆದರೆ ಖಚಿತವಾಗಿ ಈ ರೂಪ ಯಾವುದು ಎಂಬುದನ್ನು ಆಚಾರ್ಯ ಮಧ್ವರು ತಮ್ಮ ಭಾಗವತ ತಾತ್ಪರ್ಯ ನಿರ್ಣಯದಲ್ಲಿ ತೋರಿಸಿಕೊಟ್ಟಿದ್ದಾರೆ. ಅಲ್ಲಿ ಆಚಾರ್ಯರು ಮತ್ಸ್ಯಪುರಾಣದಲ್ಲಿ ಉಕ್ತವಾದ ಈ ಅವತಾರದ ವಿವರಣೆಯನ್ನು ನೀಡಿದ್ದಾರೆ. ಮತ್ಸ್ಯಪುರಾಣದಲ್ಲಿ ಹೇಳುವಂತೆ: ***ಹರಿಸ್ತಾಪಸನಾಮಾಸೌ ಜಾತಸ್ತಪಸಿ ವೈ ಮನುಃ । ಗಜೇಂದ್ರಂ ಮೋಚಯಾಮಾಸ ಸಸರ್ಜ ಚ ಜಗದ್ ವಿಭುಃ ॥ ಇತಿ ಮಾತ್ಸ್ಯೇ ॥*** ಇಲ್ಲಿ ಸ್ಪಷ್ಟವಾಗಿ ಹೇಳುವಂತೆ: ಗಜೇಂದ್ರನನ್ನು ಉದ್ಧರಿಸಿದ ಹರಿ ತಾಪಸ ನಾಮಕ. ಈತನೇ ತಾಪಸ ಮನ್ವಂತರದ ಮನು. ಪ್ರಿಯವ್ರತನ ಎರಡನೇ ಹೆಂಡತಿಯಲ್ಲಿ ಜನಿಸಿದ ಮೂರು ಜನ ಮಕ್ಕಳಲ್ಲಿ(ಉತ್ತಮ, ತಾಪಸ ಮತ್ತು ರೈವತ) ತಾಪಸ ಸ್ವಯಂ ಭಗವಂತನ ಅವತಾರ.

ತಾಪಸ ನಾಮಕ ಹರಿ ಗಜೇಂದ್ರನನ್ನು ಉದ್ಧರಿಸಿದ ಕಥೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ಎರಡು ಶ್ಲೋಕಗಳಲ್ಲಿ ಹೇಳಿದ್ದಾರೆ. ಮುಂದೆ ಇದರ ವಿಸ್ತಾರವಾದ ವಿವರಣೆಯನ್ನು ನಾಲ್ಕು ಅಧ್ಯಾಯಗಳಲ್ಲಿ ಹೇಳಲಾಗುತ್ತದೆ. ಹಿಂದೆ ಪ್ರಾತಃಕಾಲದಲ್ಲಿ ಸಂಪೂರ್ಣ ಗಜೇಂದ್ರ ಮೋಕ್ಷವನ್ನು ಪಾರಾಯಾಣ ಮಾಡುತ್ತಿದ್ದರು. ಒಂದು ವೇಳೆ ಅದು ಸಾಧ್ಯವಾಗದೇ ಇದ್ದಾಗ ಇಲ್ಲಿ ಹೇಳಲಾದ ಸಂಗ್ರಹ ಗಜೇಂದ್ರ ಮೋಕ್ಷದ ಶ್ಲೋಕವನ್ನು ಪ್ರಾತಃಕಾಲದ ಸ್ತೋತ್ರದಲ್ಲಿ ಸೇರಿಸಿ ಹೇಳುವುದು ರೂಢಿ.

> ಅಂತಃಸರಸ್ಯುರುಬಲೇನ ಪದೇ ಗೃಹೀತೋ ಗ್ರಾಹೇಣ ಯೂಥಪತಿರಂಬುಜಹಸ್ತ ಆರ್ತಃ ।
> ಆಹೇದಮಾದಿಪುರುಷಾಖಿಲಲೋಕನಾಥ ತೀರ್ಥಶ್ರವಃ ಶ್ರವಣಮಂಗಳನಾಮಧೇಯ ॥೧೫॥

> ಸ್ಮೃತ್ವಾ ಹರಿಸ್ತಮರಣಾರ್ಥಿನಮಪ್ರಮೇಯಶ್ಚಕ್ರಾಯುಧಃ ಪತಗರಾಜಭುಜಾಧಿರೂಢಃ ।
> ಚಕ್ರೇಣ ನಕ್ರವದನಂ ವಿನಿಪಾಟ್ಯ ತಸ್ಮಾದ್ ಹಸ್ತೇ ಪ್ರಗೃಹ್ಯ ಭಗವಾನ್ ಕೃಪಯೋಜ್ಜಹಾರ ॥೧೬॥

ಅರಣ್ಯದ ಮಧ್ಯದಲ್ಲಿ ಒಂದು ಕೆರೆ. ಆ ಕೆರೆಗೆ ನೀರು ಕುಡಿಯಲೆಂದು ಆನೆಗಳ ಗುಂಪೊಂದು ಬಂದಿದೆ. ಈ ಆನೆಗಳ ಗುಂಪಿನ ನಾಯಕ ***ಗಜೇಂದ್ರ***. ಸಾಮಾನ್ಯವಾಗಿ ಆನೆಗಳು ಒಂಟಿಯಾಗಿ ಚಲಿಸುವುದಿಲ್ಲ. ಅವು ಗುಂಪಾಗಿ ವಾಸಿಸುತ್ತವೆ ಮತ್ತು ಆ ಗುಂಪಿನಲ್ಲಿ ಬಲಿಷ್ಠವಾಗಿರುವ ಆನೆ ಗುಂಪಿನ ನಾಯಕನಾಗಿರುತ್ತದೆ. ಇದೇ ರೀತಿ ಇಲ್ಲಿ ಬಲಿಷ್ಠನಾಗಿರುವ ಗಜೇಂದ್ರ ಈ ಆನೆಗಳ ಗುಂಪಿನ ನಾಯಕನಾಗಿದ್ದು, ನೀರು ಕುಡಿಯಲೆಂದು ಸರೋವರಕ್ಕೆ ಇಳಿದಿದ್ದಾನೆ. ಆ ಸರೋವರದಲ್ಲಿ ಒಂದು ಬಲಿಷ್ಠ ಮೊಸಳೆ ವಾಸವಾಗಿತ್ತು. ಅದು ಇತರ ಆನೆಗಳನ್ನು ಬಿಟ್ಟು ನೇರವಾಗಿ ಬಂದು ಗಜೇಂದ್ರನ ಕಾಲನ್ನು ಕಚ್ಚಿತು. ನಮಗೆ ತಿಳಿದಂತೆ ಆನೆ ಬಲಿಷ್ಠ ಪ್ರಾಣಿ. ಆದರೆ ನೀರಿನ ಒಳಗೆ ಮೊಸಳೆ ಅತ್ಯಂತ ಬಲಿಷ್ಠ. ಕಾಲನ್ನು ಮೊಸಳೆ ಕಚ್ಚಿದಾಗ ಗಜೇಂದ್ರ ಅದರಿಂದ ತಪ್ಪಿಸಿಕೊಳ್ಳಲು ಅನೇಕ ರೀತಿಯಿಂದ ಪ್ರಯತ್ನಿಸಿ ಸೋತು, "ಇನ್ನು ನನ್ನನ್ನು ಯಾರೂ ರಕ್ಷಿಸಲಾರರು, ನನಗೆ ಸಾವೇ ಗತಿ" ಎಂದು ಯೋಚಿಸಲಾರಂಭಿಸಿದ. ಆಗ ಆತನಿಗೆ ಜನ್ಮಾಂತರದ ನೆನಪಾಗುತ್ತದೆ. ಪೂರ್ವ ಜನ್ಮದಲ್ಲಿ ಬಹಳ ದೊಡ್ಡ ಭಕ್ತನಾಗಿದ್ದ ರಾಜನೇ ಈ ಆನೆ. ಹಿಂದಿನ ಜನ್ಮದಲ್ಲಿ ಭಗವಂತನನ್ನು ಆರಾಧನೆ ಮಾಡಿದ್ದರಿಂದ ಪೂರ್ವಜನ್ಮದ ಸಂಸ್ಕಾರ ಆ ಆನೆಯಲ್ಲಿ ಉಳಿದಿತ್ತು. "ನಾನಿನ್ನು ಬದುಕಿ ಉಳಿಯುವ ಸಾಧ್ಯತೆ ಇಲ್ಲ. ಯಾರೂ ನನ್ನನ್ನು ಬದುಕಿಸಲಾರರು" ಎಂದು ತೀರ್ಮಾನ ಮಾಡಿದ ಆನೆ ಭಗವಂತನನ್ನು ಪ್ರಾರ್ಥಿಸಿ ಸಾಯಲು ನಿರ್ಧರಿಸಿತು. ಭಗವಂತ ಬಂದು ರಕ್ಷಿಸಿದರೆ ಬದುಕುವುದು, ಇಲ್ಲದಿದ್ದರೆ ಭಗವಂತನ ಸ್ಮರಣೆ ಮಾಡಿ ಸಾಯುವುದು ಎಂದು ನಿರ್ಧರಿಸಿ, ಸರೋವರದಲ್ಲಿನ ಒಂದು ಕಮಲದ ಹೂವನ್ನು ತನ್ನ ಸೊಂಡಿಲಿನಿಂದ ಕಿತ್ತು ಮೇಲಕ್ಕೆತ್ತಿ, ಮರಣ ಸಂಕಟದಲ್ಲೂ ಭಗವಂತನ ಗುಣಗಳನ್ನು ಸ್ಮರಣೆ ಮಾಡಿತು ಆನೆ.

"ಆದಿಗುರು, ಅಖಿಲ ಲೋಕನಾಥ, ತೀರ್ಥಶ್ರವಃ, ಶ್ರವಣಮಂಗಳನಾಮಧೇಯ, ನಾರಾಯಣ ನನ್ನನ್ನು ಕಾಪಾಡು" ಎನ್ನುವಂತೆ ಗಟ್ಟಿಯಾಗಿ ಕೂಗಿತು ಆನೆ. ಭಗವಂತ ಸಮಸ್ತ ಸಾಧನಾ ಶರೀರದಲ್ಲಿರುವ ಜೀವಗಳಿಗೂ ಆದಿ. ಆತ ಜೀವಗಳಿಗೆ ಶರೀರವನ್ನು ಕೊಟ್ಟು ಸಾಧಕರನ್ನು ಸೃಷ್ಟಿ ಮಾಡುತ್ತಾನೆ ಮತ್ತು ಕೊನೆಗೊಮ್ಮೆ ಆತನ ಶರೀರವನ್ನು ನಾಶಮಾಡಿ ಮೋಕ್ಷ ನೀಡುತ್ತಾನೆ. ಜೀವ ಮಾಡಿದ ಸಾಧನೆಯನ್ನು ಸ್ವೀಕಾರ ಮಾಡಿ ರಕ್ಷಣೆ ಮಾಡುವವನು ಆ ಭಗವಂತ. ಸಮಸ್ತ ತತ್ತ್ವಾಭಿಮಾನಿ ದೇವತೆಗಳೊಂದಿಗೆ ಈ ದೇಹದೊಳಗಿದ್ದು, ನಮ್ಮನ್ನು ಪ್ರೇರಣೆ ಮಾಡುವ ಭಗವಂತ ಅಖಿಲ ಲೋಕನಾಥ. ಆತ ಬ್ರಹ್ಮಾಂಡ-ಪಿಂಡಾಂಡ ನಿಯಾಮಕ. ಆತನ ಪ್ರತೀ ನಾಮವೂ ಗುಣವಾಚಕ. ಅಂತಹ ಭಗವಂತನ ನಾಮಸ್ಮರಣೆ ಮಾಡಿ ಪ್ರಾರ್ಥನೆ ಮಾಡಿದ ಗಜೇಂದ್ರ.

ಇಲ್ಲಿ "***ಸ್ಮೃತ್ವಾ ಹರಿಃ***" ಎಂದಿದ್ದಾರೆ. ಇತ್ತೀಚೆಗೆ ಮುದ್ರಣಗೊಂಡಿರುವ ಭಾಗವತ ಪುಸ್ತಕಗಳಲ್ಲಿ ಇದನ್ನು "***ಶ್ರುತ್ವಾ ಹರಿಃ***" ಎಂದು ತಿದ್ದಿರುವುದನ್ನು ಕಾಣುತ್ತೇವೆ. ಆದರೆ ಸರಿಯಾದ ಪ್ರಾಚೀನ ಪಾಠ "***ಸ್ಮೃತ್ವಾ ಹರಿಃ***". ಭಗವಂತ ಸ್ಮರಿಸಿದ ಎಂದರೆ ಉದ್ಧಾರ ಮಾಡಬೇಕು ಎಂದು ನಿರ್ಧರಿಸಿದ ಎಂದರ್ಥ. ಗಜೇಂದ್ರನನ್ನು ಮೊಸಳೆಯ ಬಾಯಿಯಿಂದ ತಪ್ಪಿಸಿ ಆತನ ಶಾಪ ವಿಮೋಚನೆ ಮಾಡಿ, ಉದ್ಧರಿಸಬೇಕು ಎಂದು ಭಗವಂತ ಸಂಕಲ್ಪಿಸಿದ. ತನ್ನನ್ನು ರಕ್ಷಿಸು ಎಂದು ಪ್ರಾರ್ಥಿಸಿದ ಗಜೇಂದ್ರನ ಮುಂದೆ ಭಗವಂತ ಗರುಡಾರೂಢನಾಗಿ (ಗರುಡನ ಹೆಗಲೇರಿ ನಿಂತ ರೂಪದಿಂದ) ಕಾಣಿಸಿಕೊಂಡು, ತನ್ನ ಚಕ್ರದಿಂದ ಮೊಸಳೆಯನ್ನು ಸೀಳಿ, ಆನೆಯನ್ನು ರಕ್ಷಿಸಿ ಅದರ ಸೊಂಡಿಲನ್ನು ಹಿಡಿದು ಮೇಲೆ ತಂದ ಭಗವಂತ. ಭಗವಂತನ ಚಕ್ರ ಸ್ಪರ್ಶದಿಂದ ಮೊಸಳೆ ಶಾಪದಿಂದ ಮುಕ್ತವಾಗಿ ಗಂಧರ್ವ ರೂಪ ತಳೆದರೆ, ಗಜೇಂದ್ರ ಭಗವಂತನ ಹಸ್ತ ಸ್ಪರ್ಶದಿಂದಾಗಿ ಶಾಪ ವಿಮೋಚನೆಗೊಂಡು ಭಗವಂತನ ಲೋಕವನ್ನು ಸೇರುವಂತಾಯಿತು. ಈ ರೀತಿ ಇಬ್ಬರನ್ನು ಶಾಪದಿಂದ ವಿಮೋಚನೆ ಮಾಡಿ ಕರುಣಿಸಿದ ಈ ಘಟನೆ ತಾಪಸ ನಾಮಕ ಭಗವಂತನ ತಾಪಸ ಮನ್ವಂತರದಲ್ಲಿ ನಡೆದ ಲೀಲೆಗಳಲ್ಲಿ ಒಂದು.

[ಈ ಶ್ಲೋಕದಲ್ಲಿ ಭಗವಂತ ಗರುಡನ ಹೆಗಲೇರಿ ಬಂದ ಎಂದಿದ್ದಾರೆ. ಗರುಡನಿಗೆ ಮುಖ್ಯವಾಗಿ ಎರಡು ರೂಪಗಳಿವೆ. ಮನುಷ್ಯರೂಪ ಹಾಗೂ ಪಕ್ಷಿಯ ರೂಪ. ಆತ ಪಕ್ಷಿಯ ರೂಪದಿಂದಲೂ ಕಾಣಿಸಿಕೊಳ್ಳಬಲ್ಲ ಹಾಗೂ ಮನುಷ್ಯ ರೂಪದಿಂದಲೂ ಕಾಣಿಸಿಕೊಳ್ಳಬಲ್ಲ. ಪೀಠಗಳಲ್ಲಿ ಪೂಜಿಸುವ ಗರುಡನಿಗೆ ಮನುಷ್ಯ ದೇಹವಿದ್ದು ರೆಕ್ಕೆ ಮತ್ತು ಉದ್ದನೆಯ ಮೂಗಿರುವುದನ್ನು ಕಾಣುತ್ತೇವೆ. ಗರುಡನ ಮೇಲೆ ಕುಳಿತು ಎರಡು ಕೈಯಿಂದ ಚಿನ್ನದ ನಾಣ್ಯವನ್ನು ಸುರಿಸುವ ಭಗವಂತನ ಶ್ರೀಕರಮೂರ್ತಿಯಲ್ಲಿರುವ ಗರುಡನಿಗೆ ಮನುಷ್ಯ ದೇಹವಿದ್ದು ಜೊತೆಗೆ ಕೊಕ್ಕು ಮತ್ತು ರೆಕ್ಕೆಗಳಿರುವುದನ್ನು ನಾವು ಕಾಣಬಹುದು]

## ೧೫. ತ್ರಿವಿಕ್ರಮನಾಗಿ ಬಲಿ ಚಕ್ರವರ್ತಿಯನ್ನು ಉದ್ಧರಿಸಿದ ವಾಮನ ಅವತಾರ

**ಜ್ಯಾಯಾನ್ ಗುಣೈರವರಜೋSಪ್ಯದಿತೇಃ ಸುತಾನಾಂ ಲೋಕಾನ್ ವಿಚಕ್ರಮ ಇಮಾನ್ ಯದಥೋSಧಿಯಜ್ಞಃ ।**
**ಕ್ಷ್ಮಾಂ ವಾಮನೇನ ಜಗೃಹೇ ತ್ರಿಪದಚ್ಛಲೇನ ಯಾಂಚಾಮೃತೇ ಪಥಿ ಚರನ್ ಪ್ರಭುಭಿರ್ನ ಚಾಲ್ಯಃ ॥೧೭॥**

**ನಾರ್ಥೋ ಬಲೇರಯಮುರುಕ್ರಮಪಾದಶೌಚ ಮಂಭಃ ಶಿವಂ ಧೃತವತೋ ವಿಬುಧಾಧಿಪತ್ಯಮ್ ।**
**ಯೋ ವೈ ಪ್ರತಿಶ್ರುತಮೃತೇSಪಿ ಚ ಶೀರ್ಷಮಾಣ ಮತ್ಮನ್ಯಮಂಗ ಮನಸಾ ಹರಯೇSಭಿಮೇನೇ ॥೧೮॥**

ಅದಿತಿ-ಕಾಶ್ಯಪರ ದಾಂಪತ್ಯ ಫಲದಲ್ಲಿ ಹುಟ್ಟಿದ ಹನ್ನೆರಡು ಮಂದಿ ಪುತ್ರರಲ್ಲಿ ಕೊನೇಯ ಪುತ್ರ ವಾಮನ. [ಈ ಹನ್ನೆರಡು ಮಂದಿಯನ್ನು ದ್ವಾದಶಾದಿತ್ಯರೆನ್ನುತ್ತಾರೆ. ಕೆಲವರು ದ್ವಾದಶಾದಿತ್ಯರನ್ನು ಹನ್ನೆರಡು ಮಂದಿ ಸೂರ್ಯರು ಎಂದು ಹೇಳುವುದುಂಟು. ಆದರೆ ಅದು ಸರಿಯಲ್ಲ. ಹನ್ನೆರಡು ಮಂದಿ ಸೂರ್ಯರಿಲ್ಲ, ಸೂರ್ಯ ಒಬ್ಬನೇ ಮತ್ತು ಆತ ಈ ಹನ್ನೆರಡು ಮಂದಿಯಲ್ಲಿ ಒಬ್ಬ ಅಷ್ಟೇ]. ಇಂದ್ರನಿಗೂ ತಮ್ಮನಾಗಿ ಹುಟ್ಟಿದ ವಾಮನನಿಗೆ ಉಪೇಂದ್ರ ಎನ್ನುವ ಹೆಸರಿದೆ. *ಅಜಗನ್ಯೋ ಜಗನ್ಯಜಃ* ಎನ್ನುವಂತೆ ಆತ ಕೊನೇಯಲ್ಲಿ ಹುಟ್ಟಿದ ಇಂದ್ರನ ತಮ್ಮನೂ ಹೌದು(ಉಪ/**Sub),** ಎಲ್ಲರಿಗಿಂತ ಎತ್ತರದಲ್ಲಿರುವವನೂ(ಉಪರಿ) ಹೌದು. ಆತ ಹುಟ್ಟಿನಲ್ಲಿ ಕೊನೇಯವ ಆದರೆ ಗುಣದಲ್ಲಿ ಮೊದಲಿಗ. ಬ್ರಹ್ಮಾಂಡದಲ್ಲಿ ಮೂರು ಲೋಕಗಳನ್ನೂ ತುಂಬಿ ನಿಂತ ವಾಮನ ನಮ್ಮ ಪಿಂಡಾಂಡದಲ್ಲೂ ತುಂಬಿದ್ದಾನೆ. ದೇಹದ ಧಾರಕ ಶಕ್ತಿಯಾಗಿ ಪಾದದಲ್ಲಿ, ದೇಹದ ಮುಖ್ಯಶಕ್ತಿಯಾಗಿ ಹೃದಯ ಮಧ್ಯೆ ಮತ್ತು ಸೌಂದರ್ಯ ಸಂಕೇತವಾಗಿ ಕಣ್ಣಿನಲ್ಲಿ ವಾಮನ ತುಂಬಿದ್ದಾನೆ.

ಬೀದಿಯಲ್ಲಿ ನಡೆದುಬಂದ ವಾಮನ ಬೇರೆ ಯಾರಲ್ಲೂ ಭಿಕ್ಷೆ ಕೇಳದೆ, ನೇರವಾಗಿ ಬಲಿಯ ಬಳಿ ಬಂದು, ಅಗ್ನಿ ಕಾರ್ಯಕ್ಕೆ ಮೂರು ಹೆಜ್ಜೆ ಸ್ಥಳ ಬೇಕು ಎನ್ನುವ ನೆಪದಿಂದ ಮೂರು ಲೋಕದ ಒಡೆತನವನ್ನು ಬಲಿಯಿಂದ ಕಿತ್ತುಕೊಂಡ! ಈ ರೀತಿ ಮಾಡಲು ಒಂದು ಕಾರಣ ಪ್ರಹ್ಲಾದ. ಪ್ರಹ್ಲಾದ ಭಗವಂತನಲ್ಲಿ "ನನ್ನ ವಂಶದ ಮೇಲೆ ನಿನ್ನ ಅನುಗ್ರಹ ಇರಲಿ" ಎಂದು ಕೇಳಿಕೊಂಡಿದ್ದರಿಂದ, ಬಲಿ ತಪ್ಪು ಮಾಡಿದ್ದರೂ ಕೂಡಾ ಆತನನ್ನು ನಿಗ್ರಹಿಸಿ ತುಳಿಯಲಿಲ್ಲ**.** ಬದಲಿಗೆ ಆತನಲ್ಲಿ ಭಿಕ್ಷೆ ಬೇಡುವ ನಪದಿಂದ ಆತನ ತಲೆಯ ಮೇಲೆ ತನ್ನ ಪಾದವನ್ನಿತ್ತು ಅನುಗ್ರಹಿಸಿದ. ಇದು ಭಗವಂತನ ಭಕ್ತೋದ್ಧಾರಕ ಪರಿ. ಈ ರೀತಿ ಇಂದ್ರ ಪದವಿಯನ್ನು ಆಕ್ರಮಿಸಿ ಕುಳಿತಿದ್ದ ಬಲಿಯನ್ನು ಕೆಳಗಿಳಿಸಿ, ಇಂದ್ರನಿಗೆ ಪದವಿಯನ್ನು ಮರಳಿ ನೀಡಿದ ಭಗವಂತ**,** ಬಲಿಗೆ ಮುಂದಿನ ಮನ್ವಂತರದಲ್ಲಿ ಇಂದ್ರ ಪದವಿಯನ್ನು ಅನುಗ್ರಹಿಸಿದ**.** ಇಲ್ಲಿ ನಮಗೆ

ತಿಳಿಯುವುದೇನೆಂದರೆ ಬಲಿಗೆ ಇಂದ್ರ ಪದವಿಯೇರುವ ಅರ್ಹತೆ ಇದ್ದಿದ್ದರೂ ಕೂಡಾ, ಸರದಿಗೂ ಮುನ್ನ ಪದವಿಯನ್ನು ಅಪಹರಿಸಿದ್ದು ಆತ ಮಾಡಿದ ತಪ್ಪಾಗಿತ್ತು.

"ಭಗವಂತ ಬಲಿಗೆ ಇಂದ್ರ ಪದವಿ ನೀಡಿರುವುದು ದೊಡ್ಡ ಸಂಗತಿ ಅಲ್ಲ" ಎನ್ನುತ್ತಾನೆ ಚತುರ್ಮುಖ. ಬ್ರಹ್ಮಚಾರಿ ರೂಪದಲ್ಲಿ ಭಿಕ್ಷೆಗೆ ಬಂದ ಭಗವಂತನ ಪಾದ ತೊಳೆದು ಆ ಪಾದೋದಕವನ್ನು ಶಿರಸ್ಸಿನಲ್ಲಿ ಹೊತ್ತವನಿಗೆ ಇಂದ್ರ ಪದವಿ ಯಾವ ಗಿಡದ ತಪ್ಪಲು? ಆತ ಮೂರು ಹೆಜ್ಜೆ ಭೂಮಿಯನ್ನು ದಾನ ಕೊಡುತ್ತೇನೆ ಎಂದಿದ್ದನೇ ಹೊರತು, ತನ್ನ ತಲೆಯನ್ನು ಕೊಡುತ್ತೇನೆ ಎಂದು ಪ್ರತಿಜ್ಞೆ ಮಾಡಿರಲಿಲ್ಲ. ಆದರೆ ಭಗವಂತನ ಪಾದವನ್ನಿಡಲು ತನ್ನ ತಲೆಯನ್ನೇ ಕೊಟ್ಟ. ಮನಃಪೂರ್ವಕವಾಗಿ ಸಂತೋಷದಿಂದ ಭಗವಂತನಿಗೆ ತನ್ನನ್ನು ತಾನು ಅರ್ಪಿಸಿಕೊಂಡ. ಇದು ಭಕ್ತಿಯ ಕೊನೇಯ ಮಜಲಾದ ಆತ್ಮನಿವೇದನ. ಈ ರೀತಿ ತನ್ನಲ್ಲಿ ಭಗವಂತನನ್ನು ಕಂಡು ತನ್ನನ್ನು ಭಗವಂತನಿಗೆ ಅರ್ಪಿಸಿಕೊಂಡ ಬಲಿಗೆ ಇಂದ್ರ ಪದವಿ ದೊಡ್ಡ ಉಡುಗೊರೆ ಅಲ್ಲ. ಭಗವಂತ ಬಲಿಯ ಭಕ್ತಿಗೆ ಒಲಿದ ಮತ್ತು ಬಲಿಗೆ ಇದರಿಂದಾಗಿ ಭಗವಂತನ ಲೋಕ ಪ್ರಾಪ್ತಿಯಾಗುವಂತಾಯಿತು. ಮೇಲ್ನೋಟಕ್ಕೆ ಭಗವಂತ ಇಂದ್ರ ಪದವಿಯನ್ನು ಕಿತ್ತುಕೊಂಡಂತೆ ಕಂಡರೂ ಕೂಡಾ, ಭಗವಂತ ಬಲಿಗೆ ಎಲ್ಲವನ್ನೂ ಕೊಟ್ಟು ಉದ್ಧಾರ ಮಾಡುವುದನ್ನು ನಾವು ಕಾಣುತ್ತೇವೆ. ಭಗವಂತ ಕಷ್ಟ ಕೊಡುವುದರಲ್ಲೂ ಉದ್ಧಾರದ ಹೆಜ್ಜೆ ಇದೆ. ಹೀಗಾಗಿ ಭಗವಂತನ ಪ್ರತಿಯೊಂದು ಹೆಜ್ಜೆಯಲ್ಲೂ ನಾವು ಉದ್ಧಾರದ ಮಜಲನ್ನು ನೋಡಬೇಕೇ ಹೊರತು, ಭಗವಂತ ನನಗೇಕೆ ಕಷ್ಟ ಕೊಟ್ಟ ಎಂದು ಯೋಚಿಸಬಾರದು. ಕಷ್ಟದಲ್ಲೂ ಉದ್ಧಾರದ ಮೆಟ್ಟಿಲಿದೆ ಎನ್ನುವ ಸತ್ಯವನ್ನು ತಿಳಿದು ನಾವು ಮುನ್ನಡೆಯಬೇಕು.

ಬಲಿ ಚಕ್ರವರ್ತಿಯ ಕಥೆಯನ್ನು ನಾವು ಸ್ವಲ್ಪ ಆಳವಾಗಿ ವಿಶ್ಲೇಷಿಸಿದರೆ ಇದರ ಹಿಂದಿರುವ ಆಧ್ಯಾತ್ಮಿಕ ಗುಹ್ಯ ತಿಳಿಯುತ್ತದೆ. ಸಂಸಾರ ಸಾಗರದಲ್ಲಿ ಮುಳುಗಿರುವ ನಾವೆಲ್ಲರೂ ಒಂದು ರೀತಿಯಲ್ಲಿ ಬಲಿಗಳು. ಭಗವಂತನ ಸಾಕ್ಷಾತ್ಕಾರವಾಗಲು ನಾವೆಲ್ಲರೂ ಮಾನಸಿಕವಾಗಿ, ಆಧ್ಯಾತ್ಮಿಕವಾಗಿ ಬಲಿಷ್ಠರಾಗಬೇಕು. ಉಪಾಸನೆಯಲ್ಲಿ ಪ್ರಮುಖವಾಗಿ ಮೂರು ಹೆಜ್ಜೆಗಳಿವೆ. ಮೊದಲನೆಯದು: ಭಗವಂತನ ಪುಟ್ಟ (ವಾಮನ) ಮೂರ್ತಿಯನ್ನು ದೇವರು ಎಂದು ಪೀಠದಲ್ಲಿ ಆರಾಧಿಸುವುದು; ಎರಡನೆಯದು: ಉಪಾಸನೆ ಮಾಡುತ್ತಾ-ಮಾಡುತ್ತಾ ಭಗವಂತ ಕೇವಲ ಮೂರ್ತಿಯಲ್ಲಿ ಅಲ್ಲದೇ, ಇಡೀ ಲೋಕದಲ್ಲಿ ವ್ಯಾಪಿಸಿರುವ ಶಕ್ತಿ ಎಂದು ತಿಳಿಯುವುದು. ಪ್ರಮುಖವಾದ ಮೂರನೇ ಹೆಜ್ಜೆ: ಭಗವಂತ ಸರ್ವಾಂತರ್ಯಾಮಿ, ಆತ ನನ್ನೊಳಗೂ ತುಂಬಿದ್ದಾನೆ ಎಂದು ತಿಳಿದು, ಆ ಪರಶಕ್ತಿಗೆ ತಲೆ ಬಾಗುವುದು. ಆಗ ನಮಗೆ ನಿಜವಾದ ಭಗವಂತನ ಸಾಕ್ಷಾತ್ಕಾರವಾಗುತ್ತದೆ ಮತ್ತು ಆಗ ಭಗವಂತನ ಪೂರ್ಣಾನುಗ್ರಹ ನಮ್ಮ ಮೇಲಾಗುತ್ತದೆ. ಈ ಮೇಲಿನ ಮೂರು ವಿಕ್ರಮಗಳಿಂದ ಸದಾ ನಮ್ಮನ್ನು ಉದ್ಧರಿಸುವವನು ತ್ರಿವಿಕ್ರಮನಾದ ವಾಮನ ರೂಪಿ ಭಗವಂತ.

## ೧೭. ನಾರದರಿಗೆ ವೈಷ್ಣವ ಯೋಗವನ್ನು ಉಪದೇಶಿಸಿದ ಐತರೇಯ ರೂಪ

**ತುಭ್ಯಂ ಚ ನಾರದ ಭೃಶಂ ಭಗವಾನ್ ವಿವೃದ್ಧಭಾವೇನ ಸಾಧು ಪರಿತುಷ್ಟ ಉವಾಚ ಯೋಗಮ್ ।**
**ಜ್ಞಾನಂ ಚ ಭಾಗವತಮಾತ್ಮಸುತತ್ವದೀಪಂ ಯದ್ ವಾಸುದೇವಶರಣಾ ವಿದುರಂಜಸೈವ ॥೧೯॥**

ಭಗವಂತನ ಅವತಾರಗಳನ್ನು ನಾರದರಿಗೆ ವಿವರಿಸುತ್ತಿರುವ ಚತುರ್ಮುಖ ಹೇಳುತ್ತಾನೆ: "ಇದು ವಿಶೇಷವಾಗಿ ನಾರದರಿಗೆ ಉಪದೇಶ ನೀಡಲು ಭಗವಂತ ತಳೆದ ಅವತಾರ" ಎಂದು. ಇಲ್ಲಿ ಚತುರ್ಮುಖ ಅವತಾರದ ಹೆಸರನ್ನು

ಹೇಳಿಲ್ಲವಾದುದರಿಂದ ಇದು ಯಾವ ಅವತಾರ ಎನ್ನುವ ಬಗ್ಗೆ ವ್ಯಾಖ್ಯಾನಕಾರರಲ್ಲಿ ಅನೇಕ ಗೊಂದಲವಿದೆ. ಕೆಲವರು ಈ ಅವತಾರವನ್ನು 'ಹಂಸ' ನಾಮಕ ಅವತಾರ ಎಂದೂ ಕರೆದರು. ಆದರೆ ಭಗವಂತನ 'ಹಂಸ' ರೂಪ ಕೇವಲ ನಾರದರಿಗೆ ಉಪದೇಶ ಕೊಟ್ಟ ರೂಪವಲ್ಲವಾದ್ದರಿಂದ ಅದು ಇಲ್ಲಿ ಸರಿ ಹೊಂದಲಿಲ್ಲ. ಈ ಗೊಂದಲವನ್ನು ನಿಶ್ಚಿತವಾಗಿ ಪ್ರಮಾಣ ಸಹಿತ ನಿವಾರಿಸಿದವರು ಆಚಾರ್ಯ ಮಧ್ವರು. ***ಐತರೇಯೋ ಹರಿಃ ಪ್ರಾಹ ನಾರದಾಯ ಸ್ವಕಾಂ ತನುಂ । ಯತ್ ಪ್ರಾಪುರ್ವೈಷ್ಣವಾ ನಾನ್ಯೇ ಯದೃತೇ ನ ಸುಖಂ ಪರಂ॥ ಇತಿ ಬ್ರಾಹ್ಮೇ ॥*** : ಇದು ಭಗವಂತನ ಐತರೇಯ--ಮಹಿದಾಸ ರೂಪ. ಈ ರೂಪದಲ್ಲಿ ಹರಿ ನಾರದರಿಗೆ ತನ್ನ ಸ್ವರೂಪವನ್ನು(ವೈಷ್ಣವ ಯೋಗವನ್ನು) ಉಪದೇಶಿಸಿದ ಎಂದು ಸ್ಪಷ್ಟವಾಗಿ ಬ್ರಹ್ಮಪುರಾಣದಲ್ಲಿ ಹೇಳಿದ್ದಾರೆ. [ಐತರೇಯ-ಮಹಿದಾಸನ ಕುರಿತಾಗಿ ಪುರಾಣದಲ್ಲಿ ಒಂದು ರೋಚಕವಾದ ಕಥೆ ಇದೆ. ಆ ಕಥೆಯನ್ನು ನಾವು ಈಗಾಗಲೇ ಮೊದಲನೇ ಸ್ಕಂಧದಲ್ಲಿ(೧.೩.೮) ನೋಡಿದ್ದೇವೆ].

ಋಕ್ ಸಂಹಿತೆಯ ಪ್ರಾಚೀನ ಹೆಸರು ಐತರೇಯ ಸಂಹಿತ. ಭಗವಂತ ತನ್ನ ಐತರೇಯ ರೂಪದಲ್ಲಿ ಸಮಗ್ರ ವೇದದ ಆವಿಷ್ಕಾರ ಮಾಡಿದ ಮತ್ತು ಬ್ರಹ್ಮಾದಿ ಸಕಲ ದೇವತೆಗಳೂ ಕುಳಿತು ಅದನ್ನು ಆಲಿಸಿದರು. ನಾರದರಿಗೆ ಭಗವಂತ ತನ್ನ ಸ್ವರೂಪದ ಉಪದೇಶ ಮಾಡಿರುವುದು ಐತರೇಯ ರೂಪದಲ್ಲಿ ನಡೆದ ಒಂದು ವಿಶೇಷ ಕಾರ್ಯ. ಇದನ್ನೇ ಮೇಲಿನ ಶ್ಲೋಕದಲ್ಲಿ ಚತುರ್ಮುಖ ವಿವರಿಸಿದ್ದಾನೆ.

ಭಗವಂತ ಮರುಳಾಗುವುದು ಭಕ್ತಿಗೆ. ಇದನ್ನು ***"ಅಹಂ ಭಕ್ತ ಪರಾಧೀನಃ"*** ಎಂದು ಭಗವಂತನೇ ಹೇಳಿದ್ದಾನೆ. ನಾರದರಲ್ಲಿ ಬೆಳೆದು ನಿಂತಿದ್ದ ಅಸಾಧಾರಣ ಭಕ್ತಿಗೆ ಭಗವಂತ ಸಂತುಷ್ಟನಾಗಿ, ಅವರಿಗೆ ವೈಷ್ಣವ ಯೋಗೋಪದೇಶವನ್ನು ನೀಡಿದ. ಇದು ಭಗವಂತನಿಗೆ ಸಂಬಂಧಿಸಿದ, ಭಗವದ್ ವಿಷಯಿಕವಾದ ಜ್ಞಾನವಾಗಿತ್ತು. ಭಗವಂತನನ್ನು ಹೇಗೆ ತಿಳಿದುಕೊಳ್ಳಬೇಕು, ಹೇಗೆ ಉಪಾಸನೆ ಮಾಡಬೇಕು ಎನ್ನುವುದರ ಪೂರ್ಣ ಅರಿವು; ಎಲ್ಲವನ್ನೂ ನಿಯಂತ್ರಿಸುವ ಸರ್ವತಂತ್ರ ಸ್ವತಂತ್ರ ಶಕ್ತಿ ಭಗವಂತ ಮತ್ತು ಸಮಸ್ತ ಜೀವಜಾತಗಳೂ ಆತನ ಅಧೀನ ಎನ್ನುವ ಅಪೂರ್ವ ಪರಮಾತ್ಮ ತತ್ತ್ವವನ್ನು ಭಗವಂತ ಐತರೇಯ ರೂಪದಲ್ಲಿ ನಾರದರಿಗೆ ಉಪದೇಶಿಸಿದ. ಈ ಜ್ಞಾನ ಮತ್ತೆ ನಾರದರಿಂದ ಭೂಮಿಗೆ ಹರಿದು ಬಂತು. ಇಲ್ಲಿ ಚತುರ್ಮುಖ ಹೇಳುತ್ತಾನೆ: "ವಾಸುದೇವನಲ್ಲಿ ಶರಣಾದವರಿಗೆ ಮಾತ್ರ ಈ ವಿಷಯ ಅರ್ಥವಾಗುತ್ತದೆ" ಎಂದು. ಯಾವುದೇ ವಿಷಯ ನಮಗೆ ಅರ್ಥವಾಗಬೇಕಾದರೆ ಅಲ್ಲಿ ಭಗವಂತನ ಅನುಗ್ರಹ ಅತ್ಯಗತ್ಯ. ಅದನ್ನು ಬಿಟ್ಟು ತನ್ನ ಪಾಂಡಿತ್ಯದಿಂದಲೇ ಎಲ್ಲವನ್ನೂ ತಿಳಿದುಕೊಳ್ಳುತ್ತೇನೆಂದು ಅಹಂಕಾರ ತೋರಿದರೆ ಏನೂ ಅರ್ಥವಾಗುವುದಿಲ್ಲ. ಅಷ್ಟೇ ಅಲ್ಲ, ಭಗವಂತನ ಅನುಗ್ರಹ ಇಲ್ಲದ ವಿದ್ಯೆ ನಮ್ಮನ್ನು ಹಣದಾಸೆಗೆ ತಳ್ಳಿ ಭಗವಂತನಿಂದ ದೂರ ಮಾಡುವ ಸಾಧ್ಯತೆಯೂ ಇದೆ. ಹೀಗಾಗಿ ನಮಗೆ ಅಧ್ಯಾತ್ಮ ವಿದ್ಯೆ ಅರ್ಥವಾಗಬೇಕಾದರೆ ಭಗವಂತನ ಕೃಪಾ ದೃಷ್ಟಿ ಅತ್ಯಗತ್ಯ. ಭಗವಂತನಲ್ಲಿ ಶರಣಾದವರಿಗೆ ಭಗವಂತ ಒಲಿಯುತ್ತಾನೆ ಮತ್ತು ಭಗವಂತನ ಒಲುಮೆಯಿಂದ ಶಾಸ್ತ್ರ ಅರ್ಥವಾಗುತ್ತದೆ.

ಇಲ್ಲಿ ಬಳಕೆಯಾದ ವಾಸುದೇವ ಎನ್ನುವ ಪದಕ್ಕೆ ಇನ್ನೂ ಒಂದು ವಿಶೇಷವಾದ ಅರ್ಥವಿದೆ. ವಸು+ದೇವ= ವಸುದೇವ. ವಸು ಎಂದರೆ ಸಂಪತ್ತು, ದೇವ ಎಂದರೆ ಬೆಳಗಿಸುವವನು. ಭಗವಂತ ಎನ್ನುವ ಸಂಪತ್ತನ್ನು ಬೆಳಗಿಸಿ ತೋರಿಸುವ ನಿರ್ಮಲವಾದ ಮನಸ್ಸಿಗೆ ವಸುದೇವ ಎಂದು ಹೆಸರು. ಇಂತಹ ಶುದ್ಧ ಮನಸ್ಸಿನಲ್ಲಿ ಕಾಣಿಸಿಕೊಳ್ಳುವ ಭಗವಂತ ವಾಸುದೇವ. ಒಟ್ಟಿನಲ್ಲಿ ಹೇಳಬೇಕೆಂದರೆ: ಶುದ್ಧ ಮತ್ತು ಸಾತ್ತ್ವಿಕ ಮನಸ್ಸಿನಿಂದ ಭಗವಂತನಲ್ಲಿ ಶರಣಾದಾಗ ಭಗವಂತನ ಅನುಗ್ರಹ ನಮ್ಮ ಮೇಲಾಗುತ್ತದೆ. ಇಂತಹ ಪರಮ ಭಕ್ತನಾಗಿದ್ದ ನಾರದರಿಗೆ ಅನುಗ್ರಹಿಸಿದ ಭಗವಂತ ಐತರೇಯ ರೂಪದಲ್ಲಿ ಅವತರಿಸಿ ಅವರಿಗೆ ವೈಷ್ಣವ ಯೋಗವನ್ನು ಉಪದೇಶಿಸಿದ.

## ೧೭. ಚಕ್ರವರ್ತಿಗಳೊಳಗೆ ಚಕ್ರವರ್ತಿಯಾಗಿ ನಿಂತ ರಾಜರಾಜೇಶ್ವರ ರೂಪ

ಚಕ್ರಂ ಚ ದಿಕ್ಷ್ವವಿಹತಂ ದಶಸು ಸ್ವತೇಜೋ ಮನ್ವಂತರೇಷು ಮನುವಂಶಧರೋ ಬಿಭರ್ತಿ ।
ದುಷ್ಟೇಷು ರಾಜಸು ದಮಂ ವಿದಧತ್ ಸ್ವಕೀರ್ತಿಂ ಸತ್ಯೇ ನಿವಿಷ್ಟ ಉಶತೀಂ ಪ್ರಥಯಂಶ್ಚರಿತ್ರೈಃ ॥೨೦॥

ಭಗವಂತನ ಇನ್ನೊಂದು ವಿಶಿಷ್ಟ ಅವತಾರದ ವಿವರಣೆಯನ್ನು ನಾವು ಈ ಶ್ಲೋಕದಲ್ಲಿ ಕಾಣುತ್ತೇವೆ. ಇಲ್ಲಿಯೂ ಕೂಡಾ ಚತುರ್ಮುಖ ಈ ರೂಪದ ಹೆಸರನ್ನು ಹೇಳಿಲ್ಲವಾದುದರಿಂದ ಮೇಲ್ನೋಟಕ್ಕೆ ಇದು ಯಾವ ರೂಪ ಎನ್ನುವುದು ತಿಳಿಯುವುದಿಲ್ಲ. ಈ ಸಮಸ್ಯೆಯನ್ನು ಪರಿಹರಿಸುತ್ತಾ ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಪ್ರಮಾಣ ಸಹಿತ ಇದು ಭಗವಂತನ ರಾಜರಾಜೇಶ್ವರ ರೂಪ ಎಂದು ವಿವರಿಸುವುದನ್ನು ನಾವು ಕಾಣುತ್ತೇವೆ. *ಮನ್ವನ್ತರೇಷು ಭಗವಾನ್ ಚಕ್ರವರ್ತಿಷು ಸಂಸ್ಥಿತಃ । ಚತುರ್ಭುಜೋ ಜುಗೋಪೈತದ್ದುಷ್ಟರಾಜನ್ಯನಾಶಕಃ । ರಾಜರಾಜೇಶ್ವರೇತ್ಯಾಹುರ್ಮುನಯಶ್ಚಕ್ರವರ್ತಿನಾಮ್ । ವೀರ್ಯದಂ ಪರಮಾತ್ಮಾನಂ ಶಂಖಚಕ್ರಗದಾಧರಮ್ ॥ 'ಇತಿ ಸತ್ಯಸಂಹಿತಾಯಾಮ್' ॥*

ನಾವು ಮನ್ವಂತರ ಪರಂಪರೆಯಲ್ಲಿ ಇಕ್ಷ್ವಾಕು, ಪ್ರಿಯವ್ರತ, ಉತ್ತಾನಪಾದ ಇತ್ಯಾದಿ ಅನೇಕ ಚಕ್ರವರ್ತಿಗಳನ್ನು ಕಾಣುತ್ತೇವೆ. ಇವರು ಇಡೀ ಭೂಮಂಡಲದ ನಿಯಂತ್ರಣ ಸಾಧಿಸಿ, ತಡೆಯಿಲ್ಲದ ಆದೇಶ ಹಾಗೂ ಸತ್ಯ-ಧರ್ಮದಿಂದ ದೇಶವನ್ನಾಳಿದರು. ಇಲ್ಲಿ ಚತುರ್ಮುಖ ಹೇಳುತ್ತಾನೆ: "ಶಂಖ-ಚಕ್ರ-ಗದಾಧಾರಿಯಾದ ಅಭಯಪ್ರದ ಶ್ರೀಹರಿ ಈ ಎಲ್ಲಾ ರಾಜರುಗಳ ತೇಜಸ್ಸಿಗೆ ಕಾರಣನಾಗಿ ಅವರೊಳಗೆ ರಾಜರಾಜೇಶ್ವರ ರೂಪದಲ್ಲಿ ನಿಂತ" ಎಂದು. ಈ ರೀತಿ ನೆಲೆನಿಂತ ಭಗವಂತ ದುಷ್ಟ ಸಮಾಜಕಂಟಕರನ್ನು ಧಮನ ಮಾಡಿ, ನ್ಯಾಯ-ನೀತಿ-ಧರ್ಮ ಸ್ಥಾಪನೆ ಮಾಡಿದ. ಹೀಗೆ ಚಕ್ರವರ್ತಿಗಳ ಒಳಗಿದ್ದು ಎಲ್ಲರೂ ಬಯಸುವ ತನ್ನ ಅನಂತ ಮಹಿಮೆಯನ್ನು ತನ್ನ ರಾಜರಾಜೇಶ್ವರ ರೂಪದಿಂದ ತೋರಿದ ಭಗವಂತ.

## ೧೮. ಅಮೃತಕಲಶ ಹಿಡಿದುಬಂದ ಆಯುರ್ವೇದ ಪ್ರವಿಷ್ಟ ಧನ್ವಂತರಿ ರೂಪ

ಧನ್ವಂತರಿಶ್ಚ ಭಗವಾನ್ ಸ್ವಯಮಾಸ ದೇವೋ ನಾಮ್ನಾ ನೃಣಾಂ ಪುರುರುಜಾಂ ರುಜ ಆಶು ಹಂತಿ ।
ಯಜ್ಞೇ ಚ ಭಾಗಮಮೃತಾಯುರವಾಪ ಚಾದ್ಧಾ ಆಯುಶ್ಚ ವೇದಮನುಶಾಸ್ತ್ಯವತೀರ್ಯ ಲೋಕೇ ॥೨೧॥

ಸಮುದ್ರಮಥನ ಕ್ರಿಯೆಯೊಂದರಲ್ಲೇ ನಾವು ಭಗವಂತನ ಅನೇಕ ರೂಪಗಳನ್ನು ಕಾಣುತ್ತೇವೆ. ಕಡೆಯಲು ಕಡಗೋಲಾದ ಮಂದರ ಪರ್ವತಕ್ಕೆ ಮಥನ ಶಕ್ತಿ ಕೊಟ್ಟು ಭಗವಂತ ಪರ್ವತದಲ್ಲಿ ಸನ್ನಿಹಿತನಾಗಿ ನಿಂತ. ಪರ್ವತ ಕಡಲಲ್ಲಿ ಮುಳುಗಿಹೋಗದಂತೆ ಕೂರ್ಮರೂಪಿಯಾಗಿ ಅದನ್ನು ಎತ್ತಿ ಹಿಡಿದ. ಸಮುದ್ರ ಮಥನ ಮಾಡಿದ ದೇವತೆಗಳ ಒಳಗೆ ಸನ್ನಿಹಿತನಾಗಿ ದೇವತೆಗಳಿಗೆ ಬಲವನ್ನು ನೀಡಿದ್ದಷ್ಟೇ ಅಲ್ಲ, ಸ್ವಯಂ 'ಅಜಿತ' ನಾಮಕನಾಗಿ ದೇವತೆಗಳ ಪರ ಮಥನ ಮಾಡಿದ ಭಗವಂತ. ಕೊನೆಗೆ ಅಮೃತವನ್ನು ರಾಕ್ಷಸರು ಅಪಹರಿಸಿದಾಗ ಸ್ವಯಂ ಮೋಹಿನಿ ರೂಪ ಧರಿಸಿ ಅದನ್ನು ದೇವತೆಗಳಿಗೆ ನೀಡಿದ. ಈ ರೀತಿ ನಡೆದ ಸಮುದ್ರ ಮಥನದಲ್ಲಿ ಅಮೃತ ಕಲಶವನ್ನು ಕೈಯಲ್ಲಿ ಹಿಡಿದು ಬಂದ ಭಗವಂತನ ವಿಶೇಷ ರೂಪವೇ ಧನ್ವಂತರಿ ರೂಪ.

ಇಲ್ಲಿ ಚತುರ್ಮುಖ "'ಸ್ವಯಂ ಭಗವಂತ' ಧನ್ವಂತರಿ ರೂಪದಲ್ಲಿ ಅಮೃತಕಲಶ ಹಿಡಿದು ಬಂದ" ಎಂದು ಒತ್ತಿ ಹೇಳಿರುವುದನ್ನು ಕಾಣುತ್ತೇವೆ. ಈ ರೀತಿ ಹೇಳಲು ಒಂದು ವಿಶೇಷ ಕಾರಣವಿದೆ. ಧನ್ವಂತರಿ ಎನ್ನುವ ಭಗವಂತನ ಎರಡು ರೂಪಗಳಿವೆ. ರೋಗ ಪರಿಹಾರಕ್ಕಾಗಿ ಯಜ್ಞದಲ್ಲಿ ಧನ್ವಂತರಿಗೆ ಪ್ರತ್ಯೇಕ ಆಹುತಿ ಕೊಡುವ ಸಂಪ್ರದಾಯ ನಮಗೆಲ್ಲಾ ತಿಳಿದಿದೆ. ಇದಕ್ಕೆ ಕಾರಣ ಏನೆಂದರೆ ಜಗತ್ತಿನ ರೋಗ-ರುಜಿನಗಳಿಗೆ ಮೂಲ ಪರಿಹಾರವನ್ನು ಕೊಟ್ಟವನು ಆ ಭಗವಂತ. ಆತ ಕಾಶಿ ಪಟ್ಟಣದಲ್ಲಿ ಆಯುರ್ವೇದ ಪ್ರವರ್ತಕನಾಗಿದ್ದ ಧನ್ವಂತರಿ ಎನ್ನುವ ರಾಜನಲ್ಲಿ ವಿಶೇಷವಾಗಿ ಸನ್ನಿಹಿತನಾಗಿದ್ದು. ಜಗತ್ತಿಗೆ ಆಯುರ್ವೇದ ವಿದ್ಯೆಯನ್ನು ನೀಡಿದ. ಇದು ಭಗವಂತನ ಆವೇಶಾವತಾರ. ಆದರೆ ಅಮೃತ ಕಲಶವನ್ನು ಹಿಡಿದು ಬಂದಿರುವ ಧನ್ವಂತರಿ ಭಗವಂತನ ಪೂರ್ಣಾವತಾರ.

## ೧೯. ದುಷ್ಟ ಕ್ಷತ್ರಿಯರನ್ನು ಸಂಹಾರ ಮಾಡಿದ ಪರಶುರಾಮ ರೂಪ

**ಕ್ಷತ್ರಂ ಕ್ಷಯಾಯ ವಿಧಿನೋಪಹೃತಂ ಮಹಾತ್ಮಾ ಬ್ರಹ್ಮಧ್ರುಗುಜ್ಝಿತಪಥಂ ನರಕಾರ್ತಿ ಲಿಪ್ಸು ।**
**ಉದ್ಧಂತ್ಯಸಾವವನಿಕಂಟಕಮುಗ್ರವೀರ್ಯಸ್ತ್ರಿಃಸಪ್ತಕೃತ್ವ ಉರುಧಾರಪರಶ್ವಧೇನ ॥೨೨॥**

ಈ ಹಿಂದೆ ಹೇಳಿದಂತೆ ಭಗವಂತ ರಾಜರಾಜೇಶ್ವರ ರೂಪದಲ್ಲಿ ಕ್ಷತ್ರಿಯ ರಾಜರೊಳಗೆ ಕುಳಿತು ಧರ್ಮ ಸ್ಥಾಪನೆ ಮಾಡಿದ. ಆದರೆ ದೇಶವನ್ನು ಆಳುವ ನೆಪದಲ್ಲಿ 'ದೇಶವನ್ನೇ ದೋಚಿ ಅದರಿಂದ ನಾಶವಾಗಲಿ' ಎಂದೇ ವಿಧಿ(ಭಗವಂತ) ಅನೇಕ ಲೋಕ ಕಂಟಕ ಕ್ಷತ್ರಿಯರನ್ನೂ ಸೃಷ್ಟಿಸಿತ್ತು. ಇಂತಹ ದುಷ್ಟ ಜೀವರನ್ನು ಸಂಹಾರ ಮಾಡಲೆಂದೇ ಭಗವಂತ ಪರಶುರಾಮನಾಗಿ ಅವತರಿಸಿದ. ನರಕವನ್ನೇ ಬಯಸಿ, ಭಗವಂತನನ್ನು, ಆತನನ್ನು ತಿಳಿಸುವ ವೈದಿಕ ವಿದ್ಯೆಯನ್ನು ಮತ್ತು ವೈದಿಕ ಸಂಪ್ರದಾಯವನ್ನು ಇಂತಹ ದುಷ್ಟ ಕ್ಷತ್ರಿಯರು ದ್ವೇಶಿಸಿದಾಗ ಭಗವಂತ ಉಗ್ರರೂಪ ತಾಳಿದ.

ಕ್ಷತ್ರಿಯರು ನಾನಾ ವಿಧದ ಆಯುಧಗಳನ್ನು ಉಪಯೋಗಿಸಿ ಯುದ್ಧ ಮಾಡುವುದನ್ನು ನಾವು ತಿಳಿದಿದ್ದೇವೆ. ಆದರೆ ಯಾರೂ ಕೊಡಲಿಯನ್ನು ತಮ್ಮ ಆಯುಧವಾಗಿ ಬಳಸಿರುವುದು ಕಂಡು ಬರುವುದಿಲ್ಲ. ಸಾಮಾನ್ಯವಾಗಿ ಕೊಡಲಿ ಬಳಕೆ ಮರ ಕಡಿಯಲಿಕ್ಕಾಗಿ. ಋಷಿ-ಮುನಿಗಳು ಯಜ್ಞದ ಸಮಿದೆಗಾಗಿ ಕೊಡಲಿಯನ್ನು ಬಳಸುತ್ತಿದ್ದರು. ಬ್ರಾಹ್ಮಣ ವಂಶದಲ್ಲಿ ಅವತರಿಸಿ ಬಂದ ಪರಶುರಾಮ ಇದೇ ಕೊಡಲಿಯನ್ನು ತನ್ನ ಆಯುಧವನ್ನಾಗಿಸಿಕೊಂಡು ಇಪ್ಪತ್ತೊಂದು ಬಾರಿ ದುಷ್ಟ ಕ್ಷತ್ರಿಯರ ಸಂಹಾರ ಮಾಡಿದ. [ ಪರುಶುರಾಮ ಅವತಾರದ ವಿಸ್ತಾರವಾದ ವಿವರಣೆಯನ್ನು ವ್ಯಾಸರು ಬ್ರಹ್ಮಾಂಡ ಪುರಾಣದಲ್ಲಿ ಅನೇಕ ಅಧ್ಯಾಯಗಳಲ್ಲಿ ನೀಡಿದ್ದಾರೆ ]

## ೨೦. ರಾಮಾವತಾರ

ಭಗವಂತನ ಒಂದು ಅವತಾರದಲ್ಲೇ ಇನ್ನೊಂದು ಅವತಾರದ ಬೀಜಕ್ಷೇಪವಿರುತ್ತದೆ. ಅದೇ ರೀತಿ ಪರಶುರಾಮ ಅವತಾರ ರಾಮಾವತಾರಕ್ಕೆ ಬೀಜಕ್ಷೇಪ. ಎಲ್ಲಾ ಕ್ಷತ್ರಿಯರನ್ನು ಕೊಂದ ಪರಶುರಾಮ ರಾವಣನನ್ನು ಕೊಲ್ಲಲಿಲ್ಲ. ಅಷ್ಟೇ ಅಲ್ಲ, ಕ್ಷತ್ರಿಯರನ್ನು ಬೇಟೆಯಾಡುತ್ತಾ ಅಯೋಧ್ಯೆಗೆ ಹೋದ ಪರಶುರಾಮ ಅಲ್ಲಿ ರಘುವಂಶದ ಒಬ್ಬ ಪ್ರಾಚೀನ ರಾಜ ಹೆಣ್ಣುಮಕ್ಕಳ ಕೋಣೆಯಲ್ಲಿ ಅವಿತು ಕುಳಿತಿರುವುದು ತಿಳಿದಿದ್ದರೂ ಅವನನ್ನು ಕೊಲ್ಲಲಿಲ್ಲ. (ಹೆಣ್ಣು ಮಕ್ಕಳ

ನಡುವೆ ಕುಳಿತು ಪಾರಾದ ಆ ರಾಜ ನಾರೀಕವಚ ಎಂದು ಹೆಸರಾದ). ಇಪ್ಪತ್ತೊಂದು ಬಾರಿ ಕ್ಷತ್ರಿಯ ಸಂಹಾರ ಮಾಡಿದ ಪರಶುರಾಮ ಇಪ್ಪತ್ತೆರಡನೇ ಬಾರಿ ಸಂಹಾರಕ್ಕೆ ಕೈ ಹಾಕಲಿಲ್ಲ. ಹೀಗಾಗಿ ನಾರೀಕವಚನ ವಂಶ ಬೆಳೆದು, ಅದರಿಂದ ರಘುವಂಶ ಬೆಳೆದು, ಆ ವಂಶದಲ್ಲೇ ಭಗವಂತ ಶ್ರೀರಾಮಚಂದ್ರನಾಗಿ ಅವತರಿಸಿದ.

ಇಲ್ಲಿ ಮೂರೇ ಶ್ಲೋಕಗಳಲ್ಲಿ ಚತುರ್ಮುಖ ಇಡೀ ರಾಮಾಯಣದ ಮುಖ್ಯ ಅಂಶಗಳನ್ನು ನಾರದರ ಮುಂದಿಡುವುದನ್ನು ನಾವು ಕಾಣುತ್ತೇವೆ. ಇಡೀ ರಾಮಾಯಣದ ಒಟ್ಟು ಉದ್ದೇಶ ಹಾಗೂ ಪ್ರಾರಂಭದ ಹಂತದ ಮುಖ್ಯ ಬೆಳವಣಿಗೆಯ ಪೂರ್ಣ ಚಿತ್ರಣವನ್ನು ಮೊದಲನೇ ಶ್ಲೋಕ ನಮಗೆ ನೀಡುತ್ತದೆ.

**ಕೃತ್ಸ್ನಪ್ರಸಾದಸುಮುಖಃ ಕಲಯಾ ಕಲೇಶ ಇಕ್ಷ್ವಾಕುವಂಶ ಅವತೀರ್ಯ ಗುರೋರ್ನಿದೇಶೇ ।**
**ತಿಷ್ಠನ್ ವನಂ ಸದಯಿತಾನುಜ ಆವಿವೇಶ ಯಸ್ಮಿನ್ ವಿರುಧ್ಯ ದಶಕಂಧರ ಆರ್ತಿಮಾರ್ಚ್ಛತ್ ॥೨೩॥**

ಭಗವಂತ ತನ್ನ ಒಂದೊಂದು ಅವತಾರದಲ್ಲಿ ಒಂದೊಂದು ವೈಶಿಷ್ಟ್ಯವನ್ನು ಅಭಿವ್ಯಕ್ತಗೊಳಿಸುತ್ತಾನೆ. ಭಗವಂತನ ರಾಮಾವತಾರದ ಒಂದು ವೈಶಿಷ್ಟ್ಯ ಏನೆಂದರೆ: ಎಂಥಹ ಕಠಿಣ ಪ್ರಸಂಗದಲ್ಲೂ ಪ್ರಸನ್ನ ಚಿತ್ತನಾಗಿರುವುದು . ನಗು-ನಗುತ್ತಾ ಜೀವನದಲ್ಲಿ ಬರುವ ಎಲ್ಲಾ ದುಃಖವನ್ನೂ ಸ್ವೀಕರಿಸುವ ನಿಲುವು. ಅದನ್ನೇ ಇಲ್ಲಿ "***ಕೃತ್ಸ್ನ ಪ್ರಸಾದಸುಮುಖಃ***" ಎಂದಿದ್ದಾರೆ. ಅಂದರೆ ಪೂರ್ಣ ಪ್ರಸನ್ನತೆ. ಯಾವಾಗಲೂ ಮನಸ್ಸು ತಿಳಿಯಾಗಿರುವುದು. ಇಂತಹ ಸದಾ ಪ್ರಸನ್ನಚಿತ್ತತೆ ಶ್ರೀರಾಮಚಂದ್ರನದಾಗಿತ್ತು.

ಎಂಥಹ ಸಂದರ್ಭದಲ್ಲೂ ಕೂಡಾ ರಾಮ ಪ್ರಸನ್ನಚಿತ್ತನಾಗಿರುತ್ತಿದ್ದ ಎನ್ನುವುದಕ್ಕೆ ಆತನ ಪಟ್ಟಾಭಿಷೇಕ ನಿಂತುಹೋದ ಘಟನೆ ಒಂದು ಉತ್ತಮ ಉದಾಹರಣೆ. ಶ್ರೀರಾಮನಿಗೆ ಮದುವೆಯಾಗಿರುವುದು ಹದಿನಾಲ್ಕನೇ ವಯಸ್ಸಿನಲ್ಲಿ. ಆಗ ಸೀತೆಗೆ ಸುಮಾರು ಎಂಟು ವರ್ಷ. ಮದುವೆಯಾಗಿ ಸುಮಾರು ೧೨ ವರ್ಷಗಳ ಕಾಲ ರಾಮ ತಂದೆಯ ಜೊತೆಗಿದ್ದ. ರಾಮನಿಗೆ ಇಪ್ಪತ್ತಾರು ವರ್ಷ ಕಳೆದು ಇಪ್ಪತ್ತೇಳನೇ ಹುಟ್ಟುಹಬ್ಬದ ದಿನ (ಪುನರ್ವಸು ನಕ್ಷತ್ರ) ದಶರಥ ಅಲ್ಲಿ ನೆರೆದ ಸಮಸ್ತ ಜನರನ್ನುದ್ದೇಶಿಸಿ ಹೇಳುತ್ತಾನೆ: "*ಪಾಣ್ಡುರಸ್ಯ ಆತಪತ್ರಸ್ಯ ಛಾಯಾಯಾಂ ಜರಿತಂ ಮಯಾ (ಅಯೋಧ್ಯ ೨.೭)*" "ಬೆಳ್ಕೊಡೆಯ ಅಡಿಯಲ್ಲಿ ನನ್ನ ತಲೆ ಬೆಳ್ಳಗಾಯಿತು. ಇನ್ನು ನನಗೆ ವಿಶ್ರಾಂತಿ ಬೇಕು" ಎಂದು. ಆಗ ಅಲ್ಲಿ ನೆರೆದ ಎಲ್ಲರೂ "ಅಧಿಕಾರವನ್ನು ಶ್ರೀರಾಮಚಂದ್ರನಿಗೆ ಒಪ್ಪಿಸಬಹುದು" ಎನ್ನುವ ಪ್ರಸ್ತಾಪ ಮುಂದಿಡುತ್ತಾರೆ. ರೋಗಿ ಬಯಸಿದ್ದೂ ಹಾಲು ವೈದ್ಯ ಕೊಟ್ಟಿದ್ದೂ ಹಾಲು ಎನ್ನುವಂತೆ ಜನರ ಪ್ರಸ್ತಾಪದಿಂದ ದಶರಥನಿಗೆ ಸಂತೋಷವಾಗುತ್ತದೆ. ಏಕೆಂದರೆ ಆತನ ಅಂತರಂಗದ ಬಯಕೆಯೂ ಅದೇ ಆಗಿತ್ತು. ಆದರೂ ಕೂಡಾ ಮತ್ತೆ ಕೇಳುತ್ತಾನೆ: "ಏಕೆ? ನನ್ನ ಆಡಳಿತ ನಿಮಗೆ ಹಿಡಿಸಲಿಲ್ಲವೇ" ಎಂದು. ಆಗ ಜನ ಹೇಳುತ್ತಾರೆ: "ಶ್ರೀರಾಮಚಂದ್ರನಂಥಹ ವ್ಯಕ್ತಿ ನಮ್ಮ ಸಮಕಾಲೀನವನಾಗಿ ಸಿಕ್ಕಿರುವುದು ನಮ್ಮ ಭಾಗ್ಯ. ಹೀಗಾಗಿ ನಾವು ಅದರ ಸದುಪಯೋಗ ಮಾಡಿಕೊಳ್ಳಬೇಕು" ಎಂದು. ಆಗ ದಶರಥ ಜನರ ಅಭಿಲಾಷೆಯಂತೆ, ಮರುದಿನವೇ (ಪುಷ್ಯ ನಕ್ಷತ್ರ , ಅಂದರೆ ಜನ್ಮ ಸಂಪತ್ತು) ಪಟ್ಟಾಭಿಷೇಕ ನಿಗದಿ ಮಾಡಿಬಿಡುತ್ತಾನೆ. ಈ ವಿಷಯವನ್ನು ದಾಸಿ (ಮಂತರೆ) ತಕ್ಷಣ ಭರತನ ತಾಯಿ ಕೈಕೇಯಿಗೆ ತಿಳಿಸುತ್ತಾಳೆ. ಭರತನೇ ದೇಶದ ಮುಂದಿನ ಅಧಿಪತಿ ಎಂದು ಕನಸು ಕಟ್ಟಿಕೊಂಡು ಕುಳಿತಿದ್ದ ಕೈಕೇಯಿಗೆ ಈ ವಿಷಯ ಕೇಳಿ ನಿರಾಶೆಯಾಗುತ್ತದೆ. ಇದರಿಂದ ಕೋಪಗೊಂಡ ಆಕೆ 'ಕೋಪದ ಮನೆ' ಯಲ್ಲಿ ಹೋಗಿ ನೆಲದ ಮೇಲೆ ಮಲಗಿ ಪ್ರತಿಭಟಿಸುತ್ತಾಳೆ.

ದಶರಥ ಸಂಜೆ ಅಂತಃಪುರಕ್ಕೆ ಬಂದಾಗ ಆತನಿಗೆ ಕೈಕೇಯಿ ಕೋಪಗೊಂಡ ವಿಷಯ ತಿಳಿಯುತ್ತದೆ ಮತ್ತು ಆತ ಕೈಕೇಯಿ ಇದ್ದಲ್ಲಿಗೆ ಹೋಗುತ್ತಾನೆ. ಅಲ್ಲಿ ಆತ ಕೈಕೇಯಿಯ ಮನಸ್ಸಿನಲ್ಲಿನ ವೈಷಮ್ಯದ ಆಳವನ್ನು ಅರಿಯದೇ ಆಕೆಯನ್ನು ಸಂತೈಸಲಿಕ್ಕಾಗಿ "ರಾಮಚಂದ್ರನ ಆಣೆಗೂ ನೀನು ಹೇಳಿದಂತೆ ಮಾಡುತ್ತೇನೆ" ಎಂದು ಮಾತು ಕೊಡುತ್ತಾನೆ. ಆಗ ಕೈಕೇಯಿ ಹೇಳುತ್ತಾಳೆ: "ರಾಮನನ್ನು ಈಗಿಂದೀಗ ಕಾಡಿಗೆ ಕಳುಹಿಸಿ ರಾಜ್ಯವನ್ನು ನನ್ನ ಮಗ ಭರತನಿಗೆ ಒಪ್ಪಿಸಬೇಕು" ಎಂದು. ಈ ಮಾತನ್ನು ಕೇಳಿ ದಶರಥನಿಗೆ ದಿಗ್ಭ್ರಮೆಯಾಗುತ್ತದೆ. ಆತ ಆಕೆಯಲ್ಲಿ ನಿರ್ಧಾರ ಬದಲಿಸುವಂತೆ ಪರಿಪರಿಯಿಂದ ಕೇಳಿಕೊಳ್ಳುತ್ತಾನೆ. ಆದರೆ ಕೈಕೇಯಿ ಅದ್ಯಾವುದಕ್ಕೂ ಒಪ್ಪದೆ ಹಠ ಹಿಡಿಯುತ್ತಾಳೆ. "ಒಂದು ವೇಳೆ ರಾಮನನ್ನು ಕಾಡಿಗೆ ಕಳುಹಿಸಿದರೆ ದಶರಥ ಜೀವಂತ ಉಳಿಯುವುದಿಲ್ಲ, ನೀನು ವಿಧವೆಯಾಗುತ್ತೀಯ" ಎಂದೂ ದಶರಥ ಎಚ್ಚರಿಸುತ್ತಾನೆ. ಆದರೆ ಆಶ್ಚರ್ಯ ಎನ್ನುವಂತೆ ಕೈಕೇಯಿ ಹೇಳುತ್ತಾಳೆ: "ನನ್ನ ಹಣೆಯಲ್ಲಿ ಏನು ಬರೆದಿದೆಯೋ ಅದೇ ಆಗುತ್ತದೆ. ಅದನ್ನು ಬದಲಿಸುವುದು ಸಾಧ್ಯವಿಲ್ಲ" ಎಂದು. ಇಂತಹ ಕಠಿಣ ಪರಿಸ್ಥಿತಿಯೊಂದಿಗೆ ದಶರಥ ನಿದ್ರೆ ಇಲ್ಲದೇ ರಾತ್ರಿ ಕಳೆಯುತ್ತಾನೆ.

ಅತ್ತ ಅರಮನೆಯಲ್ಲಿ ರಾಮನ ಪಟ್ಟಾಭಿಷೇಕದ ಸಂಭ್ರಮ. ಎಲ್ಲರೂ ದಶರಥನಿಗಾಗಿ ಕಾದಿದ್ದಾರೆ. ಆದರೆ ರಾಜನ ಪತ್ತೆ ಇಲ್ಲ. ಆಗ ಮಂತ್ರಿ ಸುಮಂತ್ರ ಮಹಾರಾಜರನ್ನು ಹುಡುಕಿಕೊಂಡು ಅಂತಃಪುರಕ್ಕೆ ಬರುತ್ತಾನೆ. ಅಲ್ಲಿ ಆಘಾತದಿಂದ ಬಿದ್ದಿರುವ ದಶರಥನನ್ನು ಕಂಡು "ಏನಾಯಿತು" ಎಂದು ಕೇಳುತ್ತಾನೆ ಸುಮಂತ್ರ. ಆಗ ಕೈಕೇಯಿ ಹೇಳುತ್ತಾಳೆ: "ಈ ತನಕ ತುಂಬಾ ಖುಷಿಯಿಂದ ಮಾತನಾಡಿಕೊಂಡಿದ್ದರು, ಈಗಷ್ಟೇ ಅವರಿಗೆ ಮಂಪರು ಬಂದಿದೆ. ರಾಮಚಂದ್ರನನ್ನು ಕರೆದುಕೊಂಡು ಬಾ, ನಾನು ಅವನಲ್ಲಿ ಮಾತನಾಡಬೇಕು" ಎಂದು. ಆದರೆ ಕೈಕೇಯಿಯ ಸ್ವಭಾವವನ್ನು ಅರಿತಿದ್ದ ಸುಮಂತ್ರ ಆಕೆಯ ಮಾತನ್ನು ನಂಬುವುದಿಲ್ಲ. ಆತ "ಕಹಿಬೇವಿನ ಮರದಲ್ಲಿ ಎಂದೂ ಸಿಹಿನೀರು ಬರಲಾರದು. ನೀನು ಸುಳ್ಳು ಹೇಳುತ್ತಿರುವೆ" ಎಂದು ಕಟುವಾಗಿ ನುಡಿಯುತ್ತಾನೆ. ಆಗ ದಶರಥ ಸುಮಂತ್ರನಲ್ಲಿ ಶ್ರೀರಾಮನನ್ನು ಕರೆತರುವಂತೆ ಹೇಳುತ್ತಾನೆ. ಪಟ್ಟಾಭಿಷೇಕಕ್ಕೆ ಸಿದ್ಧನಾಗಿ ನಿಂತಿದ್ದ ಶ್ರೀರಾಮಚಂದ್ರ ದಶರಥನಲ್ಲಿಗೆ ಬರುತ್ತಾನೆ. ಆದರೆ ದಶರಥ ರಾಮನಲ್ಲಿ ಮಾತನಾಡದೇ ಕುಸಿದು ಬೀಳುತ್ತಾನೆ. ಆಗ ಕೈಕೇಯಿ ಹೇಳುತ್ತಾಳೆ: "ಮಹಾರಾಜರಿಗೆ ಭರತನೇ ರಾಜನಾಗಬೇಕು ಎನ್ನುವ ಬಯಕೆ. ಆದರೆ ಆ ಮಾತನ್ನು ನಿನಗೆ ಹೇಳಿದರೆ ನೀನು ಬೇಸರಿಸಬಹುದು ಎಂದು ಹೇಳುತ್ತಿಲ್ಲ ಅಷ್ಟೇ. ಅವರ ಬಯಕೆಯನ್ನು ನೀನು ಈಡೇರಿಸಬೇಕು" ಎನ್ನುತ್ತಾಳೆ. ಅದಕ್ಕೆ ಶ್ರೀರಾಮಚಂದ್ರ ಒಪ್ಪುತ್ತಾನೆ. ಅಷ್ಟಕ್ಕೇ ನಿಲ್ಲದ ಆಕೆ: "ನೀನು ತಕ್ಷಣ ಕಾಡಿಗೆ ಹೋಗಬೇಕು" ಎನ್ನುತ್ತಾಳೆ. ಆಗ ರಾಮಚಂದ್ರ ಪಟ್ಟಾಭಿಷೇಕದ ಉಡುಗೆಯನ್ನು ತೊರೆದು ಕಾಡಿಗೆ ಹೋಗುವ ತಯಾರಿಯಿಂದ ಹೊರ ಬರುತ್ತಾನೆ. ಈ ಘಟನೆಯ ನಂತರ ಅಲ್ಲಿ ನೆರೆದ ಜನಸ್ತೋಮಕ್ಕೆ ಆಘಾತವಾಗುತ್ತದೆ. ಆದರೆ ಶ್ರೀರಾಮನ ಮುಖದಲ್ಲಿ ಯಾವ ವ್ಯತ್ಯಾಸವೂ ಕಾಣುವುದಿಲ್ಲ. ಅದೇ ನಗುಮೊಗದಿಂದ ಹೊರಬಂದ ರಾಮಚಂದ್ರ ಕಾಡಿಗೆ ಹೋಗಲು ಸಿದ್ಧನಾಗುತ್ತಾನೆ. ಈ ರೀತಿಯ ಪ್ರಸನ್ನಚಿತ್ತತೆಯನ್ನು ಇಲ್ಲಿ ***ಕೃತ್ಸ್ನ ಪ್ರಸಾದಸುಮುಖಃ*** ಎಂದು ವರ್ಣಿಸಲಾಗಿದೆ.

ಅನೇಕ ಮಂದಿ ಋಷಿಗಳು ರಾವಣನ ಕಾಟದಿಂದ ಹಿಂಸೆಗೊಳಗಾಗಿ ಭಗವಂತ ಅವತರಿಸಿ ಬರಬೇಕು, ಆತನ ದರ್ಶನವಾಗಬೇಕು ಎಂದು ಕಾಡಿನಲ್ಲಿ ತಪಸ್ಸು ಮಾಡುತ್ತಿದ್ದರು. ಅಂತಹ ಋಷಿಗಳ ಮೇಲಿನ ಕರುಣೆಯಿಂದ ಶ್ರೀರಾಮ ಪ್ರಸನ್ನಚಿತ್ತನಾಗಿ ಕಾಡಿಗೆ ತೆರಳಿದ ಎನ್ನುವ ಅರ್ಥವನ್ನೂ ***ಕೃತ್ಸ್ನ ಪ್ರಸಾದಸುಮುಖಃ.*** ಎನ್ನುವ ಪದ ತಿಳಿಸುತ್ತದೆ. ಭಗವಂತ ಸ್ವಯಂ ***ಕೃತ್ಸ್ನ ಪ್ರಸಾದಸುಮುಖಃ.*** ಅಂದರೆ ಪೂರ್ಣಾನಂದ. ರಾಮ ಎನ್ನುವ ನಾಮ ಕೂಡಾ ಇದನ್ನೇ ಹೇಳುತ್ತದೆ. ರಂ ಎಂದರೆ ಆನಂದ. (ರಂ-ಕ್ರೀಡಾಯಾಂ/ ರಮಣ) ಅಮ= ಅಮಿತ. ಹೀಗಾಗಿ ರಾಮ ಎಂದರೆ

ಅನಂತವಾದ ಆನಂದಸ್ವರೂಪ ಎಂದರ್ಥ. ಈ ರೀತಿ ***ಕೃತ್ಸ್ನ ಪ್ರಸಾದಸುಮುಖಃ*** ಎನ್ನುವುದು ಒಂದು ಶಬ್ದದ ಮೂಲಕ ಎಲ್ಲವನ್ನೂ ಹೇಳುವ ಅದ್ಭುತ ಶಬ್ದ. ಇದನ್ನು ಬಗೆದಷ್ಟೂ ಹೊಸ ಹೊಸ ಅರ್ಥಗಳು ಕಾಣಿಸಿಕೊಳ್ಳುತ್ತವೆ.

ಇಲ್ಲಿ 'ಒಂದು ಅಂಶದಲ್ಲಿ ಭಗವಂತ ರಾಮನಾಗಿ ಅವತರಿಸಿ ಬಂದ' ಎಂದಿದ್ದಾರೆ. ಅಂದರೆ ಆತ ವೈಕುಂಠವನ್ನು ತೊರೆದು ಬಂದಿಲ್ಲ, ಆತ ಅಲ್ಲಿಯೂ ಇದ್ದಾನೆ, ಇಲ್ಲಿಯೂ ಇದ್ದಾನೆ ಎಂದರ್ಥ. ಭಗವಂತನ ಅಂಶ ಮತ್ತು ಭಗವಂತ ಬೇರೆಬೇರೆ ಅಲ್ಲ. ಆತನ ಅಂಶವೂ ಮೂಲರೂಪದಷ್ಟೇ ಪೂರ್ಣ.

ಶ್ರೀರಾಮಚಂದ್ರನನ್ನು ಚತುರ್ಮುಖ ***ಕಲೇಶ*** ಎಂದು ಸಂಬೋಧಿಸಿದ್ದಾನೆ. ನಮಗೆ ತಿಳಿದಂತೆ ಕಲೆಗಳು ಹದಿನಾರು. ಷಟ್ ಪ್ರಶ್ನ ಉಪನಿಷತ್ತಿನಲ್ಲಿ ಈ ಹದಿನಾರು ಕಲೆಗಳ ವಿವರ ಬರುತ್ತದೆ. ***ಸ ಪ್ರಾಣಮಸೃಜತ । ಪ್ರಾಣಾಚ್ಛ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀಂದ್ರಿಯಂ ಮನೋಽನ್ನಮನ್ನಾದ್ ವೀರ್ಯಂ ತಪೋ ಮಂತ್ರಾಃ ಕರ್ಮ ಲೋಕಾ ಲೋಕೇಷು ನಾಮ ಚ ॥೬-೪॥*** ಸೃಷ್ಟಿ ಪ್ರಾರಂಭದಲ್ಲಿ ಭಗವಂತ ತನ್ನೊಂದಿಗೆ ಸದಾ ಇರುವ ಒಬ್ಬ ಒಡನಾಡಿ ಬೇಕು ಎಂದು ಇಚ್ಛೆಪಟ್ಟು ಪ್ರಾಣದೇವರನ್ನು ಸೃಷ್ಟಿ ಮಾಡಿದ. ಪ್ರಪಂಚ ಸೃಷ್ಟಿಯಲ್ಲಿ ಪ್ರಾಣದಸೃಷ್ಟಿ ಎಂದರೆ ಜೀವಕಲೆಯ ಸೃಷ್ಟಿ. ಅಂದರೆ ಜೀವರುಗಳ ಸೃಷ್ಟಿ. ಈ ಸಮಸ್ತ ಜೀವರುಗಳಿಗೆ ಅಭಿಮಾನಿ ದೇವತೆ ಪ್ರಾಣದೇವರು. ಷೋಡಶಕಲೆಗಳಲ್ಲಿ 'ಜೀವ' ಹದಿನಾರನೇ ಕಲೆ ಹಾಗೂ ಇದೊಂದೇ ಚೇತನ. ಉಳಿದ ಹದಿನೈದು ಕಲೆಗಳೆಂದರೆ: ಶ್ರದ್ಧೆ, ಖಂ, ವಾಯು, ಜ್ಯೋತಿ, ಆಪಃ, ಪೃಥಿವೀ, ಇಂದ್ರಿಯ, ಮನಃ, ಅನ್ನ, ವೀರ್ಯ, ತಪಃ, ಮಂತ್ರಾಃ, ಕರ್ಮ, ಲೋಕಾಃ ಮತ್ತು ನಾಮ. 'ಜೀವ' ಈ ಹದಿನೈದು ಕಲೆಗಳ ನಡುವೆ ನಿಂತಿರುವ ಸಂಸಾರಿ. ಈ ಬೇಲಿಯಿಂದ ಬಿಡುಗಡೆಯಾದಾಗ ಜೀವನಿಗೆ ಮೋಕ್ಷಪ್ರಾಪ್ತಿಯಾಗುತ್ತದೆ. ಇಂತಹ ಜೀವನಿಗೆ ಅಭಿಮಾನಿಯಾದ ಪ್ರಾಣದೇವರಿಗೆ ಅಂದರೆ ಹನುಮಂತನ ಈಶನಾಗಿ (***ಕಲೇಶ***) ಭಗವಂತ ಅವತರಿಸಿ ಬಂದ.

ಇಲ್ಲಿ ವ್ಯಾಕರಣವನ್ನು ಮುರಿದು **ಇಕ್ಷ್ವಾಕುವಂಶ ಅವತೀರ್ಯ** ಎಂದಿದ್ದಾರೆ. ಇಂತಹ ಪ್ರಯೋಗವನ್ನು ವೇದವ್ಯಾಸರಷ್ಟೇ ಮಾಡಬಲ್ಲರು. ಭಗವಂತ ಅವತರಿಸಿರುವುದು ಇಕ್ಷ್ವಾಕುವಂಶದಲ್ಲಿ. ಆದರೆ ಆತ ಇಕ್ಷ್ವಾಕು ವಂಶದ ಒಬ್ಬ ರಾಜಕುಮಾರನಲ್ಲ. ಆತ ಇಡೀ ಜಗತ್ತಿನ ನಿಯಾಮಕ ಶಕ್ತಿ. ಇದನ್ನು ತೋರಿಸುವುದಕ್ಕಾಗಿಯೇ ಇಲ್ಲಿ ಇಂತಹ ಪ್ರಯೋಗ ಮಾಡಲಾಗಿದೆ. ಇಂತಹ ಶ್ರೀರಾಮಚಂದ್ರ ತನ್ನ ಬದುಕಿನಲ್ಲಿ ತಂದೆಯ ಆದೇಶಕ್ಕೆ ಬದ್ಧನಾಗಿ ವನವಾಸ ಮಾಡಿದ.

ತನ್ನ ಪತ್ನಿ ಮತ್ತು ತಮ್ಮ ಲಕ್ಷ್ಮಣನೊಂದಿಗೆ ವನವಾಸ ಮಾಡುತ್ತಿರುವಾಗ ರಾವಣ ರಾಮಚಂದ್ರನನ್ನು ಎದುರು ಹಾಕಿಕೊಂಡ. ಇದಕ್ಕೆ ವಿಶೇಷ ಕಾರಣ ರಾವಣನ ತಂಗಿ ಹಾಗೂ ವಿದ್ಯುಜ್ಜಿಹ್ವನ ಪತ್ನಿ ಶೂರ್ಪನಖಿ. ವಿದ್ಯುಜ್ಜಿಹ್ವ ಯಾವಾಗಲೂ ರಾವಣನ ಜೊತೆಗೆ ಯುದ್ಧಕ್ಕೆ ಹೋಗುತ್ತಿದ್ದ. ಆದರೆ ಒಮ್ಮೆ ರಾವಣ ವಿದ್ಯುಜ್ಜಿಹ್ವನನ್ನು ಶತ್ರುವೆಂದು ತಪ್ಪಾಗಿ ತಿಳಿದು ಹತ್ಯೆ ಮಾಡುತ್ತಾನೆ. ಈ ರೀತಿ ಗಂಡನನ್ನು ಕಳೆದುಕೊಂಡ ಶೂರ್ಪನಖಿ ವಿಧವೆಯಾಗುತ್ತಾಳೆ. ರಾವಣ ಆಕೆಯಲ್ಲಿ ಅವಳಿಗೆ ಇಷ್ಟವಾದ ಯಾವುದೇ ಗಂಡನ್ನಾದರೂ ಮದುವೆಯಾಗುವಂತೆ ಹೇಳುತ್ತಾನೆ. ಇಂತಹ ಶೂರ್ಪನಖಿ ಒಮ್ಮೆ ವಿಹಾರ ಮಾಡುತ್ತಿದ್ದಾಗ ಶ್ರೀರಾಮನನ್ನು ಕಂಡು ಮೋಹಿತಳಾಗುತ್ತಾಳೆ. ಆಕೆ ನೇರವಾಗಿ ಶ್ರೀರಾಮನ ಬಳಿ ಬಂದು "ತನ್ನನ್ನು ಮದುವೆಯಾಗು" ಎಂದು ಕೇಳಿಕೊಳ್ಳುತ್ತಾಳೆ. ಆಗ ಸೀತೆಯ ಜೊತೆಗಿದ್ದ ರಾಮ ವಿನೋದವಾಗಿ ಹೇಳುತ್ತಾನೆ: "ನನ್ನ ಪತ್ನಿ ನನ್ನೊಂದಿಗಿದ್ದಾಳೆ. ಹೀಗಾಗಿ ನನಗೆ ನಿನ್ನನ್ನು ಮದುವೆಯಾಗಲು ಸಾಧ್ಯವಿಲ್ಲ. ಬೇಕಿದ್ದರೆ ಲಕ್ಷ್ಮಣನನ್ನು ಕೇಳು" ಎಂದು. ಆಗ ಶೂರ್ಪನಖಿ ಲಕ್ಷ್ಮಣನ ಬಳಿ ಹೋಗಿ ತನ್ನ ಇಚ್ಛೆಯನ್ನು ಮುಂದಿಡುತ್ತಾಳೆ. ಮಾಯಾವಿ ಶೂರ್ಪನಖಿಯ ದುಷ್ಟತನವನ್ನು ಅರಿತಿದ್ದ ಶ್ರೀರಾಮಚಂದ್ರ ಲಕ್ಷ್ಮಣನಿಗೆ ಸನ್ನೆ ಮಾಡುತ್ತಾನೆ ಮತ್ತು ಅದರಂತೆ ಲಕ್ಷ್ಮಣ ಆಕೆಯ ಮೂಗನ್ನು ಕತ್ತರಿಸುತ್ತಾನೆ. ಇದರಿಂದ ಕೋಪಗೊಂಡ ಶೂರ್ಪನಖಿ

ನೇರವಾಗಿ ತನ್ನ ಸಹೋದರರಾದ ಖರ-ದುಷಣರಲ್ಲಿ ರಾಮ-ಲಕ್ಷ್ಮಣರನ್ನು ಮುಗಿಸಿಬಿಡುವಂತೆ ಕೇಳಿಕೊಳ್ಳುತ್ತಾಳೆ. ಆದರೆ ಶ್ರೀರಾಮ ಖರ-ದುಷಣರು ಮತ್ತು ಅವರ ಹದಿನಾಲ್ಕುಸಾವಿರ ಸೈನಿಕರನ್ನು ನಾಶಮಾಡುತ್ತಾನೆ. ಇದರಿಂದ ಮತ್ತೆ ಅವಮಾನಗೊಂಡ ಶೂರ್ಪನಖಿ ನೇರವಾಗಿ ಲಂಕೆಗೆ ಬಂದು ರಾವಣನಲ್ಲಿ ಸುಳ್ಳು ಹೇಳುತ್ತಾಳೆ! ಆಕೆ ಹೇಳುತ್ತಾಳೆ: "ಅಣ್ಣಾ, ನಾನು ಕಾಡಿನಲ್ಲಿ ವಿಹರಿಸುತ್ತಿರುವಾಗ ಅತ್ಯಂತ ಸುಂದರಿಯಾದ ಸೀತೆಯನ್ನು ಕಂಡೆ. ಆಕೆಯ ಸೌಂದರ್ಯವನ್ನು ಕಂಡಾಗ ನನಗೆ ಆಕೆ ನಿನ್ನ ಪಟ್ಟದ ರಾಣಿ ಆಗಬೇಕು ಎನಿಸಿತು. ನಾನು ಈ ಮಾತನ್ನು ಹೇಳಿದಾಗ ಆಕೆಯ ಜೊತೆಗಿದ್ದ ರಾಮ-ಲಕ್ಷ್ಮಣರು ನನ್ನ ಮೂಗನ್ನು ಕತ್ತರಿಸಿದರು. ಸೀತೆ ನಿನ್ನ ಪತ್ನಿ ಆಗಬೇಕು ಎಂದು ಕೇಳಿಕೊಂಡಿದ್ದಕ್ಕಾಗಿ ನನ್ನ ಮೂಗನ್ನು ಕತ್ತರಿಸಲಾಯಿತು. ಇದು ಅವರು ನಿನಗೆ ಮಾಡಿದ ಅವಮಾನ" ಎಂದು. ಇಲ್ಲಿ ಆಕೆ ಎಲ್ಲಿಯೂ ತಾನು ಶ್ರೀರಾಮನನ್ನು ಬಯಸಿದೆ ಎಂದು ಹೇಳುವುದಿಲ್ಲ. ಈ ಘಟನೆಯನ್ನು ಮೇಲಿನ ಶ್ಲೋಕದಲ್ಲಿ ಚುಟುಕಾಗಿ ವಿವರಿಸಲಾಗಿದೆ. "ಹೆಣ್ಣಿನ ಸುಳ್ಳು ಮಾತನ್ನು ಕೇಳಿದ ರಾವಣ ಶ್ರೀರಾಮನ ವಿರೋಧ ಕಟ್ಟಿಕೊಂಡು ಸೀತೆಯನ್ನು ಮಾರುವೇಷದಲ್ಲಿ ಬಂದು ಅಪಹರಿಸಿ ಜೀವನದಲ್ಲಿ ದುರಂತವನ್ನು ತಂದುಕೊಂಡ". ಸೀತೆಯನ್ನು ಅಪಹಾರ ಮಾಡಿರುವುದು ರಾವಣ ತನ್ನ ಜೀವಮಾನದಲ್ಲಿ ಮಾಡಿದ ದೊಡ್ಡ ತಪ್ಪು. ಈ ಮಾತನ್ನು ಮುಂದೆ ಮಂಡೋದರಿ ಹೇಳುವುದನ್ನು ನಾವು ರಾಮಾಯಣದಲ್ಲಿ ಕಾಣುತ್ತೇವೆ. ಮಂಡೋದರಿ ಒಬ್ಬ ಸಂಯಮದ ಆದರ್ಶ ಮಹಿಳೆ. ಆಕೆ ಎಂದೂ ದಾರಿತಪ್ಪಿ ಮಾತನಾಡಿದವಳಲ್ಲ. ಆದರೆ ಹನುಮಂತ ಲಂಕೆಯನ್ನು ಸುಟ್ಟ ವಿಷಯವನ್ನು ಆಕೆಗೆ ತಿಳಿಸಿದಾಗ ಆಕೆ ಹೇಳುತ್ತಾಳೆ: "ಲಂಕೆ ಇಂದು ಸುಟ್ಟುಹೋಗಿರುವುದಲ್ಲ. ಸೀತೆಯನ್ನು ರಾವಣ ಅಪಹರಿಸಿದ ದಿನವೇ ಸುಟ್ಟುಹೋಗಿದೆ" ಎಂದು. ಈ ರೀತಿ ಲಂಕೆಗೆ ಕುತ್ತನ್ನು ಸೀತೆಯ ರೂಪದಲ್ಲಿ ರಾವಣನೇ ಹೊತ್ತುತಂದಿದ್ದ.

**ಯಸ್ಮಾ ಅದಾದುದಧಿರೂಢಭಯಾಂಗವೇಪೋ ಮಾರ್ಗಂ ಸಪದ್ಯರಿಪುರಂ ಹರವದ್ ದಿಧಕ್ಷೋಃ ।**
**ದೂರೇಸುಹೃನ್ಮಥಿತರೋಷಸುಶೋಷದೃಷ್ಟ್ಯಾ ತಾತಪ್ಯಮಾನಮಕರೋರಗನಕ್ರಚಕ್ರಃ ॥೨೪॥**

ರಾವಣ ಸೀತೆಯನ್ನು ಅಪಹಾರ ಮಾಡಿದ ವಿಷಯ ತಿಳಿದಾಗ ಶ್ರೀರಾಮಚಂದ್ರ ಲಂಕೆಯನ್ನು ಸುಟ್ಟು ನಿರ್ನಾಮ ಮಾಡಿಬಿಡಬೇಕೆಂದು ತೀರ್ಮಾನ ಮಾಡುತ್ತಾನೆ. ಆತನ ಸಂಕಲ್ಪವನ್ನು ಮೊದಲು ಆಂಜನೇಯ ಲಂಕಾದಹನದ ಮೂಲಕ ನೆರವೇರಿಸುತ್ತಾನೆ. (ಇಲ್ಲಿ ದಿಧಕ್ಷೋಃ ಎನ್ನುವ ಪ್ರಯೋಗ ರಾಮಾಯಣದ ಇಡೀ ಸುಂದರಕಾಂಡವನ್ನು ಸೂಚಿಸುತ್ತದೆ). ಆನಂತರ ಶ್ರೀರಾಮಚಂದ್ರ ಹೇಗೆ ತ್ರಿಪುರಾಂತಕನಾದ ಶಿವ ತ್ರಿಪುರಾಸುರರ ಮೂರು ಪುರಗಳನ್ನು ಸುಟ್ಟನೋ ಹಾಗೆ ಲಂಕೆಯನ್ನು ಸುಟ್ಟುಬಿಡಬೇಕೆಂದು ತೀರ್ಮಾನ ಮಾಡಿ ಲಂಕಾಮಾರ್ಗವಾಗಿ ಸಮುದ್ರ ತಟಿಗೆ ಬರುತ್ತಾನೆ. (ಇಂದಿನ ಮದುರೆಯಲ್ಲಿನ ದರ್ಭಶಯನ ಎನ್ನುವ ಸ್ಥಳಕ್ಕೆ ಬಂದು ಮಲಗಿ ರಾಮ ವಿಶ್ರಾಂತಿ ಪಡೆದ ಎನ್ನುತ್ತಾರೆ). ಈ ರೀತಿ ಪತ್ನಿಯನ್ನು ಕಳೆದುಕೊಂಡು ಲಂಕೆಗೆ ಹೊರಟಿರುವ ರಾಮಚಂದ್ರ ಸಮುದ್ರ ತೀರಕ್ಕೆ ಬಂದು ಕಾದು ನಿಂತರೂ ಸಮುದ್ರರಾಜ ವರುಣನಿಂದ ಯಾವ ಪ್ರತಿಕ್ರಿಯೆಯೂ ಬರುವುದಿಲ್ಲ. ಇದರಿಂದಾಗಿ ರಾಮನ ಮನಸ್ಸು ಕದಡುತ್ತದೆ ಮತ್ತು ಅದು ಕೋಪದ ಬೆಂಕಿಯ ಕಿಡಿಯಾಗಿ ಆತನ ಕಣ್ಣಿನಿಂದ ಹೊರಬರುತ್ತದೆ. ಆ ಕೋಪಾಗ್ನಿಯಲ್ಲಿ ಸಮುದ್ರದಲ್ಲಿನ ಸಮಸ್ತ ಜೀವಿಗಳು ಬೆಂದು ವಿಲವಿಲ ಒದ್ದಾಡುತ್ತವೆ. ಆಗ ಸಮುದ್ರರಾಜ ಭಯಭೀತನಾಗಿ ನಡುಗುತ್ತಾ ಶ್ರೀರಾಮನ ಮುಂದೆ ಬಂದು ನಿಂತು ಕ್ಷಮೆ ಬೇಡಿ ಸೇತುವೆ ಕಟ್ಟಬೇಕು ಎಂದು ನಿವೇದಿಸಿಕೊಳ್ಳುತ್ತಾನೆ. ಈ ರೀತಿ ಸೇತುವೆ ನಿರ್ಮಾಣವಾಗುತ್ತದೆ.

ವಕ್ಷಃಸ್ಥಲಸ್ಪರ್ಶರುಗ್ಣ ಮಹೇಂದ್ರವಾಹ ದಂತೈರ್ವಿಳಂಬಿತಕಕುಬ್ಜಯರೂಢಹಾಸಃ ।
ಸದ್ಯೋऽಸುಭಿಃ ಸಹ ವಿನೇಷ್ಯತಿ ದಾರಹರ್ತುರ್ವಿಸ್ಫೂರ್ಜಿತೈರ್ಧನುಷ ಉಚ್ಚರಿತೈಃ ಸಸೈನ್ಯಃ ॥೨೫॥

ಇಲ್ಲಿ ರಾವಣ ಎಂಥಹ ಪರಾಕ್ರಮಿ ಎನ್ನುವುದನ್ನು ಚತುರ್ಮುಖ ವಿವರಿಸಿರುವುದನ್ನು ಕಾಣುತ್ತೇವೆ. ರಾವಣ ದೇವಲೋಕದ ಮೇಲೆ ದಾಳಿ ಇಟ್ಟ ಸಮಯದಲ್ಲಿ ಇಂದ್ರ ಐರಾವತದ ಮೇಲೆ ಬಂದು ರಾವಣನೊಂದಿಗೆ ಯುದ್ಧ ಮಾಡುತ್ತಾನೆ. ಇಂದ್ರನ ಆನೆ ರಾವಣನ ವಕ್ಷಸ್ಥಳಕ್ಕೆ ತಿವಿಯುತ್ತದೆ. ಆದರೆ ಈ ತಿವಿತದಿಂದ ಆನೆಯ ದಾಡೆಗೆ ನೋವಾಯಿತೇ ವಿನಃ ರಾವಣನಿಗೆ ಏನೂ ಆಗುವುದಿಲ್ಲ. ಆನೆಯ ತಿವಿತದಿಂದ ಸ್ವಲ್ಪ ವಿಳಂಭವಾದರೂ ಕೂಡಾ ನಗುವಿನ ಅಟ್ಟಹಾಸದೊಂದಿಗೆ ರಾವಣ ಅಷ್ಟದಿಕ್ಕುಗಳನ್ನೂ ಗೆಲ್ಲುತ್ತಾನೆ. ಇಂತಹ ಪರಾಕ್ರಮಶಾಲಿ ರಾವಣ ತನ್ನ ಹೆಂಡತಿಯನ್ನು ಮರಳಿ ಪಡೆಯುವುದಕ್ಕೆ ಬಂದ ಶ್ರೀರಾಮಚಂದ್ರನ ಬಿಲ್ಲಿನ ಠೇಂಕಾರಕ್ಕೆ ನಡುಗಿ ಹೋಗುತ್ತಾನೆ. ಕೇವಲ ಬಿಲ್ಲಿನ ಜೇಂಕಾರಕ್ಕೆ ಆತನ ಇಂದ್ರಿಯಗಳು ಉಡುಗಿ ಹೋಗುತ್ತವೆ. ಆತನ ಕೋಟಿ-ಕೋಟಿ ಸೇನೆ ತತ್ತರಿಸಿ ಹೋಗುತ್ತದೆ. ಯುದ್ಧಕ್ಕೂ ಮೊದಲು "ನನ್ನ ಕಥೆ ಮುಗಿಯಿತು" ಎಂದು ರಾವಣ ಕಂಗಾಲಾಗುತ್ತಾನೆ. ಆನಂತರ ರಾಮನ ಬಾಣಗಳಿಂದ ರಾವಣ ತನ್ನ ಸೈನ್ಯ ಸಹಿತ ಮರಣಹೊಂದುತ್ತಾನೆ. "ಇಂತಹ ಪರಾಕ್ರಮಿ ಶ್ರೀರಾಮಚಂದ್ರನಾಗಿ ಭಗವಂತ ಭೂಮಿಯಲ್ಲಿ ಅವತರಿಸಿದ" ಎಂದಿದ್ದಾನೆ ಚತುರ್ಮುಖ.

## ೧೧. ಕೃಷ್ಣಾವತಾರ

ಭಾಗವತ ಬಲರಾಮ ಮತ್ತು ಕೃಷ್ಣರನ್ನು ಎರಡು ಪ್ರತ್ಯೇಕ ಅವತಾರವೆಂದು ಹೇಳುವುದಿಲ್ಲ. ಇದಕ್ಕೆ ಕಾರಣವೇನೆಂದು ಬ್ರಹ್ಮಪುರಾಣ ವಿವರಿಸುತ್ತದೆ. ಅಲ್ಲಿ ಹೇಳುವಂತೆ: ***ರಾಮ ಏಕೋ ಹ್ಯನಂತಾಂಶಸ್ತತ್ರ ರಾಮಾಭಿಧೋ ಹರಿಃ । ಶುಕ್ಲಕೇಶಾತ್ಮಕಸ್ತಿಷ್ಠನ್ ರಾಮಯಾಮಾಸ ವೈ ಜಗತ್ ॥ ಇತಿ ಬ್ರಾಹ್ಮೇ ॥*** ಶೇಷನೊಳಗೆ ಹರಿ ಶುಕ್ಲಕೇಶರೂಪನಾದ ರಾಮನಾಗಿ ಆವಿಷ್ಠನಾಗಿದ್ದ. ಹೀಗಾಗಿ ಶ್ರೀಕೃಷ್ಣ ಭಗವಂತನ ಸ್ವರೂಪಾವತಾರವಾದರೆ ಬಲರಾಮ ಶೇಷನಲ್ಲಿ ಭಗವಂತನ ಆವೇಶಾವತಾರ.

ಭೂಮೇಃ ಸುರೇತರವರೂಥವಿಮರ್ದಿತಾಯಾಃ ಕ್ಲೇಶವ್ಯಯಾಯ ಕಲಯಾ ಸಿತಕೃಷ್ಣಕೇಶಃ ।
ಜಾತಃ ಕರಿಷ್ಯತಿ ಜನಾನುಪಲಕ್ಷ್ಯ ಮಾರ್ಗಃ ಕರ್ಮಾಣಿ ಚಾತ್ಮಮಹಿಮೋಪನಿಬಂಧನಾನಿ ॥೨೬॥

ಈ ಅವತಾರದ ಉದ್ದೇಶವೇನು ಎನ್ನುವುದನ್ನು ಇಲ್ಲಿ ಚತುರ್ಮುಖ ನಾರದರಿಗೆ ವಿವರಿಸುವುದನ್ನು ಕಾಣುತ್ತೇವೆ. ತಾಮಸೀ ಸ್ವಭಾವದ ದುಷ್ಟರು ಭೂಮಿಗೆ ಭಾರವಾದ ಪೀಡಕರಾಗಿ ಈ ದೇಶದ ಆಡಳಿತ ಚುಕ್ಕಾಣಿಯನ್ನು ಹಿಡಿದರು. ಭೂಮಿ ಅಂತಹ ದುಷ್ಟರ ಆಡಳಿತಕ್ಕೆ ಸಿಕ್ಕಿ ತತ್ತರಿಸಿ ಹೋಯಿತು. ಜರಾಸಂದ, ಕಂಸ, ಕೀಚಕ, ಹೀಗೆ ಅನೇಕಾನೇಕ ದುಷ್ಟ ಶಕ್ತಿಗಳ ನಿಗ್ರಹಕ್ಕಾಗಿ, ಭೂಮಿಯ ದುಃಖ ಪರಿಹಾರಕ್ಕಾಗಿ ಶ್ರೀಕೃಷ್ಣನ ಅವತಾರವಾಯಿತು.

ಚತುರ್ಮುಖ ಹೇಳುತ್ತಾನೆ: "ದುಷ್ಟಶಕ್ತಿಗಳನ್ನು ನಿಗ್ರಹಿಸಿ ಭೂದೇವಿಯ ಕ್ಲೇಶವನ್ನು ಕಳೆಯಲು ಬಿಳಿ-ಕಪ್ಪು ಕೇಶದ ಭಗವಂತ ಬಿಳಿಕೂದಲಿನ ಆವೇಶದಿಂದ ಬಲರಾಮನಾಗಿ, ಕಪ್ಪು ಕೂದಲಿನ ಸ್ವರೂಪದಿಂದ ಕೃಷ್ಣನಾಗಿ ಅವತರಿಸಿ, ತಾನು ಭಗವಂತನೆಂದು ತೋರಗೊಡದೆ, ಭಗವಂತನೊಬ್ಬನಿಂದಲೇ ಸಾಧ್ಯವಾಗುವ ಲೀಲೆಗಳನ್ನು ಭೂಮಿಯ

ಮೇಲೆ ತೋರಿದ" ಎಂದು. ಇಲ್ಲಿ ಮೇಲ್ನೋಟಕ್ಕೆ ಭಗವಂತನ ಕೇಶ ವ್ಯತ್ಯಾಸ ಹೇಳಿದಂತೆ ಕಾಣಿಸಿದರೂ ಕೂಡಾ, ಕೇಶವ ಮತ್ತು ಕೇಶ ಬೇರೆಬೇರೆ ಅಲ್ಲ. ಇದು ಕೇವಲ ಶಕ್ತಿಯ ಸಂಕೇತವಾಗಿ ಹೇಳಿದ ಮಾತು. ಬಿಳಿ ರಕ್ಷಣೆಯ ಸಂಕೇತವಾದರೆ ಕಪ್ಪು ನಾಶದ ಸಂಕೇತ. ರಕ್ಷಣೆಯಾಗಬೇಕಾದರೆ ಅಧರ್ಮದ ನಾಶವಾಗಲೇ ಬೇಕು. ಇದನ್ನೇ ಶ್ರೀಕೃಷ್ಣ ಗೀತೆಯಲ್ಲಿ "*ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್*" ಎಂದು ಹೇಳಿರುವುದು. ಇದನ್ನೇ ನಾವು ಶ್ರೀಕೃಷ್ಣ ಜನ್ಮಾಷ್ಟಮಿಯಂದು ಹೀಗೆ ಹೇಳುತ್ತೇವೆ: "***ಕೌರವಾನಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ, ಪಾಂಡವಾನಾಂ ಹಿತಾರ್ಥಾಯ ಧರ್ಮಸಂಸ್ಥಾಪನಾರ್ಥಾಯ ಚ.*** ಹೀಗೆ ಉದ್ಧಾರದ ಜೊತೆಗೆ ನಾಶ ಇದ್ದೇ ಇರುತ್ತದೆ. ಅಧರ್ಮದ ನಾಶ ಮಾಡಿದರೆ ಮಾತ್ರ ಧರ್ಮದ ಉದ್ಧಾರ ಸಾಧ್ಯ. ಇದನ್ನು ತೋರಿಸುವುದಕ್ಕೋಸ್ಕರ ಎರಡು ಬಣ್ಣದ ಕೂದಲನ್ನು ಇಲ್ಲಿ ಹೇಳಲಾಗಿದೆ. ಭೂಮಿಗೆ ಬಂದ ಈ ಎರಡು ಕೂದಲು 'ನೀಲಮೇಘಶ್ಯಾಮ' ಮತ್ತು 'ಬಲರಾಮ'.

**ತೋಕೇನ ಜೀವಹರಣಂ ಯದುಲೂಪಿಕಾಯಾ ಸ್ತ್ರೈಮಾಸಿಕಸ್ಯ ಚ ಪದಾ ಶಕಟೋSಪವೃತ್ತಃ ।**
**ಯದ್ ರಿಂಗತಾSನ್ತರಗತೇನ ದಿವಿಸ್ಪೃಶೋರ್ವಾ ಉನ್ಮೂಲನಂ ತ್ವಿತರಥಾSರ್ಜುನಯೋರ್ನ ಭಾವ್ಯಮ್ ॥೨೭॥**

ಪುಟ್ಟ ಮಗುವಾಗಿದ್ದಾಗಲೇ ದುಷ್ಟ ರಾಕ್ಷಸರನ್ನು ಶ್ರೀಕೃಷ್ಣ ಸಂಹಾರ ಮಾಡಿರುವ ಕಥೆ ನಮಗೆ ತಿಳಿದೇ ಇದೆ. ಅಂತಹ ಘಟನೆಗಳಲ್ಲಿ ಪೂತನಿಯ ಸಂಹಾರ ಕೃಷ್ಣ ಮಗುವಾಗಿದ್ದಾಗ ನಡೆದ ಮೊದಲ ಘಟನೆ. ಈ ಘಟನೆಯನ್ನು ಇಲ್ಲಿ ಚತುರ್ಮುಖ ನಾರದರಿಗೆ ವಿವರಿಸುವುದನ್ನು ಕಾಣುತ್ತೇವೆ. ನಮಗೆ ತಿಳಿದಂತೆ ನಂದಗೋಪ-ಯಶೋದೆಯರು ಕಾಡಿನ ಅಥವಾ ಹುಲ್ಲುಗಾವಲಿನ ಪ್ರದೇಶದಲ್ಲಿ ವಾಸಮಾಡುತ್ತಿದ್ದರು. ಅಂತಹ ಸಮಯದಲ್ಲಿ ಕಂಸನ ಸೆರೆಮನೆಯಲ್ಲಿದ್ದ ವಸುದೇವ-ದೇವಕಿಯರ ಪುತ್ರನಾಗಿ ಶ್ರೀಕೃಷ್ಣ ಅವತಾರ ತಳೆದ. ಅದೇ ಸಮಯದಲ್ಲಿ ನಂದಗೋಪ-ಯಶೋದೆಯರಿಗೆ ಹೆಣ್ಣು ಮಗುವೊಂದು ಜನಿಸಿತು. ದೈವೇಚ್ಛೆಯಂತೆ ಕೃಷ್ಣನನ್ನು ಕಂಸನಿಂದ ರಕ್ಷಿಸಲು ಈ ಎರಡು ಮಕ್ಕಳನ್ನು ಅದಲು ಬದಲು ಮಾಡಲಾಯಿತು. ಹೀಗಾಗಿ ಸೆರೆಮನೆಯಲ್ಲಿ ಜನಿಸಿದ ಶ್ರೀಕೃಷ್ಣ ನಂದಗೋಪನ ಶಿಬಿರವನ್ನು ಸೇರಿದ. ಅಲ್ಲಿ ತನಗೆ ವಿಷದ ಹಾಲು ಉಣಿಸಿ ಸಾಯಿಸಬೇಕು ಎನ್ನುವ ಉದ್ದೇಶದಿಂದ ಬಂದಿದ್ದ ದುಷ್ಟ ಪೂತನಿಯನ್ನು ಭಗವಂತ ಬಾಲರೂಪದಲ್ಲಿ ನಿಗ್ರಹಿಸಿದ.

ಈ ಶ್ಲೋಕದಲ್ಲಿ ಪೂತನಿಯ ಸಂಹಾರವನ್ನು ವಿವರಿಸುವಾಗ "ಉಲೂಪಿಕಾ" ಎನ್ನುವ ಪದ ಪ್ರಯೋಗ ಮಾಡಲಾಗಿದೆ. ಇತ್ತೀಚೆಗೆ ಮುದ್ರಣಗೊಂಡ ಹಲವು ಪುಸ್ತಕಗಳಲ್ಲಿ ಈ ಪದವನ್ನು ಪಕ್ಷಿ/ಗೂಬೆ ಎನ್ನುವ ಅರ್ಥದಲ್ಲಿ "ಉಲೂಕಿಕಾ" ಎಂದು ತಪ್ಪಾಗಿ ಮುದ್ರಿಸಿರುವುದನ್ನು ಕಾಣುತ್ತೇವೆ. ಆದರೆ ಪ್ರಾಚೀನ ಪಾಠದಲ್ಲಿ ಆ ರೀತಿ ಪದ ಪ್ರಯೋಗವಿರುವುದಿಲ್ಲ. ಉಲೂಪಿಕಾ ಎನ್ನುವುದು ಅನೇಕ ಆಯಾಮಗಳಲ್ಲಿ ಅರ್ಥವನ್ನು ಕೊಡುವ ಭಾಗವತದ ಪ್ರಕ್ರಿಯೆಗೆ ಪೂರಕವಾದ ಪದಪ್ರಯೋಗ. ರ-ಲಯೋಃ ಅಭೇಧಃ ಎನ್ನುವಂತೆ ಇಲ್ಲಿ ಲೂಪ ಎಂದರೆ ರೂಪ. ಹಾಗಾಗಿ ಉಲೂಪ ಎಂದರೆ ಉತ್ಕೃಷ್ಟವಾದ ರೂಪ ಎಂದರ್ಥ. ಪೂತನಿ ಕೃಷ್ಣನಿಗೆ ವಿಷದ ಹಾಲನ್ನು ಉಣಿಸಿ ಸಾಯಿಸಬೇಕು ಎನ್ನುವ ಇಚ್ಛೆಯಿಂದ ಸುಂದರ ಸ್ತ್ರೀ ರೂಪ ತೊಟ್ಟು ಬಂದಿದ್ದಳು. ಅವಳು ಉಲೂಪ ಆದರೂ ಉಲೂಪಿಕ. ಏಕೆಂದರೆ ಸಂಸ್ಕೃತದಲ್ಲಿ 'ಕನ್' ಪ್ರತ್ಯಯವನ್ನು ನಿಂದನೀಯ ಎನ್ನುವ ಅರ್ಥದಲ್ಲಿ ಬಳಕೆ ಮಾಡುತ್ತಾರೆ. ವಸ್ತುತಃ ಪೂತನಿ ಸುಂದರ ಸ್ತ್ರೀ ಅಲ್ಲ; ಅವಳು ರಾಕ್ಷಸಿ ಎನ್ನುವುದನ್ನು ಉಲೂಪಿಕಾ ಪದ ವಿವರಿಸುತ್ತದೆ. ಇಷ್ಟೇ ಅಲ್ಲದೆ ಈ ಪದದಲ್ಲಿ ಇನ್ನೊಂದು ದೇವ ಗುಹ್ಯ ಅಡಗಿದೆ. ಪೂತನಿಯ ಒಳಗೆ ರಾಕ್ಷಸೀ ಜೀವದ ಜೊತೆಗೆ ಇನ್ನೊಂದು ಶಾಪಗ್ರಸ್ತವಾದ ಪುಣ್ಯ ಜೀವ ಕೂಡಾ ಶ್ರೀಕೃಷ್ಣನಿಗೆ ಹಾಲು ಉಣಿಸಿ ತನ್ನ ಜನ್ಮ ಸಾರ್ಥಕ ಮಾಡಿಕೊಳ್ಳಬೇಕು ಎಂದು ಕಾದು ಕುಳಿತಿತ್ತು. ಆ ಜೀವ ಇನ್ನಾರೂ

ಅಲ್ಲ. ಆಕೆ ಉತ್ಕೃಷ್ಟವಾದ ರೂಪವುಳ್ಳ ಊರ್ವಶಿ. ಹೀಗೆ ಎರಡು ಜೀವಗಳು ಒಂದೇ ದೇಹದಲ್ಲಿ ಸೇರಿಕೊಂಡು ಕೃಷ್ಣನನ್ನು ಬಯಸುತ್ತಿದ್ದವು. ರಾಕ್ಷಸೀ ಜೀವ ಕೃಷ್ಣನಿಗೆ ವಿಷ ಉಣಿಸಿ ಸಾಯಿಸಬೇಕು ಎಂದು ಬಯಸಿದರೆ, ಪುಣ್ಯಜೀವಿ ಊರ್ವಶಿ ಕೃಷ್ಣನಿಗೆ ತನ್ನ ಎದೆ ಹಾಲನ್ನು ಉಣಿಸಿ ತನ್ನ ಜನ್ಮ ಉದ್ಧಾರ ಮಾಡಿಕೊಳ್ಳಬೇಕು ಎನ್ನುವ ತುಡಿತದಿಂದ ಕಾದು ಕುಳಿತಿದ್ದಳು. ಒಂದೇ ದೇಹ, ಒಂದೇ ಕ್ರಿಯೆ ಆದರೆ ಎರಡು ಬಯಕೆ. ಇವೆಲ್ಲವನ್ನೂ ಇಲ್ಲಿ ಉಲೂಪಿಕ ಎನ್ನುವ ಏಕಪದ ಎರಡು ಆಯಾಮದಲ್ಲಿ ವಿವರಿಸುತ್ತದೆ. ಇದು ಸಂಸ್ಕೃತ ಭಾಷೆಯ ಸೊಬಗು. ವಿಷದ ಹಾಲು ಕುಡಿಸಿ ಸಾಯಿಸಬೇಕು ಎಂದು ಬಂದ ಪೂತನಿಯ ಪ್ರಾಣ ಹರಣ ಮಾಡಿದ ಶ್ರೀಕೃಷ್ಣ, ಉತ್ಕೃಷ್ಟವಾದ ರೂಪವಿರುವ ಪುಣ್ಯಜೀವಿ ಊರ್ವಶಿಯನ್ನು ಶಾಪಮುಕ್ತಗೊಳಿಸಿ ಉದ್ಧಾರ ಮಾಡಿದ. ಈ ರೀತಿ ಶ್ರೀಕೃಷ್ಣ ಧರ್ಮ ಸಂಸ್ಥಾಪನೆಯ ಕಾರ್ಯ ಪ್ರಾರಂಭ ಮಾಡಿರುವುದೇ ದುಷ್ಟ ಪೂತನಿಯ ಜೀವ ಹರಣದೊಂದಿಗೆ.

ಶ್ರೀಕೃಷ್ಣ ಸುಮಾರು ಮೂರು ತಿಂಗಳಿನವನಿದ್ದಾಗ ಶಕಟಾಸುರನನ್ನು ಸಂಹಾರ ಮಾಡಿದ ಘಟನೆಯನ್ನು ಇಲ್ಲಿ ಚತುರ್ಮುಖ ನಾರದರಿಗೆ ವಿವರಿಸುವುದನ್ನು ಕಾಣುತ್ತೇವೆ. ಅಂದು ಶ್ರೀಕೃಷ್ಣನ ಜನ್ಮನಕ್ಷತ್ರ ದಿನ. ಆ ದಿನ ತಾಯಿ ಯಶೋದೆ ಮಗುವನ್ನು ಮನೆಯ ಮುಂದೆ ನಿಂತಿದ್ದ ಗಾಡಿಯ ಕೆಳಗೆ ಮಲಗಿಸಿ ಅಡುಗೆ ಕೆಲಸದಲ್ಲಿ ಮಗ್ನಳಾಗಿದ್ದಳು. ಉಳಿದವರೆಲ್ಲರೂ ಅವರವರ ಕೆಲಸ ಕಾರ್ಯದಲ್ಲಿ ಮಗ್ನರಾಗಿದ್ದರು. ಹೀಗಾಗಿ ಮಗುವಿನ ಬಳಿ ಕೇವಲ ಗೋಪಬಾಲಕರಷ್ಟೇ ಇದ್ದರು. ಈ ಸಮಯದಲ್ಲಿ ಶಕಟಾಸುರ ಎನ್ನುವ ಮಾಯಾವಿ ರಾಕ್ಷಸ ಮಗುವಿನ ಬಳಿ ಇದ್ದ ಗಾಡಿಯಲ್ಲಿ ಬಂದು ಸೇರಿಕೊಂಡ. ಆಗ ಕೃಷ್ಣ ಅಳಲಾರಂಭಿಸುತ್ತಾನೆ. ಆದರೆ ಅಳುತ್ತಿರುವ ಮಗುವನ್ನು ಸಮಾಧಾನಪಡಿಸಲು ಹಿರಿಯರು ಯಾರೂ ಅಲ್ಲಿರುವುದಿಲ್ಲ. ಆಗ ಕೃಷ್ಣ ಕಾಲನ್ನು ಜಾಡಿಸಿ ಜೋರಾಗಿ ಅಳುತ್ತಾನೆ. ಇದರಿಂದಾಗಿ ಅವನ ಕಾಲು ಬಳಿಯಲ್ಲಿದ್ದ ಗಾಡಿಗೆ ತಾಗುತ್ತದೆ ಮತ್ತು ಆ ರಭಸಕ್ಕೆ ಗಾಡಿ ಉರುಳಿ ಬೀಳುತ್ತದೆ. ಇದರಿಂದ ಅದರಲ್ಲಿ ತುಂಬಿಟ್ಟಿದ್ದ ಹಾಲು, ಮೊಸರು ಎಲ್ಲವೂ ನಷ್ಟವಾಗುತ್ತದೆ. ಜೊತೆಗೆ ಅದರಲ್ಲಿ ಅವಿತು ಕುಳಿತಿದ್ದ ಶಕಟಾಸುರನ ಸಂಹಾರವಾಗುತ್ತದೆ. ಇಷ್ಟೆಲ್ಲಾ ಆದರೂ ಮಗುವಿಗೆ ಮಾತ್ರ ಏನೂ ಆಗುವುದಿಲ್ಲ. ಗಾಬರಿಯಿಂದ ಸೇರಿದ ಹಿರಿಯರೆಲ್ಲರನ್ನೂ ನೋಡಿ ಕೃಷ್ಣ ನಗುತ್ತಿದ್ದ. ಈ ಘಟನೆಯ ನಂತರ ಗೋಪಬಾಲಕರು ಮಗುವಿನ ಕಾಲು ತಾಗಿ ಗಾಡಿ ಉರುಳಿ ಬಿತ್ತು ಎನ್ನುವ ಸತ್ಯವನ್ನು ಹಿರಿಯರಿಗೆ ಹೇಳಿದರೆ ಅದನ್ನು ಯಾರೂ ನಂಬುವುದಿಲ್ಲ. ಈ ರೀತಿ ಭಗವಂತನೆಂದು ತೋರಗೊಡದೇ, ಭಗವಂತನೊಬ್ಬನಿಂದಲೇ ಸಾಧ್ಯವಾಗುವ ಲೀಲೆಗಳನ್ನು ಶ್ರೀಕೃಷ್ಣ ಬಾಲ್ಯದಲ್ಲೇ ತೋರಿದ.

ಕೃಷ್ಣ ಸುಮಾರು ಎರಡು ವರ್ಷದವನಿದ್ದಾಗ ಆತನ ತುಂಟತನ ತಾಳಲಾರದೇ ಯಶೋದೆ ಆತನನ್ನು ಅವಲಕ್ಕಿ ಕುಟ್ಟುವ ಜಿಡ್ಡೆಗೆ ಕಟ್ಟಿ ಹಾಕುತ್ತಾಳೆ. ಕೃಷ್ಣ ಆ ಜಿಡ್ಡೆಯನ್ನು ಎಳೆದುಕೊಂಡು ಕಾಡಿನತ್ತ ಹೋಗುತ್ತಾನೆ. ಇದನ್ನು ಯಾರೂ ಗಮನಿಸುವುದಿಲ್ಲ. ಅಲ್ಲಿ ಸಮೀಪದಲ್ಲಿ ಎರಡು ಬೃಹತ್ ಗಾತ್ರದ ಮತ್ತೀ ಮರಗಳಿದ್ದವು. ಅವು ಆ ಪರಿಸರದಲ್ಲಿರುವ ಎಲ್ಲಾ ಮರಗಳಿಗಿಂತ ಅತ್ಯಂತ ಎತ್ತರದ ಗಗನಚುಂಬಿ ಮರಗಳಾಗಿದ್ದವು. [ದಿವಿಸ್ಪೃಶೋಃ ಅಥವಾ ಗಗನಚುಂಬಿ ಎನ್ನುವ ಪದದ ಅರ್ಥವನ್ನು ಆಚಾರ್ಯ ಮಧ್ವರು ತಂತ್ರಮಾಲ ಗ್ರಂಥದ ಆಧಾರ ಸಹಿತ ವಿವರಿಸುತ್ತಾ ಹೇಳುತ್ತಾರೆ: "*ಸಹಸ್ರ ಧನುಷಸ್ಪೂರ್ಧ್ವಂ ದ್ಯುಶಬ್ದೇನಾಪಿ ಭಣ್ಯತೇ । ಇತಿ ತಂತ್ರಮಾಲಾಯಾಂ*" ಯಾವ ಮರ ಒಂದು ಸಾವಿರ ಧನುಃಪ್ರಮಾಣಕ್ಕಿಂತ (ಒಂದು ಸಾವಿರ ಗಜಕ್ಕಿಂತ) ಎತ್ತರ ಇರುತ್ತದೋ ಅದನ್ನು **ದಿವಿಸ್ಪೃಶೋಃ** ಅಥವಾ ಗಗನಚುಂಬಿ ಎಂದು ಕರೆಯುತ್ತಾರೆ] ಕೃಷ್ಣ ಆ ಎರಡು ಮರಗಳ ನಡುವೆ ಆಚೆ ಹೋದಾಗ ಜಿಡ್ಡೆ ಮರಗಳ ನಡುವೆ ಸಿಕ್ಕಿ ಮರಗಳು ತುಂಡಾಗಿ ಬೀಳುತ್ತವೆ. ಇದು ಭಗವಂತನ ಸ್ವರೂಪ ಸಾಮರ್ಥ್ಯದಿಂದ ನಡೆದ ಘಟನೆ. ಏಕೆಂದರೆ ಈ ಕಾರ್ಯವನ್ನು ಮಗುವೇಕೆ, ಪ್ರಬುದ್ಧರಾದವರೂ ಮಾಡಲು ಸಾಧ್ಯವಿಲ್ಲ. ಇಲ್ಲಿ ಯಮಳಾರ್ಜುನ ಮರದ ರೂಪದಲ್ಲಿ

ನಿಂತಿದ್ದವರು ಶಾಪಗ್ರಸ್ಥ ದೇವತೆಗಳಾಗಿದ್ದರು. ಇವರು ಅಪ್ಸರ ಸ್ತ್ರೀಯರ ಜೊತೆ ಭೋಗದಲ್ಲಿ ನಿರತರಾಗಿ, ಎಚ್ಚರತಪ್ಪಿ ನಾರದಾದಿ ಋಷಿಗಳನ್ನು ನಿರ್ಲಕ್ಷಿಸಿ, ಶಾಪಗ್ರಸ್ಥರಾದ 'ನಳಕೂಬರ ಮತ್ತು ಮಣಿಗ್ರೀವ' ಎನ್ನುವ ಕುಬೇರನ ಇಬ್ಬರು ಮಕ್ಕಳು. ಈ ಘಟನೆಯಿಂದ ಅವರಿಬ್ಬರಿಗೂ ಶಾಪ ವಿಮೋಚನೆಯಾಗುತ್ತದೆ. ಅವರು ಭಗವಂತನಲ್ಲಿ ಶರಣಾಗಿ "ಇನ್ನೆಂದೂ ನಾವು ಎಚ್ಚರ ತಪ್ಪಿ ನಡೆಯುವುದಿಲ್ಲ" ಎಂದು ಮಾತು ಕೊಟ್ಟು ದೇವಲೋಕಕ್ಕೆ ಹಿಂತಿರುಗುತ್ತಾರೆ. ಈ ಘಟನೆಯಿಂದ ಗಾಬರಿಗೊಂಡ ನಂದಗೋಪ ಮಗುವಿನ ದೃಷ್ಟಿ ತೆಗೆದು ದೇವರು ರಕ್ಷಣೆ ಮಾಡಲಿ ಎಂದು ಶಾಂತಿ ಮಂತ್ರ ಪಠಣ ಮಾಡಿಸಿದನಂತೆ! ಇವೆಲ್ಲವೂ ಬಾಲರೂಪದಲ್ಲಿ ಭಗವಂತ ತೋರಿದ ಅಸಾಮಾನ್ಯ ಲೀಲಾ ವಿನೋದ ಮತ್ತು ದುಷ್ಟ ಸಂಹಾರ.

**ಯದ್ವೈ ವ್ರಜೇ ವ್ರಜಪಶೂನ್ ವಿಷತೋಯಪೀತಾನ್ ಗೋಪಾಂಸ್ತ್ವಜೀವಯದನುಗ್ರಹದೃಷ್ಟಿವೃಷ್ಟ್ಯಾ ।**
**ತಚ್ಛುದ್ಧಯೇSತಿವಿಷವೀರ್ಯವಿಲೋಲಜಿಹ್ವಮುಚ್ಚಾಟಯಿಷ್ಯದುರಗಂ ವಿಹರದ್ ಹ್ರದಿನ್ಯಾಮ್ ॥೨೮॥**

**ತತ್ ಕರ್ಮ ದಿವ್ಯಮಿವ ಯನ್ನಿಶಿ ನಿಃಶಯಾನಂ ದಾವಾಗ್ನಿನಾSSಶು ವಿಪಿನೇ ಪರಿದಹ್ಯಮಾನೇ ।**
**ಉನ್ನೇಷ್ಯತಿ ವ್ರಜಮಿತೋSವಸಿತಾಂತಕಾಲಂ ನೇತ್ರೇ ಪಿಧಾಯ ಸಬಲೋSನಧಿಗಮ್ಯವೀರ್ಯಃ ॥೨೯॥**

ಯಮುನಾ ನದಿ ತೀರದಲ್ಲಿ ನಡೆದ ಕಾಲಿಯ ಮರ್ದನ ಮತ್ತು ಇತರ ಘಟನೆಗಳನ್ನು ವಿವರಿಸುತ್ತಾ ಚತುರ್ಮುಖ ಹೇಳುತ್ತಾನೆ: "ಇದು ಅತ್ಯಂತ ಪ್ರಶಂಸಾರ್ಹವಾದ(ದಿವ್ಯ) ಕರ್ಮ. ಆದರೆ ಇಡೀ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದ ಭಗವಂತನಿಗೆ ಇದು ಅತ್ಯಂತ ಸಣ್ಣ ಸಂಗತಿ (ದಿವ್ಯಮಿವ)" ಎಂದು.

ಒಮ್ಮೆ ಯಮುನಾ ನದಿ ತೀರದಲ್ಲಿ ಗೋಪಾಲಕರು ಶ್ರೀಕೃಷ್ಣನೊಂದಿಗೆ ಗೋವುಗಳನ್ನು ಕಾಯುತ್ತಿರುವಾಗ ಬಾಯಾರಿದ ಹಸುಗಳು ಮತ್ತು ಕೆಲ ಗೋಪಾಲಕರು ನದಿಯ ನೀರನ್ನು ಕುಡಿಯುತ್ತಾರೆ. ಹೀಗೆ ನೀರು ಕುಡಿದ ತಕ್ಷಣ ಅವರು ಪ್ರಜ್ಞೆ ತಪ್ಪಿ ಬಿದ್ದು ಬಿಡುತ್ತಾರೆ. ಇದನ್ನು ನೋಡಿದ ಕೃಷ್ಣ ನದಿ ತೀರದಲ್ಲಿನ ಒಂದು ಮರವನ್ನು ಏರಿ ಅಲ್ಲಿಂದ ನದಿಗೆ ದುಮುಕುತ್ತಾನೆ. ಹೀಗೆ ನೀರಿಗೆ ಹಾರಿದ ಕೃಷ್ಣ ಕೆಲವು ಹೊತ್ತು ಮೇಲೆ ಬರುವುದೇ ಇಲ್ಲ. ಆನಂತರ ನೋಡಿದರೆ ಎಲ್ಲಾ ಕಡೆಯಿಂದಲೂ ಬಿಗಿ ಹಿಡಿದಿರುವಂತೆ ಕಾಣುವ ಹಾವಿನೊಂದಿಗೆ ಕೃಷ್ಣ ಮೇಲೆ ಬರುತ್ತಾನೆ.ಈ ಭಯಾನಕ ದೃಶ್ಯವನ್ನು ಕಂಡ ಗೋಪಾಲಕರು ಓಡಿ ಬಂದು ನಂದಗೋಪ-ಯಶೋದೆಯರಿಗೆ ವಿಷಯ ತಿಳಿಸುತ್ತಾರೆ. ಇದರಿಂದ ಎಲ್ಲರಿಗೂ ಗಾಬರಿಯಾಗುತ್ತದೆ. ಆದರೆ ಬಲರಾಮ ಮಾತ್ರ ನಿಶ್ಚಿಂತನಾಗಿ "ಹೆದರಬೇಡಿ, ಕೃಷ್ಣನಿಗೆ ಏನೂ ಆಗುವುದಿಲ್ಲ" ಎಂದು ಧೈರ್ಯ ಹೇಳುತ್ತಾನೆ. ಎಲ್ಲರೂ ಓಡಿಕೊಂಡು ನದಿತೀರಕ್ಕೆ ಬರುತ್ತಾರೆ. ಬಂದು ನೋಡಿದರೆ 'ಕಾಲಿಯ ಮನಮಾಣಿಕ್ಯ ರಂಜಿತ ಪದಾಂಭುಜನಾಗಿ' ಶ್ರೀಕೃಷ್ಣ ನಿಂತಿದ್ದಾನೆ! ಈ ರೀತಿ ಕಾಲಿಯನನ್ನು ಮಣಿಸಿ ಅವನನ್ನು ಅಲ್ಲಿಂದ ಕಳುಹಿಸಿ ಶ್ರೀಕೃಷ್ಣ ನದಿಯಿಂದ ಮೇಲೆ ಬರುತ್ತಾನೆ.

ಕೃಷ್ಣ ಹಾವಿನ ಹೆಡೆಯೇರಿ ನಿಂತಿದ್ದನ್ನು ಕಂಡು ಎಲ್ಲರೂ ವಿಸ್ಮಿತರಾಗುತ್ತಾರೆ. ಕೃಷ್ಣ ನದಿಯಿಂದ ಮೇಲೆ ಬರುವ ತನಕ ಅವರೆಲ್ಲರಿಗೂ ಭಯ. ಆದರೆ ಮೇಲೆ ಬಂದ ಕೃಷ್ಣ ಪ್ರಜ್ಞೆ ತಪ್ಪಿದ ಎಲ್ಲರನ್ನೂ ಎಚ್ಚರಿಸುತ್ತಾನೆ. ಆ ಸಮಯದಲ್ಲಿ ಆಗಲೇ ಕತ್ತಲಾಗಿರುತ್ತದೆ. ಹೀಗಾಗಿ ಕಾಡಿನ ದಾರಿಯಿಂದ ಹಿಂತಿರುಗಿ ಮನೆ ಸೇರುವುದು ಸಾಧ್ಯವಾಗದ ಕಾರಣ ಎಲ್ಲರೂ ಅಂದು ಅಲ್ಲೇ ತಂಗುವ ನಿರ್ಧಾರ ಮಾಡಿ ಅಲ್ಲೇ ಮಲಗುತ್ತಾರೆ. ಎಲ್ಲರಿಗೂ ನಿದ್ದೆ ಬಂದಿರುವ ಸಮಯದಲ್ಲಿ ಅವರಿದ್ದ ಸ್ಥಳದ ಸುತ್ತಲೂ ಕಾಳ್ಗಿಚ್ಚು ಆವರಿಸುತ್ತದೆ. ಆಗ ಗಾಬರಿಯಿಂದ ಎಚ್ಚರಗೊಂಡ ಎಲ್ಲರೂ ತಮ್ಮ ಕೊನೆಗಾಲ

ಸಮೀಪಿಸಿತು, ನಾವಿನ್ನು ಬದುಕುವುದಿಲ್ಲ ಎನ್ನುವ ಭಾವನೆಯಿಂದ ಭಯಭೀತರಾಗುತ್ತಾರೆ. "ಆಗ ಕೃಷ್ಣ ತೋರಿದ ಚಮತ್ಕಾರ ಎಲ್ಲರೂ ಸ್ತೋತ್ರಮಾಡಿ ನೆನೆದುಕೊಳ್ಳಬೇಕಾಗಿರುವಂಥಹದ್ದು" ಎಂದಿದ್ದಾನೆ ಚತುರ್ಮುಖ. ಕೃಷ್ಣ ಸುತ್ತಲೂ ಆವರಿಸಿರುವ ಬೆಂಕಿಯನ್ನು ತನ್ನ ಬಾಯಲ್ಲಿ ಸೇವಿಸಿ ಎಲ್ಲರನ್ನೂ ರಕ್ಷಿಸಿ ವೃಂದಾವನಕ್ಕೆ ಕರೆದುಕೊಂಡು ಹೋಗುತ್ತಾನೆ.

ಇನ್ನೊಮ್ಮೆ ಮುಂಜಾಟವಿ ಎನ್ನುವ ಹುಲ್ಲುಗಾವಲು ಪ್ರದೇಶದಲ್ಲಿ ಮನುಷ್ಯನ ಗಾತ್ರಕ್ಕಿಂತಲೂ ಎತ್ತರಕ್ಕೆ ಬೆಳೆದುನಿಂತ ಮೌಂಜಿ ಅಥವಾ ಮುಳಿ ಎನ್ನುವ ಹುಲ್ಲಿನ ನಡುವೆ ಗೋವುಗಳು ಸೇರಿಕೊಂಡಿರುವ ಸಮಯದಲ್ಲಿ ಅವುಗಳನ್ನು ಹುಡುಕುತ್ತಾ/ಕರೆಯುತ್ತಾ ಹೋಗುತ್ತಿದ್ದ ಗೋಪಾಲಕರು ಸುತ್ತಲೂ ಆವರಿಸಿರುವ ಕಾಳ್ಗಿಚ್ಚನ್ನು ಕಂಡು ಭಯಭೀತರಾಗುತ್ತಾರೆ. ಆಗ ಶ್ರೀಕೃಷ ಎಲ್ಲರ ಬಳಿ ಕಣ್ಣುಮುಚ್ಚುವಂತೆ ಹೇಳುತ್ತಾನೆ. ಈ ರೀತಿ ಕಣ್ಮುಚ್ಚಿ ತೆರೆದಾಗ ಅಲ್ಲಿ ಯಾವ ಬೆಂಕಿಯೂ ಇರುವುದಿಲ್ಲ. ಈ ರೀತಿ ಎರಡು ಬಾರಿ ಭಗವಂತ ಅಗ್ನಿಪಾನ ಮಾಡಿ ಸೃಷ್ಟಿ ಆದಿಯಲ್ಲಿ ತನ್ನ ಮುಖದಿಂದ ಅಗ್ನಿ ಸೃಷ್ಟಿಯಾಯಿತು ಎನ್ನುವುದನ್ನು ಎಲ್ಲರಿಗೂ ತೋರಿದ.

ಗೃಹ್ಣೀತ ಯದ್ಯದುಪಬದ್ಧುಮಮುಷ್ಯ ಮಾತಾ ಶುಲ್ಬಂ ಸುತಸ್ಯ ನತು ತತ್ತದಮುಷ್ಯ ಮಾತಿ ।
ಯಜ್ಜೃಂಭತೋSಸ್ಯ ವದನೇ ಭುವನಾನಿ ಗೋಪೀ ಸಂವೀಕ್ಷ್ಯ ಶಂಕಿತಮನಾಃ ಪ್ರತಿಬೋಧಿತಸ್ಯ ॥೩೦॥

ಒಮ್ಮೆ ಯಶೋದೆ ಕೃಷ್ಣನನ್ನು ಕಟ್ಟಿ ಹಾಕಬೇಕು ಎಂದು ಹಗ್ಗ ತರುತ್ತಾಳೆ. ಆದರೆ ಯಾವ ಹಗ್ಗದಿಂದಲೂ ಆಕೆಗೆ ಕೃಷ್ಣನನ್ನು ಕಟ್ಟಲು ಸಾಧ್ಯವಾಗುವುದಿಲ್ಲ. ಎಲ್ಲಾ ಹಗ್ಗವೂ ಕೂಡಾ  ಕೃಷ್ಣನ ಮುಂದೆ ಚಿಕ್ಕದಾಗುತ್ತದೆ. ಆಚಾರ್ಯ ಮಧ್ವರು ಈ ಘಟನೆಯನ್ನು ತಮ್ಮ ಯಮಕ ಭಾರತದಲ್ಲಿ "***ತನ್ಮಾತಾ ಕೋಪವಿತಾ ತಮನುಸಸಾರಾತ್ಮ-ವಾದವಾಕೋಪಮಿತ...***" ಎಂದು ಬಹಳ ಸುಂದರವಾಗಿ ವಿವರಿಸಿದ್ದಾರೆ. ಭಗವಂತನ ಗುಣಗಾನ ಮಾಡಲು ಶ್ರುತಿವಾಣಿ ಹೇಗೆ ಅವನ ಹಿಂದೆ ಓಡುತ್ತವೋ ಹಾಗೇ, ತಾಯಿ ಯಶೋದೆ ಕೃಷ್ಣನ ತುಂಟತನಕ್ಕೆ ಕೋಪಗೊಂಡು ಆತನ ಬೆನ್ನ ಹಿಂದೆ ಓಡಿದಳಂತೆ. ಆದರೆ ಅವಳಿಗೆ ಕೃಷ್ಣನನ್ನು ಕಟ್ಟಿ ಹಾಕಲು ಸಾಧ್ಯವಾಗಲಿಲ್ಲ. ಇದರಿಂದ ಕೃಷ್ಣ ತಾನು ಅನಂತ ಎನ್ನುವುದನ್ನು ತಾಯಿಗೆ ತೋರಿದ. (ಆನಂತರ ತಾಯಿಯ ಮೇಲಿನ ಪ್ರೀತಿಯಿಂದ ಕೃಷ್ಣ ತಾನೇ ತಾಯಿಯ ಕೈಯಿಂದ ತನ್ನನ್ನು ಕಟ್ಟಿಸಿಕೊಂಡ).

ಒಮ್ಮೆ ತಾಯಿಯ ತೊಡೆಯ ಮೇಲೆ ಮಲಗಿದ್ದ ಕೃಷ್ಣ  ಆಕಳಿಸುತ್ತಾನೆ. ಆಗ ಆತನ ಬಾಯಿಯಲ್ಲಿ ಯಶೋದೆ ಇಡೀ ವಿಶ್ವವನ್ನೇ ಕಾಣುತ್ತಾಳೆ. ಮಗುವಿನ ಪುಟ್ಟ ಬಾಯಿಯಲ್ಲಿ ತನ್ನನ್ನೂ ಸೇರಿ ಇಡೀ ವಿಶ್ವವನ್ನು ಕಂಡ ಯಶೋದೆ ಗಾಬರಿಯಾಗುತ್ತಾಳೆ. "ಇದು ಕೇವಲ ನನ್ನ ಮಗನಲ್ಲ. ಇದೊಂದು ದಿವ್ಯ ಶಕ್ತಿ" ಎನ್ನುವ ಅರಿವು ಅವಳಿಗಾಗುತ್ತದೆ. ಆದರೆ ಮರುಕ್ಷಣದಲ್ಲೇ ಕೃಷ್ಣ "ನನ್ನ ಮಗು" ಎಂದು ಕೃಷ್ಣನನ್ನು ಮುದ್ದಿಸುತ್ತಾಳೆ ತಾಯಿ!

ಇನ್ನೊಮ್ಮೆ ಕೃಷ್ಣ ಮಣ್ಣು ತಿನ್ನುತ್ತಿದ್ದಾನೆ ಎಂದು ಗೋಪಬಾಲಕರು ತಾಯಿ ಯಶೋದೆಗೆ ತಿಳಿಸುತ್ತಾರೆ. ಆದರೆ ಮಣ್ಣು ತಿಂದಿದ್ದ ಕೃಷ್ಣ ತಾಯಿಯಲ್ಲಿ "ತಾನು ಮಣ್ಣು ತಿಂದಿಲ್ಲ" ಎಂದು ಸುಳ್ಳು ಹೇಳುತ್ತಾನೆ. ಇದರಿಂದ ಕೋಪಗೊಂಡ ಯಶೋದೆ ಆತನಲ್ಲಿ ಬಾಯಿ ತೆರೆದು ತೋರಿಸುವಂತೆ ಹೇಳುತ್ತಾಳೆ. ಆಗ ಕೃಷ್ಣ ಎರಡನೇ ಬಾರಿ ಯಶೋದೆಗೆ  ತನ್ನ ಬಾಯಿಯಲ್ಲಿ ವಿಶ್ವರೂಪ ದರ್ಶನ ನೀಡುತ್ತಾನೆ. ಕೃಷ್ಣಾವತಾರದಲ್ಲಿ ಭಗವಂತ ತಾಯಿ ಯಶೋದೆಗಲ್ಲದೆ ಧೃತರಾಷ್ಟ್ರ, ಉದಂಕ ಮತ್ತು ಅರ್ಜುನನಿಗೂ ವಿಶ್ವರೂಪ ದರ್ಶನ ನೀಡಿರುವುದನ್ನು ಮಹಾಭಾರತ ತಿಳಿಸುತ್ತದೆ. ಆದರೆ ಪ್ರತಿಯೊಂದು ವಿಶ್ವರೂಪ ದರ್ಶನವೂ ಅವರವರ ಅರ್ಹತೆಗನುಗುಣವಾಗಿ ತೆರೆದುಕೊಂಡಿದೆ. ಅರ್ಜುನ ಕಂಡ

ವಿಶ್ವರೂಪ ಬಹಳ ಘನವಾದುದು. ತಾಯಿ ಯಶೋದೆಗೆ ತನ್ನೊಳಗೆ ತುಂಬಿರುವ ವಿಶ್ವವನ್ನು ತೋರಿದ ಕೃಷ್ಣ, ಅರ್ಜುನನಿಗೆ ಒಳಗೂ ಹೊರಗೂ ತಾನು ತುಂಬಿರುವುದನ್ನು ತೋರಿದ. ಒಟ್ಟಿನಲ್ಲಿ ಎಲ್ಲರೊಳಗೂ ಭಗವಂತನಿದ್ದಾನೆ, ಭಗವಂತನೊಳಗೆ ಎಲ್ಲವೂ ಇದೆ ಎನ್ನುವುದನ್ನು ಕೃಷ್ಣ ತನ್ನ ವಿಶ್ವರೂಪ ದರ್ಶನದಲ್ಲಿ ತೋರಿದ.

**ನಂದಂ ಚ ಮೋಕ್ಷ್ಯತಿ ಭಯಾದ್ ವರುಣಸ್ಯ ಪಾಶಾದ್ ಗೋಪಾನ್ ಬಿಲೇಷು ಪಿಹಿತಾನ್ ಮಯಸೂನುನಾ ಚ ।**
**ಜಲ್ಪ್ಯಾವೃತಂ ನಿಶಿ ಶಯಾನಮತಿಶ್ರಮೇಣ ಲೋಕೇ ವಿಕುಂಠ ಉಪಧಾಸ್ಯತಿ ಗೋಕುಲಂ ಸ್ಮಃ ॥೩೦॥**

ಒಮ್ಮೆ ನಂದಗೋಪ ಏಕಾದಶಿಯ ಉಪವಾಸ ಮುಗಿಸಿ ದ್ವಾದಶಿಯ ದಿನದಂದು ಬೆಳಿಗ್ಗೆ ಸ್ನಾನಕ್ಕೆಂದು ಹೋದವನು ಹಿಂದಿರುಗಿ ಬರುವುದಿಲ್ಲ. ಅಲ್ಲಿ ವರುಣನ ಸೇವಕನಾಗಿರುವ ಒಬ್ಬ ರಾಕ್ಷಸ ಆತನಿಗೆ ಪಾಶವನ್ನು ಹಾಕಿ ಆತನನ್ನು ವರುಣ ಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ. ಇತ್ತ ನಂದಗೋಪ ಕಾಣೆಯಾಗಿರುವುದರಿಂದ ಎಲ್ಲರಿಗೂ ಗಾಬರಿ. ಆದರೆ ಕೃಷ್ಣ ಎಲ್ಲರನ್ನೂ ಸಮಾಧಾನಗೊಳಿಸಿ ತಾನೂ ನಂದಗೋಪ ಕಾಣೆಯಾದ ಸ್ಥಳದಲ್ಲೇ ನೀರಿಗೆ ದುಮುಕಿ ನೇರವಾಗಿ ವರುಣಲೋಕಕ್ಕೆ ಬರುತ್ತಾನೆ. ಅಲ್ಲಿ ವರುಣ ಕೃಷ್ಣನ ಕಾಲಿಗೆ ಬಿದ್ದು ಕ್ಷಮೆ ಕೇಳಿ ನಂದಗೋಪನನ್ನು ಅರ್ಪಿಸುತ್ತಾನೆ. ಕೃಷ್ಣ ನಂದಗೋಪನೊಂದಿಗೆ ನೀರಿನಿಂದ ಮೇಲೆದ್ದು ಬಂದಿದ್ದನ್ನು ಕಂಡು ಎಲ್ಲರೂ ಸಂಭ್ರಮಿಸುತ್ತಾರೆ.
ಇನ್ನೊಮ್ಮೆ ನಂದಗೋಪ ಕಾಡಿನಲ್ಲಿ ಹೋಗುತ್ತಿರುವಾಗ ಒಂದು ಹೆಬ್ಬಾವು ಆತನನ್ನು ಹಿಡಿದು ನುಂಗಲಾರಂಭಿಸುತ್ತದೆ. ಇದನ್ನು ಕಂಡ ಜನ ಗಾಬರಿಯಾಗಿ ಕೃಷ್ಣನಿಗೆ ವಿಷಯ ತಿಳಿಸುತ್ತಾರೆ. ಕೃಷ್ಣ ಆ ಹಾವನ್ನು ಸೀಳಿ ನಂದಗೋಪನನ್ನು ಬಿಡಿಸುತ್ತಾನೆ. ಕೃಷ್ಣ ಹೆಬ್ಬಾವಿನ ದೇಹವನ್ನು ಸೀಳಿದಾಗ ಅಲ್ಲಿ ಹೆಬ್ಬಾವು ಕಣ್ಮರೆಯಾಗಿ ಒಬ್ಬ ಸುಂದರನಾದ ಯುವಕ ಪ್ರತ್ಯಕ್ಷನಾಗುತ್ತಾನೆ. ಆತನೇ ಶಾಪಗ್ರಸ್ಥನಾಗಿ ಹೆಬ್ಬಾವಿನ ರೂಪದಲ್ಲಿದ್ದ ವಿಧ್ಯಾಧರ ಸುದರ್ಶನ. ಕೃಷ್ಣ ಆತನ ಶಾಪ ವಿಮೋಚನೆ ಮಾಡಿ ಬಿಡುಗಡೆ ನೀಡುತ್ತಾನೆ.
ಒಮ್ಮೆ ಅಸುರಶಿಲ್ಪಿ ಮಾಯಾನ ಮಗ ವ್ಯೋಮ ಆಟವಾಡುತ್ತಿರುವ ಗೋಪಬಾಲಕರೊಬ್ಬೊಬ್ಬರನ್ನೇ ಅಪಹರಿಸಿ ಪರ್ವತದ ಬಿಲದೊಳಗೆ ಅವಿಸಿ ಇಡುತ್ತಿದ್ದ. ಆಟವಾಡುತ್ತಿದ್ದ ಬಾಲಕರ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತಿರುವುದನ್ನು ಗಮನಿಸಿದ ಕೃಷ್ಣ ಆ ಅಸುರನನ್ನು ಬೆನ್ನಟ್ಟಿ ಆತನ ಸಂಹಾರ ಮಾಡಿ ಗೋಪಬಾಲಕರನ್ನು ಬಿಡುಗಡೆಗೊಳಿಸುತ್ತಾನೆ.
ಒಮ್ಮೆ ಒಂದು ಅತ್ಯದ್ಭುತವಾದ ಘಟನೆ ನಡೆಯುತ್ತದೆ. ಗೋಕುಲದಲ್ಲಿನ ಜನರು ಶಾಸ್ತ್ರ ಜ್ಞಾನ ಉಳ್ಳವರಾಗಿರಲಿಲ್ಲ. ಇಂತಹ ಜನರಿಗೆ ಒಂದು ಯೋಚನೆ ಬರುತ್ತದೆ. ಅದೇನೆಂದರೆ: "ಕೃಷ್ಣ ಮನಸ್ಸು ಮಾಡಿದರೆ ನಮಗೆ ವೈಕುಂಠ ದರ್ಶನ ಮಾಡಿಸಬಲ್ಲ" ಎನ್ನುವ ಯೋಚನೆ. ಜೀವನದ ಜಂಜಡದಲ್ಲಿ ಬಿದ್ದು ಶಾಸ್ತ್ರದ ಅರಿವಿಲ್ಲದೇ ಬೆಳೆದ ಸಾಮಾನ್ಯ ಜನರ ಅಪೇಕ್ಷೆಯನ್ನು ವೈಕುಂಠ ದರ್ಶನ ನೀಡಿ ಕೃಷ್ಣ ಈಡೇರಿಸುತ್ತಾನೆ. ಇಲ್ಲಿ ನಮಗೆ ತಿಳಿಯುವುದೇನೆಂದರೆ ಭಗವಂತನ ಪ್ರೀತಿಗೆ ಪಾತ್ರರಾಗಲು ಮೊದಲು ನಮ್ಮಲ್ಲಿರಬೇಕಾದ ಗುಣ ಮುಗ್ಧತೆ. ಇದನ್ನು ಬಿಟ್ಟು ಶಾಸ್ತ್ರ ತಿಳಿದಿದೆ ಎಂದು ಅಹಂಕಾರ ಪಟ್ಟರೆ ಭಗವಂತನ ದರ್ಶನ ಸಾಧ್ಯವಿಲ್ಲ.
ಹೀಗೆ ಇನ್ನ್ಯಾವುದೇ ಅವತಾರದಲ್ಲಿ ತೋರದ ಅಸಾಮಾನ್ಯ ಮಹಿಮೆಯನ್ನು ಸಾಮಾನ್ಯ ಜನರಿಗೆ ತೋರಿದ ಭಗವಂತನ ವಿಶೇಷ ಅವತಾರ ಕೃಷ್ಣಾವತಾರ. ಕೃಷ್ಣಾವತಾರದಲ್ಲಿ ಭಗವಂತ ಮನುಷ್ಯರೂಪದಲ್ಲಿದ್ದು, ಅತಿಮಾನುಷ ಲೀಲೆಗಳನ್ನು ತೋರಿದ. [ಇಲ್ಲಿ ನಾರದರಿಗೆ ಕೃಷ್ಣಾವತಾರವನ್ನು ವಿವರಿಸುತ್ತಿರುವ ಚತುರ್ಮುಖ "ಭಗವಂತ ಕೃಷ್ಣ ರೂಪಿಯಾಗಿ ಬಂದು ಈ ಎಲ್ಲಾ ಲೀಲೆಗಳನ್ನು ತೋರಲಿದ್ದಾನೆ" ಎಂದು ಭೂತಕಾಲದಲ್ಲಿ ಭವಿಷ್ಯತ್ ಕಾಲವನ್ನು ವಿವರಿಸಿರುವುದನ್ನು ಕಾಣುತ್ತೇವೆ. ಏಕೆಂದರೆ ನಾರದ ಚತುರ್ಮುಖ ಸಂವಾದ ನಡೆದದ್ದು ಕೃಷ್ಣಾವತಾರಕ್ಕೂ ಮೊದಲು.

ಹೀಗಾಗಿ ಮುಂದೆ ನಡೆಯಲಿರುವ ಭಗವಂತನ ಅವತಾರ ವಿವರಣೆಯನ್ನು ಮೊದಲೇ ಚತುರ್ಮುಖ ನಾರದರಿಗೆ ವಿವರಿಸಿದ್ದಾನೆ ಎನ್ನುವುದನ್ನು ಓದುಗರು ತಿಳಿಯಬೇಕು]

**ಗೋಪ್ಯೈರ್ಮಖೇ ಪ್ರತಿಹತೇ ವ್ರಜವಿಪ್ಲವಾಯ ದೇವೇSಭಿವರ್ಷತಿ ಪಶೂನ್ ಕೃಪಯಾ ರಿರಕ್ಷುಃ ।**
**ಧರ್ತೋಚ್ಛಿಲೀಂಧ್ರಮಿವ ಸಪ್ತದಿನಾನಿ ಸಪ್ತ ವರ್ಷೋ ಮಹೀಧ್ರಮನಘೈಕಕರೇ ಸಲೀಲಮ್ ॥೩೨॥**

ಶ್ರೀಕೃಷ್ಣನ ಗೋವರ್ಧನ ಗಿರಿ ಧಾರಣೆ ಪ್ರಸಂಗ ಅತ್ಯಂತ ರೋಚಕ. ಪ್ರತೀ ವರ್ಷದಂತೆ ಗೋಪಾಲಕರು ಇಂದ್ರಪೂಜೆಯ ಸಿದ್ಧತೆ ನಡೆಸುತ್ತಿದ್ದರು. ಸುಮಾರು ಆರು ವರ್ಷಗಳ ಕಾಲ ಇಂದ್ರ ಪೂಜೆಯನ್ನು ನೋಡಿಯೂ ಅದರ ಬಗ್ಗೆ ಏನೂ ಹೇಳದ ಶ್ರೀಕೃಷ್ಣ ಈ ಬಾರಿ "ಏಕೆ ಇಂದ್ರ ಪೂಜೆ ಮಾಡುತ್ತಿದ್ದೀರಿ" ಎಂದು ಕೇಳುತ್ತಾನೆ. ಅದಕ್ಕೆ ಗೋಪಾಲಕರು : "ನಾವು ಜೀವನ ಸಾಗಿಸುವುದು ಹಾಲನ್ನು ಮಾರಿ; ಹಾಲು ಕೊಡುವ ಹಸುಗಳನ್ನು ಸಾಕಲು ಹುಲ್ಲು ಬೇಕು; ಈ ಹುಲ್ಲು ಬೆಳೆಯಲು ಮಳೆ ಅತ್ಯಾವಶ್ಯಕ. ಹೀಗಾಗಿ ಮಳೆ ನೀಡುವ ಇಂದ್ರನನ್ನು ಪ್ರತೀ ವರ್ಷವೂ ಹೀಗೇ ಪೂಜಿಸುತ್ತೇವೆ" ಎಂದು ಉತ್ತರಿಸುತ್ತಾರೆ. ಇದನ್ನು ಕೇಳಿದ ಕೃಷ್ಣ : "ನಿಮಗೆ ಹಾಲನ್ನು ಕೊಡುವುದು ಹಸು. ಮೊದಲು ನಾವು ಅದನ್ನು ಪೂಜಿಸಬೇಕು. ಆ ಹಸುವಿಗೆ ಹುಲ್ಲು ನೀಡುವುದು ಪರ್ವತ. ಆ ಪರ್ವತವನ್ನು ನಾವು ಪೂಜಿಸಬೇಕು. ಇದನ್ನು ಬಿಟ್ಟು ಇಂದ್ರನನ್ನು ಏಕೆ ಪೂಜಿಸುತ್ತಿರುವಿರಿ? ನಮ್ಮ ಯೋಗ್ಯತೆಗಿಂತ ಹೆಚ್ಚಿಗೆ ಕೊಡುವ ಯೋಗ್ಯತೆ ಇಂದ್ರನಿಗಿಲ್ಲ. ನಾವು ಏನನ್ನು ಪಡೆದು ಬಂದಿದ್ದೇವೋ ಅದನ್ನು ಖಂಡಿತ ಪಡೆದೇ ಪಡೆಯುತ್ತೇವೆ. ಹೀಗಿರುವಾಗ ಇಂದ್ರನ ಪೂಜೆ ಏಕೆ? ಗೋಪೂಜೆ ಮತ್ತು ಗೋವರ್ದನ ಗಿರಿ ಪೂಜೆ ನನಗೂ ಇಷ್ಟ" ಎನ್ನುತ್ತಾನೆ. ಕೃಷ್ಣನ ಈ ಮಾತು ಗೋಪಾಲಕರಿಗೂ ಸರಿ ಎಂದು ಕಾಣಿಸುತ್ತದೆ. ಅವರು ಕೃಷ್ಣನ ಮಾತಿನಂತೆ ಇಂದ್ರನ ಪೂಜೆಯ ಬದಲಾಗಿ ಗೋ-ಪೂಜೆ ಮತ್ತು ಗೋವರ್ದನ ಗಿರಿ ಪೂಜೆಯನ್ನು ಅದರ ಅಂತರ್ಯಾಮಿ ಭಗವಂತನ ಪೂಜೆಯನ್ನಾಗಿ ಮಾಡಿ ಸಂಭ್ರಮಿಸುತ್ತಾರೆ.

ವಾಸ್ತವಿಕವಾಗಿ ಇಲ್ಲಿ ನಾವು ಮಹತ್ತ್ವದ ಸಂಗತಿಯೊಂದನ್ನು ಗಮನಿಸಬೇಕು. ಮನುಷ್ಯ ಮೊದಲು ಕುಡಿಯುವುದು ತಾಯಿಯ ಹಾಲನ್ನಾದರೆ ನಂತರ ಕುಡಿಯುವುದು ಗೋವಿನ ಹಾಲನ್ನು. ಹೀಗಾಗಿ ಗೋವು ನಮ್ಮ ತಾಯಿ ಸಮಾನ. ಇದಲ್ಲದೇ ಹಿಂದೆ ಗೋವನ್ನು ದೇಶದ ಸಂಪತ್ತಾಗಿ ವಿನಿಯೋಗಕ್ಕೂ ಬಳಸುತ್ತಿದ್ದರು. ಈ ಹಿಂದೆ ಹೇಳಿದಂತೆ ಮಲ-ಮೂತ್ರ ಕೂಡಾ ಗ್ರಾಹ್ಯವಾಗಿರುವ ಏಕೈಕ ಪ್ರಾಣಿ ಗೋವು. ಇಂತಹ ಮಾತೃಸ್ಥಾನೀಯವಾಗಿರುವ ಗೋವನ್ನು ಪೂಜಿಸುವುದರಿಂದ ಅದರೊಳಗೆ ವಿಭೂತಿ ರೂಪಿಯಾಗಿ ನಿಂತಿರುವ ಅಂತರ್ಯಾಮಿ ಭಗವಂತ ಪ್ರಸನ್ನನಾಗುತ್ತಾನೆ. ಕಣ್ಣಿಗೆ ಕಾಣದ ಅವಾಂತರ ದೇವತೆಗಳ ಪೂಜೆಗಿಂತ ಕಣ್ಣಿಗೆ ಕಾಣುವ ಅಪೂರ್ವ ಪ್ರತೀಕಗಳಲ್ಲಿ ಭಗವಂತನನ್ನು ಕಂಡು ಪೂಜಿಸುವುದು ಶ್ರೇಷ್ಠ ಎನ್ನುವ ಅಪೂರ್ವ ಸಂದೇಶವನ್ನು ಕೃಷ್ಣ ಇಲ್ಲಿ ನೀಡಿದ್ದಾನೆ. ಈ ರೀತಿ ಶ್ರೀಕೃಷ್ಣ ಈ ದೇಶದಲ್ಲಿ ಮೊತ್ತಮೊದಲು ಗೋಪೂಜೆಯನ್ನು ಪ್ರಾರಂಭಿಸಿದ.

ಶ್ರೀಕೃಷ್ಣನಿಂದಾಗಿ ಇಂದ್ರ ಪೂಜೆ ನಿಂತು ಹೋದಾಗ ಇಂದ್ರನಿಗೆ ಕೋಪ ಬರುತ್ತದೆ[ಶ್ರೀಕೃಷ್ಣನ ಮಹಿಮೆಯನ್ನು ತೋರುವುದಕ್ಕಾಗಿಯೇ ಇಂದ್ರ ಈ ರೀತಿ ನಟಿಸಿದ ಎನ್ನಬಹುದು]. ಪ್ರತೀಕಾರವಾಗಿ ಆತ ನಿರಂತರ ಏಳು ದಿನ ಮಳೆ ಸುರಿಸುತ್ತಾನೆ. ಆಗ ಶ್ರೀಕೃಷ್ಣ ಬೆಟ್ಟವನ್ನು ಕೊಡೆಯಂತೆ ಎತ್ತಿ ಹಿಡಿದು ಸಮಸ್ತ ಗೋಕುಲವಾಸಿಗಳ ರಕ್ಷಣೆ ಮಾಡುತ್ತಾನೆ. ಈ ಘಟನೆಯ ನಂತರ ಎಲ್ಲರಿಗೂ ಕೃಷ್ಣನ ಮೇಲಿನ ಭಯ-ಭಕ್ತಿ ಹೆಚ್ಚುತ್ತದೆ.

**ಕ್ರೀಡನ್ ವನೇ ನಿಶಿ ನಿಶಾಕರರಶ್ಮಿಗೌರ್ಯಾಂ ರಾಸೋನ್ಮುಖಃ ಕಳಪದಾಯತಮೂರ್ಛಿತೇನ ।**
**ಉದ್ದೀಪಿತಸ್ಮರರುಜಾಂ ವ್ರಜಸದ್ವಧೂನಾಂ ಹರ್ತುರ್ಹರಿಷ್ಯತಿ ಶಿರೋ ಧನದಾನುಗಸ್ಯ ॥೩೩॥**

ಭಕ್ತಿಗೆ ಅನೇಕ ಮುಖಗಳಿವೆ. ಹೆಣ್ಣು 'ಭಗವಂತ ನನ್ನ ಗಂಡನಾಗಬೇಕು' ಎಂದು ಬಯಸುವುದೂ ಭಕ್ತಿಯ ಒಂದು ಮುಖ. ಕೃಷ್ಣ ಸುಮಾರು ಏಳು ವರ್ಷದವನಿದ್ದಾಗ ಆತನ ಸೌಂದರ್ಯಕ್ಕೆ ಸಮಸ್ತ ಗೋಪಾಲಕರ ಪತ್ನಿಯರು ಮನಸೋಲುತ್ತಾರೆ. ಅವರಿಗೆ ಕೃಷ್ಣ ತಮ್ಮ ಪತಿಯಾಗಬೇಕು ಎನ್ನುವಷ್ಟು ಕೃಷ್ಣನ ಮೇಲೆ ಪ್ರೀತಿ. ಕೃಷ್ಣನೂ ಕೂಡಾ ಅವರಲ್ಲಿ ಆ ಭಾವನೆ ಬರುವಂತೆ ಮಾಡುತ್ತಾನೆ. ಆತ ಹುಣ್ಣಿಮೆಯ ರಾತ್ರಿ ಹಾಲು ಚೆಲ್ಲಿದಂತೆ ತುಂಬಿರುವ ಬೆಳದಿಂಗಳಲ್ಲಿ ಕಾಡಿನಲ್ಲಿ ಕುಳಿತು ಸಪ್ತಸ್ವರಗಳ ಸಮ್ಮಿಲನದಿಂದ ಕೂಡಿದ (ಆಯತಮೂರ್ಛನ ) ವೇಣುನಾದ ಮಾಡುತ್ತಿದ್ದ. ಇದರಿಂದ ಎಲ್ಲಾ ಗೋಪಿಕಾ ಸ್ತ್ರೀಯರು ಪ್ರೇಮಾಂಕುರಗೊಂಡು ಮನೆಯಿಂದ ಹೊರ ಬಂದು ಕೃಷ್ಣನೊಂದಿಗೆ ರಾಸ ನೃತ್ಯದಲ್ಲಿ ಪಾಲ್ಗೊಳ್ಳುತ್ತಿದ್ದರು. "ಕೃಷ್ಣ ತಾನೂ ಅವರೊಂದಿಗೆ ಕುಣಿದು ಅವರನ್ನು ನಲಿದಾಡಿಸಿ ಆನಂದದ ಹೊಳೆ ಹರಿಸುತ್ತಿದ್ದ" ಎನ್ನುತ್ತಾನೆ ಚತುರ್ಮುಖ.

ಕೃಷ್ಣನ ಈ ನಡೆಯ ಬಗ್ಗೆ ಕೆಲವರು ಆಕ್ಷೇಪ ವ್ಯಕ್ತಪಡಿಸುತ್ತಾರೆ. ಆದರೆ ಇಲ್ಲಿ ನಾವು ತಿಳಿದುಕೊಳ್ಳಬೇಕಾದ ಅಂಶ ಏನೆಂದರೆ: ಕೃಷ್ಣ ಗೋಪಿಕೆಯರ ಜೊತೆಗೆ ರಾಸಲೀಲೆ ಮಾಡುತ್ತಿದ್ದಾಗ ಆತನ ವಯಸ್ಸು ಕೇವಲ ಏಳು ವರ್ಷ. ಇನ್ನು ಕೃಷ್ಣನ ಜೊತೆಗೆ ನೃತ್ಯ ಮಾಡುತ್ತಿದ್ದವರು ನಡತೆಗೆಟ್ಟ ಹೆಣ್ಣುಮಕ್ಕಳಲ್ಲ. ಅವರು ಗೋಪಾಲಕರ ಪತ್ನಿಯರು ಮತ್ತು ಅವರನ್ನು ಚತುರ್ಮುಖ ಇಲ್ಲಿ '*ಸದ್ವಧು*'ಗಳೆಂದು ಕರೆದಿದ್ದಾನೆ. ಅವರಲ್ಲಿ ಅಂಕುರಿಸಿದ ಕಾಮ 'ಭಗವಂತನ ಕಾಮ'. ಹೀಗಾಗಿ ಅವರ ಗಂಡಂದಿರೂ ಕೂಡಾ ಅವರ ಪತ್ನಿಯರ ಕೃಷ್ಣಪ್ರೇಮವನ್ನು ವಿರೋಧಿಸಲಿಲ್ಲ. ಹೀಗಿರುವಾಗ ಈ ಘಟನೆಯನ್ನು ನಾವು ವಿರೋಧಿಸುವುದು ಅರ್ಥಶೂನ್ಯ! ಜೀವನದಲ್ಲಿ ಭಗವದ್ ಪ್ರಜ್ಞೆಯಿಂದ ಕುಣಿದು ನಲಿದು ಬದುಕನ್ನು ಪಾವನಗೊಳಿಸಿಕೊಳ್ಳಿ ಎನ್ನುವ ಸಂದೇಶವನ್ನು ಇಲ್ಲಿ ಕೃಷ್ಣ ನಮಗೆ ನೀಡಿದ್ದಾನೆ.

ಈ ರೀತಿ ಶ್ರೀಕೃಷ್ಣ ಗೋಪಿಕೆಯರ ಜೊತೆ ನೃತ್ಯ ಮಾಡುತ್ತಿರುವ ಸಮಯದಲ್ಲಿ ಕುಬೇರನ ಅನುಚರನಾದ ಶಂಖಚೂಡ ಎನ್ನುವ ಒಬ್ಬ ಅಸುರ ನೃತ್ಯ ಮಾಡುತ್ತಿರುವ ಸ್ತ್ರೀಯರನ್ನು ಅಪಹರಿಸುತ್ತಾನೆ. "ಇದನ್ನು ಅರಿತ ಶ್ರೀಕೃಷ್ಣ ಶಂಖಚೂಢನನ್ನು ಬೆನ್ನಟ್ಟಿ ಆತನ ಶಿರಸ್ಸನ್ನೇ ಅಪಹರಿಸಿದ" ಎನ್ನುತ್ತಾನೆ ಚತುರ್ಮುಖ.

**ಯೇ ಚ ಪ್ರಲಂಬಖರದರ್ದುರಕೇಶ್ಯರಿಷ್ಟ ಮಲ್ಲೇಭಕಂಸಯವನಾಃ ಕುಜಪೌಂಡ್ರಕಾದ್ಯಾಃ ।**
**ಅನ್ಯೇSಪಿ ಸಾಲ್ವಕಪಿವಲ್ಕಲದಂತವಕ್ರ ಸಪ್ತೋಕ್ಷಶಂಬರವಿಡೂರಥರುಗ್ಮಿಮುಖ್ಯಾಃ ॥೩೪॥**

ಕೃಷ್ಣನ ಬಾಲ ಲೀಲೆಗಳ ಅನೇಕ ಮುಖಗಳನ್ನು ವಿವರಿಸಿದ ಚತುರ್ಮುಖ ಇಲ್ಲಿ ಅವತಾರದಲ್ಲಿ ಕೃಷ್ಣ ಮಾಡಿರುವ ಪ್ರಮುಖ ದುಷ್ಟ ಸಂಹಾರದ ಪಟ್ಟಿ ನೀಡಿದ್ದಾನೆ.

೧.ಪ್ರಲಂಭ: ಈತ ಒಬ್ಬ ಅಸುರ. ಅವನು ಕೃಷ್ಣ-ಬಲರಾಮರು ಗೋಪಬಾಲಕರ ಜೊತೆಗೆ ಆಟವಾಡುತ್ತಿರುವಾಗ ತಾನೂ ಗೋಪಬಾಲಕನ ವೇಷ ಧರಿಸಿ ಆಟವಾಡುತ್ತಾನೆ. ಆಟದ ನಿಯಮದಂತೆ ಯಾರು ಸೋಲುತ್ತಾರೋ ಅವರು ಗೆದ್ದವರನ್ನು ಹೊತ್ತುಕೊಂಡು ಹೋಗಬೇಕು. ಪ್ರಲಂಭ ಬಲರಾಮನ ಜೊತೆ ಆಟವಾಡುತ್ತಾ ಆತನಿಗೆ ಸೋಲುತ್ತಾನೆ. ನಂತರ ಬಲರಾಮನನ್ನು ಹೊತ್ತುಕೊಂಡು ಓಡಲು ಪ್ರಾರಂಭಿಸುತ್ತಾನೆ. ಇದರಿಂದ ಬಲರಾಮ ಗಾಭರಿಗೊಳ್ಳುತ್ತಾನೆ.

ಆಗ ಕೃಷ್ಣ "ಭಯಪಡಬೇಡ, ನೀನು ಯಾರು ಎನ್ನುವುದನ್ನು ನೆನಪಿಸಿಕೋ" ಎಂದು ಸನ್ನೆ ಮಾಡುತ್ತಾನೆ. ಆಗ ಬಲರಾಮನಿಗೆ ತನ್ನ ಮೂಲರೂಪದ ನೆನಪಾಗುತ್ತದೆ ಮತ್ತು ಆತ ಪ್ರಲಂಭನನ್ನು ಸಂಹಾರ ಮಾಡುತ್ತಾನೆ. ಈ ರೀತಿ ಬಲರಾಮನೊಳಗಿದ್ದು ಪ್ರಲಂಭನನ್ನು ಕೃಷ್ಣ ಸಂಹಾರ ಮಾಡಿಸುತ್ತಾನೆ.

**೨.ಖರ:** ಕಾಡಿನಲ್ಲಿ ಒಮ್ಮೆ ತಾಳೆಕಣ್ಣು ಇರುವ ಪ್ರದೇಶದಲ್ಲಿ ಕೃಷ್ಣ-ಬಲರಾಮರ ಜೊತೆಗಿದ್ದ ಗೋಪಾಲಕರು ಆ ಹಣ್ಣನ್ನು ಕಂಡು ಅದನ್ನು ಮರದಿಂದ ಕಿತ್ತು ತಿನ್ನ ಬಯಸುತ್ತಾರೆ. ಅಷ್ಟರಲ್ಲಿ ಆ ಪ್ರದೇಶದಲ್ಲಿ ವಾಸವಾಗಿದ್ದ ಖರ ಎನ್ನುವ ಅಸುರ ತನ್ನ ಪಡೆಯೊಂದಿಗೆ ಕತ್ತೆಯ ರೂಪದಲ್ಲಿ ಬಂದು ಎಲ್ಲರನ್ನೂ ತುಳಿದು ಓಡಿಸಲು ಪ್ರಯತ್ನಿಸುತ್ತಾನೆ. ಆಗ ಶ್ರೀಕೃಷ್ಣನ ಸನ್ನೆಯಂತೆ ಬಲರಾಮ ಖರ ಮತ್ತು ಆತನ ಅನುಯಾಯಿಗಳನ್ನು ಮೇಲಕ್ಕೆಸೆದು ಸಂಹಾರ ಮಾಡುತ್ತಾನೆ.

**೩. ದರ್ದುರ:** ದರ್ದುರ ಎಂದರೆ ಅರ್ಥ ಕಪ್ಪೆ ಎಂದರ್ಥ. ಆದರೆ ದರ್ದುರ ಎಂದರೆ ಯಾರು ಎನ್ನುವ ಕಥೆ ಯಾವ ಪುರಾಣದಲ್ಲಿಯೂ ಬರುವುದಿಲ್ಲ. ಕೃಷ್ಣನ ಕಥೆಗೆ ಸಂಬಂಧಿಸಿ ಕಪ್ಪೆಯ ಕಥೆ ಎಲ್ಲೂ ಬರುವುದಿಲ್ಲ. ಹೀಗಾಗಿ ಭಾಗವತವನ್ನು ಅಧ್ಯಯನ ಮಾಡಿದವರ ಅಭಿಪ್ರಾಯದ ಪ್ರಕಾರ ದರ್ದುರ ಎಂದರೆ ಭಕ. ಈತ ಪಕ್ಷಿಯ ರೂಪದಲ್ಲಿ ಬಂದು ಕೃಷ್ಣನನ್ನು ತನ್ನ ಕೊಕ್ಕಿನಿಂದ ಕುಕ್ಕಿ ಕೊಲ್ಲಬೇಕು ಎಂದು ಬಯಸಿದ ಅಸುರ. ಆದರೆ ಶ್ರೀಕೃಷ್ಣ ಆತನ ಕೊಕ್ಕನ್ನು ಹಿಡಿದು ಅವನ ದೇಹವನ್ನು ಎರಡು ಸೀಳಾಗಿ ಮಾಡಿ ಸಂಹಾರ ಮಾಡುತ್ತಾನೆ.

**೪.ಕೇಶಿ ಮತ್ತು ೫.ಅರಿಷ್ಟ**: ಇವರು ಕುದುರೆ ಮತ್ತು ಗೂಳಿ ರೂಪದಲ್ಲಿ ಕೃಷ್ಣನನ್ನು ಕೊಲ್ಲಬೇಕೆಂದು ಬಂದ ಕಂಸನ ಅನುಯಾಯಿ ಅಸುರರಾಗಿದ್ದರು. ಇವರನ್ನು ಕೃಷ್ಣ ಸಂಹಾರ ಮಾಡಿದ.

**೬. ಕಂಸ:** ಕೃಷ್ಣ-ಬಲರಾಮರನ್ನು ಮೋಸದಿಂದ ಕೊಲ್ಲಿಸಬೇಕು ಎಂದು ಕಂಸ ಅವರನ್ನು ಬಿಲ್ಲಹಬ್ಬಕ್ಕೆ ಆಮಂತ್ರಿಸುತ್ತಾನೆ. ಹಾಗೆ ಬಂದ ಕೃಷ್ಣ-ಬಲರಾಮರ ಮೇಲೆ ಮದ್ದಾನೆಯನ್ನು ಛೂಬಿಟ್ಟು ಕೊಲ್ಲಿಸುವ ಪ್ರಯತ್ನ ನಡೆಯುತ್ತದೆ. ಆದರೆ ಕೃಷ್ಣ ಆನೆಯ ಹೊಟ್ಟೆಯ ಭಾಗದಲ್ಲಿ ಕುಳಿತು ಅದನ್ನು ಮಣಿಸಿ, ಅದರ ಬೆನ್ನ ಮೇಲೆ ಹತ್ತಿ ಅದರ ದಂತವನ್ನು ಕೀಳುತ್ತಾನೆ. ಈ ರೀತಿ ಆನೆಯ ನೆತ್ತರು ತೊಯ್ದ ಮೈಯಲ್ಲಿ, ಆನೆಯ ದಂತವನ್ನು ಹಿಡಿದು ಕೃಷ್ಣ-ಬಲರಾಮರು ಕಂಸನ ಸಭೆಗೆ ಹೋಗುತ್ತಾರೆ. ಆದರೆ ಅಲ್ಲಿ ಕಂಸ ಮಲ್ಲ ಯುದ್ಧದ ಸ್ವಾಗತ ನೀಡುತ್ತಾನೆ. ಚಾಣೂರ, ಮುಷ್ಟಿಕ, ಕೂಟ, ಕೋಸಲ, ಛಲ ಹೀಗೆ ಅನೇಕ ಮಂದಿ ಮಲ್ಲರನ್ನು ಕಂಸ ಕೃಷ್ಣ ಬಲರಾಮರ ಮೇಲೆ ಛೂ-ಬಿಡುತ್ತಾನೆ. ಕೃಷ್ಣ ಬಲರಾಮರು ಈ ದುಷ್ಟ ಮಲ್ಲರನ್ನು ಸಂಹಾರ ಮಾಡಿದ್ದಷ್ಟೇ ಅಲ್ಲದೇ, ದುಷ್ಟ ಕಂಸನನ್ನು ಸಿಂಹಾಸನದಿಂದ ಎಳೆದು ಸಂಹಾರ ಮಾಡುತ್ತಾರೆ.

**೭. ಕಾಲಯವನ:** ಕಂಸನ ಸಾವಿನ ವಿಷಯ ಜರಾಸಂಧನಿಗೆ ತಿಳಿಯುತ್ತದೆ. ಜರಾಸಂಧ ತನ್ನ ಇಬ್ಬರು ಹೆಣ್ಣುಮಕ್ಕಳನ್ನು ಕಂಸನಿಗೆ ಕೊಟ್ಟು ಮದುವೆ ಮಾಡಿದ್ದ. ಹೀಗಾಗಿ ಜರಾಸಂಧ ಕೃಷ್ಣನನ್ನು ದ್ವೇಶಿಸಲಾರಂಭಿಸುತ್ತಾನೆ. ಜರಾಸಂಧ ದೇಶದ ಸುಮಾರು ಇಪ್ಪತ್ತೆರಡು ಸಾವಿರ ರಾಜಕುಮಾರರನ್ನು ತನ್ನ ಸೆರೆಯಲ್ಲಿಟ್ಟಿದ್ದ. ಇವರ ತಲೆ ಕಡಿದು ರುದ್ರಯಾಗ ಮಾಡಿ ಇಡೀ ದೇಶದ ಆಧಿಪತ್ಯವನ್ನು ತನ್ನ ಕೈಗೆ ತೆಗೆದುಕೊಳ್ಳಬೇಕು ಎನ್ನುವ ದುರುದ್ದೇಶ ಆತನದಾಗಿತ್ತು. ಆತನ ಮಿತ್ರ ನರಕಾಸುರ. ಆತ ಜರಾಸಂಧನಿಗೆ ಸಹಾಯ ಮಾಡಲು ಹದಿನಾರು ಸಾವಿರದ ನೂರು ರಾಜಕುಮಾರಿಯರನ್ನು ತನ್ನ ಸೆರೆಮನೆಯಲ್ಲಿಟ್ಟಿದ್ದ. ಕಂಸನ ಸಾವು ಜರಾಸಂಧನಿಗೆ ಬಹಳ ದೊಡ್ಡ ಹೊಡೆತವಾಯಿತು. ಆತ ಸುಮಾರು ಇಪ್ಪತ್ತಮೂರು ಅಕ್ಷೋಹಿಣಿ ಸೇನೆಯೊಂದಿಗೆ ಅನೇಕ ಬಾರಿ ಕೃಷ್ಣನ ಮೇಲೆ ದಾಳಿ ಮಾಡುತ್ತಾನೆ. ಆದರೆ ಪ್ರತಿ ಬಾರಿಯೂ ಕೃಷ್ಣ ತಪ್ಪಿಸಿಕೊಳ್ಳುತ್ತಿದ್ದ. ಇದಕ್ಕಾಗಿ ಜರಾಸಂಧ ಕಾಲಯವನ ಎನ್ನುವ ರಾಕ್ಷಸನನ್ನು ಕೃಷ್ಣನ ಸಂಹಾರಕ್ಕಾಗಿ ಕಳುಹಿಸುತ್ತಾನೆ. ಕೃಷ್ಣ ಕಾಲಯವನ ಬಂದಾಗ ಓಡಿದಂತೆ ನಟಿಸಿ, ಒಂದು ಗವಿಯನ್ನು ಪ್ರವೇಶಿಸುತ್ತಾನೆ. ಅಲ್ಲಿ ದೇವತೆಗಳ ಪರ ಯುದ್ಧ ಮಾಡಿ ವಿಶ್ರಾಂತಿಯ ನಿದ್ದೆಯನ್ನು ವರವಾಗಿ ಪಡೆದು

ಮಲಗಿದ್ದ ಮುಚುಗುಂಧನನ್ನು ಕಾಲಯವನ ತುಳಿಯುತ್ತಾನೆ. ಇದರಿಂದ ಎಚ್ಚರಗೊಂಡ ಮುಚುಗುಂಧನ ದೃಷ್ಟಿಗೆ ಮೊದಲು ಬಿದ್ದ ಕಾಲಯವನ ಬಸ್ಮವಾಗುತ್ತಾನೆ. ಹೀಗೆ ಯಾವುದೇ ಯುದ್ಧವಿಲ್ಲದೇ ಉಪಾಯವಾಗಿ ಕಾಲಯವನನನ್ನು ಶ್ರೀಕೃಷ್ಣ ಸಂಹಾರ ಮಾಡುತ್ತಾನೆ.

೮. **ಕುಜ/ನರಕಾಸುರ:** ನರಕಾಸುರನಿಂದ ತಮ್ಮ ರಾಜಕುಮಾರಿಯರನ್ನು ಬಿಡಿಸಿ ಕೊಡಬೇಕೆಂದು ಎಲ್ಲಾ ರಾಜರೂ ಕೃಷ್ಣನ ಮೊರೆ ಹೋಗುತ್ತಾರೆ. ಕೃಷ್ಣ ನೇರ ನರಕಾಸುರನಿದ್ದಲ್ಲಿಗೆ ಹೋಗಿ ರಾಜಕುಮಾರಿಯರನ್ನು ಬಿಡುಗಡೆ ಮಾಡುವಂತೆ ಕೇಳಿಕೊಳ್ಳುತ್ತಾನೆ. ಇದಕ್ಕೆ ಒಪ್ಪದ ನರಕಾಸುರನಿಗೂ ಕೃಷ್ಣನಿಗೂ ಯುದ್ದವಾಗುತ್ತದೆ. ಯುದ್ಧದಲ್ಲಿ ನರಕಾಸುರ ಸಾವನ್ನಪ್ಪುತ್ತಾನೆ. ಹೀಗೆ ನರಕಾಸುರನನ್ನು ಕೊಂದು ಸೆರೆಮನೆಯಲ್ಲಿದ್ದ ಹದಿನಾರು ಸಾವಿರದ ನೂರು ಮಂದಿ ರಾಜಕುಮಾರಿಯರನ್ನು ಬಿಡುಗಡೆಗೊಳಿಸುತ್ತಾನೆ ಕೃಷ್ಣ. ಆದರೆ ಆ ರಾಜಕುಮಾರಿಯರು ಸಮಾಜದಲ್ಲಿ ತಮಗೆ ಯಾವ ಸ್ಥಾನಮಾನವೂ ಸಿಗಲಾರದು ಮತ್ತು ನರಕಾಸುರನ ಸೆರೆಮನೆಯಲ್ಲಿದ್ದ ತಮ್ಮನ್ನು ಯಾರೂ ಮದುವೆಯಾಗಲಾರರು ಎನ್ನುವ ಆತಂಕ ವ್ಯಕ್ತಪಡಿಸಿ ತಮ್ಮ ದೇಶಕ್ಕೆ ಹಿಂದಿರುಗಲು ಒಪ್ಪದೇ ಇದ್ದಾಗ ಶ್ರೀಕೃಷ್ಣ ಅವರಿಗೆ ತನ್ನ ಪಟ್ಟದರಸಿಯರ ಸ್ಥಾನ ಕಲ್ಪಿಸಿ ಕಾಪಾಡುತ್ತಾನೆ.

೯. **ಪೌಂಡ್ರಕ:** ಈತ ಕೃಷ್ಣನ ಅಣ್ಣ. ಕಾಶೀರಾಜನ ಮಗಳ ಮಗ. ಕಾಶೀರಾಜನಿಗೆ ಗಂಡು ಮಕ್ಕಳಿರಲಿಲ್ಲ. ಹಾಗಾಗಿ ಆ ಕಾಲದ ಸಂಪ್ರದಾಯದಂತೆ ಕಾಶೀರಾಜ ವಸುದೇವನಿಂದ ತನ್ನ ಮಗಳಲ್ಲಿ ಗಂಡು ಮಗುವೊಂದನ್ನು ಪಡೆಯುತ್ತಾನೆ. ಆತನೇ ಪೌಂಡ್ರಕ ವಾಸುದೇವ. ಈತ ತನ್ನನ್ನೇ ಭಗವಂತ ಎಂದು ಬಿಂಬಿಸಿಕೊಂಡು ಅನಾಚಾರ ಮಾಡಿ ಕೃಷ್ಣನ ವಿರುದ್ಧ ಹೋರಾಟಕ್ಕಿಳಿದು ಕೃಷ್ಣನಿಂದ ಹತನಾಗುತ್ತಾನೆ.

೧೦. **ಸಾಲ್ವ:** ಈತ ಬ್ರಹ್ಮದತ್ತನ ಮಗ. [ಕೃಷ್ಣಾವತಾರಕ್ಕೂ ಮೊದಲು ನಡೆದ ಘಟನೆಯ ಪ್ರಕಾರ ಬ್ರಹ್ಮದತ್ತ ಅಂಬೆಯನ್ನು ಪ್ರೀತಿಸುತ್ತಿದ್ದ. ಅವರ ಮದುವೆಯೂ ನಿಶ್ಚಯವಾಗಿತ್ತು. ಆದರೆ ಭೀಷ್ಮಾಚಾರ್ಯರು ಅಂಬೆ-ಅಂಬಿಕೆ-ಅಂಬಾಲಿಕೆಯರನ್ನು ಅಪಹರಿಸಿಕೊಂಡು ಬಂದು ಬಹಳ ದೊಡ್ಡ ಅಚಾತುರ್ಯ ಮಾಡುತ್ತಾರೆ. ಇದರಿಂದಾಗಿ ಬ್ರಹ್ಮದತ್ತ ಅಂಬೆಯನ್ನು ಮದುವೆಯಾಗಲು ನಿರಾಕರಿಸುತ್ತಾನೆ. ಭೀಷ್ಮಾಚಾರ್ಯರೂ ಅಂಬೆಯನ್ನು ನಿರಾಕರಿಸಿದಾಗ ಆಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆಕೆಯೇ ಮುಂದೆ ಶಿಖಂಡಿಯಾಗಿ ಬಂದು ಭೀಷ್ಮಾಚಾರ್ಯರ ಸಾವಿಗೆ ಕಾರಣಳಾಗುತ್ತಾಳೆ]. ಕೃಷ್ಣ ದ್ವೇಷಿಯಾಗಿದ್ದ ಸಾಲ್ವ ಎಲ್ಲಾ ಸೌಕರ್ಯಗಳಿರುವ, ಸೇನೆಯನ್ನೂ ಹೊತ್ತೊಯ್ಯಬಲ್ಲ ವಿಮಾನವೊಂದನ್ನು ವರವಾಗಿ ಪಡೆದಿದ್ದ.[ಪ್ರಾಚೀನ ಭಾರತದಲ್ಲಿ ವಿಮಾನ ಬಳಕೆಯ ಕುರಿತು ಮತ್ತು ವಿಮಾನ ಶಾಸ್ತ್ರದ ಕುರಿತು ಭಾರದ್ವಾಜ ಬರೆದಿರುವ ವಿಮಾನ ಶಾಸ್ತ್ರ ಅದ್ಭುತವಾದ ವಿವರಣೆಯನ್ನು ಕೊಡುತ್ತದೆ. ಕಾಲಕ್ರಮೇಣ ಇಂತಹ ವೈಜ್ಞಾನಿಕ ಬೆಳವಣಿಗೆ ಮನುಕುಲಕ್ಕೆ ಮಾರಕವಾಗುತ್ತದೆ ಎಂದು ತಿಳಿದ ಭಾರತೀಯರು ಇಂತಹ ಯಂತ್ರದ ಉಪಯೋಗವನ್ನು ಕೈಬಿಟ್ಟರು ಎಂದು ಈ ಗ್ರಂಥ ತಿಳಿಸುತ್ತದೆ]. ಇಂತಹ ಸಾಲ್ವ ಇಂದ್ರಪ್ರಸ್ಥದಲ್ಲಿ ಪಾಂಡವರ ರಾಜಸೂಯಾ ಯಜ್ಞದಲ್ಲಿ ಕೃಷ್ಣ ಪಾಲ್ಗೊಂಡ ಸಮಯದಲ್ಲಿ ಯಾದವರ ಮೇಲೆ ಧಾಳಿ ಮಾಡುತ್ತಾನೆ. ಕೃಷ್ಣನಿಗೆ ವಿಷಯ ತಿಳಿದು ಇಂದ್ರಪ್ರಸ್ಥದಿಂದ ಮರಳಿ ಬರುತ್ತಾನೆ. ಕೃಷ್ಣನಿಗೂ ಸಾಲ್ವನಿಗೂ ಯುದ್ಧವಾಗುತ್ತದೆ ಮತ್ತು ಆ ಯುದ್ಧದಲ್ಲಿ ಸಾಲ್ವ ಸಾವನ್ನಪ್ಪುತ್ತಾನೆ. ಈ ಯುದ್ಧದ ಸಮಯದಲ್ಲೇ ಶ್ರೀಕೃಷ್ಣ ಜೊತೆಗಿಲ್ಲದ ಕಾರಣ ಪಾಂಡವರು ದುರ್ಯೋಧನನ ಜೊತೆಗೆ ಜೂಜಾಡಿ ಕಾಡನ್ನು ಸೇರುವಂತಾಗುತ್ತದೆ.

೧೧. **ಕಪಿ:** ರಾಮಾಯಣ ಕಾಲದ ಎರಡು ಕಪಿಗಳು ಮೈಂದ ಮತ್ತು ವಿವಿಧ/ದ್ವಿವಿಧ. ಇವರು ಅಶ್ವೀದೇವತೆಗಳ ಅವತಾರ. ಇವರಲ್ಲಿ ದ್ವಿವಿಧ ಬಹಳ ಬಲಿಷ್ಠ ಹಾಗೂ ಅಹಂಕಾರಿಯಾಗಿದ್ದ. ರಾಮಾಯಣ ಕಾಲದಲ್ಲಿ ರಾಮನ ಸೇವೆ ಮಾಡಿದ ಈತ ಇಲ್ಲಿ ಯಾದವರಿಗೆ ಉಪಟಳ ಕೊಡಲಾರಂಭಿಸುತ್ತಾನೆ. ಆಗ ಯಾದವರು ಬಲರಾಮನ ಮೊರೆ

ಹೋಗುತ್ತಾರೆ. ರಾಮ ರೂಪದಲ್ಲಿ ಬಲರಾಮನಲ್ಲಿ ಸನ್ನಿಹಿತನಾಗಿರುವ ಭಗವಂತ ಈ ಕಪಿಯನ್ನು ಸಂಹಾರ ಮಾಡುತ್ತಾನೆ.

**೧೨. ವಲ್ಕಲ:** [ಈಗ ಮುದ್ರಣವಾಗಿರುವ ಪುಸ್ತಕಗಳಲ್ಲಿ ಈತನನ್ನು ಬಲ್ವಲ ಎಂದು ಕರೆದಿದ್ದಾರೆ]. ಈತ ಬಾದಾಮಿಯ ವಾತಾಪಿಯ ತಮ್ಮ ಇಲ್ವಲನ ಮಗ. ಈತ ನಿರಂತರ ಋಷಿ ಮುನಿಗಳಿಗೆ ಮತ್ತು ಯಾದವರಿಗೆ ತೊಂದರೆ ಕೊಡುತ್ತಿದ್ದ. ಮುಖ್ಯವಾಗಿ ಪುರಾಣಪ್ರವಚನ ನಡೆಯುವ ನೈಮಿಶಾರಣ್ಯದಲ್ಲಿ ಈತನ ಉಪಟಳ ಹೆಚ್ಚಾಗಿತ್ತು. ಮಹಾಭಾರತ ಯುದ್ಧ ಕಾಲದಲ್ಲಿ ತಾನು ಯಾರ ಪರವೂ ಯುದ್ಧ ಮಾಡುವುದಿಲ್ಲ ಎಂದು ತೀರ್ಥ ಯಾತ್ರೆಗೆ ಹೋದ ಬಲರಾಮ ನೈಮಿಶಾರಣ್ಯಕ್ಕೆ ಬರುತ್ತಾನೆ. ನಮಗೆ ತಿಳಿದಂತೆ ಅವತಾರ ರೂಪಿಗಳಾಗಿರುವ ಮಹಾಪುರುಷರು ಮನುಷ್ಯ ರೂಪದಲ್ಲಿದ್ದಾಗ ಮನುಷ್ಯರಂತೆಯೇ ಅಭಿನಯಿಸುತ್ತಾರೆ. ಅಂತಹದ್ದೇ ಒಂದು ಘಟನೆ ಇಲ್ಲಿ ನಡೆಯುತ್ತದೆ. ಬಲರಾಮನಲ್ಲಿ ಒಂದು ದೌರ್ಬಲ್ಯವಿತ್ತು. ಅದೇನೆಂದರೆ ಆತ ಮುಂಗೋಪಿಯಾಗಿದ್ದ. ಇಂತಹ ಮುಂಗೊಪಿಯಾದ ಬಲರಾಮ ನೈಮಿಶಾರಣ್ಯಕ್ಕೆ ಬಂದಾಗ ಅಲ್ಲಿ ಪುರಾಣ ಪ್ರವಚನ ನಡೆಯುತ್ತಿತ್ತು. ವೇದವ್ಯಾಸರ ಮಗ ರೋಮಹರ್ಷಣ ಪ್ರವಚನ ಮಾಡುತ್ತಿದ್ದ. ಇಂತಹ ಸಮಯದಲ್ಲಿ ಬಲರಾಮನ ಪ್ರವೇಶವಾದಾಗ ಎಲ್ಲಾ ಋಷಿ ಮುನಿಗಳು ಎದ್ದು ನಿಂತು ಆತನನ್ನು ಸ್ವಾಗತಿಸುತ್ತಾರೆ. ಆದರೆ ಪ್ರವಚನ ಧೀಕ್ಷಾಬಂಧನಾದ ರೋಮಹರ್ಷಣ ಎದ್ದು ನಿಲ್ಲುವುದಿಲ್ಲ. ಇದರಿಂದ ಕೋಪಗೊಂಡ ಬಲರಾಮ ಸಿಟ್ಟಿನಲ್ಲಿ ಆತನನ್ನು ಕೊಂದು ಬಿಡುತ್ತಾನೆ! ಇಂತಹ ಅಚಾತುರ್ಯ ನಡೆದಾಗ ಎಲ್ಲಾ ಋಷಿಗಳು ದುಃಖ ವ್ಯಕ್ತ ಪಡಿಸುತ್ತಾರೆ. ಆಗ ಬಲರಾಮ ರೋಮಹರ್ಷಣನ ಉತ್ತರಾಧಿಕಾರಿಯಾಗಿ ಆತನ ಮಗ ಉಗ್ರಶ್ರವಸ್ಸನ್ನು ನೇಮಿಸುತ್ತಾನೆ ಮತ್ತು ಆತ ರೋಮಹರ್ಷಣನಂತೆಯೇ ಶ್ರೇಷ್ಠ ಪ್ರವಚನಕಾರನಾಗುತ್ತಾನೆಂದು ಹೇಳುತ್ತಾನೆ. ಇದಾದ ನಂತರ ರೋಮಹರ್ಷಣನನ್ನು ಕೊಂದ ಪಾಪ ಪರಿಹಾರಕ್ಕಾಗಿ ಋಷಿಗಳು ಬಲರಾಮನಲ್ಲಿ ಒಂದು ಉಪಕಾರವನ್ನು ಬಯಸುತ್ತಾರೆ. ಅದೇನೆಂದರೆ ಸದಾ ಉಪಟಳ ಕೊಡುತ್ತಿರುವ ವಲ್ಕಲನಿಂದ ಮುಕ್ತಿ. ಇದಕ್ಕೆ ಒಪ್ಪಿದ ಬಲರಾಮ ವಲ್ಕಲನನ್ನು ಸಂಹಾರ ಮಾಡುತ್ತಾನೆ ಮತ್ತು ತನ್ನ ಯಾತ್ರೆಯನ್ನು ಮುಂದುವರಿಸುತ್ತಾನೆ.

**೧೩. ದಂತವಕ್ರ, ೧೪. ವಿಡೂರಥ:** ವಸುದೇವನಿಗೆ ಕುಂತಿ ಅಲ್ಲದೇ ಇನ್ನೂ ನಾಲ್ಕು ಮಂದಿ ತಂಗಿಯರಿದ್ದರು. ಅವರಲ್ಲಿ ಒಬ್ಬಳು ಪ್ರಥುಶ್ರವಾ. ಆಕೆ ಛೇದೀ ದೇಶಕ್ಕೆ ಮದುವೆಯಾಗಿದ್ದಳು. ಅವಳ ಮಗನೇ ಶಿಶುಪಾಲ. ಇನ್ನೊಬ್ಬಳು ಪ್ರಥುದೇವ. ಅವಳಿಗೆ ದಂತವಕ್ರ ಮತ್ತು ವಿಡೂರಥ ಎನ್ನುವ ಇಬ್ಬರು ಮಕ್ಕಳಿದ್ದರು. ಈ ಹಿಂದೆ ಹೇಳಿದಂತೆ ಹಿರಣ್ಯಕಶಿಪು-ಹಿರಣ್ಯಾಕ್ಷರೇ ಶಿಶುಪಾಲ ಮತ್ತು ದಂತವಕ್ರರಾಗಿ ಮರು ಹುಟ್ಟು ಪಡೆದಿರುವುದು. ಇವರಲ್ಲಿ ಶಾಪಗ್ರಸ್ತ ಜಯ-ವಿಜಯರು ಆವಿಷ್ಟರಾಗಿ ತಮ್ಮ ಶಾಪ ವಿಮೋಚನೆಗಾಗಿ ಕಾದಿದ್ದರು. ರಾಜಸೂಯ ಯಜ್ಞದ ದಿನ ಕೃಷ್ಣ ಶಿಶುಪಾಲನ ಸಂಹಾರ ಮಾಡಿರುತ್ತಾನೆ. ಆ ವಿಷಯವನ್ನು ಇಲ್ಲಿ ವಿಶೇಷವಾಗಿ ಉಲ್ಲೇಖಿಸುವುದಿಲ್ಲ. ಆದರೆ ವಿಡೂರಥ ಮತ್ತು ದಂತವಕ್ರರ ಸಂಹಾರವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಕೃಷ್ಣ ಸುಮಾರು ಐವತ್ತು ವರ್ಷ ವಯಸ್ಸಿನವನಿದ್ದಾಗ ಕುರುಕ್ಷೇತ್ರದಲ್ಲಿ ಒಂದು ಯಾಗ ಮಾಡಿಸುತ್ತಾನೆ. ಈ ಯಾಗಕ್ಕೆ ವೃಂದಾವನದಿಂದ ವಿಶೇಷವಾಗಿ ತನ್ನನ್ನು ಭಕ್ತಿಯಿಂದ ಪ್ರೀತಿಸಿದ್ದ ಗೋಪಿಕಾ ಸ್ತ್ರೀಯರನ್ನು ಕೃಷ್ಣ ಆಹ್ವಾನಿಸಿರುತ್ತಾನೆ. ನಮಗೆ ತಿಳಿದಂತೆ ಬಿಲ್ಲ ಹಬ್ಬಕ್ಕೆಂದು ಮಥುರೆಗೆ ಬರುವಾಗ ಕೃಷ್ಣನಿಗೆ ಸುಮಾರು ಏಳು ವರ್ಷ ವಯಸ್ಸು. ಆಗ ಆತ ತನ್ನನ್ನು ಹಿಂಬಾಲಿಸಿದ ಗೋಪಿಕೆಯರಲ್ಲಿ "ಬೆರಳೆಣಿಕೆಯಷ್ಟು ದಿನಗಳಲ್ಲಿ ಬರುತ್ತೇನೆ" ಎಂದು ಹೇಳಿ ಬಂದಿದ್ದ. ಆದರೆ ನಂತರ ಸುಮಾರು ನಲವತ್ತು ವರ್ಷಗಳ ಕಾಲ ಅವರನ್ನು ಆತ ಭೇಟಿಯಾಗಿರುವುದಿಲ್ಲ. ಹೀಗಾಗಿ ಈ ಯಜ್ಞಕ್ಕೆ ಎಲ್ಲರನ್ನೂ ಕರೆಸಿಕೊಂಡ ಕೃಷ್ಣ ಅವರ ಯೋಗಕ್ಷೇಮ ವಿಚಾರಿಸುತ್ತಾ "ನನಗಾಗಿ ತುಂಬಾ ಕಾದಿರೇನು? ನಾನು ಎಲ್ಲೂ ಹೋಗಿರಲಿಲ್ಲ. ನಿಮ್ಮ ಹೃದಯದಲ್ಲೇ ಇದ್ದೆ" ಎನ್ನುತ್ತಾನೆ. ಜೀವನ ಎಂದರೆ ಅಗಲುವಿಕೆ. ಒಂದಾಗುವುದು ಎಂದರೆ

ಒಂದು ದಿನ ಅಗಲುವುದು ಎಂದರ್ಥ. "ಜೀವನ ಎಂದರೇನು ಎಂದು ನಿಮಗೆ ತಿಳಿಯಲಿ ಎಂದು ನಾನು ನಿಮ್ಮಿಂದ ದೂರ ನಿಂತೆ" ಎಂದು ಜೀವನದ ಕಟು ಸತ್ಯವನ್ನು ವಿವರಿಸುತ್ತಾನೆ ಕೃಷ್ಣ. ಈ ರೀತಿ ಎಲ್ಲರ ಉಪಸ್ಥಿತಿಯಲ್ಲಿ ಯಾಗ ನೆರವೇರುತ್ತದೆ. ನಂತರ ಕೃಷ್ಣ ಮರಳಿ ದ್ವಾರಕೆಗೆ ಹೊರಡುತ್ತಾನೆ. ಈ ರೀತಿ ಬರುತ್ತಿರುವಾಗ ದಾರಿಯಲ್ಲಿ ದಂತವಕ್ರ ಮತ್ತು ವಿಡೂರಥ ಕೃಷ್ಣನನ್ನು ತಡೆದು ಯುದ್ಧ ಮಾಡುತ್ತಾರೆ. ಈ ಯುದ್ಧದಲ್ಲಿ ಇಬ್ಬರನ್ನೂ ಕೃಷ್ಣ ಸಂಹಾರ ಮಾಡುತ್ತಾನೆ.

**೧೫. ಸಪ್ತೋಕ್ಷ:** ಕೋಸಲ ದೇಶದ ರಾಜ ನಗ್ನಚಿತ್ ತನ್ನ ಮಗಳ ಸ್ವಯಂವರ ಏರ್ಪಡಿಸಿದ್ದ. ಯಾರು ತನ್ನಲ್ಲಿರುವ ಏಳು ಗೂಳಿಗಳನ್ನು ಹಿಡಿದು ಕಟ್ಟಬಲ್ಲರೋ ಅವರ ಕೊರಳಿಗೆ ತನ್ನ ಮಗಳು ಮಾಲಾರ್ಪಣೆ ಮಾಡುತ್ತಾಳೆ ಎನ್ನುವ ನಿಯಮವನ್ನೂ ಆತ ಇಟ್ಟಿದ್ದ. ಈ ಸಪ್ತ ಗೂಳಿಗಳೇ ಅಸುರ ಶಕ್ತಿಗಳಾಗಿರುವ ಸಪ್ತೋಕ್ಷಗಳು.

ನಗ್ನಚಿತ್ ರಾಜನ ಮಗಳು ನೀಲಾ ಷಣ್ಮಹಿಷಿಯರಲ್ಲಿ ಒಬ್ಬಳಾಗಿದ್ದಳು. ಅವಳಿಗೆ ಕೌಸಲ್ಯಾ ಎನ್ನುವ ಹೆಸರೂ ಇತ್ತು. ಬಾಲ್ಯದಲ್ಲಿ ಕೃಷ್ಣನ ಸ್ನೇಹಿತೆಯಾಗಿರುವ ಇನ್ನೊಬ್ಬಳು ನೀಲಾಳನ್ನು ನಾವು ಕಾಣುತ್ತೇವೆ. ಅವಳು ಯಶೋದೆಯ ಅಣ್ಣನ ಮಗಳು. ಈ ಇಬ್ಬರೂ ಮೂಲತಃ ಒಂದೇ ಸ್ವರೂಪ. ಬಾಲ್ಯದಲ್ಲಿ ಕೃಷ್ಣನನ್ನು ಪ್ರೀತಿಸುವುದಕ್ಕಾಗಿ ಆಕೆ ಇಲ್ಲಿ ನೀಲಾಳಾಗಿ ಹುಟ್ಟಿದರೆ, ಅಲ್ಲಿ ಸ್ವಯಂವರದ ವಧುವಾಗುವ ಭಾಗ್ಯಕ್ಕಾಗಿ ಇನ್ನೊಂದು ರೂಪದಲ್ಲಿ ಹುಟ್ಟಿದ್ದಳು. ಕೊನೆಗೆ ಬಾಲ್ಯದ ನೀಲಾ ಸ್ವಯಂವರದ ವಧು ನೀಲಾಳಲ್ಲಿ ಐಕ್ಯಹೊಂದಿದಳು ಎನ್ನುತ್ತಾರೆ ಶಾಸ್ತ್ರಕಾರರು. ಈ ನೀಲಾಳೇ ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳಾದ ರಾಧೆ.

ಸ್ವಯಂವರಕ್ಕೆ ಬಂದ ಶ್ರೀಕೃಷ್ಣನಲ್ಲಿ ನಗ್ನಚಿತ್ ಹೇಳುತ್ತಾನೆ: "ನನಗೆ ನಿನ್ನಂಥಹ ಅಳಿಯ ಸಿಗಬೇಕು ಎನ್ನುವ ಆಸೆ. ಆದರೆ ನಾನು ಸ್ವಯಂವರದ ನಿಯಮ ಮಾಡಿರುವುದರಿಂದ ನೀನು ಆ ಏಳು ಗೂಳಿಗಳನ್ನು ಮಣಿಸಿ ನನ್ನ ಮಗಳನ್ನು ವರಿಸಬೇಕು ಎನ್ನುವುದು ನನ್ನ ಪ್ರಾರ್ಥನೆ" ಎಂದು. ಮುಂದೆ ಭಾಗವತದಲ್ಲೇ ಹೇಳುವಂತೆ: ಕೃಷ್ಣ ಏಳು ರೂಪದಿಂದ ಈ ಏಳು ಗೂಳಿಗಳನ್ನು ಮಣಿಸಿ ನೀಲಾಳನ್ನು ವರಿಸುತ್ತಾನೆ.

**೧೬. ಶಂಭರ:** ಕೃಷ್ಣ-ರುಗ್ಮಿಣಿಯಲ್ಲಿ ಜನಿಸಿದ ಪ್ರದ್ಯುಮ್ನನನ್ನು ಮಗು ಹುಟ್ಟಿದ ತಕ್ಷಣ ಶಂಭರಾಸುರ ಅಪಹರಿಸಿ ಸಮುದ್ರಕ್ಕೆ ಎಸೆಯುತ್ತಾನೆ. ಆ ಮಗುವನ್ನು ತಕ್ಷಣ ಒಂದು ಬೃಹತ್ ಮೀನು ನುಂಗುತ್ತದೆ. ಆ ಮೀನನ್ನು ಬೆಸ್ತರು ಹಿಡಿದು ಶಂಬರಾಸುರನಿಗೇ ಕೊಡುತ್ತಾರೆ. ಅಲ್ಲಿ ಆತನ ಅಡಿಗೆ ಮನೆಯಲ್ಲಿದ್ದ ಶಾಪಗ್ರಸ್ತ ರತಿದೇವಿಯ ಕೈಗೆ ಈ ಮಗು ಸೇರುತ್ತದೆ. ಮೂಲತಃ ಈ ಮಗುವೇ ಮನ್ಮಥ. ನಾರದರಿಂದ ಈ ವಿಷಯವನ್ನು ತಿಳಿದಿದ್ದ ರತಿದೇವಿ ಮನ್ಮಥನಿಗೆ ಆತನ ಮೂಲ ಸ್ವರೂಪದ ನೆನಪನ್ನು ತಂದುಕೊಡುತ್ತಾಳೆ. ಬೆಳೆದು ದೊಡ್ಡವನಾದ ಪ್ರದ್ಯುಮ್ನ ಶಂಭರನನ್ನು ಕೊಂದು ತನ್ನ ಪತ್ನಿ ರತಿದೇವಿಯನ್ನು ಕರೆದುಕೊಂಡು ಬರುತ್ತಾನೆ. ಎಷ್ಟೋ ವರ್ಷಗಳ ನಂತರ ಕೃಷ್ಣ-ರುಗ್ಮಿಣಿಯರಿಗೆ ಮಗನ ದರ್ಶನವಾಗುತ್ತದೆ. ಹೀಗೆ ಪ್ರದ್ಯುಮ್ನನೊಳಗೆ ಪ್ರದ್ಯುಮ್ನರೂಪದಿಂದಿದ್ದು ಕೃಷ್ಣ ಶಂಭರನ ಸಂಹಾರ ಮಾಡುತ್ತಾನೆ.

**೧೭. ರುಗ್ಮಿಮುಖ್ಯ:** ಕೃಷ್ಣನಿಗೆ ರುಗ್ಮಿಣಿಯನ್ನು ಮದುವೆ ಮಾಡಿಕೊಡಲು ವಿರೋಧಿಸಿದ ರುಗ್ಮಿ ರುಗ್ಮಿಣಿಯ ಅಣ್ಣ. ಮುಂದೆ ಈತನ ಮೊಮ್ಮಗಳು ಮತ್ತು ಕೃಷ್ಣನ ಮೊಮ್ಮಗನಿಗೂ ಮದುವೆ ನಿಶ್ಚಯವಾಗುತ್ತದೆ. ಈ ಮದುವೆಯಲ್ಲಿ ಕೃಷ್ಣ-ಬಲರಾಮರು ಉಪಸ್ಥಿತರಿರುತ್ತಾರೆ. ಮದುವೆಮನೆಯಲ್ಲಿ ಕ್ಷತ್ರಿಯರೆಲ್ಲರೂ ದ್ಯೂತವಾಡಲು ಕುಳಿತುಕೊಳ್ಳುತ್ತಾರೆ. ಬಲರಾಮನೂ ದ್ಯೂತವಾಡುತ್ತಾನೆ. ಹೀಗಿರುವಾಗ ರುಗ್ಮಿ ಕಾರಣವಿಲ್ಲದೇ ಬಲರಾಮ ಸೋತ ಎಂದು ಛೇಡಿಸುತ್ತಾನೆ. ಆತನೊಂದಿಗೆ ಇತರ ಕ್ಷತ್ರಿಯರೂ ಸೇರಿಕೊಂಡು ಬಲರಾಮನನ್ನು ಅವಮಾನಿಸುತ್ತಾರೆ. ಆಗ ಮುಂಗೋಪಿಯಾಗಿರುವ ಬಲರಾಮ ರುಗ್ಮಿಯನ್ನು ಚಚ್ಚಿ ಕೊಂದು ಬಿಡುತ್ತಾನೆ.

ಯೇ ವಾ ಮೃಧೇ ಸಮಿತಿಶಾಲಿನ ಆತ್ತಚಾಪಾಃ ಕಾಂಬೋಜಮತ್ಸ್ಯಕುರುಸೃಂಜಯಕೈಕಯಾದ್ಯಾಃ ।
ಯಾಸ್ಯಂತ್ಯದರ್ಶನಮಿತಾ ಬಲಪಾರ್ಥಭೀಮ ವ್ಯಾಜಾಹ್ವಯೇನ ಹರಿಣಾ ನಿಲಯಂ ತದೀಯಮ್ ॥೩೫॥

ಮಹಾಭಾರತ ಯುದ್ಧ ಕಾಲದಲ್ಲಿ ಕಾಂಬೋಜ, ಮತ್ಸ್ಯ (ವಿರಾಟ), ಕುರುಗಳು, ಸೃಂಜಯ(ಪಾಂಚಾಲ ದೇಶ), ಕೇಕೆ(ಇಂದಿನ ಪಾಕಿಸ್ತಾನ), ಹೀಗೆ ಅನೇಕ ನೆರೆಹೊರೆ ರಾಷ್ಟ್ರದ ವೀರರು, ಸೈನಿಕರು ಎಲ್ಲರೂ ಕಣ್ಮರೆಯಾದರು. ಇವರೆಲ್ಲರನ್ನೂ ಭೀಮ, ಅರ್ಜುನ, ಬಲರಾಮರ ಅಂತರ್ಯಾಮಿಯಾಗಿ ನಿಂತು ಸಂಹಾರ ಮಾಡಿದವನು ಶ್ರೀಕೃಷ್ಣ. ಮೂಲತಃ ಭೀಮ, ಅರ್ಜುನ, ರಾಮ ಈ ಎಲ್ಲಾ ಹೆಸರು ಪೂರ್ಣಪ್ರಮಾಣದಲ್ಲಿ ಅನ್ವಯವಾಗುವುದು ಆ ಭಗವಂತನಲ್ಲಿ. ಈ ಮಾತನ್ನು ಸ್ಕಂಧಪುರಾಣದಲ್ಲಿ ಹೀಗೆ ಹೇಳಿದ್ದಾರೆ: *"ರಾಮಭೀಮಾರ್ಜುನಾದೀನಿ ವಿಷ್ಣೋರ್ನಾಮಾನಿ ಸರ್ವಶಃ । ರಮಣಾಭಯವರ್ಣಾದ್ಯಾಃ ಶಬ್ದವೃತ್ತೇರ್ಹಿ ಹೇತವಃ। ಹರೇರ್ಹಿ ತತ್ರತತ್ರಸ್ಥೋ ರಮಣಾದೀನ್ ಕರೋತ್ಯಜಃ । ಆತಸ್ತಸ್ಯೈವ ನಾಮಾನಿ ವ್ಯಾಜಾದನ್ಯಗತಾನಿ ತು । ವ್ಯವಹಾರಪ್ರವೃತ್ತ್ಯರ್ಥಂ ದುಷ್ಟಾನಾಂ ಮೋಹನಾಯ ಚ ॥* ಹೀಗೆ ಸಂಹಾರ ಕಾರ್ಯದಲ್ಲಿ ಎಲ್ಲರನ್ನೂ ಉಪಕರಣವಾಗಿ ಬಳಸಿದ್ದಾನೆ ಕೃಷ್ಣ. ಇಲ್ಲಿ ಚತುರ್ಮುಖ ಹೇಳುತ್ತಾನೆ: "ಯುದ್ಧದಲ್ಲಿ ಪಾಲ್ಗೊಂಡ ವೀರರು, ಸೈನಿಕರು, ಎಲ್ಲರನ್ನೂ ಕೃಷ್ಣ ತನ್ನ ಮನೆಗೆ ಕರೆಸಿಕೊಂಡ" ಎಂದು. ಇದರರ್ಥ ಎಲ್ಲರೂ ಮೋಕ್ಷವನ್ನು ಸೇರಿದರು ಎಂದರ್ಥವಲ್ಲ. ತಮಸ್ಸಿನಿಂದ ಹಿಡಿದು ಮೋಕ್ಷಲೋಕದವರೆಗಿನ ಎಲ್ಲಾ ಲೋಕಗಳ ಒಡೆಯನೂ ಭಗವಂತನೇ. ಇದನ್ನು ಬೃಹತ್ಸಂಹಿತ ಈ ರೀತಿ ವಿವರಿಸುತ್ತದೆ: *ವಿದ್ವೇಷಿಣೋಽಪ್ಯುದಾಸೀನಾ ಭಕ್ತಾ ಅಪಿ ನ ಸಂಶಯಃ । ಹರೇರ್ಹಿ ಸದನಂ ಯಾಂತಿ ವ್ಯಕ್ತಂ ಭಕ್ತೈಸ್ತು ಗಮ್ಯತೇ । ಆರಭ್ಯ ತಮ ಆ ಮುಕ್ತೇಃ ಕೃಷ್ಣಸ್ಯ ಸದನಂ ಯತಃ । ಅವ್ಯಕ್ತ ಹರಿಲೋಕತ್ವಾದನ್ಯೇಷಾಮನ್ಯಲೋಕತಾ ॥* ಎಲ್ಲವೂ ಭಗವಂತನ ಮನೆ. ಆದರೆ ಭಗವದ್ ದ್ವೇಷಿಗಳು ಹೊಂದುವ ತಮಸ್ಸಿನ ಲೋಕದಲ್ಲಿ ಭಗವಂತನ ರೂಪ ಅವ್ಯಕ್ತ. ಎಲ್ಲರೂ ಅವರವರ ಯೋಗ್ಯತೆಗೆ ತಕ್ಕಂತೆ ಎಲ್ಲೆಲ್ಲಿಗೆ ಸೇರಬೇಕೋ ಅಲ್ಲಲ್ಲಿಗೇ ಸೇರಿದರು. ಇವೆಲ್ಲವೂ ಭಗವಂತ ಕೃಷ್ಣಾವತಾರದಲ್ಲಿ ತೋರಿದ ಅದ್ಭುತ ಲೀಲೆ.

## ೨೨. ವ್ಯಾಸಾವತಾರ

ಕಾಲೇನ ಮೀಲಿತದೃಶಾಮವಮೃಶ್ಯ ನೃಣಾಂ ಸ್ತೋಕಾಯುಷಾಂ ಸ್ವನಿಗಮೋ ಬತ ದೂರಪಾರಃ ।
ಆವಿರ್ಹಿತಸ್ತ್ವನುಯುಗಂ ಸ ಹಿ ಸತ್ಯವತ್ಯಾಂ ವೇದದ್ರುಮಂ ವಿಟಪಶೋ ವಿಭಜಿಷ್ಯತಿ ಸ್ಮ ॥೩೬॥

ಕಾಲದ ಪ್ರಭಾವದಿಂದಾಗಿ ಜನರ ಅರಿವಿನ ದೃಷ್ಟಿ, ಆಯಸ್ಸು ಕಡಿಮೆಯಾಗಿ, ಶಾಸ್ತ್ರ ಮಥನಮಾಡುವ ಶಕ್ತಿ ಕ್ಷೀಣಿಸಿ, ತಮ್ಮ ವೇದ ಶಾಖೆಯ ತುದಿಯನ್ನೇ ತಾವು ತಲುಪಲು ಅಸಾಧ್ಯವಾಗುವ ಸ್ಥಿತಿ ಬಂದಾಗ, ಇಂತಹ ಜನರ ಉದ್ಧಾರಕ್ಕಾಗಿ ಭಗವಂತ ಅನೇಕ ದ್ವಾಪರ ಯುಗಗಳಲ್ಲಿ ವ್ಯಾಸನಾಗಿ ಅವತರಿಸಿ ಬಂದ. ಇಲ್ಲಿ ಹೇಳಿರುವ 'ಅನೇಕ ಯುಗಗಳಲ್ಲಿ ಭಗವಂತ ವ್ಯಾಸಾವತಾರ ಮಾಡಿರುವ' ಅಪೂರ್ವ ವಿಷಯ ಹೆಚ್ಚಿನ ವ್ಯಾಖ್ಯಾನಕಾರರ ಗಮನಕ್ಕೆ ಬಂದಿಲ್ಲವಾದರೂ, ಆಚಾರ್ಯ ಮಧ್ವರು ಈ ಕುರಿತು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಪ್ರಮಾಣ ಸಹಿತ ವಿವರಣೆ ನೀಡಿರುವುದನ್ನು ಕಾಣುತ್ತೇವೆ. *ತೃತಿಯೇ ಸಪ್ತಮೇ ಚೈವ ಷೋಡಶೇ ಪಂಚವಿಂಶಕೇ । ಅಷ್ಟವಿಂಶೇ ಯುಗೇ ಕೃಷ್ಣಃ ಸತ್ಯವತ್ಯಾಮಜಾಯತ । ವ್ಯಾಸಾಚಾರ್ಯಸ್ತು ಪೂರ್ವೇಷು ಚರಮೇ ಸ್ವಯಮೇವ ತು । ವಿವ್ಯಾಸ ವೇದಾಂಶ್ಚಕ್ರೇ ಚ ಭಾರತಂ ವೇದಸಂಮಿತಂ ॥ಇತಿ ಚ॥* ಮೂರು, ಏಳು, ಹದಿನಾರು, ಇಪ್ಪತ್ತೈದು ಮತ್ತು ಇಪ್ಪತ್ತೆಂಟನೆಯ ದ್ವಾಪರದ ಕೊನೆಯಲ್ಲಿ ಭಗವಂತನ ವ್ಯಾಸಾವತಾರವಾಗಿದೆ ಎನ್ನುವುದು ಸ್ಕಂದಪುರಾಣದಲ್ಲಿ ಉಕ್ತವಾಗಿದೆ. ಪ್ರತೀ ಬಾರಿಯೂ

ಭಗವಂತ ಸತ್ಯವತಿಯ ಮಗನಾಗಿ ಹುಟ್ಟಿರುವುದು ಒಂದು ವಿಶೇಷ. ಇಪ್ಪತ್ತೆಂಟನೆಯ ದ್ವಾಪರದ ಕೊನೆಯಲ್ಲಿ ಸ್ವಯಂ ವೇದವ್ಯಾಸರಾಗಿ ವೇದವಿಭಾಗ ಮಾಡಿದ ಭಗವಂತ, ಅದರ ಹಿಂದಿನ ನಾಲ್ಕು ಅವತಾರಗಳಲ್ಲಿ ವ್ಯಾಸಾಚಾರ್ಯನಾಗಿ ವೇದ ವಿಭಾಗ ಮಾಡುವ ವೇದವ್ಯಾಸ ಋಷಿಗಳಿಗೆ ಗುರುವಾಗಿ ನಿಂತ.

ಇಪ್ಪತ್ತೆಂಟನೆಯ ದ್ವಾಪರದ ಕೊನೆಯಲ್ಲಿ ಸ್ವಯಂ ಭಗವಂತ ವೇದವನ್ನು ೧೧೩೭ ಸಂಹಿತೆಯಾಗಿ ವಿಭಾಗಮಾಡಿ, ಜ್ಞಾನಿಗಳ ಮುಖೇನ ನಮಗೆ ಕೊಟ್ಟಿದ್ದಾನೆ. ಪ್ರಧಾನವಾಗಿ ವೇದಗಳು ನಾಲ್ಕು. ಪದ್ಯಸಂಕಲನ ಋಗ್ವೇದ; ಗದ್ಯಸಂಕಲನ ಯಜುರ್ವೇದ; ಗಾನಸಂಕಲನ ಸಾಮವೇದ ಮತ್ತು ಅಥರ್ವ ಮುನಿ ಬ್ರಹ್ಮನಿಂದ ಉಪದೇಶ ಪಡೆದು ಬರೆದ ಅಥರ್ವಣ ವೇದ. ಮೂಲಭೂತವಾಗಿ ವೇದಗಳು ಮೂರೇ. ಆದರೆ ಋಷಿ ಸಂಪ್ರದಾಯದಿಂದ ನಾಲ್ಕು ವೇದಗಳ ಸೃಷ್ಟಿಯಾಯಿತು. ಇದನ್ನೇ ವೇದವ್ಯಾಸರು ನಾಲ್ಕು ಜನ ಮುನಿಗಳಿಗೆ (ಪೈಲ, ವೈಶಂಪಾಯನ, ಸುಮಂತು ಮತ್ತು ಜೈಮಿನಿ) ಹೇಳಿದರು. ಈ ನಾಲ್ಕು ಮುನಿಗಳು ಮತ್ತೆ ವೇದವನ್ನು ಅನೇಕ ಶಾಖೆಗಳಾಗಿ(ಸಂಹಿತೆ) ವಿಂಗಡಿಸಿದರು. ಋಗ್ವೇದದಲ್ಲಿ ೨೪ ಸಂಹಿತೆಗಳಿವೆ. ಯಜುರ್ವೇದದಲ್ಲಿ ಪ್ರಮುಖವಾಗಿ ಎರಡು ಶಾಖೆ. ಒಂದು ಶುಕ್ಲ ಯಜುರ್ವೇದ ಹಾಗೂ ಇನ್ನೊಂದು ಕೃಷ್ಣ ಯಜುರ್ವೇದ. ಶುಕ್ಲ ಯಜುರ್ವೇದದಲ್ಲಿ ೧೫ ಸಂಹಿತೆ ಹಾಗೂ ಕೃಷ್ಣ ಯಜುರ್ವೇದದಲ್ಲಿ ೮೬ ಸಂಹಿತೆ. ಒಟ್ಟು ೧೦೧ ಸಂಹಿತೆ. ಸಾಮವೇದದಲ್ಲಿ ೧೦೦೦ ಶಾಖೆಗಳು, ಒಂದು ಸಾವಿರ ಬಗೆಯ ಗಾನ ಪದ್ಧತಿ! ಆದರೆ ಇಂದು ಕೇವಲ ಮೂರು (ಜೈಮಿನಿಯ, ರಣಾಯನಿಯ ಹಾಗೂ ಕೌತುಮನ) ಗಾನಪದ್ಧತಿ ಮಾತ್ರ ಪ್ರಚಲಿತದಲ್ಲಿದೆ. ಅಥರ್ವ ವೇದದಲ್ಲಿ ಒಟ್ಟು ೧೨ ಶಾಖೆಗಳು. ಹೀಗೆ ವೇದವನ್ನು ೧೧೩೭ (೨೪+೧೦೧+೧೦೦೦+೧೨) ಸಂಹಿತೆಗಳಾಗಿ ವಿಂಗಡಿಸಿ, ವಿಸ್ತಾರ ಮಾಡಿದ ಭಗವಂತ, ಮನುಷ್ಯ ಸ್ವಭಾವದ ಬುದ್ಧಿ ವೈಚಿತ್ರ್ಯದ ಜ್ಞಾನ ಸಾಗರವನ್ನು ನಮ್ಮ ಮುಂದೆ ತೆರೆದಿಟ್ಟಿದ್ದಾನೆ.

೧೧೩೭ ಎನ್ನುವುದು ಮೂರರಲ್ಲೇ ಪರ್ಯಾವಸಾನವಾಗುವ ಸಂಖ್ಯೆ. ೧+೧+೩+೭=೧೨. ೧+೨=೩. ೧೧೩೭ ಮೂರರಿಂದಲ್ಲದೇ ಬೇರಾವ ಸಂಖ್ಯೆಯಿಂದಲೂ ಅವಿಭಾಜ್ಯವಾಗಿರುವ ಅಪೂರ್ವ ಸಂಖ್ಯೆ. ಇವೆಲ್ಲವೂ ವೇದ ತ್ರಯೀ ಎನ್ನುವುದನ್ನೇ ಬಿಂಬಿಸುತ್ತವೆ.

## ೨೩.ಬುದ್ಧಾವತಾರ

ಈ ಹಿಂದೆ ಪ್ರಥಮ ಸ್ಕಂಧದಲ್ಲಿ ಬುದ್ಧನ ಕುರಿತಾದ ಸಂಕ್ಷಿಪ್ತ ವಿವರಣೆಯನ್ನು ನೋಡಿದ್ದೇವೆ. ಅಲ್ಲಿ ಬುದ್ಧ ಕೀಕಟ ದೇಶದವನು(ಈಗಿನ ಬಿಹಾರ) ಮತ್ತು ಆತ 'ಜಿನ'ನ ಮಗ ಎಂದು ವಿವರಿಸಲಾಗಿದೆ. ***[ ತತಃ ಕಲೌ ಸಂಪ್ರವೃತ್ತೇ ಸಮ್ಮೋಹಾಯ ಸುರದ್ವಿಷಾಮ್। ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ ॥೧-೩-೨೪॥]*** ಮುಂದೆ ಹತ್ತನೇ ಸ್ಕಂಧದಲ್ಲಿ ಕೃಷ್ಣಾವತಾರದ ನಂತರ ನಡೆಯಲಿರುವ ಬುದ್ಧಾವತಾರವನ್ನು ಅರ್ಧ ಶ್ಲೋಕದಲ್ಲಿ ನಿರೂಪಿಸಿರುವುದನ್ನು ನಾವು ಕಾಣಲಿದ್ದೇವೆ. **[*"ನಮೋ ಬುದ್ಧಾಯ ಶುದ್ಧಾಯ ದೈತ್ಯದಾನವಮೋಹಿನೇ, ಮ್ಲೇಚ್ಛಪ್ರಾಯಕ್ಷತ್ರಹಂತ್ರೇ ನಮಸ್ತೇ ಕಲ್ಕಿರೂಪಿಣೇ ॥೧೦-೩೮-೨೨॥* "].** ಇಲ್ಲಿ ಈ ಅಧ್ಯಾಯದಲ್ಲಿ ಬುದ್ಧನ ಕುರಿತಾಗಿ ಚತುರ್ಮುಖ ಒಂದು ಶ್ಲೋಕದಲ್ಲಿ ವಿವರಣೆ ನೀಡಿದ್ದಾನೆ. ಆದರೆ ಇವಿಷ್ಟನ್ನು ಬಿಟ್ಟು ಮುಂದೆ ಬೇರೆಲ್ಲೂ ಬುದ್ಧನ ಕುರಿತು ವಿವರಣೆ ಬರುವುದಿಲ್ಲ. ಹೀಗಾಗಿ ಹದಿನೆಂಟು ಸಾವಿರ ಶ್ಲೋಕಗಳ ಭಾಗವತದಲ್ಲಿ ಬುದ್ಧನ ಕುರಿತಾದ ವಿವರಣೆ ಇರುವುದು ಕೇವಲ ಎರಡುವರೆ ಶ್ಲೋಕಗಳಲ್ಲಿ ಮಾತ್ರ!

ವಿಶೇಷವಾಗಿ ಹನ್ನೊಂದನೇ ಸ್ಕಂಧದಲ್ಲಿ ವ್ಯಾಸರು ಕೃಷ್ಣಾವತಾರದ ನಂತರ ಬುದ್ಧನ ಕುರಿತು ಯಾವ ವಿವರಣೆಯನ್ನೂ ನೀಡದೇ, ನೇರವಾಗಿ ಕಲ್ಕಿ ಅವತಾರವನ್ನು ವಿವರಿಸುತ್ತಾರೆ. ಈ ಕಾರಣದಿಂದಾಗಿ ಒಂದು ತಪ್ಪು ಕಲ್ಪನೆ ಬೆಳೆದು, ಒಂದು ಪಂಥದವರು ಬುದ್ಧನನ್ನು "ವಿಷ್ಣುವಿನ ಅವತಾರ ಅಲ್ಲ" ಎಂದು ಪರಿಗಣಿಸಿ, ಆತನನ್ನು ದಶಾವತಾರದಿಂದ ಕೈಬಿಟ್ಟರು[ಬದಲಿಗೆ ಬಲರಾಮನನ್ನು ದಶಾವತಾರದಲ್ಲಿ ಒಂದು ಅವತಾರವಾಗಿ ಅವರು ಪರಿಗಣಿಸಿದ್ದಾರೆ].

ಶಂಕರಾಚಾರ್ಯರು ಬುದ್ಧನನ್ನು ದಶಾವತಾರದಲ್ಲಿ ಒಂದು ಅವತಾರ ಎಂದು ಹೇಳಿದರೆ, ಆಚಾರ್ಯ ಮಧ್ವರು ತಮ್ಮ ದಶಾವತಾರ ಸ್ತೋತ್ರದಲ್ಲಿ "*ದೈತ್ಯ ವಿಮೋಹಕ ನಿತ್ಯ ಸುಖಾದೇ, ದೇವ ಸುಬೋಧಕ ಬುದ್ಧಸ್ವರೂಪ*" ಎಂದು ಬುದ್ಧನನ್ನು ಉಲ್ಲೇಖಿಸಿದ್ದಾರೆ.

ಬುದ್ಧನನ್ನು ವಿಷ್ಣುವಿನ ಅವತಾರ ಎಂದು ನಂಬುವವರಲ್ಲೇ ಕೆಲವರು ಪುರಾಣದ ಬುದ್ಧ ಮತ್ತು ಇತಿಹಾಸದ ಬುದ್ಧ ಬೇರೆಬೇರೆ ಎಂದು ತಿಳಿದಿದ್ದಾರೆ. ಇದಕ್ಕೆ ಅನೇಕ ಕಾರಣಗಳೂ ಇವೆ: (೧). ಈ ಅಧ್ಯಾಯದಲ್ಲಿ ಬರುವ ಬುದ್ಧ ಮತ್ತು ತ್ರಿಪುರಾಸುರರ ಕಥೆ. (೨). "ಬತ್ತಲೆ ನಿಂದಿಹ ಬುದ್ಧನಿಗೆ" ಎನ್ನುವ ದಾಸವಾಣಿ; (೩). ಕಲಿಯುಗದಲ್ಲಿ ಭಗವಂತ ಅವತರಿಸುವುದಿಲ್ಲ ಎನ್ನುವ ಶಾಸ್ತ್ರವಾಣಿ ; (೪). ಬುದ್ಧ 'ಜಿನ' ನ ಮಗ, ಆತ ಹುಟ್ಟಿರುವುದು ಕೀಕಟ ದೇಶದಲ್ಲಿ ಎನ್ನುವ ಒಂದನೇ ಸ್ಕಂಧದಲ್ಲಿ ಬಂದಿರುವ ವಿವರಣೆ; ಇತ್ಯಾದಿ ವಿಷಯಗಳು ಈ ಗೊಂದಲಕ್ಕೆ ಕಾರಣವಾಗಿವೆ. ವಿಶೇಷವಾಗಿ ಬತ್ತಲೆಯಾಗಿ ನಿಂತು ತ್ರಿಪುರಾಸುರರ ಪತ್ನಿಯರನ್ನು ಮೋಹಗೊಳಿಸಿರುವ ಬುದ್ಧನ ಕಥೆ ಇತಿಹಾಸದ ಬುದ್ಧನ ಕಥೆಯಲ್ಲಿ ಎಲ್ಲೂ ಕಾಣಸಿಗುವುದಿಲ್ಲ. ಇತಿಹಾಸದ ಬುದ್ಧ ಶುದ್ಧೋದನನ ಮಗ, ಹುಟ್ಟಿದ್ದು ನೇಪಾಳ ದೇಶದಲ್ಲಿ. ಹೀಗಾಗಿ ಇತಿಹಾಸದ ಬುದ್ಧ ಬೇರೆ, ಪುರಾಣದ ಬುದ್ಧ ಬೇರೆ ಎನ್ನುವುದು ಹಲವರ ವಾದ.

ವಾಸ್ತವವಾಗಿ ಇತಿಹಾಸದ ಬುದ್ಧನೇ ಅವತಾರ ಪುರುಷ. ಶಾಸ್ತ್ರಗಳ ಪ್ರಕಾರ ಬುದ್ಧಾವತಾರ ಆಗಿರುವುದು ಕೃಷ್ಣಾವತಾರವಾಗಿ ಸುಮಾರು ೨೫೦೦ ವರ್ಷಗಳ ನಂತರ. ಅದೇ ಬುದ್ಧ ಪ್ರಪಂಚ ಶೂನ್ಯ, ಎಲ್ಲವೂ ಕ್ಷಣಿಕ ಎಂದು ಹೇಳಿದ. ಈ ಎಲ್ಲಾ ವಿಷಯಗಳು ಇತಿಹಾಸದ ಬುದ್ಧನಿಗೆ ಪೂರಕವಾದ ಅಂಶಗಳು. ಇನ್ನು ಬುದ್ಧನ ತಂದೆಯ ಹೆಸರು ಮತ್ತು ಹುಟ್ಟಿದ ಸ್ಥಳ. ಈ ಕುರಿತು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಆಚಾರ್ಯ ಮಧ್ವರು ವಿವರಣೆ ನೀಡಿರುವುದನ್ನು ಕಾಣುತ್ತೇವೆ. ವಾಸ್ತವವಾಗಿ ಗೌತಮ ಬುದ್ಧ ಶುದ್ಧೋದನನ ಮಗ . ಆದರೆ ಶುದ್ಧೋದನನ ಇನ್ನೊಂದು ಹೆಸರು 'ಜಿನ'. ಜಿನನ ಮಗ 'ಸಿದ್ಧಾರ್ಥ' ಹುಟ್ಟಿದ್ದು ನೇಪಾಳದಲ್ಲಾದರೂ ಕೂಡಾ, ಆತ 'ಬುದ್ಧ'ನೆಂದು ಹೆಸರು ಪಡೆದದ್ದು ಕೀಕಟ ದೇಶದಲ್ಲಿ. ಕಲಿಯುಗದಲ್ಲಿ ಭಗವಂತನ ಅವತಾರವಿಲ್ಲ ನಿಜ, ಆದರೆ ಈ ಅವತಾರವಾಗಿರುವುದು ದ್ವಾಪರ ಮತ್ತು ಕಲಿಯುಗದ ಸಂಧಿಕಾಲದಲ್ಲಿ. [ಈಗ ನಡೆಯುತ್ತಿರುವುದು ಈ ಸಂಧಿಕಾಲ ಎನ್ನುವುದನ್ನು ನಾವಿಲ್ಲಿ ಜ್ಞಾಪಿಸಿಕೊಳ್ಳಬೇಕು]. ಇನ್ನು ಹೇಗೆ ಬುದ್ಧ ತ್ರಿಪುರಾಸುರರ ಪತ್ನಿಯರ ಮುಂದೆ ಬತ್ತಲೆಯಾಗಿ ನಿಂತು ಮೋಹಗೊಳಿಸಿದ ಎನ್ನುವುದರ ವಿವರಣೆಯನ್ನು ಇಲ್ಲಿ ನಾವು ಚತುರ್ಮುಖ-ನಾರದ ಸಂವಾದದಿಂದ ಅರ್ಥ ಮಾಡಿಕೊಳ್ಳೋಣ.

ದೇವದ್ವಿಷಾಂ ನಿಗಮವರ್ತ್ಮನಿ ವಿಷ್ಠಿತಾನಾಂ ಪೂರ್ಭಿರ್ಮಯೇನ ವಿಹಿತಾಭಿರದೃಶ್ಯಮೂರ್ತಿಃ ।
ಲೋಕಾನ್ ಘ್ನತಾಂ ಮತಿವಿಮೋಹಮತಿಪ್ರಲೋಭಂ ವೇಷಂ ವಿಧಾಯ ಯದಭಾಷತ ಔಪಧರ್ಮ್ಯಮ್ ॥೩೭॥

ಈ ಶ್ಲೋಕ ಬುದ್ಧನ ಕುರಿತಾದ ಅಪೂರ್ವ ವಿಷಯವನ್ನು ಹೇಳುವ ಶ್ಲೋಕ. ಬೇರೆ ಯಾವ ಪುರಾಣದಲ್ಲೂ ಬುದ್ಧನ ಕುರಿತಾಗಿ ಇಷ್ಟೊಂದು ಖಚಿತವಾದ ವಿವರಗಳು ಸಿಗುವುದಿಲ್ಲ. ಬುದ್ಧ ಅವತರಿಸುವ ಕಾಲದ ಪರಿಸ್ಥಿತಿ ಹೇಗಿತ್ತು ಎನ್ನುವುದನ್ನು ಇಲ್ಲಿ ಚತುರ್ಮುಖ ನಾರದರಿಗೆ ವಿವರಿಸಿದ್ದಾನೆ. ಭಗವಂತನ ಶ್ರೀಕೃಷ್ಣ ಮತ್ತು ವೇದವ್ಯಾಸ ಅವತಾರಗಳಿಂದಾಗಿ ಭೂಲೋಕದಲ್ಲಿ ಎಲ್ಲರಲ್ಲೂ ವೈದಿಕ ಧರ್ಮದ ಅನುಷ್ಠಾನ ಪ್ರಾರಂಭವಾಯಿತು. ಎಲ್ಲಿಯ ತನಕ ಎಂದರೆ ಯೋಗ್ಯತೆ ಇಲ್ಲದವರೂ ಕೂಡಾ ಇದರ ಸ್ಪರ್ಶಕ್ಕೊಳಗಾದರು. ಆದರೆ ಪ್ರಕೃತಿ ನಿಯಮದಂತೆ ಈ ಭೂಮಿಯ ಮೇಲೆ ವೇದವನ್ನು ಒಪ್ಪುವ ಜನರ ಜೊತೆಗೆ ವೇದವನ್ನು ಒಪ್ಪದ ಜನರೂ ಇರುತ್ತಾರೆ. ಇದು ಜೀವ ಸ್ವಭಾವಕ್ಕೆ ಸಂಬಂಧಿಸಿದ ವಿಚಾರ. ಈ ಹಿಂದೆ ವಿವರಿಸಿದಂತೆ: ಪ್ರತಿಯೊಂದು ಜೀವಕ್ಕೂ ಅದರದ್ದೇ ಆದ ಜೀವ ಸ್ವಭಾವವಿರುತ್ತದೆ ಮತ್ತು ಅದಕ್ಕನುಗುಣವಾಗಿ ಆತನ ಬೆಳವಣಿಗೆಯಾಗುತ್ತದೆ. ಈ ಹಿನ್ನೆಲೆಯಲ್ಲಿಯೇ ದೇವತೆಗಳು ಮತ್ತು ದಾನವರು ಎನ್ನುವ ಎರಡು ವರ್ಗಗಳನ್ನು ಸನಾತನ ಧರ್ಮ ಉಲ್ಲೇಖಿಸುತ್ತದೆ. ಇದು ರೂಪವನ್ನವಲಂಭಿಸಿ ಮಾಡಿದ ವರ್ಗವಲ್ಲ. ಬದಲಿಗೆ ಇದು ವ್ಯಕ್ತಿಯ ಮನೋವೃತ್ತಿಗನುಗುಣವಾಗಿ ಮಾಡಿದ ವರ್ಗ. ನೋಡಲು ಒಂದೇ ರೀತಿ ಕಾಣಿಸಿದರೂ ಕೂಡಾ ಸ್ವಭಾವದ ವ್ಯತ್ಯಾಸದಿಂದಾಗಿ ಸಾತ್ವಿಕ, ತಾಮಸ ಮತ್ತು ರಾಜಸ ಎನ್ನುವ ಜನರು ಈ ಭೂಮಿಯಲ್ಲಿ ಸದಾ ಬಂದು ಹೋಗುತ್ತಿರುತ್ತಾರೆ.

ಸ್ವಭಾವತಃ ದೇವತೆಗಳನ್ನು ದ್ವೇಷಿಸುವ ಜನ ಭೂಮಿಯಲ್ಲಿ ಇದ್ದೇ ಇರುತ್ತಾರೆ. "ಇವರಿಗೆ 'ಮಯ' ಮೂರು ಮನೆಗಳನ್ನು ಕಟ್ಟಿ ಕೊಟ್ಟಿದ್ದ" ಎನ್ನುತ್ತಾನೆ ಚತುರ್ಮುಖ. 'ಮಯ' ಎಂದರೆ ಕಣ್ಕಟ್ಟು ವಿದ್ಯೆ[ಜನರನ್ನು ಮೋಸಗೊಳಿಸುವುದಕ್ಕೋಸ್ಕರ, ಅವರ ನಂಬಿಕೆಯನ್ನು ದುರ್ಬಳಕೆ ಮಾಡುವುದಕ್ಕೋಸ್ಕರ, ಭೂಟಾಟಿಕೆಯ ವೇಷತೊಟ್ಟು ನಡೆದುಕೊಳ್ಳುವುದು]. ಮಯ ನಿರ್ಮಿತವಾದ ಮೂರು ಮನೆಗಳು ಎಂದರೆ ೧. ಕಬ್ಬಿಣದ ಮನೆ, ೨. ಬೆಳ್ಳಿಯ ಮನೆ ಮತ್ತು ೩. ಬಂಗಾರದ ಮನೆ. ಇದು ಪುರಾಣದ ಸಾಂಕೇತಿಕ ಭಾಷೆ. ಇಲ್ಲಿ ಅದ್ಭುತ ವಿಷಯಗಳು ಅಡಗಿವೆ. ಇಂದು ನಾವೆಲ್ಲರೂ ತ್ರಿಪುರರ ಆವೇಶಕ್ಕೊಳಗಾದವರೇ. ಕಬ್ಬಿಣ ಅಂದರೆ ತಮಸ್ಸು; ಬೆಳ್ಳಿ ಅಂದರೆ ರಜಸ್ಸು; ಬಂಗಾರ ಎಂದರೆ ಸತ್ವ. ಈ ಮೂರು ಗುಣದ ಪ್ರಭಾವಕ್ಕೊಳಗಾದವರು ತ್ರಿಪುರರು. ಈ ಪ್ರಪಂಚದಲ್ಲಿ ತ್ರೈಗುಣ್ಯದ ಪ್ರಭಾವಕ್ಕೆ ಒಳಗಾಗದವರು ಯಾರೂ ಇಲ್ಲ. ಕೇವಲ ಭಗವಂತನೊಬ್ಬನೇ ತ್ರೈಗುಣ್ಯ ವರ್ಜಿತ. ಯಾರ ಮೇಲೆ ಹೆಚ್ಚು ಸತ್ವದ ಪ್ರಭಾವವಿರುತ್ತದೋ ಅವನ ಮೇಲೆ ರಜಸ್ಸು ಮತ್ತು ತಮಸ್ಸಿನ ಪ್ರಭಾವ ಕಡಿಮೆ. ಸತ್ವದ ಪ್ರಭಾವ ಕಡಿಮೆಯಾದಾಗ ರಜಸ್ಸು ಇಲ್ಲವೇ ತಮಸ್ಸು ಹೆಚ್ಚಿನ ಪ್ರಭಾವ ಬೀರುತ್ತದೆ.

ಬುದ್ಧಾವತಾರ ಕಾಲದಲ್ಲಿ ಶ್ರೀಕೃಷ್ಣ ಮತ್ತು ವ್ಯಾಸರ ಅವತಾರದಿಂದಾಗಿ ದೇವತೆಗಳನ್ನು ದ್ವೇಷಿಸುವ ತ್ರಿಪುರಾಸುರರು ಕೂಡಾ ಆಸ್ತಿಕರಾಗಿ ಭಗವಂತನ ಉಪಾಸನೆಯಲ್ಲಿ ತೊಡಗಿದರಂತೆ. ಅಂದರೆ 'ಜೀವಸ್ವಭಾವ'ಕ್ಕೆ ವ್ಯತಿರಿಕ್ತವಾಗಿ 'ವೈದಿಕ ಪ್ರಭಾವ' ಇವರ ಮೇಲೆ ಹೆಚ್ಚು ಪರಿಣಾಮ ಬೀರಲಾರಂಭಿಸಿತು. ಇದರಿಂದಾಗಿ ಎಲ್ಲರೂ ಆಸ್ತಿಕ್ಯ ಮಾರ್ಗದಲ್ಲಿ ಭಕ್ತಿ ಮತ್ತು ಧರ್ಮದಿಂದ ವೇದಾಧ್ಯಯನ ಮಾಡತೊಡಗಿದರು. ಇದರಿಂದಾಗಿ ಸಮಾಜದಲ್ಲಿ ಪ್ರಕೃತಿಗೆ ವಿರುದ್ಧವಾದ ಏಕರೂಪತೆ ಸೃಷ್ಟಿಯಾಯಿತು. ಮೂಲತಃ ಜ್ಞಾನ ಮತ್ತು ಜ್ಞಾನಿಗಳ ದ್ವೇಷಿಗಳಾದ ಅಯೋಗ್ಯರು ಜ್ಞಾನಮಾರ್ಗದಲ್ಲಿ ನಿಂತು ವೇದಾಧ್ಯಯನ ಮಾಡುವುದು ವಿಕೃತಿ. ಹೀಗಾಗಿ ಇಂತಹ ಜನರನ್ನು ಮರಳಿ ಅವರ ಜೀವ ಯೋಗ್ಯತೆಯಲ್ಲೇ ನಿಲ್ಲಿಸಲು ಭಗವಂತ ಬುದ್ಧನಾಗಿ ಅವತರಿಸಿ ಬಂದ.

ಸಾಮಾಜಿಕವಾಗಿ ಗಂಡಿನ ಧಾರ್ಮಿಕ ಆಚರಣೆ ಗಟ್ಟಿಗೊಳ್ಳುವುದು ಹೆಣ್ಣಿನಿಂದ. ಮೊದಲು ತಾಯಿ, ನಂತರ ಹೆಂಡತಿ ರೂಪದಲ್ಲಿ ಹೆಣ್ಣು ಗಂಡಿನ ಹಿಂದಿರುತ್ತಾಳೆ. ಹೀಗಾಗಿ ಅಯೋಗ್ಯರಲ್ಲಿ ಗಟ್ಟಿಗೊಳ್ಳುತ್ತಿರುವ ವೈದಿಕತೆಯನ್ನು ಮುರಿಯಬೇಕಾದರೆ ಮೊದಲು ಅವರ ಹಿಂದೆ ನಿಂತಿರುವ ಸ್ತ್ರೀ ಶಕ್ತಿ ಕುಂದಬೇಕಾಗುತ್ತದೆ. "ಹೀಗಾಗಿ ಲೋಕನಾಶಕ

ಶಕ್ತಿಯ ದಮನಕ್ಕಾಗಿ ಭಗವಂತ ಮೊತ್ತಮೊದಲು ತ್ರಿಪುರಾಸುರರ ಅಂತಃಪುರಕ್ಕೆ ದಾಳಿ ಇಟ್ಟ" ಎಂದಿದ್ದಾನೆ ಚತುರ್ಮುಖ. ಆತ ತ್ರಿಪುರಾಸುರರ ಸ್ತ್ರೀಯರ ಮುಂದೆ ಬತ್ತಲೆ ನಿಂತು ಅವರ ಮನಸ್ಸನ್ನು ವಿಚಲಿತಗೊಳಿಸಿದನಂತೆ. ಇದರಿಂದಾಗಿ ತ್ರಿಪುರಾಸುರರ ಸಂಹಾರ ಸುಲಭವಾಯಿತು. ಇದನ್ನೇ ದಾಸರು "ಬತ್ತಲೆ ನಿಂದಿಹ ಬುದ್ಧನಿಗೆ" ಎಂದು ಹಾಡಿರುವುದು.

ಈ ಮೇಲಿನ ವಿವರಣೆಯನ್ನು ನೋಡಿದಾಗ ನಮಗೆ ಬರುವ ಮೊದಲ ಪ್ರಶ್ನೆ: "ಬುದ್ಧ ಸ್ತ್ರೀಯರ ಮುಂದೆ ಬತ್ತಲೆ ನಿಂತಿರುವ ಘಟನೆ ಇತಿಹಾಸದ ಬುದ್ಧನ ಕಥೆಯಲ್ಲಿ ಎಲ್ಲೂ ದಾಖಲಾಗಿಲ್ಲವಲ್ಲಾ" ಎನ್ನುವುದು. ಅದಕ್ಕೆ ಉತ್ತರವಾಗಿ ಇಲ್ಲಿ ಚತುರ್ಮುಖ ಹೇಳುತ್ತಾನೆ: "***ಅದೃಶ್ಯಮೂರ್ತಿಃ***" ಎಂದು. ಅಂದರೆ ಮನುಷ್ಯರಿಗೆ ಕಾಣುವ ರೂಪದಲ್ಲಿ ಈ ಘಟನೆ ನಡೆದಿಲ್ಲ. ಹಾಗಾಗಿ ಇದು ಇತಿಹಾಸದಲ್ಲಿ ದಾಖಲಾಗಿಲ್ಲ. ಇದು ದೇವಲೋಕದ ರಹಸ್ಯ. ಹೀಗಾಗಿ ಬುದ್ಧಾವತಾರದಲ್ಲಿ ಒಂದು ಮನುಷ್ಯ ಲೋಕಕ್ಕೆ ಸಂಬಂಧಿಸಿದ ವಿಷಯವಾದರೆ, ಇನ್ನೊಂದು ದೇವಲೋಕಕ್ಕೆ ಸಂಬಂಧಿಸಿದ ದೇವ ಗುಹ್ಯ ಅಡಗಿದೆ. ಈ ರೀತಿ ಅದೃಶ್ಯಮೂರ್ತಿಯಾಗಿ ಸ್ತ್ರೀಯರ ಮನಸ್ಸನ್ನು ವಿಚಲಿತಗೊಳಿಸಿದ ಬುದ್ಧ, ನಂತರ ಪ್ರತ್ಯಕ್ಷ ರೂಪನಾಗಿ ವಿಪರೀತ ಅರ್ಥ ನೀಡಬಲ್ಲ "***ಸರ್ವಂ ಕ್ಷಣಿಕಂ, ಸರ್ವಂ ಶೂನ್ಯಂ***" ಎನ್ನುವ ಉಪದೇಶ ನೀಡಿದ.

ಬುದ್ಧನ ಉಪದೇಶದ ವಿಶೇಷ ಏನೆಂದರೆ: ಅದು ಮೂಲತಃ ಮತಿಗೆಡಿಸುವ ವಿದ್ಯೆ ಅಲ್ಲದಿದ್ದರೂ ಕೂಡಾ, ಅಯೋಗ್ಯರಿಗೆ ಅದು ವಿಪರೀತ ವಿದ್ಯೆ. ಬುದ್ಧನ ಕಾಲದಲ್ಲಿ ವೈದಿಕರು ಹೆಚ್ಚಾಗಿ ಪ್ರಾಣಿ ಬಲಿ ಕೊಟ್ಟು ಯಜ್ಞ ಮಾಡುತ್ತಿದ್ದರು. ಹಾಗಾಗಿ ಬುದ್ಧ ವೇದದ ಹೆಸರಲ್ಲಿ ಪ್ರಾಣಿ ಹಿಂಸೆ ಮಾಡಬೇಡಿ ಎಂದು ಹೇಳಿದ. ಬುದ್ಧ ಎಲ್ಲೂ ವೇದ ಅಪ್ರಮಾಣ ಎಂದು ಹೇಳಲಿಲ್ಲ. ಆದರೆ ವೇದ ಪ್ರಮಾಣ ಎಂದೂ ಆತ ಹೇಳಲಿಲ್ಲ. ಇದರಿಂದಾಗಿ ಆತನ ಶಿಷ್ಯರು ವೇದ ಅಪ್ರಮಾಣ ಎನ್ನುವ ಭ್ರಮೆಗೆ ಒಳಗಾದರು. ಬುದ್ಧ ಎಲ್ಲೂ ದೇವರಿದ್ದಾನೆ ಎಂದಾಗಲೀ, ದೇವರಿಲ್ಲಾ ಎಂದಾಗಲೀ ಹೇಳಲಿಲ್ಲ. ಹೀಗಾಗಿ ಆತನ ಶಿಷ್ಯರು ದೇವರಿಲ್ಲ, ಎಲ್ಲವೂ ಶೂನ್ಯ, ಎಲ್ಲವೂ ಕ್ಷಣಿಕ ಎನ್ನುವ ವಿಪರೀತ ಅರ್ಥದಲ್ಲಿ ಆತನನ್ನು ಹಿಂಬಾಲಿಸಿದರು. ಬುದ್ಧ ಎಲ್ಲಿಯೂ ಸುಳ್ಳನ್ನು ಹೇಳಲಿಲ್ಲ. ಆದರೆ ಸತ್ಯವನ್ನು ಬಿಚ್ಚಿ ಹೇಳದೇ ಇದ್ದ ಕಾರಣ ಎಲ್ಲವೂ ಗೊಂದಲವಾಯಿತು.

ಬುದ್ಧನ ನಡೆ ಬಹಳ ರೋಚಕ. ಇದಕ್ಕಾಗಿ ಆತ ತೊಟ್ಟ ವೇಷವೂ ಕೂಡಾ ವಿಶಿಷ್ಠವಾದುದು. ಸನ್ಯಾಸಿಯಂತೆ ವೇಷತೊಟ್ಟು ವಿರಕ್ತ ಜೀವನ ನಡೆಸಿದ ಬುದ್ಧ. ಬುದ್ಧನಿಂದ ಜನಕ್ಕೆ ತಲುಪಿದ ವಿದ್ಯೆಯನ್ನು ಇಲ್ಲಿ "***ಔಪಧರ್ಮ್ಯಮ್***" ಎಂದಿದ್ದಾರೆ. ಅಂದರೆ ಧರ್ಮದಂತೆ ಕಾಣುವ ವಿದ್ಯೆಯದು. ಆತನ ಮಾತು ದಂಡೆಯ ಮೇಲೆ ಇಟ್ಟ ಮಾತಾಗಿತ್ತು. ಈ ರೀತಿ ಭಗವಂತ ಅಯೋಗ್ಯರಿಗೆ ತಪ್ಪು ತಿಳುವಳಿಕೆ ಬರುವಂತೆ ಮಾಡಿದ.

ಹೇಗೆ ಮಾತು ವ್ಯಕ್ತಿಯ ಯೋಗ್ಯತೆಗನುಗುಣವಾಗಿ ವ್ಯತಿರಿಕ್ತ ಅರ್ಥದಲ್ಲಿ ತೆರೆದುಕೊಳ್ಳುತ್ತದೆ ಎನ್ನುವುದಕ್ಕೆ ಒಂದು ಉತ್ತಮ ಉದಾಹರಣೆಯನ್ನು ನಾವು ಉಪನಿಷತ್ತಿನಲ್ಲಿ ಬರುವ ಕಥೆಯೊಂದರಲ್ಲಿ ಕಾಣಬಹುದು. ಒಮ್ಮೆ ಇಂದ್ರ(ದೇವತೆ) ಮತ್ತು ವಿಲೋಚನ(ದೈತ್ಯ) ಚತುರ್ಮುಖನ ಬಳಿ ಪಾಠಕ್ಕೆಂದು ಬಂದರಂತೆ. ಆಗ ಚತುರ್ಮುಖ: "ನಿಮ್ಮ ಕಣ್ಣಿನಲ್ಲಿ ನೋಡಿ. ಅಲ್ಲಿ ಕಾಣುವುದೇ ಭಗವಂತ" ಎನ್ನುವ ಉಪದೇಶ ನೀಡಿದನಂತೆ. ಇದನ್ನು ಇಂದ್ರ ಈ ರೀತಿ ವಿಶ್ಲೇಷಿಸುತ್ತಾನೆ: "ಕಣ್ಣಿನಲ್ಲಿ ಎಂದರೆ ನಮ್ಮ ಕಣ್ಣಿನಲ್ಲಿ ಸನ್ನಿಹಿತನಾಗಿರುವ ಭಗವಂತನ ರೂಪವನ್ನು ನಾವು ಉಪಾಸನೆ ಮಾಡಬೇಕು. ಕಣ್ಣಿನಲ್ಲಿ ಭಗವಂತನ ವಿಶೇಷ ಸನ್ನಿದಾನವಿರುವುದರಿಂದಲೇ ಕಣ್ಣು `ಸದಾ ಸ್ವಚ್ಛವಾಗಿರುತ್ತದೆ. ಕಣ್ಣು ಕಮಲದ ಎಸಳಿನಂತೆ. ದೇಹದ ಯಾವುದೇ ಭಾಗಕ್ಕೆ ಕೊಳೆ ಅಂಟಬಹುದು, ಆದರೆ ಕಣ್ಣಿಗೆ ಕೊಳೆ ಅಂಟದು. ಕಮಲದಲ್ಲಿ ಲಕ್ಷ್ಮಿಯ ಸನ್ನಿಧಾನವಿದ್ದಂತೆ, ಕಣ್ಣಿನಲ್ಲಿ ನಾರಾಯಣನ ಸನ್ನಿಧಾನವಿದೆ. ಹೀಗಾಗಿ ಭಗವಂತನನ್ನು 'ಕಮಲನಯನ' ಎಂದು ಕರೆಯುತ್ತಾರೆ. ಕಣ್ಣಿನಲ್ಲಿ ಭಗವಂತನನ್ನು ಕಾಣುವುದು ಎಂದರೆ ಲಕ್ಷ್ಮೀ

ನಾರಾಯಣರನ್ನು ಕಂಡು ಉಪಾಸನೆ ಮಾಡುವುದು" ಎಂದು. ಆದರೆ ವಿಲೋಚನ ತನ್ನ ಕಣ್ಣಿನಿಂದ ತನ್ನದೇ ಪ್ರತಿಬಿಂಬವನ್ನು ಕನ್ನಡಿಯಲ್ಲಿ ಕಾಣುತ್ತಾನೆ. ಕಂಡು ತನ್ನನ್ನೇ ತಾನು ಭಗವಂತ ಎಂದು ಕಲ್ಪಿಸಿಕೊಳ್ಳುತ್ತಾನೆ. ಉಪದೇಶ ಒಂದೇ ಆದರೂ ಅವರವರ ಜೀವ ಯೋಗ್ಯತೆಗೆ ಅನುಗುಣವಾಗಿ ತಿಳುವಳಿಕೆಯಾಗುತ್ತದೆ. ಬುದ್ಧನ ಉಪದೇಶವನ್ನು ಆತನ ಶಿಷ್ಯರು ಗ್ರಹಿಸಿರುವುದೂ ಕೂಡಾ ಇದೇ ರೀತಿ ವ್ಯತಿರಿಕ್ತವಾಗಿ.

ಒಂದೇ ಮಾತು ಬೇರೆಬೇರೆ ಸ್ವಭಾವದ ವ್ಯಕ್ತಿಗಳಿಗೆ ಹೇಗೆ ಬೇರೆಬೇರೆ ಅರ್ಥವನ್ನು ಕೊಡಬಲ್ಲದು ಎನ್ನುವುದಕ್ಕೆ ಶಾಸ್ತ್ರದಲ್ಲಿ ಇನ್ನೊಂದು ಸ್ವಾರಸ್ಯಕರವಾದ ಕಥೆಯನ್ನು ಹೇಳಿದ್ದಾರೆ. ಒಮ್ಮೆ ಮಾನವರು, ದಾನವರು ಮತ್ತು ದೇವತೆಗಳು ಚತುರ್ಮುಖನಲ್ಲಿಗೆ ಬಂದು ತಮಗೆ ಉಪದೇಶ ನೀಡಬೇಕೆಂದು ಕೇಳಿಕೊಂಡರಂತೆ. ಆಗ ಚತುರ್ಮುಖ "ದ-ದ-ದ" ಎಂದು ಹೇಳಿ, ಇದು ನಿಮಗೆ ಬೀಜಾಕ್ಷರ ಎಂದನಂತೆ. ಈ ಉಪದೇಶ ಪಡೆದು ಬಂದ ಮಾನವರು: "ನಾವು ಜಿಪುಣರಾಗಿ ಬಾಳುತ್ತಿದ್ದೇವೆ. 'ದ' ಅಂದರೆ ದತ್ತ. ನಾವು ಹೆಚ್ಚುಹೆಚ್ಚು ದಾನ ಮಾಡಬೇಕು" ಎನ್ನುವುದು ಬ್ರಹ್ಮನ ಉಪದೇಶ ಎಂದು ತಿಳಿದರಂತೆ. ಇನ್ನು ದಾನವರು: "ನಾವು ನಿರ್ದಯವಾಗಿ ಪ್ರಾಣಿ ಹಿಂಸೆ ಮಾಡುತ್ತೇವೆ. ಅದಕ್ಕಾಗಿ ಬ್ರಹ್ಮ 'ದ' ಅಂದರೆ ದಯೆ ತೋರಿ" ಎಂದು ಉಪದೇಶಿಸಿದ ಎಂದು ತಿಳಿದರಂತೆ. ಅತ್ತ ದೇವತೆಗಳು: "ನಾವು ಸದಾ ಭೋಗದಲ್ಲಿ ನಿರತರಾಗಿರುತ್ತೇವೆ. 'ದ' ಅಂದರೆ ದಮ. ಚತುರ್ಮುಖ ಇಂದ್ರಿಯ ನಿಗ್ರಹ ಮಾಡು ಎಂದು ಉಪದೇಶಿಸಿದ" ಎಂದು ತಿಳಿದರಂತೆ. ಚತುರ್ಮುಖ ನುಡಿದಿರುವ ಮಾತು ಒಂದೇ ಆದರೂ, ಅದು ಅರ್ಥವಾಗಿರುವುದು ಒಬ್ಬೊಬ್ಬರಿಗೆ ಒಂದೊಂದು ತರ.

ಬುದ್ಧನ ಉಪದೇಶ ಒಬ್ಬೊಬ್ಬರಿಗೆ ಒಂದೊಂದು ರೀತಿ ಅರ್ಥವಾಯಿತು ಎಂದು ಕೇವಲ ಭಾಗವತ ಮಾತ್ರ ಹೇಳುವುದಲ್ಲ. ಬೌದ್ಧರೂ ಕೂಡಾ ಇದೇ ಮಾತನ್ನು ಹೇಳುತ್ತಾರೆ. ಬುದ್ಧನ ಶಿಷ್ಯರಲ್ಲಿ ನಾಲ್ಕು ಕವಲುಗಳಿವೆ. ಅವುಗಳೆಂದರೆ: ೧.ವೈಭಾಷಿಕ, ೨.ಸೌತ್ರಾಂತಿಕ, ೩.ಯೋಗಾಚಾರ ಮತ್ತು ೪.ಮಾಧ್ಯಮಿಕ. ಇವು ತೇರವಾದ(ಹೀನಯಾನ) ಮತ್ತು ಮಹಾಯಾನ ಎನ್ನುವ ಎರಡು ಭೇದದ ಅಡಿಯಲ್ಲಿ ಬೆಳೆದ ಕವಲುಗಳು. ಭೌದ್ಧ ಧರ್ಮದವರೇ ಹೇಳುವಂತೆ: ಬುದ್ಧನ ಮಾತಿನ ನಿಜವಾದ ಅರ್ಥ ತಿಳಿಯದ ಶಿಷ್ಯರಿಂದಾಗಿ ಈ ರೀತಿಯ ಹಲವು ಕವಲುಗಳು ಬೆಳೆಯಿತು.

ಭಾಷೆಗೆ ಖಚಿತವಾದ ಅರ್ಥವಿಲ್ಲದಿರುವುದೇ ಈ ಎಲ್ಲಾ ಗೊಂದಲಗಳಿಗೆ ಕಾರಣ. ಉದಾಹರಣೆಗೆ "ಸೂರ್ಯ ಮುಳುಗಿದ" ಎಂದು ಹೇಳಿದರೆ: ಆಗಷ್ಟೇ ಉಪನಯನವಾದ ಬ್ರಾಹ್ಮಣ ಬಾಲಕನಿಗೆ "ಸೂರ್ಯಾಸ್ತವಾಯಿತು, ಜಪ ಮಾಡಬೇಕು" ಎಂದರ್ಥವಾಗುತ್ತದೆ. ಹೊಸದಾಗಿ ಮದುವೆಯಾದ ಯುವಕನಿಗೆ "ಹೆಂಡತಿ ಕಾಯುತ್ತಿರುತ್ತಾಳೆ" ಎನ್ನುವ ಅರ್ಥವಾಗುತ್ತದೆ. ಅದೇ ಮಾತು ಒಬ್ಬ ವ್ಯಾಪಾರಿಗೆ: "ಕತ್ತಲಾಯಿತು ಅಂಗಡಿ ಮುಚ್ಚಿ ಮನೆಗೆ ಹೋಗಬೇಕು" ಎನ್ನುವಂತೆ ಅರ್ಥವಾಗುತ್ತದೆ. ಹೀಗೆ ಸಂದರ್ಭ ಸನ್ನಿವೇಶಕ್ಕನುಗುಣವಾಗಿ ಭಾಷೆ ಅರ್ಥವಾಗುತ್ತದೆ. ಬುದ್ಧನ ಉಪದೇಶ ಶಿಷ್ಯರಿಗೆ ಅರ್ಥವಾಗಿದ್ದುದು ಹೀಗೇ. ಆತ ಹೇಳಿದ್ದು ಸುಳ್ಳನ್ನಲ್ಲ. ಆದರೆ ಶಿಷ್ಯರಿಗೆ ಅರ್ಥವಾಗಿರುವುದು ಸತ್ಯವಲ್ಲ.

ಭಗವಂತನ ಅವತಾರವಾಗುವುದು ಜ್ಞಾನಕಾರ್ಯ ಮತ್ತು ಬಲಕಾರ್ಯಕ್ಕಾಗಿ ಎನ್ನುತ್ತದೆ ಶಾಸ್ತ್ರ. ಭಗವಂತನ ಬುದ್ಧಾವತಾರ ಅಯೋಗ್ಯರ ಪಾಲಿಗೆ ಮೋಹಕ ರೂಪವಾದ ಬಲಾವತಾರ. ಈ ಅವತಾರದಲ್ಲಿ ಭಗವಂತ ಅಸುರರ ಪಾಲಿಗೆ ಮೋಹಕನಾಗಿ ಕಂಡು ಅವರನ್ನು ಸೆಳೆದ. ಬ್ರಹ್ಮಾಂಡಪುರಾಣ ಬುದ್ಧನ ಈ ನಡೆಯನ್ನು ಸುಂದರವಾಗಿ ಹೀಗೆ ವರ್ಣಿಸಿದೆ: ***ಮೋಹನಾರ್ಥಂ ದಾನವಾನಾಂ ಬಾಲರೂಪೀ ಪರಃ ಸ್ಥಿತಃ । ಪುತ್ರಂ ತಮ್ ಕಲ್ಪಯಾಮಾಸ***

*ಮೂಢಬುದ್ಧಿರ್ಜಿನಃ ಸ್ವಯಂ । ತತಃ ಸಂಮೋಹಯಾಮಾಸ ಜಿನಾದ್ಯಾನ ಸುರಾಂಶಕಾನ್ । ಭಗವಾನ್ ವಾಗ್ಭಿರುಗ್ರಾಭಿರಹಿಂಸಾವಾಚಿಭಿರ್ಹರಿಃ ।*

ವೈದಿಕ ಸಂಪ್ರದಾಯದಲ್ಲಿ ಇಂದು ನಾವು ಹೆಚ್ಚಾಗಿ ರಾಮ, ಕೃಷ್ಣ, ನರಸಿಂಹನ ಗುಡಿಗಳನ್ನೇ ಎಲ್ಲೆಡೆ ಕಾಣುತ್ತೇವೆ. ಆದರೆ ಬುದ್ಧನ ಉಪಾಸನೆ ವೈದಿಕ ಸಂಪ್ರದಾಯದಲ್ಲಿಲ್ಲ. ರಾಮ-ಕೃಷ್ಣರ ಉಪಾಸನೆಗೆ ಕಾರಣ ಅದು ನಮಗೆ ಅತ್ಯಂತ ಸಮೀಪದ ಅವತಾರ ಎನ್ನುತ್ತಾರೆ. ಆದರೆ ಕೃಷ್ಣಾವತಾರಕ್ಕೂ ನಂತರದ ಅವತಾರವಾದ ಬುದ್ಧನ ಗುಡಿಯನ್ನು ವೈದಿಕರು ಕಟ್ಟಲಿಲ್ಲ. ಇದಕ್ಕೆ ಕಾರಣ ಏನೆಂದರೆ ಬುದ್ಧನ ಉಪಾಸನೆಯಿಂದ ನಮ್ಮ ಯೋಗ್ಯತೆಗನುಗುಣವಾಗಿ ನಮಗೆ ಮೋಹ ಬರುವ ಸಾಧ್ಯತೆ ಹೆಚ್ಚು. ಆದರೆ ರಾಮ ಮತ್ತು ಕೃಷ್ಣ ಅವತಾರಗಳು ಮೋಹ ಪರಿಹಾರಕ ರೂಪಗಳು. ರಾಮ-ಕೃಷ್ಣರನ್ನು ಬಿಟ್ಟರೆ ಇನ್ನು ನರಸಿಂಹನ ಗುಡಿ ಎಲ್ಲೆಡೆ ಕಾಣಸಿಗುತ್ತದೆ. ಏಕೆಂದರೆ ನರಸಿಂಹ ನಮ್ಮ ಉಪಾಸನೆಗೆ ಸಂಬಂಧಿಸಿದ ಎಲ್ಲಾ ದೋಷಗಳನ್ನು ಪರಿಹಾರ ಮಾಡುವ ರೂಪ. ನಮ್ಮ ಸ್ವರೂಪಕ್ಕೆ ಸಂಬಂಧಿಸಿದ ಬಿಂಬರೂಪ ಉಪಾಸನೆಯಲ್ಲೂ ನರಸಿಂಹ ಬರುತ್ತಾನೆ. ಏಕೆಂದರೆ ನರಸಿಂಹನಿಲ್ಲದೇ ನಾವು ನಮ್ಮಲ್ಲಿರುವ ಕೊಳೆಯನ್ನು ತೊಳೆದು ಸ್ವಚ್ಛವಾಗುವುದು ಸಾಧ್ಯವಿಲ್ಲ. ಹೀಗಾಗಿ ಜಯ-ವಿಜಯರನ್ನು ಉದ್ಧರಿಸಿದ, ಪ್ರಹ್ಲಾದವರದ, ಸರ್ವದೋಷ ಪರಿಹಾರಕ ನರಸಿಂಹನ ಆರಾಧನೆ ಹೆಚ್ಚಾಗಿ ಮಾಡಲಾಗುತ್ತದೆ. ಹೀಗಾಗಿ ಬಹಳ ಅಲ್ಲದಿದ್ದರೂ, ಸಾಕಷ್ಟು ನರಸಿಂಹ ಗುಡಿಗಳನ್ನು ನಾವು ಈ ದೇಶದಲ್ಲಿ ಕಾಣುತ್ತೇವೆ. ಆದರೆ ರಾಮ-ಕೃಷ್ಣರ ಗುಡಿಗಳು ದೇಶದಲ್ಲಿ ವ್ಯಾಪಕವಾಗಿವೆ. ಏಕೆಂದರೆ ಧರ್ಮಾಚರಣೆಯನ್ನು ಹೇಗೆ ಮಾಡಬೇಕು ಎನ್ನುವುದನ್ನು ಭಗವಂತ ರಾಮ ರೂಪದಲ್ಲಿ ತೋರಿದರೆ, ಸತ್ಯದ ವ್ಯಾಖ್ಯಾನವನ್ನು ಶ್ರೀಕೃಷ್ಣರೂಪಿಯಾಗಿ ನಿರೂಪಿಸಿದ ಭಗವಂತ.

ಈ ಹಿಂದೆ ಹೇಳಿದಂತೆ ರಾಮ-ಕೃಷ್ಣ-ನರಸಿಂಹ ರೂಪಗಳು ಓಂಕಾರ ಪ್ರತಿಪಾದ್ಯ ರೂಪಗಳು. ಇದರ ಉಪಾಸನೆಯನ್ನು ಲೋಕಕಂಟಕರು ಮಾಡಿ, ಆ ಶಕ್ತಿಯಿಂದ ಲೋಕಕ್ಕೆ ತೊಂದರೆಯಾಗಬಾರದು ಎನ್ನುವುದು ಭಗವಂತನ ಇಚ್ಛೆಯಾಗಿತ್ತು. ಹೀಗಾಗಿ ದುಷ್ಟರನ್ನು ಅವರ ದಾರಿಯಲ್ಲೇ ಕಳುಹಿಸಲು, ಧರ್ಮದಂತೆ ಕಾಣುವ, ಅಧರ್ಮದ ಬೋದ ಬರುವ ಮಾತಿನಿಂದ, ದೈತ್ಯರನ್ನು ಅವರ ಸಹಜ ಸ್ವಭಾವಕ್ಕೆ ತಿರುಗಿಸಲು ಭಗವಂತ ಬುದ್ಧನಾಗಿ ಅವತರಿಸಿದ. ಹೀಗೆ ಸತ್ಯವನ್ನು ಗೊಂದಲಗೊಳಿಸಿ, ಅಸುರರನ್ನು ಮೋಹಗೊಳಿಸಿದ ಮೋಹಕ ರೂಪವಾದ ಬುದ್ಧನನ್ನು ಉಪಾಸನೆ ಮಾಡುವ ಸಂಪ್ರದಾಯ ವೈದಿಕರಲ್ಲಿಲ್ಲ.

## ೧೪. ಕಲ್ಕಿ ಅವತಾರ

ಯರ್ಹ್ಯಾಲಯೇಷ್ವಪಿ ಸತಾಂ ನ ಕಥಾ ಹರೇಃ ಸ್ಯುಃ ಪಾಷಂಡಿನೋ ದ್ವಿಜಜನಾ ವೃಷಳಾ ನೃದೇವಾಃ ।
ಸ್ವಾಹಾ ಸ್ವಧಾ ವಷಡಿತಿ ಸ್ಮ ಗಿರೋ ನ ಯತ್ರ ಶಾಸ್ತಾ ಭವಿಷ್ಯತಿ ಕಲೇರ್ಭಗವಾನ್ ಯುಗಾಂತೇ ॥೩೮॥

ನಮಗೆ ತಿಳಿದಂತೆ ಒಂದು ಮನ್ವಂತರದಲ್ಲಿ ಒಟ್ಟು ಎಪ್ಪತ್ತೊಂದು ಯುಗಚಕ್ರಗಳಿರುತ್ತವೆ ಮತ್ತು ನಾವೀಗ ವೈವಸ್ವತ ಮನ್ವಂತರದ ಇಪ್ಪತ್ತೆಂಟನೇ ಕಲಿಯುಗದಲ್ಲಿದ್ದೇವೆ. (ದ್ವಾಪರ ಮತ್ತು ಕಲಿಯುಗದ ಸಂಧಿಕಾಲದಲ್ಲಿದ್ದೇವೆ). "ಈ ಕಲಿಯುಗದ ಅಂತ್ಯದಲ್ಲಿ ಭಗವಂತ ಕಲ್ಕಿಯ ಅವತಾರದಲ್ಲಿ ಭೂಮಿಯಲ್ಲಿ ಅವತರಿಸಲಿದ್ದಾನೆ" ಎಂದಿದ್ದಾನೆ ಚತುರ್ಮುಖ. ಶಾಸ್ತ್ರದ ಪ್ರಕಾರ ಕಲಿಯುಗದ ಅವಧಿ ಸುಮಾರು ನಾಲ್ಕು ಲಕ್ಷದ ಮೂವತ್ತೆರದು ಸಾವಿರ ವರ್ಷಗಳು. ಸುಮಾರು ಐದುಸಾವಿರ ವರ್ಷಗಳ ಹಿಂದೆ ನಡೆದ ಮಹಾಭಾರತ ಯುದ್ಧದ ಹದಿನೆಂಟನೇ ದಿನ, ದುರ್ಯೋಧನ

ತೊಡೆಮುರಿದು ಬಿದ್ದಾಗ, ಈ ಇಪ್ಪತ್ತೆಂಟನೇ ಕಲಿಯುಗ ಆರಂಭವಾಯಿತು. ಈ ಕಲಿಯುಗ ಮುಗಿದು ಇಪ್ಪತ್ತೊಂಬತ್ತನೇ ಕೃತಯುಗ ಪ್ರಾರಂಭವಾಗಲು ಇನ್ನೂ ಸುಮಾರು ನಾಲ್ಕು ಲಕ್ಷದ ಇಪ್ಪತ್ತಾರು ಸಾವಿರ ವರ್ಷಗಳು ಬಾಕಿ ಇವೆ. [ಹೀಗಾಗಿ ಕಲ್ಕಿ ಅವತಾರವಾಗಲೂ ಇನ್ನೂ ಅನೇಕ ವರ್ಷಗಳು ಕಳೆಯಬೇಕು. ಇಂದು ಅನೇಕ ಮಂದಿ ನಾನೇ ಕಲ್ಕಿ ಎಂದು ಜನರನ್ನು ಮೋಸಗೊಳಿಸುತ್ತಿರುವ ವಿಷಯ ನಮಗೆ ತಿಳಿದಿದೆ. ಇಂತಹ ಜನರ ಬಗ್ಗೆ ಓದುಗರು ಜಾಗೃತರಾಗಿರಬೇಕು]

ನಮಗೆ ತಿಳಿದಂತೆ ಭಗವಂತನ ಅವತಾರವಾಗಲು ಬಲವಾದ ಕಾರಣ ಬೇಕೇ ಬೇಕು. ಈ ಕಾರಣವನ್ನು ಇಲ್ಲಿ ಚತುರ್ಮುಖ ನಾರದರಿಗೆ ವಿವರಿಸಿರುವುದನ್ನು ಕಾಣಬಹುದು. "ಅಂತಹ ಒಂದು ದಿನ ಬರುತ್ತದೆ. ಆಗ ಯಾರ ಮನೆಯಲ್ಲೂ ಕೂಡಾ ಭಗವಂತನ ಚಿಂತನೆ ನಡೆಯುವುದಿಲ್ಲ. ಇಡೀ ದೇಶ ಭಗವಂತನನ್ನು ಮರೆತು ನಾಸ್ತಿಕತೆಯಿಂದ ಬದುಕಲಾರಂಭಿಸುತ್ತದೆ. ಈ ರೀತಿ ಮಾನವ ಜನಾಂಗ ಭಗವಂತನನ್ನು ಪೂರ್ತಿ ಮರೆತಾಗ ಭಗವಂತನ ಅವತಾರವಾಗುತ್ತದೆ" ಎಂದಿದ್ದಾನೆ ಚತುರ್ಮುಖ. "ಆ ಕಾಲದಲ್ಲಿ ದ್ವಿಜರು ಅಂದರೆ ಜಗತ್ತಿಗೆ ಭಗವಂತನ ಕುರಿತು ಹೇಳಬೇಕಾದ ಜ್ಞಾನಿಗಳೂ ಕೂಡಾ ದೇವರನ್ನು ನಿರಾಕರಣೆ ಮಾಡುವ ಪಾಷಂಡಿಗಳಾಗುತ್ತಾರೆ. ಪ್ರಜೆಗಳನ್ನು ಧರ್ಮದ ಮಾರ್ಗದಲ್ಲಿ ಮುನ್ನೆಡೆಸಬೇಕಾದ ರಾಜರುಗಳಿಗೆ(ವೃಶಳಾ) ಧರ್ಮ ಮುಖ್ಯವಾಗದೇ ತಮ್ಮ ಸ್ವಾರ್ಥವೇ ಮುಖ್ಯವಾಗುತ್ತದೆ. ಎಲ್ಲಾ ಮನೆಗಳಲ್ಲೂ ಸ್ವಾಹಾ, ಸ್ವಧಾ, ವಷಟ್ ಇತ್ಯಾದಿ ಶಬ್ದಪ್ರಯೋಗ ನಿಂತು ಹೋಗುತ್ತದೆ. ಇಂತಹ ಸಮಯದಲ್ಲಿ ಭಗವಂತನ ಕಲ್ಕಿ ಅವತಾರವಾಗಲಿದೆ" ಎಂದಿದ್ದಾನೆ ಚತುರ್ಮುಖ.

ಈ ಶ್ಲೋಕದಲ್ಲಿ ಬಳಸಿರುವ 'ದ್ವಿಜಜನಾ ಮತ್ತು ವೃಷಳಾ' ಎನ್ನುವ ಪದವನ್ನು ಕೆಲವು ವ್ಯಾಖ್ಯಾನಕಾರರು ಬ್ರಾಹ್ಮಣ ಮತ್ತು ಶೂದ್ರ ಎನ್ನುವ ಅರ್ಥದಲ್ಲಿ ಬಳಸಿದ್ದಾರೆ. ಆದರೆ ಇಲ್ಲಿ ದ್ವಿಜ ಎಂದರೆ ಜ್ಞಾನಿ ಎಂದರ್ಥ ಹಾಗೂ ವೃಷಳಾ ಎಂದರೆ ವೃಷದ(ಧರ್ಮದ) ಲಯಕಾರ, ಅಂದರೆ ಧರ್ಮವನ್ನು ನಾಶಮಾಡಿ ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವವ ಎಂದರ್ಥ. ಇನ್ನು ಇಲ್ಲಿ ಬಳಸಿರುವ ಸ್ವಾಹಾ, ಸ್ವಧಾ ಮತ್ತು ವಷಟ್ ಪದಗಳು ಯಜ್ಞದಲ್ಲಿ ಆಹುತಿ ಕೊಡುವಾಗ ಬಳಸುವ ಶಬ್ದಗಳು. ಇವು ಕ್ರಮವಾಗಿ ದೇವತೆಗಳು, ಪಿತೃಗಳು ಮತ್ತು ಭಗವಂತನನ್ನು ಸಂಬೋಧಿಸುತ್ತವೆ. "ನನ್ನದೇನೂ ಇಲ್ಲ ಎಲ್ಲವೂ ನಿನ್ನದೇ" ಎನ್ನುವ ಅರ್ಥದಲ್ಲಿ 'ಸ್ವಾಹಾ' ಪದವನ್ನು ಯಜ್ಞದಲ್ಲಿ ಬಳಸುತ್ತಾರೆ. ನಮಗೆ ದೇಹದ ಮೂಲಕ ಆಕಾರವನ್ನು ಕೊಟ್ಟು, 'ನನ್ನತನ'ವನ್ನು(ಸ್ವಂ) ಕರುಣಿಸಿದ ಪಿತೃಗಳಿಗೆ ಆಹುತಿ ಕೊಡುವಾಗ 'ಸ್ವಧಾ' ಎಂದು ಸಂಬೋಧಿಸುತ್ತಾರೆ. ಯಾರಿಗೆ ಏನನ್ನು ಕೊಟ್ಟರೂ ಕೂಡಾ ಅದು ಅಂತತಃ ತಲುಪುವುದು ಭಗವಂತನನ್ನು. ಆತನ ಅರ್ಪಣೆಗೆ ಯಜ್ಞದಲ್ಲಿ 'ವೌಷಟ್' ಪದ ಬಳಸುತ್ತಾರೆ. ಮೂಲತಃ ಯಜ್ಞದಲ್ಲಿ ಭಗವಂತನಿಗೆ ಅರ್ಪಣೆ ಮಾಡಲು ಐದು ಮಂತ್ರಗಳಿವೆ. ಅವುಗಳೆಂದರೆ: *ಓ ಶ್ರಾವಯಾ, ಅಸ್ತು ಶ್ರೌಷಟ್ , ಯಜಾ, ಯೇ ಯಜಾಮಹೇ, ವೌ...ಷಟ್.* ಇಲ್ಲಿ ವೌ..ಷಟ್ ಎಂದರೆ ಗುಣಪೂರ್ಣನಾದ ಭಗವಂತನಿಗೆ ಅರ್ಪಣೆ ಎಂದರ್ಥ. ಇದನ್ನೇ ಇಲ್ಲಿ ಚತುರ್ಮುಖ 'ವಷಟ್ ಎಂದು ವಿವರಿಸಿದ್ದಾನೆ. ಒಟ್ಟಿನಲ್ಲಿ ಹೇಳಬೇಕೆಂದರೆ: ಸ್ವಾರ್ಥಿಗಳಾಗಿ, ಭಗವಂತನನ್ನು ಸಂಪೂರ್ಣ ಮರೆತು ಜನ ಬದುಕಲು ಆರಂಭಿಸಿದಾಗ, ಭಗವಂತ ದುಷ್ಟ ಜನಾಂಗದ ತಲೆ ಕತ್ತರಿಸಲು ಕಲ್ಕಿಯಾಗಿ ಅವತರಿಸುತ್ತಾನೆ.

ಇಲ್ಲಿ ಭಗವಂತ ದುಷ್ಟರ ತಲೆ ಕತ್ತರಿಸುತ್ತಾನೆ ಎಂದಾಗ ನಾವು ಒಬ್ಬ ವ್ಯಕ್ತಿ ಇಡೀ ದೇಶದಲ್ಲಿನ ದುಷ್ಟರ ತಲೆ ಕಡಿಯುತ್ತಾನೆ ಎಂದು ತಿಳಿಯಬೇಕಾಗಿಲ್ಲ. ಭಗವಂತನ ಅವತಾರವಾದಾಗ ದುಷ್ಟ ಜನರೇ ಒಬ್ಬರು ಇನ್ನೊಬ್ಬರ ತಲೆ ಕಡಿದುಕೊಂಡು ನಾಶವಾಗಬಹುದು. ಒಟ್ಟಿನಲ್ಲಿ ಈ ಅವತಾರದಿಂದ ಅಧರ್ಮದ ನಾಶವಾಗಿ ಮತ್ತೆ ಧರ್ಮ ಸಂಸ್ಥಾಪನೆಯೊಂದಿಗೆ ಹೊಸಯುಗ (ಕೃತಯುಗ) ಆರಂಭವಾಗುತ್ತದೆ.

## ಭಗವಂತನ ಮಹಿಮೆಯ ತುದಿ ಕಂಡವನ್ಯಾರು?

**ಸರ್ಗೇ ತ ಯೋSಹಮೃಷಯೋ ನವ ಯೇ ಪ್ರಜೇಶಾಃ ಸ್ಥಾನೇSಥ ಧರ್ಮಮಖಮನ್ವಮರಾವನೀಶಾಃ ।**
**ಅಂತೇ ತ್ವಧರ್ಮಹರಮನ್ಯುವಶಾಸುರಾದ್ಯಾ ಮಾಯಾವಿಭೂತಯ ಇಮಾಃ ಪುರುಶಕ್ತಿಭಾಜಃ ॥೩೯॥**

**ವಿಷ್ಣೋರ್ನು ವೀರ್ಯಗಣನಾಂ ಕತಮೋSರ್ಹತೀಹ ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ।**
**ಚಸ್ಕಂಭ ಯಃ ಸ್ವರಭಸಾ ಸ್ಖಲಿತಂ ತ್ರಿಪೃಷ್ಠಂ ಯಸ್ಮಾ್ಂ ನಿಶಾಮ್ಯ ಸದನಾದುರುಕಂಪಮಾನಮ್ ॥೪೦॥**

**ನಾಂತಂ ವಿದಾಮ್ಯಹಮಮೀ ಮುನಯಃಪ್ರ ಜೇಶಾ ಮಾಯಾಬಲಸ್ಯ ಪುರುಷಸ್ಯ ಕುತೋSಪರೇ ಯೇ ।**
**ಗಾಯನ್ ಗುಣಾನ್ ದಶಶತಾನನ ಆದಿದೇವಃ ಶೇಷೋSಧುನಾSಪಿ ಸಮವಸ್ಯತಿ ನಾಸ್ಯ ಪಾರಮ್ ॥೪೧॥**

ಭಗವಂತನ ಅಸುರ ಸಂಹಾರವನ್ನು ವಿವರಿಸುತ್ತಾ ಚತುರ್ಮುಖ ವಿಶೇಷವಾಗಿ "ಮನ್ಯುವಶರಾದ ಅಸುರರು" ಎಂದು ಹೇಳಿರುವುದನ್ನು ನಾವಿಲ್ಲಿ ಕಾಣುತ್ತೇವೆ. '*ಮನ್ಯುವಶರು*' ಎಂದರೆ 'ಕ್ರೋಧವಶರಾದವರು' ಎಂದರ್ಥ. ಭೀಮನ ಅಂತರ್ಯಾಮಿಯಾಗಿ ನಿಂತು ಮಹಾಭಾರತ ಯುದ್ಧ ಕಾಲದಲ್ಲಿ ಮನ್ಯುವಷರನ್ನು ಸಂಹಾರ ಮಾಡಿದ ಭಗವಂತ, ಅದೇ ಮನ್ಯುವಶರು ನಂತರ ಮನುಷ್ಯರ ಮನಸ್ಸಿನಲ್ಲಿ ಕುಳಿತು ಅವರ ಮನಸ್ಸನ್ನು ಕೆಡಿಸಲಾರಂಭಿಸಿದಾಗ, ಆಚಾರ್ಯಪುರುಷನಾಗಿ ಬಂದಿರುವ ಪ್ರಾಣದೇವರ ಅಂತರ್ಯಾಮಿಯಾಗಿ ನಿಂತು ಸಜ್ಜನರ ಉದ್ಧಾರ ಮಾಡಿದ.
ಭಗವಂತನ ಅಪೂರ್ವವಾದ ಗುಣವರ್ಣನೆ ಮಾಡುತ್ತಾ ಚತುರ್ಮುಖ ಹೇಳುತ್ತಾನೆ: "ನೆಲದಲ್ಲಿನ ಮಣ್ಣಿನ ಕಣಗಳನ್ನಾದರೂ ಎಣಿಸಬಹುದು ಆದರೆ ಭಗವಂತನ ಗುಣಗಳು ಇಷ್ಟೇ ಎಂದು ಹೇಳುವುದು ಅಸಾಧ್ಯ" ಎಂದು. ಏಕೆಂದರೆ ಭಗವಂತ ಅನಂತಗುಣಪೂರ್ಣ. ಮುಂದುವರಿದು ಚತುರ್ಮುಖ ಹೇಳುತ್ತಾನೆ: "ನಾನಾಗಲೀ, ಸೃಷ್ಟಿಯ ಆದಿಯಲ್ಲಿರುವ ಪ್ರಜಾಪತಿಗಳಾಗಲೀ, ಋಷಿ-ಮುನಿಗಳಾಗಲೀ, ಭಗವಂತನ ತುದಿ-ಬುಡವನ್ನು ಕಂಡಿಲ್ಲ" ಎಂದು. ಚತುರ್ಮುಖ ಈ ರೀತಿ ಹೇಳಲು ಆತನ ಅಜ್ಞಾನ ಕಾರಣವಲ್ಲ. ಯಾರೂ ಭಗವಂತನ ತುದಿಯನ್ನು ಕಂಡಿಲ್ಲ. ಏಕೆಂದರೆ ಆತನ ಗುಣಗಳಿಗೆ ತುದಿಯೇ ಇಲ್ಲ! ಚತುರ್ಮುಖ ಜಗತ್ತಿನಲ್ಲಿ ಸೃಷ್ಟಿಯಾದ ಮೊದಲ ಜೀವ. ಆತನಿಗೇ ಭಗವಂತ ಪೂರ್ಣವಾಗಿ ತಿಳಿದಿಲ್ಲ ಎನ್ನುವಾಗ ಇನ್ನು ಇತರರಿಗೆ ತಿಳಿಯುವುದು ಹೇಗೆ ಸಾಧ್ಯ? ಚತುರ್ಮುಖನ ಈ ಮಾತನ್ನೇ ಋಗ್ವೇದದಲ್ಲಿ ಹೀಗೆ ಹೇಳಿದ್ದಾರೆ: ***ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ । ಉದಸ್ತಭ್ನಾ ನಾಕಮೃಷ್ವಂ ಬೃಹಂತಂ ದಾಧರ್ಥ ಪ್ರಾಚೀಂ ಕಕುಭಂ ಪೃಥಿವ್ಯಾಃ ॥೭.೦೯೯.೦೨॥*** "ಓ ವಿಷ್ಣುವೇ, ಹಿಂದೆ ಹುಟ್ಟಿದವರು, ಈಗ ಇರುವವರು, ಮುಂದೆ ಹುಟ್ಟುವವರು, ಯಾರೊಬ್ಬರೂ ಕೂಡಾ ಸರ್ವಗತನಾದ ನಿನ್ನ ಮಹಿಮೆಯ ತುತ್ತ ತುದಿಯನ್ನು ಕಾಣಲಾರರು, ಪಡೆಯಲಾರರು."
ಅನಂತನಾದ ಭಗವಂತನನ್ನು ಇಲ್ಲಿ 'ಪುರುಷ' ಎಂದು ಕರೆದಿದ್ದಾರೆ. ಈ ಅಪೂರ್ವ ವೈದಿಕ ಶಬ್ದದ ಅರ್ಥವ್ಯಾಪ್ತಿಯನ್ನು ನಾವು ಈ ಹಿಂದೆ ವಿಶ್ಲೇಷಿಸಿದ್ದೇವೆ. ಸ್ಥೂಲವಾಗಿ ನೋಡಿದರೆ: ಪೂರ್ಣತೆಯನ್ನು ಪಡೆದ ಮನುಷ್ಯ ಶರೀರದಲ್ಲಿರುವ ಜೀವ 'ಪುರುಷ' . ಆದರೆ ಎಲ್ಲಾ ಪುರಗಳಲ್ಲೂ ನೆಲೆಸಿ, ಎಲ್ಲವನ್ನೂ ತಿಳಿದಿರುವ ಭಗವಂತ ನಿಜವಾದ ಪುರುಷ

ಶಬ್ದವಾಚ್ಯ. ಜಗತ್ತಿನ ತಾಯಿಯಾದ ಚಿತ್ಪ್ರಕೃತಿ ಲಕ್ಷ್ಮಿಗೆ ಎಲ್ಲವೂ ತಿಳಿದಿದೆ. ಆದರೆ ಅವಳಿಗೂ ಎಲ್ಲವನ್ನೂ ನಿಯಂತ್ರಿಸುವ ಶಕ್ತಿ ಕೊಟ್ಟ ಭಗವಂತನ ಪಾರಮ್ಯದ ತುದಿಯನ್ನು ಅರಿಯುವುದು ಅಸಂಭವ.

ನಮಗೆ ಭಗವಂತನ ಪರಿಚಯ ಮಾಡಿಸುವವರು ಗುರುಗಳು. ಅವರು ಶಬ್ದಗಳ ಮುಖೇನ ಭಗವಂತನ ವರ್ಣನೆ ಮಾಡುತ್ತಾರೆ. ಸದಾ ಭಗವಂತನ ಜೊತೆಗಿರುವ ಸಾವಿರ ಹೆಡೆಗಳ ಶೇಷ ಛಂದಃಪುರುಷ. ಆತ ವರ್ಣಮಾಲೆಗಳ ದೇವತೆ. ನಮ್ಮೊಳಗೆ ಶೇಷಶಕ್ತಿ ಜಾಗೃತವಾದಾಗ ನಾವು ಅಕ್ಷರಗಳನ್ನು ಉಚ್ಛರಿಸುವ ಸಾಮರ್ಥ್ಯ ಪಡೆಯುತ್ತೇವೆ. ಇಂತಹ ಶಬ್ದನಿಯಾಮಕ ಆದಿಶೇಷ ತನ್ನ ಸಾವಿರ ಮುಖಗಳಿಂದ, ಅನಾದಿ ಅನಂತ ಕಾಲಗಳಿಂದ ಭಗವಂತನ ಗುಣವರ್ಣನೆ ಮಾಡುತ್ತಿದ್ದರೂ ಕೂಡಾ, ಆತನಿಂದ ಅದನ್ನು ಹೇಳಿ ಮುಗಿಸಲು ಸಾಧ್ಯವಾಗಿಲ್ಲ. ಇದರ ಅರ್ಥ: ಶಬ್ದಗಳಿಂದ ಭಗವಂತನನ್ನು ಅಳೆಯಲು ಸಾಧ್ಯವಿಲ್ಲ. ಶಬ್ದ ಸಾಮರ್ಥ್ಯಕ್ಕೆ, ಅದನ್ನು ಉಚ್ಚರಿಸುವ ವ್ಯಕ್ತಿಗೆ ಒಂದು ಮಿತಿ ಇದೆ. ಆದರೆ ಭಗವಂತನ ಗುಣಕ್ಕೆ ಮಿತಿ ಇಲ್ಲ.

[ಕೆಲವೊಮ್ಮೆ ಪುರಾಣಗಳಲ್ಲಿ ಸಾಂಕೇತಿಕವಾಗಿ ಅನೇಕ ವಿಷಯವನ್ನು ಹೇಳಲಾಗುತ್ತದೆ. ಉದಾಹರಣೆಗೆ ಶೇಷನ ಸಾವಿರ ಮುಖ. ಇದರರ್ಥ ಶೇಷ ತಾನು ಇಚ್ಛಿಸಿದರೆ ಸಾವಿರ ಮುಖಗಳಿಂದ ಭಗವಂತನ ಗುಣಗಾನ ಮಾಡಬಲ್ಲ ಎಂದರ್ಥ. ಅಂತಹ ಶಕ್ತಿಯನ್ನು ಭಗವಂತ ಆತನಿಗೆ ಕರುಣಿಸಿದ್ದಾನೆ. ಇನ್ನು ೧೦೧ ಹೆಡೆಗಳ ಮೇಲೆ ನರ್ತಿಸುವ ಶ್ರೀಕೃಷ್ಣ. ಇದು ಯೋಗಾಭ್ಯಾಸಕ್ಕೆ ಸಂಬಂಧಿಸಿದ ಮಾತು. ಈ ದೇಹದಲ್ಲಿ ಪ್ರಧಾನವಾಗಿ ೧೦೧ ನಾಡಿಗಳಿವೆ. ಉಪನಿಷತ್ತಿನಲ್ಲಿ ಹೇಳುವಂತೆ: ***ಶತಮ್ ಚ ಏಕಾ ಚ ಹೃದಯಸ್ಯ ನಾಡ್ಯಃ ತಾಸಾಮ್ ಮೂರ್ಧಾನಮ್ ಅಭಿನಿಸ್ರೃತಾ ಏಕಾ | ತಯಾ ಊರ್ಧ್ವಮ್ ಆಯನ್ ಅಮೃತತ್ವಮ್ ಏತಿ ವಿಶ್ವಙ್ಙನ್ಯಾ ಉತ್ಕ್ರಮಣೇ ಭವಂತಿ ||*** ಈ ನಾಡಿಗಳಲ್ಲಿನ ಪ್ರಧಾನ ನಾಡಿ ಸಹಸ್ರಾರದಲ್ಲಿದೆ. ನಮ್ಮಲ್ಲಿರುವ ಶೇಷನ (ಕುಂಡಲಿನಿ ಶಕ್ತಿ) ಹೆಡೆಯ ಮೇಲೆ (ಸಹಸ್ರಾರದಲ್ಲಿ) ಭಗವಂತ ನಾಟ್ಯವಾಡಿದಾಗ ನಮಗೆ ಭಗವಂತನ ಸಾಕ್ಷಾತ್ಕಾರವಾಗುತ್ತದೆ].

## ತಿಳಿಯಲಾಗದ ಭಗವಂತನನ್ನು ತಿಳಿಯುವುದೆಂತು? ತಿಳಿದು ಸೇರುವುದೆಂತು?

**ಯೇಷಾಂ ಸ ಏವ ಭಗವಾನ್ ದಯಯೇದನಂತಃ ಸರ್ವಾತ್ಮನಾSಶ್ರಿತಪದೋ ಯದಿ ನಿರ್ವ್ಯಲೀಕಮ್ ।**
**ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ ನೈಷಾಂ ಮಮಾಹಮಿತಿ ಧೀಃ ಶ್ವಸೃಗಾಲಭಕ್ಷ್ಯೇ ॥೪೨॥**

"ಭಗವಂತನನ್ನು ಪೂರ್ಣವಾಗಿ ತಿಳಿದವರಿಲ್ಲ" ಎನ್ನುವ ಚತುರ್ಮುಖನ ಮಾತನ್ನು ಕೇಳಿದಾಗ ಇಲ್ಲೊಂದು ಪ್ರಶ್ನೆ ಬರುತ್ತದೆ. "ಹೇಗಿದ್ದರೂ ಆತನನ್ನು ತಿಳಿಯಲು ಸಾಧ್ಯವಿಲ್ಲ. ಹಾಗಿರುವಾಗ ಆ ಮಾರ್ಗದಲ್ಲಿ ನಾವೇಕೆ ಪ್ರಯತ್ನಿಸಬೇಕು?" ಎನ್ನುವ ಪ್ರಶ್ನೆ. ಇದಕ್ಕೆ ಉತ್ತರರೂಪವಾಗಿ ಮೇಲಿನ ಶ್ಲೋಕವಿದೆ.

ಭಗವಂತನ ಬಗ್ಗೆ ನಿರ್ಣಾಯಕವಾಗಿ "ಹೀಗೇ" ಎಂದು ತೀರ್ಮಾನ ಕೊಡುವುದು ಸಾಧ್ಯವಿಲ್ಲ ನಿಜ. ಅದು ನಮ್ಮ ಸಾಮರ್ಥ್ಯಕ್ಕೆ ಮೀರಿದ ವಿಷಯ. ನಾವು ಭಗವಂತನನ್ನು ಬಲಪ್ರಯೋಗದಿಂದ ಒಲಿಸಿಕೊಳ್ಳಲೂ ಸಾಧ್ಯವಿಲ್ಲ. ಹೀಗಾಗಿ ಇರುವ ಒಂದೇ ಒಂದು ಮಾರ್ಗ: ನಾವು ನಮ್ಮ ಅಹಂಕಾರ-ಮಮಕಾರವನ್ನು ಕಳಚಿಕೊಂಡು ಭಗವಂತನ ದಯೆಗಾಗಿ ಕಾಯುವುದು. ಒಮ್ಮೆ ಆತನ ಅನುಗ್ರಹದ ದೃಷ್ಟಿ ನಮ್ಮ ಮೇಲೆ ಬಿದ್ದು ನಮ್ಮ ಮೇಲೆ ಆತನಿಗೆ ಅನುಕಂಪ ಬಂತೆಂದರೆ, ಆಗ ಆತ ನಮಗೆ ಕಾಣಿಸಿಕೊಳ್ಳುತ್ತಾನೆ.

"ಭಗವಂತನ ಅನುಗ್ರಹ ನಮ್ಮ ಮೇಲಾಗಬೇಕಾದರೆ ಮೊತ್ತಮೊದಲು ನಾವು ನಾನು-ನನ್ನದು ಎನ್ನುವ ಅಹಂಕಾರ-ಮಮಕಾರವನ್ನು ತೊರೆದು, ನಿರ್ವ್ಯಲೀಕರಾಗಿ (ಯಾವುದೇ ಹೆಳೆ, ನೆಪ, ಸ್ವಾರ್ಥ ಇಲ್ಲದೆ) ಭಗವಂತನ ಪಾದಕ್ಕೆ ನಮ್ಮನ್ನು ನಾವು ಅರ್ಪಿಸಿಕೊಳ್ಳಬೇಕು" ಎನ್ನುತ್ತಾನೆ ಚತುರ್ಮುಖ. ಈ ರೀತಿ ಸಮರ್ಪಣಾ ಭಾವದಿಂದ ಯಾರು ತಮ್ಮ ಇಡೀ ಬದುಕನ್ನು ಭಗವಂತನ ಪಾದಕ್ಕೆ ಅರ್ಪಿಸಿಕೊಳ್ಳುತ್ತಾರೋ, ಅವರು ಭಗವಂತನ ಅನುಗ್ರಹಕ್ಕೆ ಪಾತ್ರರಾಗಿ ಭಗವಂತನನ್ನು ತಮ್ಮ ಯೋಗ್ಯತೆಗನುಗುಣವಾಗಿ ಅರಿತು ಭಗವಂತನನ್ನು ಸೇರುತ್ತಾರೆ.

ಸಂಸಾರ ಸಾಗರದಲ್ಲಿನ ಮಾಯೆಯ ಮುಸುಕಿನೊಳಗೆ ಸಿಕ್ಕಿಕೊಂಡಿರುವ ನಾವು, ಭಗವಂತನ ಪಾದವೆಂಬ ದೋಣಿಯಲ್ಲಿ, ಭಕ್ತಿಯೆಂಬ ಹುಟ್ಟುಹಾಕಿ, ಭಗವಂತನ ಪಾದವನ್ನು ಸೇರಬೇಕು. ನಮ್ಮನ್ನು ಕರೆದೊಯ್ಯುವುದೂ ಭಗವಂತನ ಪಾದ, ನಾವು ಹೋಗಿ ಸೇರುವುದೂ ಭಗವಂತನ ಪಾದವನ್ನು. ದೋಣಿಯೂ, ಗಮ್ಯವೂ, ಎಲ್ಲವೂ ಆ ಭಗವಂತ. ಭಕ್ತಿರಹಿತವಾದ ಪಾಂಡಿತ್ಯವೆನ್ನುವ ದೋಣಿಯಲ್ಲಿ ಅಹಂಕಾರವೆನ್ನುವ ತೂತುಬಿದ್ದಾಗ, ಆ ದೋಣಿಯಿಂದ ಭಗವಂತನನ್ನು ಸೇರುವುದು ಅಸಾಧ್ಯ.

ಸಾಧನೆಯ ಮಾರ್ಗದಲ್ಲಿ ನಮ್ಮ ದೊಡ್ಡ ಸಮಸ್ಯೆ ಏನೆಂದರೆ: "ನನ್ನದೇಹ, ನನ್ನವರು" ಎನ್ನುವ ದೈಹಿಕ ಸಂಬಂಧಗಳಲ್ಲೇ ನಮ್ಮ ಜೀವನ ಸುತ್ತುವರಿದಿರುವುದು. ನಮಗೆ ಆತ್ಮದ ಸಂಬಂಧದ ಪರಿಚಯವೇ ಇಲ್ಲ. "ಇದು ನನ್ನ ದೇಹ, ಈ ದೇಹದಿಂದ ನಾನು ಸುಖ ಪಡಬೇಕು" ಎನ್ನುವುದು ನಮ್ಮ ತಿಳುವಳಿಕೆ. ಆದರೆ ಕಠುಸತ್ಯ ಏನೆಂದರೆ: ಈ ದೇಹದಿಂದ ಜೀವ ಹೊರಟುಹೋದ ಮೇಲೆ ಈ ದೇಹ ಕೇವಲ ನರಿ-ನಾಯಿಗಳ ಆಹಾರವಷ್ಟೇ! ಹೀಗಾಗಿ ಭಗವಂತನನ್ನು ತಿಳಿಯುವ ಸಾಧನವಾಗಿರುವ ನಮ್ಮ ದೇಹವನ್ನು ನಾವು ಭಗವಂತನ ಭಕ್ತಿಗೆ ಬಳಸಿಕೊಂಡಾಗ ಮಾತ್ರ ನಮ್ಮ ಜನ್ಮ ಸಾರ್ಥಕ. ಈ ಸತ್ಯವನ್ನರಿತು ಪೂರ್ಣಪ್ರಮಾಣದಲ್ಲಿ ನಿರ್ವ್ಯಲೀಕರಾಗಿ ಭಗವಂತನ ಚರಣಗಳಿಗೆ ನಮ್ಮನ್ನು ನಾವು ಅರ್ಪಿಸಿಕೊಂಡಾಗ ಮಾತ್ರ ಆತನ ಅನುಗ್ರಹ ನಮ್ಮ ಮೇಲಾಗುತ್ತದೆ.

'ಅರ್ಪಣಾಭಾವ' ಹೆಣ್ಣಿಗೆ ಸರಳ ಮತ್ತು ಅದು ಆಕೆಗೆ ದೈವದತ್ತ. ಹೆಣ್ಣಿಗಿರುವಷ್ಟು ಅರ್ಪಣಾಭಾವ ಸಹಜವಾಗಿ ಗಂಡಿನಲ್ಲಿರುವುದಿಲ್ಲ. ಹೆಣ್ಣು ಜೀವನದಲ್ಲಿ ಸುಖ ಕಾಣುವುದೇ ಅರ್ಪಣಾಭಾವದಿಂದ ಹೊರತು ಅಧಿಕಾರದಿಂದಲ್ಲ. [ಗಂಡಿಗಿಂತ ಹೆಣ್ಣಿನ ಅರ್ಪಣಾಭಾವ ಅದೆಷ್ಟು ಸಹಜ ಎನ್ನುವುದನ್ನು ಶ್ರೀಕೃಷ್ಣ ತನ್ನ ಲೀಲಾನಾಟಕದಲ್ಲಿ ತೋರಿರುವುದನ್ನು ನಾವು ಭಾಗವತದ ಹತ್ತನೇ ಸ್ಕಂಧದಲ್ಲಿ ಕಾಣಬಹುದು]. ಹೀಗಾಗಿ ಭಗವಂತನ ಬಳಿ ಹೋಗಬೇಕಾದರೆ ಗಂಡು ಸ್ವಲ್ಪಪ್ರಮಾಣದಲ್ಲಿ ಹೆಣ್ಣಾಗಬೇಕಾಗುತ್ತದೆ. ಹೆಣ್ಣೂ ಕೂಡಾ ತೀರಾ ಭಾವಾತ್ಮಕವಾಗಿರುವುದು ಆಕೆಗೆ ಒಳಿತಲ್ಲ. ಅದನ್ನು ಇತರರು ದುರುಪಯೋಗ ಮಾಡಿಕೊಳ್ಳುವ ಅಪಾಯ ಹೆಚ್ಚು. ಹೀಗಾಗಿ ಆಕೆಯೂ ಕೂಡಾ ಸ್ವಲ್ಪಪ್ರಮಾಣದಲ್ಲಿ ಗಂಡಾಗಬೇಕಾಗುತ್ತದೆ. ಹೀಗೆ ನಾವು ಹೆಣ್ಣು-ಗಂಡಿನ ಸಮನ್ವಯದಿಂದ ಅರ್ಧನಾರೀ ನರರಾದಾಗ ಸಾಧನೆ ಸುಲಭವಾಗುತ್ತದೆ.

ಮೇಲಿನ ಶ್ಲೋಕದಲ್ಲಿ 'ದೇವಮಾಯಾ' ಎನ್ನುವ ಪದ ಬಳಕೆಯಾಗಿದೆ. 'ಮಾಯಾ' ಎನ್ನುವ ಪದಕ್ಕೆ ಎರಡು ಅರ್ಥಗಳಿವೆ. ೧. ಮಹಿಮೆ ೨. ಪ್ರಕೃತಿ ಬಂಧ. ಭಗವಂತ ನಮ್ಮನ್ನು ಹುಟ್ಟಿಸುವಾಗ ಎರಡು ಮಾಯಾ ಪರದೆಗಳೊಂದಿಗೆ ಹುಟ್ಟಿಸಿದ್ದಾನೆ. ೧, ಭಗವಂತನಿಗೂ ನಮಗೂ ನಡುವಿನ ಪರದೆ, ೨. ನಮಗೆ ನಮ್ಮ ಸ್ವರೂಪದ ಅರಿವು ಬಾರದಂತೆ ಮಾಡುವ ಮಾಯಾ ಪರದೆ. ಈ ಎರಡು ಪರದೆಯೊಂದಿಗೆ ಹುಟ್ಟುವ ನಮ್ಮ ಬದುಕು ಅತಂತ್ರವಾಗಿರುತ್ತದೆ. [ಮಾಯೆಯ ಕುರಿತಾದ ಶ್ರೀಕೃಷ್ಣನ ಅಪೂರ್ವ ವಿವರಣೆಯನ್ನು ನಾವು ಗೀತೆಯ ಏಳನೇ ಅಧ್ಯಾಯದಲ್ಲಿ ಕಾಣಬಹುದು]. ಒಮ್ಮೆ ನಮಗೆ ನಾವು ಯಾವುದೋ ತತ್ತ್ವದ ಪ್ರತಿಬಿಂಬ ಎನ್ನುವ ಅರಿವು ಬಂದಾಗ ನಾವು ಆ ಬಿಂಬದ ಹುಡುಕಾಟ ಆರಂಭಿಸುತ್ತೇವೆ. ಹೇಗೆ ಮದುವೆಯಾಗುವ ಹುಡುಗ ಹುಡುಗಿಯ ಭಾವಚಿತ್ರ

ನೋಡಿದ ನಂತರ ಆಕೆಯನ್ನು ನೇರವಾಗಿ ನೋಡಲು ತವಕಪಡುತ್ತಾನೋ, ಹಾಗೇ ನಾವು ಭಗವಂತನನ್ನು ನೋಡಲು ತವಕಪಡುತ್ತೇವೆ. ಇದೇ ಮೊದಲ ಆತ್ಮ ಸಾಕ್ಷಾತ್ಕಾರ.

ನಮ್ಮ ಸ್ವರೂಪದ ಅರಿವು ನಮಗಿರದಂತೆ ಮಾಡುವ ಪರದೆ ವೈಯಕ್ತಿಕ ಪರದೆ. ಈ ಪರದೆ ಆತ್ಮಸಾಕ್ಷಾತ್ಕಾರವಾದಾಗ ಸಂಪೂರ್ಣ ಕಳಚುತ್ತದೆ. ಆದರೆ ನಮಗೂ ಮತ್ತು ಭಗವಂತನಿಗೂ ನಡುವಿನ ಪರದೆ ವೈಯಕ್ತಿಕ ಪರದೆ ಅಲ್ಲ. ಅಲ್ಲಿ ಭಗವಂತನನ್ನು ಕಾಣದ ಅನಂತ ಜೀವರೊಂದಿಗೆ ನಾವಿರುತ್ತೇವೆ. ನಾವು ಭಗವಂತನನ್ನು ಕಾಣಬೇಕಾದರೆ ಈ ಎರಡು ಮಾಯಾ ಪರದೆಯನ್ನು ಸರಿಸಿ ಕಾಣಬೇಕು. ಆದರೆ ನಮ್ಮಿಂದ ಅದು ಅಸಂಭವ. ಈ ಕಾರಣದಿಂದ ಭಗವಂತನನ್ನು ಸೇರುವ ಏಕೈಕ ಮಾರ್ಗ ಭಗವಂತನಲ್ಲಿ ಪೂರ್ಣ ಶರಣಾಗತಿ. ಆತ ಈ ಮಾಯಾ ಪರದೆಯನ್ನು ಸರಿಸಿ ದರ್ಶನ ನೀಡಬಲ್ಲ. ಈರೀತಿ ಒಂದು ಪರದೆಯನ್ನು ಕಿತ್ತು, ಇನ್ನೊಂದು ಪರದೆಯನ್ನು ಸರಿಸಿ, ಭಗವಂತನನ್ನು ಸೇರುವುದನ್ನು ಇಲ್ಲಿ 'ದೇವಮಾಯೆಯನ್ನು ದಾಟುವುದು" ಎಂದು ವರ್ಣಿಸಲಾಗಿದೆ.

## ಭಗವಂತನನ್ನು ಸೇರುವ ಯೋಗ್ಯತೆಯುಳ್ಳವರು ಯಾರು?

**ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ ಸ್ತ್ರೀಶೂದ್ರಹೂಣಶಬರಾ ಅಪಿ ಪಾಪಜೀವಾಃ ।**
**ಯದ್ಯದ್ಭುತಕ್ರಮಪರಾಯಣಶೀಲಶಿಕ್ಷಾಸ್ತಿರ್ಯಗ್ಜನಾ ಅಪಿ ಕಿಮು ಶ್ರುತಧಾರಣಾ ಯೇ ॥೪೭॥**

ಕೇವಲ ವೇದಾಧ್ಯಯನ ಮಾಡುವವರಿಗಷ್ಟೇ ಭಗವಂತನ ಅನುಗ್ರಹ ಪ್ರಾಪ್ತಿಯಾಗುವುದಲ್ಲ. "ಸ್ತ್ರೀಯರು, ಶೂದ್ರರು, ಹೂಣರು, ಶಬರರು ಮತ್ತು ಪಾಪಯೋನಿಯಲ್ಲಿ ಹುಟ್ಟಿದವರು, ಹೀಗೆ ಯಾರೇ ಆಗಲೀ, ಅವರು ಭಗವಂತನಿಗೆ ತಮ್ಮನು ತಾವು ಅರ್ಪಿಸಿಕೊಂಡಾಗ, ಅವರಿಗೆ ಭಗವಂತನ ಅನುಗ್ರಹ ಪ್ರಾಪ್ತಿಯಾಗುತ್ತದೆ" ಎನ್ನುತ್ತಾನೆ ಚತುರ್ಮುಖ. ಇಲ್ಲಿ ವಿಶೇಷವಾಗಿ ಸ್ತ್ರೀಯರು, ಶೂದ್ರರು, ಹೂಣರು, ಶಬರರು ಮತ್ತು ಪಾಪಯೋನಿಯಲ್ಲಿ ಹುಟ್ಟಿದವರನ್ನು ಚತುರ್ಮುಖ ಉಲ್ಲೇಖಿಸಿರುವುದರ ಔಚಿತ್ಯವನ್ನು ನಾವಿಲ್ಲಿ ತಿಳಿಯಬೇಕು.

೧. **ಸ್ತ್ರೀಯರು:** ವಿಚಿತ್ರವೆಂದರೆ ಇಂದಿಗೂ ಕೂಡಾ ಕೆಲವರು ಸ್ತ್ರೀಯರಿಗೆ ಮೋಕ್ಷವಿಲ್ಲ, ಗೃಹಸ್ಥರಿಗೆ ಮೋಕ್ಷವಿಲ್ಲ, ಇತ್ಯಾದಿ ಅಸಂಬದ್ಧವಾದ ಹೇಳಿಕೆ ನೀಡುತ್ತಾ ಮೂಢನಂಬಿಕೆಯ ಕಡಲಲ್ಲಿ ಬದುಕುತ್ತಿದ್ದಾರೆ. ಸ್ತ್ರೀಜನ್ಮ ಪಾಪದ ಫಲ; ಮೋಕ್ಷಪ್ರಾಪ್ತಿಗೆ ಗಂಡಸರಾಗಿ ಹುಟ್ಟಬೇಕು ಎನ್ನುವ ಅಜ್ಞಾನಿಗಳಿವರು. ಈ ರೀತಿ ಮಾತನಾಡುವ ಮಂದಿಗೆ ಶಾಸ್ತ್ರದ ಪರಿಜ್ಞಾನವಿರುವುದಿಲ್ಲ. ಸ್ತ್ರೀಜನ್ಮ ಎಂದೆಂದಿಗೂ ಪಾಪದ ಫಲವಲ್ಲ. ಭಗವಂತನ ನಂತರ ಈ ಜಗತ್ತನ್ನು ನಿಯಂತ್ರಿಸುವ ತತ್ತ್ವ ಶ್ರೀಲಕ್ಷ್ಮಿ 'ಸ್ತ್ರೀ' ಎನ್ನುವುದು ಈ ಅಜ್ಞಾನಿಗಳಿಗೆ ತಿಳಿದಿಲ್ಲ. ವೇದದಲ್ಲಿ ಹೇಳುವಂತೆ: ಮೋಕ್ಷದಲ್ಲೂ ಕೂಡಾ ಸ್ತ್ರೀ ಪುರುಷರಿರುತ್ತಾರೆ. ಹೀಗಾಗಿ ಲಿಂಗ ಮೂಲತಃ ಜೀವಕ್ಕೆ ಸಂಬಂಧಿಸಿದ ವಿಷಯ. ಗಂಡು-ಹೆಣ್ಣು ಎನ್ನುವುದು ಜೀವಧರ್ಮವೇ ಹೊರತು ಶರೀರಧರ್ಮವಲ್ಲ. ಈ ಎಲ್ಲಾ ಹಿನ್ನೆಲೆಯೊಂದಿಗೆ ನೋಡಿದಾಗ ಸ್ತ್ರೀಜನ್ಮ ಕೇವಲ ಪಾಪಮಾಡಿದವರಿಗೆ ಬರುವಂತಹದ್ದು ಎನ್ನುವುದು ಅರ್ಥಶೂನ್ಯ. ಉದಾಹರಣೆಗೆ ೧೬೧೦೦ ಮಂದಿ ಅಗ್ನಿಪುತ್ರರು ಭಗವಂತನ ಪತ್ನಿಯರಾಗಬೇಕು ಎಂದು ತಪಸ್ಸು ಮಾಡಿ, ಸ್ತ್ರೀಜನ್ಮ ಪಡೆದು ಭೂಮಿಯಲ್ಲಿ ಜನಿಸಿ, ಶ್ರೀಕೃಷ್ಣನ ಪತ್ನಿಯರಾಗುವ ಮಹಾಪುಣ್ಯವನ್ನು ಪಡೆದರು. ಆದರೆ ತನ್ನ ಅಣ್ಣನಾದ ವಾಲಿಯನ್ನು ಕೊಲ್ಲಿಸಿದ ಪಾಪದಿಂದ ಸುಗ್ರೀವ ಕರ್ಣನಾಗಿ ಹುಟ್ಟಿ ಅಸುರ ದುರ್ಯೋಧನನ ಪರ ನಿಲ್ಲುವಂತಾಯಿತು.[ವಾಲೀ ತಪ್ಪು

ಮಾಡಿದ್ದರೂ ಕೂಡಾ, ಆತ ಸುಗ್ರೀವನ ಒಡಹುಟ್ಟಿದ ಅಣ್ಣನಾಗಿದ್ದ. ಹೀಗಿರುವಾಗ ಆತನನ್ನು ಸರಿದಾರಿಗೆ ತರುವುದು ಸುಗ್ರೀವನ ಕರ್ತವ್ಯವಾಗಿತ್ತು. ಆದರೆ ಆತ ಅಣ್ಣನನ್ನು ಕೊಲ್ಲಬೇಕು ಎನ್ನುವ ಸಂಕಲ್ಪಮಾಡಿ ಪಾಪ ಕಟ್ಟಿಕೊಂಡ. ಇದೊಂದು ದೈವೀಸಂಕಲ್ಪವೂ ಹೌದು] ಹೀಗಾಗಿ ಪುರುಷ ಜನ್ಮವೆಲ್ಲವೂ ಪುಣ್ಯದ ಫಲವಲ್ಲ; ಸ್ತ್ರೀಜನ್ಮ ಪಾಪದ ಫಲವಲ್ಲ. ಜೀವ ಹೆಣ್ಣಾಗಿದ್ದರೆ ಅದಕ್ಕೆ ಸ್ತ್ರೀ ಜನ್ಮ, ಗಂಡಾಗಿದ್ದರೆ ಪುರುಷ ಜನ್ಮ. ಉಳಿದದ್ದೆಲ್ಲವೂ ಜೀವಯೋಗ್ಯತೆ ಮತ್ತು ಕರ್ಮಫಲದ ಪ್ರತಿಫಲ ಅಷ್ಟೇ. ಹೀಗಾಗಿ ಮೊದಲು ಇಂತಹ ತಪ್ಪು ತಿಳುವಳಿಕೆ ತೊಲಗಬೇಕು.

ಈ ಮೇಲಿನ ಶ್ಲೋಕದಲ್ಲಿ ಸ್ತ್ರೀಯರನ್ನು ವಿಶೇಷವಾಗಿ ಉಲ್ಲೇಖಿಸಲು ಒಂದು ಕಾರಣವಿದೆ. ಸಮಾಜಕ್ಕೆ ಒಂದು ಒಳ್ಳೆಯ ಮಗುವನ್ನು ನೀಡುವ ಜವಾಬ್ಧಾರಿ ಮುಖ್ಯವಾಗಿ ಸ್ತ್ರೀ ಹೊತ್ತಿರುವ ಹೊಣೆ. ಈ ಕಾರ್ಯ ಅತ್ಯಂತ ಕಠಿಣ ಮತ್ತು ಇದು ವೇದಾಧ್ಯಯನಕ್ಕೆ ಸಮಾನ ಎನ್ನುತ್ತಾರೆ ಶಾಸ್ತ್ರಕಾರರು. ಹೀಗಿರುವಾಗ ಆಕೆ ಸಂಸಾರದ ನಿರ್ವಹಣೆಯೊಂದಿಗೆ ವೇದಾಧ್ಯಯನ ಮಾಡುವುದು ಸಾಧ್ಯವಿಲ್ಲ. ಹಾಗೇನಾದರೂ ಮಾಡಿದರೆ ಅದು ಎರಡು ದೋಣಿಯ ಮೇಲೆ ಕಾಲಿಟ್ಟ ಪಯಣವಾಗುತ್ತದೆ ಮತ್ತು ಅದರಿಂದ ಓಜಕ್ಷಯ(ತ್ರಾಣ ಕಡಿಮೆಯಾಗುವುದು) ಉಂಟಾಗಿ ಅದು ಮುಂದಿನ ಸಂತಾನದ ಮೇಲೆ ಕೆಟ್ಟ ಪರಿಣಾಮ ಬೀರುವಂತಾಗಬಹುದು. ಈ ಕಾರಣದಿಂದಲೇ ಗೃಹಿಣಿಯಾದವಳು ಅಧ್ಯಯನ ತ್ಯಾಗ ಮಾಡಬೇಕಾಗಿ ಬರುತ್ತದೆ. ಈ ರೀತಿ ಅನಿವಾರ್ಯವಾಗಿ ಅಧ್ಯಯನ ತ್ಯಾಗ ಮಾಡಿದ ಸ್ತ್ರೀ ಭಗವಂತನ ಅನುಗ್ರಹದಿಂದ ವಂಚಿತಳಾಗುವುದಿಲ್ಲ ಎನ್ನುವುದನ್ನು ಮೇಲಿನ ಶ್ಲೋಕ ಸ್ಪಷ್ಟಪಡಿಸುತ್ತದೆ. ಈ ಹಿಂದೆ ಹೇಳಿದಂತೆ ಹೆಣ್ಣಿಗೆ ವಿಶೇಷವಾದ ಅರ್ಪಣಾಭಾವವನ್ನು ಭಗವಂತ ಕರುಣಿಸಿದ್ದಾನೆ. ಆಕೆ ವಿಶೇಷ ಅಧ್ಯಯನ ಮಾಡದಿದ್ದರೂ ಕೂಡಾ, ಉತ್ತಮ ಸಂತಾನವನ್ನು ಪ್ರಪಂಚಕ್ಕೆ ಕೊಟ್ಟು, ಭಗವಂತನಿಗೆ ತನ್ನನ್ನು ತಾನು ಅರ್ಪಿಸಿಕೊಂಡು ಮೋಕ್ಷವನ್ನು ಪಡೆಯಬಲ್ಲಳು ಎನ್ನುವ ಸಂದೇಶ ಈ ಶ್ಲೋಕದಲ್ಲಿದೆ.

೧. **ಶೂದ್ರ:** ವರ್ಣ ಪದ್ಧತಿಯ ಪ್ರಕಾರ ಯಾರಲ್ಲಿ ಸೇವಾ ಮನೋವೃತ್ತಿ ಹೆಚ್ಚಾಗಿದ್ದು, ವೇದಾಧ್ಯಯನ ಮಾಡುವಷ್ಟು ಬುದ್ಧಿಶಕ್ತಿ ಇರುವುದಿಲ್ಲವೋ ಆತ ಶೂದ್ರ ಎನಿಸುತ್ತಾನೆ. ಈ ರೀತಿ ವೇದಾಧ್ಯಯನ ಮಾಡಲು ಅಶಕ್ತರಾದವರು ಭಗವಂತನಲ್ಲಿ ಅಪರಂಪಾರವಾದ ಭಕ್ತಿಯನ್ನು ಬೆಳೆಸಿಕೊಂಡರೆ ಅವರಿಗೂ ಕೂಡಾ ಭಗವಂತನ ಅನುಗ್ರಹವಾಗುತ್ತದೆ ಎನ್ನುವುದು ಮೇಲಿನ ಶ್ಲೋಕದ ಸಂದೇಶ.

ಇದಲ್ಲದೆ ಯೋನಿ ಭೇದದಿಂದ ಶೂದ್ರ ಎನಿಸುವುದು ಸಾಮಾಜಿಕವಾಗಿ ಬೆಳೆದುಬಂದ ಪದ್ಧತಿ. ಉದಾಹರಣೆಗೆ ವಿದುರ. ಮಹಾಭಾರತದಲ್ಲಿ ಹೇಳುವಂತೆ ಶ್ರೀಕೃಷ್ಣ ಹಸ್ತಿನಪುರಕ್ಕೆ ಬಂದಾಗಲೆಲ್ಲಾ ಉಳಿದುಕೊಳ್ಳುತ್ತಿದ್ದುದು ವಿದುರನ ಮನೆಯಲ್ಲಿ. ಪಾಂಡವರ ವನವಾಸ ಕಾಲದಲ್ಲಿ ಕುಂತಿ ಉಳಿದುಕೊಂಡಿದ್ದುದು ವಿದುರನ ಮನೆಯಲ್ಲಿ. ವಿದುರನ ಪತ್ನಿ ಆರುಣಿ ಕುಂತಿಯ ತಂಗಿ(ಆಕೆಯ ತಂದೆ ಶೂರಸೇನ, ಆಕೆ ಶೂದ್ರ ಸ್ತ್ರೀಯಲ್ಲಿ ಜನಿಸಿದವಳು). ಹೀಗೆ ಸಾಮಾಜಿಕ ವ್ಯವಸ್ಥೆಯಿಂದ ಶೂದ್ರನೆನಿಸಿದವರಿಗೆ ವೇದಾಧ್ಯಯನ ಅಸಾಧ್ಯವಾದರೆ ಅವರು ಭಗವಂತನ ಗುಣ ಚಿಂತನೆಯಿಂದ ಆತನ ಅನುಗ್ರಹಕ್ಕೆ ಪಾತ್ರರಾಗಬಲ್ಲರು. ಇದಕ್ಕಾಗಿಯೇ ಭೀಷ್ಮಾಚಾರ್ಯರು "ಧರ್ಮಗಳಲ್ಲಿ ಶ್ರೇಷ್ಠ ಧರ್ಮ ವಿಷ್ಣುಸಹಸ್ರನಾಮ ಪಾರಾಯಣ" ಎನ್ನುವ ಸಂದೇಶವನ್ನು ಧರ್ಮರಾಯನಿಗೆ ನೀಡಿದರು. ಹೀಗೆ ಭಗವಂತನ ಗುಣವಾಚಕ ನಾಮಗಳಿಂದ ಆತನ ಗುಣಚಿಂತನೆ ಮಾಡಿ ಆತನ ಅನುಗ್ರಹಕ್ಕೆ ಪಾತ್ರರಾಗಬಹುದು.

೨. **ಹೂಣರು:** ವೈದಿಕ ಭಾಷೆಯ ಪರಿಚಯ ಮತ್ತು ವೈದಿಕ ಸಂಸ್ಕೃತಿಯ ತಿಳುವಳಿಕೆಯೇ ಇಲ್ಲದ ಮ್ಲೇಚ್ಛರನ್ನು ಹೂಣರು ಎನ್ನುತ್ತಾರೆ. ಇವರು ಅನಾಗರಿಕರಾಗಿರಬಹುದು. ಆದರೆ ಒಮ್ಮೆ ಅವರು ಭಗವಂತನಲ್ಲಿ ಶರಣಾದರೆಂದರೆ ಅವರೂ ಕೂಡಾ ಉದ್ಧಾರವಾಗಬಲ್ಲರು.

**೪.ಶಬರರು:** ಭೇಟೆಯಾಡಿಕೊಂಡು ಕಾಡಿನಲ್ಲಿ ವಾಸಿಸುವ ಜನರನ್ನು ಶಬರರು ಎನ್ನುತ್ತಾರೆ. ಇಂಥವರೂ ಕೂಡಾ ಅಂತರಗದಲ್ಲಿ ಭಗವದ್ಭಕ್ತಿ ಬೆಳೆಸಿಕೊಂಡರೆ ಅವರಿಗೆ ಭಗವಂತ ಅನುಗ್ರಹಿಸುತ್ತಾನೆ.

**೫. ಮಹಾಪಾಪಿ:** ಒಬ್ಬ ನೀಚ ಕೃತ್ಯವೆಸಗಿದ ಪಾಪಿ ತನ್ನ ತಪ್ಪಿಗೆ ಪಶ್ಚಾತ್ತಾಪಪಟ್ಟು ಭಗವಂತನಿಗೆ ತನ್ನನ್ನು ತಾನು ಅರ್ಪಿಸಿಕೊಂಡರೆ, ಆತನನ್ನೂ ಕೂಡಾ ಭಗವಂತ ಅನುಗ್ರಹಿಸುತ್ತಾನೆ. ಇದಕ್ಕೆ ಉತ್ತಮ ಉದಾಹರಣೆ ಅಜಾಮಿಳ. ತಾನು ಮದುವೆಯಾದ ಹೆಂಡತಿಯನ್ನೂ ಬಿಟ್ಟು, ಯಾವುದೋ ದುಷ್ಟ ಹೆಣ್ಣಿನ ಮೋಹಕ್ಕೊಳಗಾಗಿ, ಜೀವನದಲ್ಲಿ ಮಾಡಬಾರದ ಪಾಪಗಳನ್ನು ಮಾಡಿದ ಅಜಾಮಿಳ, ಕೊನೆಗೆ ಪಶ್ಚಾತ್ತಾಪಪಟ್ಟು ಭಗವಂತನಿಗೆ ತನ್ನನ್ನು ತಾನು ಅರ್ಪಿಸಿಕೊಂಡು ಉದ್ಧಾರವಾದ ಕಥೆಯನ್ನು ಭಾಗವತವೇ ಮುಂದೆ ವಿವರಿಸುತ್ತದೆ. ***ಪ್ರಾಯಶ್ಚಿತ್ತಮ್ ತು ತಸ್ಯೋಕ್ತಂ ಹರಿ ಸಂಸ್ಮರಣಂ ಪರಮ್.*** ಜಾರಿ ಬೀಳುವುದು ತಪ್ಪಲ್ಲ. ಆದರೆ ಜಾರಿದ ಮೇಲೆ ಅದನ್ನು ಸರಿಪಡಿಸಿಕೊಳ್ಳದೆ ಜಾರುತ್ತಲೇ ಇರುವುದು ತಪ್ಪು.

ಒಟ್ಟಿನಲ್ಲಿ ಹೇಳಬೇಕೆಂದರೆ: ಮೂರು ಹೆಜ್ಜೆಗಳಿಂದ ವಿಶ್ವವನ್ನು ಅಳೆದ 'ಅದ್ಭುತಕ್ರಮಃ' ಭಗವಂತನ ಪಾದದಲ್ಲಿ ಶರಣಾದವನಿಗೆ ಭಗವಂತ ಜಾತಿ, ಲಿಂಗ, ದೇಶ, ಪಾಪ, ಪುಣ್ಯದ ಭೇದವಿಲ್ಲದೆ ಅನುಗ್ರಹ ಮಾಡುತ್ತಾನೆ. ಇಷ್ಟೇ ಅಲ್ಲದೇ ಜ್ಞಾನಿಗಳ ಗುಣ ನಡತೆಯನ್ನು ಹಿಂಬಾಲಿಸಿ ಅದರಂತೆ ಜೀವನ ನಡೆಸಲು ಕಲಿತವರನ್ನೂ ಕೂಡಾ ಭಗವಂತ ಅನುಗ್ರಹಿಸುತ್ತಾನೆ. ಕೇವಲ ಮನುಷ್ಯರಷ್ಟೇ ಅಲ್ಲ, ಪ್ರಾಣಿಗಳೂ ಭಗವಂತನನ್ನು ಪ್ರೀತಿಸಿ ಆತನ ಅನುಗ್ರಹಕ್ಕೆ ಪಾತ್ರವಾಗುತ್ತವೆ. ರಾಮಾಯಣ ಕಾಲದಲ್ಲಿ ನೋಡಿದಾಗ ಕಪಿಗಳು, ಪಕ್ಷಿಗಳೂ ಕೂಡಾ ಭಗವಂತನ ಅನುಗ್ರಹಕ್ಕೆ ಪಾತ್ರವಾಗಿರುವುದು ಕಾಣಸಿಗುತ್ತದೆ. ಕೃಷ್ಣ ಕೊಳಲನೂದಿದಾಗ ಹುಲ್ಲು ತಿನ್ನುವುದನ್ನು ಮರೆತು ಬಾಯಲ್ಲಿ ಅರ್ಧ ಜಗಿದ ಹುಲ್ಲನ್ನು ಹಾಗೇ ಹಿಡಿದು, ಕಿವಿ ನೆಟ್ಟಗೆ ಮಾಡಿ ನಿಂತ ಗೋವುಗಳ ಕಥೆಯನ್ನು ನಾವು ಕೃಷ್ಣಾವತಾರದಲ್ಲಿ ಕಾಣುತ್ತೇವೆ. ಭಗವಂತ ತನ್ನನ್ನು ಪ್ರೀತಿಸುವ ಎಲ್ಲರನ್ನೂ ಸೆಳೆಯುತ್ತಾನೆ. "ಹೀಗಿರುವಾಗ ಅಗಾಧವಾದ ಶಾಸ್ತ್ರ ಪಾಂಡಿತ್ಯವಿರುವ ಜ್ಞಾನನಿಧಿಗಳು ಭಗವಂತನನ್ನು ಸೇರುತ್ತಾರೆ ಎನ್ನುವುದನ್ನು ಬಿಡಿಸಿ ಹೇಳಬೇಕೇ?" ಎಂದು ಪ್ರಶ್ನಿಸುತ್ತಾನೆ ಚತುರ್ಮುಖ. ಒಟ್ಟಿನಲ್ಲಿ ಹೇಳಬೇಕೆಂದರೆ: "ಯಾರ ಮನಸ್ಸಿನಲ್ಲಿ ಭಗವಂತನ ಬಗ್ಗೆ ಚಿಂತನೆ, ಶರಣಾಗತಿ ಇದೆಯೋ, ಅಲ್ಲಿ ಭಗವಂತನಿದ್ದಾನೆ" ಎನ್ನುವ ಭರವಸೆಯನ್ನು ಭಗವಂತನ ಅತ್ಯಂತ ಸಮೀಪವಿರುವ, ಭಗವಂತನ ಮೊದಲ ಪುತ್ರ ಚತುರ್ಮುಖ ಇಲ್ಲಿ ನೀಡಿದ್ದಾನೆ.

## ಭಗವಂತನ ಗುಣ-ಲಕ್ಷಣಗಳು

**ಶಶ್ವತ್ ಪ್ರಶಾಂತಮಭಯಂ ಪ್ರತಿಬೋಧಮಾತ್ರಂ ಶುದ್ಧಂ ಸಮಂ ಸದಸತಃ ಪರಮಾತ್ಮತತ್ತ್ವಮ್ ।**
**ಶಬ್ದೋ ನ ಯತ್ರ ಪುರುಕಾರಕವಾನ್ ಕ್ರಿಯಾರ್ಥೋ ಮಾಯಾ ಪರೈತ್ಯಭಿಮುಖೇ ಚ ವಿಲಜ್ಜಮಾನಾ ॥೪೭॥**

ಭಗವಂತನ ಚಿಂತನೆ ಹೇಗೆ ಮಾಡಬೇಕು ಎನ್ನುವ ಸುಂದರವಾದ ಮಾತನ್ನು ಇಲ್ಲಿ ಚತುರ್ಮುಖ ನಾರದರಿಗೆ ವಿವರಿಸಿದ್ದಾನೆ. ಈ ಶ್ಲೋಕದ ಪ್ರಾರಂಭದಲ್ಲಿ '***ಶಶ್ವತ್***' ಎನ್ನುವ ಪದ ಪ್ರಯೋಗವಾಗಿರುವುದನ್ನು ನಾವು ಕಾಣುತ್ತೇವೆ. ಶಶ್ವತ್ ಎಂದರೆ ಸದಾಕಾಲ/ ಸರ್ವದಾ/ಎಂದೆಂದಿಗೂ ಎಂದರ್ಥ. ಈ ಪ್ರಯೋಗವನ್ನು ಲೋಕದ ಗುಣವರ್ಣನೆ ಮಾಡುವಾಗ ಪ್ರಯೋಗಿಸಲು ಬರುವುದಿಲ್ಲ. ಏಕೆಂದರೆ ಈ ಪ್ರಪಂಚ ಅಶ್ವತ್ಥ. ಅಂದರೆ ಶಾಶ್ವತವಲ್ಲದ್ದು. ಆದರೆ

ಭಗವಂತನ ಗುಣಗಳು ಶಶ್ವತ್. ಅದು ಯಾವ ವಿಕಾರಕ್ಕೂ ಒಳಪಡದ, ಅನಾದಿ ಅನಂತಕಾಲದಲ್ಲಿ ಏಕರೂಪವಾಗಿರುವಂಥಹದ್ದು.

೧. ಅನಂತಕಾಲದಲ್ಲಿರುವ ಭಗವಂತನ ಗುಣಗಳನ್ನು ವರ್ಣಿಸುತ್ತಾ ಚತುರ್ಮುಖ ಮೊತ್ತಮೊದಲು '***ಪ್ರಶಾಂತಮ್***' ಎನ್ನುತ್ತಾನೆ. ಬ್ರಹ್ಮಸೂತ್ರದಲ್ಲಿಯೂ ಕೂಡಾ ಇದನ್ನೇ "***ಆನಂದಮಯೋSಭ್ಯಾಸಾತ್***" ಎಂದು ಒತ್ತುಕೊಟ್ಟು ಹೇಳುತ್ತಾರೆ. ಪ್ರತಿಯೊಬ್ಬ ಮನುಷ್ಯನೂ ಕೂಡಾ ಆನಂದವನ್ನು ಬಯಸುತ್ತಾನೆ. ಆದರೆ ಆನಂದವನ್ನು ಅರಸುವಿಕೆಯಿಂದಲೇ ಆತ ದುಃಖವನ್ನು ಪಡೆಯುತ್ತಾನೆ. ಹೀಗಾಗಿ ಆನಂದದ ಸೆಲೆ ಎಲ್ಲಿದೆ ಎನ್ನುವುದರ ಅರಿವಿಲ್ಲದಿರುವುದೇ ಮನುಷ್ಯನ ದುಃಖದ ಹಿಂದಿನ ಮೂಲಭೂತ ಸಮಸ್ಯೆ.

ಆನಂದದ ಮೂಲವನ್ನು ಹುಡುಕ ಹೊರಟವರಿಗೆ ಮೊದಲು ತಿಳಿದದ್ದು ಅದು ನಿದ್ರೆಯಲ್ಲಿ ಸಿಗುತ್ತದೆ ಎನ್ನುವ ಸತ್ಯ. ನಿಜ, ನಮಗೆ ನಿದ್ರೆಯಲ್ಲಿ ಯಾವ ದುಃಖವೂ ಇರುವುದಿಲ್ಲ. ಅಲ್ಲಿ ಎಲ್ಲವೂ ಆನಂದ. ಆದರೆ ಅದೇ ಆನಂದ ಎಚ್ಚರ ಮತ್ತು ಕನಸಿನ ಸ್ಥಿತಿಯಲ್ಲಿ ಇರುವುದಿಲ್ಲ. ನಿದ್ದೆಯಲ್ಲಿ ಆನಂದ ಸಿಗಲು ಕಾರಣ ಅಲ್ಲಿ ಅಹಂಕಾರ-ಮಮಕಾರ ಇಲ್ಲದಿರುವುದು. ನಾವು ಎಚ್ಚರ/ಕನಸಿನಲ್ಲಿ ನಾನು-ನನ್ನದು ಎನ್ನುವ ಅಹಂಕಾರ-ಮಮಕಾರಕ್ಕೆ ಒಳಗಾಗದೇ ಇರುತ್ತಿದ್ದರೆ ಅಲ್ಲಿಯೂ ಕೂಡಾ ಆನಂದ ಸಿಗುತ್ತಿತ್ತು. ಏಕೆಂದರೆ ಆನಂದ(**Bliss**) ಹೊರಗೆ ಸಿಗುವ ವಿಷಯವಲ್ಲ. ಅದು ನಮ್ಮೊಳಗೇ ಇದೆ. ಆದರೆ ಆ ಆನಂದವನ್ನು ಅಹಂಕಾರ-ಮಮಕಾರವೆನ್ನುವ ಪೊರೆ ಸುತ್ತುವರಿದಿರುತ್ತದೆ. ನಾವು ಅಹಂಕಾರ-ಮಮಕಾರದಿಂದ ಕಳಚಿಕೊಂಡರೆ ಮಾತ್ರ ಒಳಗಿರುವ ಆನಂದ ವ್ಯಕ್ತವಾಗುತ್ತದೆ. ಆದರೆ ಈ ಅಂತರಂಗದಲ್ಲಿರುವ ಆನಂದದ ಸೆಲೆಯನ್ನು ಗುರುತಿಸದ ನಾವು ಸದಾ ಬಾಹ್ಯಸುಖ(**Plesure**/ಮೋದ/ಪ್ರಮೋದ)ವನ್ನು ಅರಸುತ್ತಾ ದುಃಖಕ್ಕೊಳಗಾಗುತ್ತೇವೆ.

ಈ ಮೇಲಿನ ವಿಶ್ಲೇಷಣೆಯಿಂದ ನಮಗೆ ತಿಳಿಯುವುದೇನೆಂದರೆ: ನಾವು ದುಃಖವನ್ನು ತೊರೆದು ಆನಂದವನ್ನು ಪಡೆಯಬೇಕಾದರೆ ಮೊದಲು ಅಹಂಕಾರ-ಮಮಕಾರವನ್ನು ತೊರೆಯಬೇಕು ಎನ್ನುವ ಸತ್ಯ. ಆದರೆ ಅದನ್ನು ತೊರೆಯುವುದು ಹೇಗೆ? ಇದು ಎಲ್ಲರನ್ನೂ ಕಾಡುವ ಕಠಿಣ ಪ್ರಶ್ನೆ. "ನಾನು-ನನ್ನದು ಎನ್ನುವುದು ಈ ಜಗತ್ತಿನಲ್ಲಿ ಯಾವುದೂ ಇಲ್ಲಾ" ಎನ್ನುವ ಕಟು ಸತ್ಯವನ್ನರಿತವನು ಅಹಂಕಾರ-ಮಮಕಾರದಿಂದ ಮುಕ್ತಿ ಪಡೆಯಬಲ್ಲ. ಇದನ್ನೇ ಮೂಲತಃ ಅರ್ಪಣೆ ಎನ್ನುವುದು. ಪೂಜೆಯಲ್ಲಿ ಬಳಸುವ ಸ್ವಾಹಾಃ, ನಮಃ, ನಮಮ ಇತ್ಯಾದಿ ಪದಗಳೂ ಕೂಡಾ ಇದನ್ನೇ ಸೂಚಿಸುತ್ತವೆ. ನನ್ನತನವನ್ನು ತೊರೆದು 'ನಿನಗೆ' ಅರ್ಪಿಸುವುದೇ ಸ್ವಾಹಾಃ/ನಮಃ/ನಮಮ. ಒಟ್ಟಿನಲ್ಲಿ ಹೇಳಬೇಕೆಂದರೆ: ಎಲ್ಲವೂ ಭಗವಂತನ ಅಧೀನ, ನನ್ನ ಅಧೀನ ಯಾವುದೂ ಇಲ್ಲಾ ಎನ್ನುವ ಮೂಲಸತ್ಯವನ್ನು ಅರಿತವನು ಜೀವನದಲ್ಲಿ ಆನಂದವನ್ನು ಕಾಣಬಲ್ಲ.

ಪವಮಾನ ಮಂಡಲದ ಕೊನೆಯ ಸೂಕ್ತವಾದ ಕರ್ಣಸೂಕ್ತದಲ್ಲಿ ಅನೇಕ ಅಪೂರ್ವವಾದ ಮಾತುಗಳು ಬರುತ್ತವೆ. "ಓ ಪ್ರಾಣನೇ, ನನ್ನೊಳಗಿನ ಆನಂದ ಅಭಿವ್ಯಕ್ತಗೊಳ್ಳಲಿ; ಅಂತಹ ಆನಂದವನ್ನು ಕೊಡತಕ್ಕಂತಹ ಭಗವಂತನೆಡೆಗೆ ನನ್ನನ್ನು ಕರೆದೊಯ್ಯಿ" ಎನ್ನುವ ಅಪೂರ್ವವಾದ ಪ್ರಾರ್ಥನೆ ಕರ್ಣಸೂಕ್ತದಲ್ಲಿದೆ. "***ಯತ್ರಾನಂದಶ್ಚ ಮೋದಾಶ್ಚ ಮುದ ಪ್ರಮೋದ ಆಸತೇ*** : ಆನಂದ, ಮೋದ, ಪ್ರಮೋದ, ಎಲ್ಲವೂ ಪೂರ್ಣಪ್ರಮಾಣದಲ್ಲಿ ಎಲ್ಲಿದೆಯೋ, ಅಲ್ಲಿಗೆ ನನ್ನನ್ನು ಕರೆದೊಯ್ಯಿ" ಎನ್ನುವ ಪ್ರಾರ್ಥನೆ ಇದಾಗಿದೆ. ಇದು ಪ್ರಾಣೋತ್ಕ್ರಮಣ ಕಾಲದಲ್ಲಿ ಮಾಡಬೇಕಾದ ಪ್ರಾರ್ಥನೆ. ಪ್ರಾಣೋತ್ಕ್ರಮಣ ಕಾಲದಲ್ಲಿ ಇಂತಹ ಪ್ರಾರ್ಥನೆ ಮಾಡಲು ಸಾಧ್ಯವಾಗದವರ ಕಿವಿಯಲ್ಲಿ ಈ ಮಂತ್ರವನ್ನು ಹೇಳುವುದು ಸಂಪ್ರದಾಯ. ಹೀಗಾಗಿ ಈ ಸೂಕ್ತಕ್ಕೆ ಕರ್ಣಸೂಕ್ತ ಎನ್ನುವ ಹೆಸರು ಬಂತು. ಕರ್ಣಸೂಕ್ತವನ್ನು ಬದುಕಿದ್ದಾಗ ಓದಬಾರದು, ಸತ್ತ ಮೇಲೆ ಹೇಳಬೇಕು ಎನ್ನುವ ಸಂಪ್ರದಾಯ ಇಂದು ತಪ್ಪಾಗಿ ಪ್ರಚಲಿತಕ್ಕೆ ಬಂದಿದೆ.

ಯಾವುದೇ ಪ್ರಾರ್ಥನೆ ಮಾಡುವ ಮುನ್ನ ಆ ಪ್ರಾರ್ಥನೆಯ ಹಿಂದಿನ ಅನುಸಂಧಾನ ತಿಳಿದುಕೊಂಡಿರಬೇಕಾಗುತ್ತದೆ. ಬದುಕಿದ್ದಾಗ ಕರ್ಣಸೂಕ್ತವನ್ನು ಓದಿ ಅರ್ಥಮಾಡಿಕೊಳ್ಳದವನಿಗೆ ಆ ಪ್ರಾರ್ಥನೆಯನ್ನು ಪ್ರಾಣೋತ್ಕ್ರಮಣ ಕಾಲದಲ್ಲಿ ನೆನೆಯಲು ಸಾಧ್ಯವಿಲ್ಲ. ಹೀಗಾಗಿ ಕರ್ಣಸೂಕ್ತ, ಗರುಡಪುರಾಣ ಇತ್ಯಾದಿ ಗ್ರಂಥಗಳ ಅಧ್ಯಯನ ದೇಹದಲ್ಲಿ ತ್ರಾಣ ಇರುವಾಗಲೇ ನಡೆಯಬೇಕು.

ಹೃತ್ಕಮಲ ಮಧ್ಯನಿವಾಸಿಯಾದ ಭಗವಂತ ಆನಂದದ ಪರಾಕಾಷ್ಠೆ. ಹೀಗಾಗಿ ಆತನನ್ನು ಇಲ್ಲಿ '***ಪ್ರಶಾಂತಮ್***' ಎಂದು ಸಂಬೋಧಿಸಿದ್ದಾನೆ ಚತುರ್ಮುಖ. 'ಪ್ರಶಾಂತ' ಎನ್ನುವಲ್ಲಿ 'ಪ್ರ' ಎಂದರೆ ಶ್ರೇಷ್ಠ; 'ಶಂ' ಎಂದರೆ ಆನಂದ; 'ಅಂತ' ಎಂದರೆ ತುತ್ತತುದಿ. ಆದ್ದರಿಂದ ಸಾರ್ವಕಾಲಿಕವಾದ, ಉತ್ಕೃಷ್ಟವಾದ, ದುಃಖದ ಸ್ಪರ್ಶವೇ ಇಲ್ಲದ, ತುದಿ-ಮೊದಲಿಲ್ಲದ, ಅನಂತವಾದ, ಆನಂದದ ಪರಾಕಾಷ್ಠೆಯಾದ ಭಗವಂತನ ಸ್ವರೂಪ 'ಪ್ರಶಾಂತ'. ಇದೇ ಅರ್ಥದಲ್ಲಿ 'ಶಾಂತಿಃ' ಪದ ಬಳಕೆಯಾಗುತ್ತದೆ. ಶಂ+ಅಂತ+ಇ= ಶಾಂತಿ. ಇಲ್ಲಿ ಇ=ಜ್ಞಾನ (ಇ->ಇಹಿ, ಇಣ ಗತೌ). ಹಾಗಾಗಿ 'ಶಾಂತಿಃ' ಎಂದರೆ ಜ್ಞಾನಾನಂದಗಳ ಪರಾಕಾಷ್ಠೆ ಎಂದರ್ಥ.

೨. '***ಅಭಯಂ***': ಈ ಪ್ರಪಂಚದಲ್ಲಿ ಯಾರನ್ನೇ ತೆಗೆದುಕೊಂಡರೂ ಕೂಡಾ ಅವರು ಒಂದಲ್ಲಾ ಒಂದು ರೀತಿಯಲ್ಲಿ ಭಯಕ್ಕೊಳಪಟ್ಟವರಾಗಿರುತ್ತಾರೆ. ಭಾಗವತದಲ್ಲೇ ಹೇಳುವಂತೆ: ***ನೋ ಭಯಂ ಸಸೃಜುರ್ಹ್ಯದಃ (೨-೫-೩೩).*** ಈ ಸಂಸಾರಕ್ಕೆ 'ಭಯ' ಎಂದು ಹೆಸರು. ಅಪಾಯ ಅಥವಾ ದುಃಖದ ನಿರೀಕ್ಷೆಯೇ ಭಯ. ಸಾಮಾನ್ಯವಾಗಿ ಭಯದ ಮೂಲ ಸಾವು ಅಥವಾ ನಮ್ಮಿಂದ ಬಲಿಷ್ಠರು ಅಥವಾ ನಮ್ಮ ಸಮಾನಸ್ಕಂಧರು. ಆದರೆ ಶಾಸ್ತ್ರದಲ್ಲಿ ಹೇಳುವಂತೆ: ***"ಏಕಮೇವ, ಅದ್ವಿತೀಯಂ ಬ್ರಹ್ಮ".*** ಅನಂತಕಾಲದಲ್ಲಿರುವ ಭಗವಂತನ ಸಮಾನನಾಗಲೀ, ಆತನಿಗಿಂತ ಉತ್ತಮನಾಗಲೀ ಈ ಪ್ರಪಂಚದಲ್ಲಿಲ್ಲ. ಹೀಗಾಗಿ ಭಗವಂತ ಭಯಾತೀತ.

ಭಗವಂತನಿಗೆ ಅಭಯ ಎನ್ನುವ ವಿಶೇಷಣವನ್ನು ಏಕೆ ಬಳಸಿದ್ದಾರೆ ಎಂದರೆ: ಪ್ರತಿಯೊಬ್ಬ ಮನುಷ್ಯನೂ ಕೂಡಾ ಭಯಾತೀತನಾಗಬೇಕೆಂದು ಬಯಸುತ್ತಾನೆ. ***ಯಥಾ ಉಪಾಸತೇ ತಥಾ ಭವತಿ.*** ಆತ ಏನನ್ನು ಬಯಸುತ್ತಾನೋ ಅದನ್ನೇ ಭಗವಂತನಲ್ಲಿ ಚಿಂತನೆ ಮಾಡುತ್ತಾನೆ. ಆದರೆ ಸಂಸಾರ ಭಯದಿಂದ ಪಾರಾಗಲು ನಮಗೊಬ್ಬ ಭಯಾತೀತ ಬೇಕು ಮತ್ತು ನಾವು ಅವನಲ್ಲಿ ಶರಣಾಗಿ ಭಯದಿಂದ ಪಾರಾಗಬೇಕು. ಆಗ ಅವನು ಅಭಯಹಸ್ತನಾಗಿ ನಮ್ಮನ್ನು ಕಾಪಾಡುತ್ತಾನೆ. ಅಂತಹ ಭಯಾತೀತ ಕೇವಲ ಭಗವಂತನೊಬ್ಬನೆ.

ಹೌದು, ಈ ಪ್ರಪಂಚದಲ್ಲಿ ಭಗವಂತನನ್ನು ಬಿಟ್ಟು ಪೂರ್ಣ ಪ್ರಮಾಣದಲ್ಲಿ ಭಯಾತೀತರಾಗಿರುವವರು ಯಾರೂ ಇಲ್ಲ. ಚತುರ್ಮುಖ ಕೂಡಾ ನಾಭೀ ಕಮಲದಲ್ಲಿ ಕಣ್ತೆರೆದಾಗ ಒಂದು ಕ್ಷಣ ಪ್ರಳಯ ಸಮುದ್ರದ ನಡುವೆ "ನಾನೆಲ್ಲಿಂದ ಬಂದೇ?" ಎಂದು ಭಯಗೊಂಡನಂತೆ. ಆನಂತರ ಯೋಚನೆ ಮಾಡಿ ಮುಂದುವರಿದನಂತೆ.

ಸಾಮಾನ್ಯವಾಗಿ ಮೃತ್ಯುವಿನ ಭಯ ಎಲ್ಲರಿಗೂ ಇದ್ದೇ ಇರುತ್ತದೆ. ಆದರೆ ಮೃತ್ಯುವಿಗೂ(ಯಮ/ಧರ್ಮದೇವತೆಗೂ) ಕೂಡಾ ಮೃತ್ಯುವಿನ(ಭಗವಂತನ) ಭಯವಿದೆ. ಇದನ್ನೇ ಕಠ ಉಪನಿಷತ್ತಿನಲ್ಲಿ ಯಮ ಹೀಗೆ ಹೇಳಿದ್ದಾನೆ: ***ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ । ಮೃತ್ಯುರ್ಯಸ್ಯೋಪಸೇಚನಂ ಕಃ ಇತ್ಥಾ ವೇದ ಯತ್ರ ಸಃ ॥೧-೨-೨೫॥*** ನಾನು ನಿಮ್ಮೆಲ್ಲರನ್ನು ಸಂಹರಿಸುವ ಶಕ್ತಿಯಾದರೆ, ವಿಶ್ವಸಂಹಾರಕನಾದ ಭಗವಂತನಿಗೆ ಪ್ರಳಯಕಾಲದಲ್ಲಿ ಇಡೀ ವಿಶ್ವವೇ ಅನ್ನ ಮತ್ತು ಅದರಲ್ಲಿ ನಾನು ಊಟಕ್ಕೆ ಕಲಸಿಕೊಳ್ಳುವ ವ್ಯಂಜನವಿದ್ದಂತೆ" ಎಂದು. ಹೀಗಾಗಿ ಸಾವಿಗೂ ಕೂಡಾ ಸಾವಿನ ಭಯವಿದೆ! ಮುಂದುವರಿದು ಯಮ ಹೇಳುತ್ತಾನೆ: ***"ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ(೧.೩.೨)*** ನಮ್ಮ ಭಯವನ್ನು ಪರಿಹರಿಸುವವನು ಆ ಭಗವಂತನೊಬ್ಬನೇ ಮತ್ತು ಅವನನ್ನು ಮೋಕ್ಷದಲ್ಲಿ ಸೇರಿದಾಗ ಜೀವ 'ಅಭಯ'ವನ್ನು ಪಡೆಯುತ್ತಾನೆ" ಎಂದು. ಹೀಗಾಗಿ ಎಂದೂ ಅಳಿವಿಲ್ಲದ ತತ್ತ್ವ ಭಗವಂತ ಅಭಯ;

ಹುಟ್ಟು ಸಾವಿನಿಂದ ಪಾರಾದವನು ಅಭಯ. ಹಾಗಾಗಿ ಹುಟ್ಟು-ಸಾವಿನಿಂದ ಪಾರಾಗಬಯಸುವವನು ಆ 'ಅಭಯ'ನಲ್ಲಿ ಶರಣಾಗಬೇಕು.

೩. ಪ್ರತಿಬೋಧಃ : ಸಾಮಾನ್ಯವಾಗಿ ಪ್ರತಿಬೋಧ ಎನ್ನುವ ಪದವನ್ನು 'ಎಚ್ಚರ ತಪ್ಪಿದವನಿಗೆ ಎಚ್ಚರವಾಗುವುದು' ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ. ಆದರೆ ಭಗವಂತನಿಗೆ ಎಂದೂ ಎಚ್ಚರ ತಪ್ಪುವುದಿಲ್ಲ. ಹೀಗಾಗಿ ಈ ಅರ್ಥ ಇಲ್ಲಿ ಕೂಡುವುದಿಲ್ಲ. ಭಗವಂತನ ಪರವಾಗಿ ಈ ಶಬ್ದವನ್ನು ನೋಡಿದರೆ ಈ ವಿಶೇಷಣಕ್ಕೆ ವಿಶೇಷ ಅರ್ಥವಿರುವುದು ತಿಳಿಯುತ್ತದೆ. ***ಪ್ರತಿವಸ್ತು ವಿಷಯಕಃ ಬೋಧಃ ಪ್ರತಿಬೋಧಃ.*** ಅಂದರೆ :ಪ್ರಪಂಚದಲ್ಲಿ ಎಷ್ಟು ವಸ್ತುಗಳಿವೆಯೋ ಅದನ್ನು ತಿಳಿದವನು ಪ್ರತಿಬೋಧ ಎಂದರ್ಥ. ಭಗವಂತನಿಗೆ ಗೋಚರವಾಗದ ಒಂದು ವಸ್ತುವೂ ಈ ಪ್ರಪಂಚದಲ್ಲಿಲ್ಲ. ಹಾಗಾಗಿ ಸರ್ವಜ್ಞನಾದ ಭಗವಂತ 'ಪ್ರತಿಬೋಧ'. ಇದನ್ನೇ ಶ್ರುತಿ ***ಯಃ ಸರ್ವಜ್ಞಃ ಸರ್ವವಿತ್ ಯಸ್ಯ ಜ್ಞಾನಮಯಂ ತಪಃ*** ಎಂದು ವರ್ಣಿಸುತ್ತದೆ.

೪. ಶುದ್ಧಂ: ವೇದದಲ್ಲಿ ಬಂದ ಪದಗಳನ್ನೇ ಇಲ್ಲಿ ಬಳಸಿರುವುದನ್ನು ಕಾಣುತ್ತೇವೆ. ಈಶಾವಾಸ್ಯ ಉಪನಿಷತ್ತಿನಲ್ಲಿ ಭಗವಂತನ ಗುಣವರ್ಣನೆ ಮಾಡುತ್ತಾ ಹೀಗೆ ಹೇಳಿದ್ದಾರೆ: *ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಂ ಶುದ್ಧಂ* ***ಅಪಾಪ ವಿದ್ಧಮ್, ಕವಿರ್ಮನೀಷೀ ಪರೀಭೂಸ್ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ (೧-೮).*** ಯಾವ ದೋಷದ ಸ್ಪರ್ಶವೂ ಇಲ್ಲದ ಸರ್ವಗುಣಗಳ ನೆಲೆಯಾದ ತ್ರಿಗುಣಾತೀತ ಭಗವಂತ ಶುದ್ಧಃ. ***ತ್ರೈಗುಣ್ಯ ವರ್ಜಿತಂ ಅಜಮ್ ವಿಭುಂ ಆದ್ಯಂಈಶಂ.*** ಆತನಿಗೆ ಸತ್ವ-ರಜ-ತಮೋಗುಣಗಳ ಸ್ಪರ್ಶವೇ ಇಲ್ಲ. "***ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ***" ಭಗವಂತನೊಬ್ಬನೇ ಪೂರ್ಣ ಶುದ್ಧ ಮತ್ತು ಪವಿತ್ರ. ಆತನನ್ನು ಬಿಟ್ಟು ಆತನಿಗೆ ಸಮನಾದ ಅಥವಾ ಶ್ರೇಷ್ಠವಾದ ಇನ್ನೊಂದು ತತ್ತ್ವವಿಲ್ಲ.

೫. ಸಮಂ: ಈ ವಿಶೇಷಣವನ್ನು ಅನೇಕ ಅರ್ಥದಲ್ಲಿ ಬಳಸುತ್ತಾರೆ. ಗೀತೆಯಲ್ಲಿ ಶ್ರೀಕೃಷ್ಣ ಹೇಳುವಂತೆ: ***ನಿರ್ದೋಷಂ ಹಿ ಸಮಂ ಬ್ರಹ್ಮ(೫-೧೯).***ಎಲ್ಲರನ್ನೂ ಸಮನಾಗಿ ಕಾಣುವ ಭಗವಂತನಿಗೆ ಯಾವುದೇ ತಾರತಮ್ಯ ಅಥವಾ ಭೇದವಿಲ್ಲ. ಪಾಂಡವರ ಕಡೆಯಿಂದ ಶಾಂತಿಧೂತನಾಗಿ ಬಂದ ಶ್ರೀಕೃಷ್ಣ ಹಸ್ತಿನಪುರದಲ್ಲಿ ಉಳಿದುಕೊಂಡಿದ್ದುದು ವಿದುರನ ಮನೆಯಲ್ಲಿ. ಅಲ್ಲಿ ಆತನಿಗೆ ಸಂಬಂಧಿಯಾದ ದುರ್ಯೋಧನ; ವೇದಜ್ಞರಾದ ದ್ರೋಣಾಚಾರ್ಯರು; ಅಗ್ರಪೂಜೆಮಾಡಿದ ಭೀಷ್ಮಾಚಾರ್ಯರು; ಇವರೆಲ್ಲರಿಗಿಂತ ವಿದುರನ ಭಕ್ತಿ ಮಹತ್ತಾಯಿತು. ಭಗವಂತ ಪುರಸ್ಕರಿಸುವುದು ಧರ್ಮವನ್ನು ಹೊರತು ಆಸ್ತಿ-ಅಂತಸ್ಥನ್ನಲ್ಲ. ಸಂಬಂಧದ ದೃಷ್ಟಿಯಲ್ಲಿ ನೋಡಿದರೆ: ದುರ್ಯೋಧನನ ಮಗಳು ಲಕ್ಷಣಳನ್ನು ಕೃಷ್ಣನ ಮಗ ಸಾಂಬ ಮದುವೆಯಾಗಿದ್ದ. ಹೀಗಾಗಿ ದತ್ತಕ್ಕೆ ಕೊಟ್ಟ ಸೋದರತ್ತೆಯ ಮಕ್ಕಳಾದ ಪಾಂಡವರಿಗಿಂತ ಕೃಷ್ಣನಿಗೆ ದುರ್ಯೋಧನನೇ ಹತ್ತಿರದ ಸಂಬಂಧಿ. ಆದರೆ ಭಗವಂತನ ಸಂಬಂಧ ಕೇವಲ ಧರ್ಮದ ಸಂಬಂಧ. ಆತ ಜೀವಯೋಗ್ಯತೆಗನುಗುಣವಾಗಿ ಎಲ್ಲರನ್ನೂ ಕಂಡು ಅವರವರ ಕರ್ಮಕ್ಕೆ ತಕ್ಕಂತೆ ಫಲವನ್ನು ನೀಡುತ್ತಾನೆ.

ಅಂತರ್ಯಾಮಿಯಾಗಿರುವ ಭಗವಂತ ಎಲ್ಲದರಲ್ಲೂ ಸಮ. ಅಂದರೆ ಇರುವೆಯೊಳಗಿರುವ ಭಗವಂತ ಮತ್ತು ಆನೆಯಲ್ಲಿರುವ ಭಗವಂತ ಬೇರೆಬೇರೆ ಅಲ್ಲ. ಹಾಗೆಯೇ ಭಗವಂತನ ಮೂಲರೂಪಕ್ಕೂ ಮತ್ತು ಆತನ ಅವತಾರ ರೂಪಕ್ಕೂ ಭೇದ ಚಿಂತನೆ ಇಲ್ಲ. ಆತನ ಮೂಲರೂಪ, ಅವತಾರ ರೂಪ ಎಲ್ಲವೂ ಪೂರ್ಣ.

೬. ಸದಸತ್ : ಭಗವಂತ ಸತ್ ಮತ್ತು ಅಸತ್ತಿನಿಂದಾಚೆಗಿರುವವ ಶ್ರೇಷ್ಠ ತತ್ತ್ವ. ಈ ಪ್ರಪಂಚ ಸತ್-ಅಸತ್ತಿನ ಮಿಶ್ರಣ. ಸತ್ ಅಂದರೆ ಕಣ್ಣಿಗೆ ಕಾಣುವ ವಸ್ತು. ಅಸತ್ ಎಂದರೆ ಕಣ್ಣಿಗೆ ಕಾಣದ ವಸ್ತು. ಹೀಗಾಗಿ ಪಂಚಭೂತಗಳಲ್ಲಿ ಮಣ್ಣು-ನೀರು-ಬೆಂಕಿ ಸತ್. ಗಾಳಿ ಮತ್ತು ಆಕಾಶ ಅಸತ್. ಪಂಚಭೂತಗಳು, ಪಂಚ

ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚತನ್ಮಾತ್ರೆಗಳು ಮತ್ತು ಪಂಚವಿಧದ ಅಂತಃಕರಣ, ಈ ಪಂಚಕದಿಂದಲೇ ಈ ಪ್ರಪಂಚ ನಿರ್ಮಾಣವಾಗಿದೆ. ಆದರೆ ಭಗವಂತ ಇವೆಲ್ಲವುಗಳಿಂದ ಆಚೆಗಿರುವವನು. ಹೀಗಾಗಿ ಇಂತಹ ಭಗವಂತನನ್ನು ಶಬ್ದಗಳಿಂದ ವರ್ಣಿಸುವುದು ಸಾಧ್ಯವಿಲ್ಲ. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳುವಂತೆ: *"ನೇತಿ ನೇತಿ ಆತ್ಮಾ ಅಗ್ರಹ್ಯಃ ನ ಹಿ ಗ್ರಹ್ಯತೆ"* ಅಂದರೆ ಭಗವಂತನನ್ನು ಮೊದಲು ಏನೆಂದು ತಿಳಿಯಬೇಕೆಂದರೆ: "ಭಗವಂತ ಪೂರ್ಣವಾಗಿ ತಿಳಿಯಲಿಕ್ಕಾಗುವ ವಸ್ತುವಲ್ಲ" ಎಂದು! ಅವನನ್ನು ಪೂರ್ಣವಾಗಿ ತಿಳಿಯುವುದು ಅಸಾಧ್ಯ ಎಂದು ತಿಳಿಯುವುದೇ ಮೊದಲು ನಾವು ಭಗವಂತನ ಬಗ್ಗೆ ತಿಳಿಯಬೇಕಾದ ವಿಷಯ.

**೭. ಪರಮಾತ್ಮತತ್ತ್ವಮ್:** ಆತ್ಮ ಶಬ್ದಕ್ಕೆ ಅನೇಕ ಅರ್ಥಗಳಿವೆ. ಆತ್ಮ ಎನ್ನುವ ಪದದ ಅರ್ಥವನ್ನು ಭಾರತ ಹೀಗೆ ವರ್ಣಿಸುತ್ತದೆ: *'ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ| ಯಚ್ಚಾಸ್ಯ ಸನ್ತತೋ ಭಾವಸ್ತಸ್ಮಾದಾತ್ಮೇತಿ ಭಣ್ಯತೇ' ಇತಿ|* . ಇಲ್ಲಿ ನಾಲ್ಕು ಧಾತುಗಳ ಮೂಲಕ ಆತ್ಮಶಬ್ದದ ವಿವರಣೆ ನೀಡಿದ್ದಾರೆ. (೧). **ಆಪ್ನೋತಿ ಇತಿ ಆತ್ಮಾ.** ಅಂದರೆ ಯಾರು ಒಳಗೂ ಹೊರಗೂ ತುಂಬಿ ಎಲ್ಲಾಕಡೆ ವ್ಯಾಪಿಸಿದ್ದಾನೋ ಅವನು ಆತ್ಮಾ. (೨). **ಆದತ್ತೇ ಇತಿ ಆತ್ಮಾ.** ಎಲ್ಲವನ್ನೂ ಪಡೆಯಬಲ್ಲವನು, ಭಕ್ತಿಯಿಂದ ಏನನ್ನು ಕೊಟ್ಟರೂ ಸ್ವೀಕಾರ ಮಾಡುವವನು, ಜೀವನಿಗೆ ಮೋಕ್ಷ ನೀಡುವ ಭಗವಂತ ಆತ್ಮಾ. (೩). **ಅತ್ತೀತಿ ಆತ್ಮಾ.** ಎಲ್ಲರ ಇಂದ್ರಿಯದೊಳಗಿದ್ದು ಎಲ್ಲವನ್ನೂ ಗ್ರಹಣ ಮಾಡುವ ಆನಂದಮಯನಾದ ಭಗವಂತ ಆತ್ಮಾ (೪). **ಆತನೋತಿ ಇತಿ ಆತ್ಮಾ:.** ಅನಾದಿ ಅನಂತಕಾಲದಲ್ಲಿರುವ ನಿತ್ಯ ಸತ್ಯ ಭಗವಂತ ಆತ್ಮಾ.

ಒಂದನೇ ಸ್ಕಂಧದಲ್ಲಿ ಈಗಾಗಲೇ ವಿವರಿಸಿದಂತೆ *ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥೧.೨.೧೧॥* ಎಲ್ಲಕ್ಕಿಂತಲೂ ಹಿರಿದಾದ, ಸರಿಸಾಟಿ ಇಲ್ಲದ(ಅದ್ವಯಮ್), ಸ್ವತಂತ್ರನಾದ ಭಗವಂತನನ್ನೇ ತತ್ತ್ವಜ್ಞಾನಿಗಳು 'ತತ್ತ್ವ' ಎಂದು ಕರೆಯುತ್ತಾರೆ. ಇಂತಹ ಭಗವಂತನನ್ನು ಬ್ರಹ್ಮ, ಪರಂಬ್ರಹ್ಮ, ಆತ್ಮ, ಪರಮಾತ್ಮ, ಭಗಃ, ಭಗವಾನ್ ಇತ್ಯಾದಿ ಗುಣವಾಚಕ ನಾಮಗಳಿಂದ ಕರೆಯುತ್ತಾರೆ. ತತ್ತ್ವ ಎಂದರೆ: ಹಿಂದೆ ಹೇಗಿತ್ತೋ ಹಾಗೇ ಎಂದೆಂದೂ ಇರುವಂತಹದ್ದು. ನಮ್ಮ ಅಭಿರುಚಿ, ಚಿಂತನೆ, ತೀರ್ಮಾನ ದಿನಕ್ಕೊಂದು ರೀತಿ. ಅದು ಬದಲಾಗುತ್ತಲೇ ಇರುತ್ತದೆ. ಆದರೆ ಭಗವಂತ ಹಾಗಲ್ಲ. ನಿರ್ವಿಕಾರನಾಗಿ ಎಲ್ಲಾ ಕಾಲದಲ್ಲೂ ಸದಾ ಏಕರೂಪವಾಗಿರುವ ತತ್ತ್ವ ಭಗವಂತನೊಬ್ಬನೇ.

ಒಟ್ಟಿನಲ್ಲಿ ಹೇಳಬೇಕೆಂದರೆ ಯಾವುದು ಆನಂದಮಯವೋ, ಯಾವುದು ಎಲ್ಲಾ ಶಬ್ದಗಳ ಕೊನೆಯೋ, ಯಾರಿಗೆ ದುಃಖ ಮತ್ತು ದೋಷದ ಸ್ಪರ್ಶವಿಲ್ಲವೋ, ಯಾವುದು ಜ್ಞಾನಾನಂದಮಯವೋ, ಯಾವುದು ಪ್ರಪಂಚಕ್ಕಿಂತ ಅತೀತವೋ, ಅಂತಹ ನಿರ್ವಿಕಾರ ಮೂರ್ತಿ ಭಗವಂತನನ್ನು ನಾವು ನಮ್ಮ ಜೀವಮಾನದಲ್ಲಿ ನಮ್ಮ ಸಾಮರ್ಥ್ಯವಿದ್ದಷ್ಟು ಅರಿಯಲು ಪ್ರಯತ್ನಿಸಬೇಕು.

ಈ ಶ್ಲೋಕದ ಉತ್ತರಾರ್ಧ ಸಮಾಧಿಗುಹ್ಯ ಭಾಷೆಯಲ್ಲಿದ್ದು, ಅದು ಅತ್ಯಂತ ವಿಶಿಷ್ಟವಾದ ವಿಷಯವನ್ನು ನಮ್ಮ ಮುಂದೆ ಬಿಚ್ಚಿಡುತ್ತದೆ. ಚತುರ್ಮುಖ ಹೇಳುತ್ತಾನೆ: "*ಶಬ್ದೋ ನ ಯತ್ರ ಪುರುಕಾರಕವಾನ್ ಕ್ರಿಯಾರ್ಥೋ ಮಾಯಾ ಪರೈತ್ಯಭಿಮುಖೇ ಚ ವಿಲಜ್ಜಮಾನಾ*" ಎಂದು. ಈ ಹಿಂದೆ ಮೊದಲನೇ ಸ್ಕಂಧದಲ್ಲಿ ವಿವರಿಸಿದಂತೆ: ಸಮಾಧಿ ಭಾಷೆಯಲ್ಲಿ ಯಾವುದನ್ನೂ ಮುಚ್ಚಿಡುವುದಿಲ್ಲ. ಆದರೆ ಸಮಾಧಿಗುಹ್ಯ ಭಾಷೆ ಸಂಪುಟದೊಳಗಿನ ಸಾಳಗ್ರಾಮದಂತೆ. ಸಂಪುಟವನ್ನು ತೆರೆದರೆ ಮಾತ್ರ ಸಾಳಗ್ರಾಮ ದರ್ಶನ. ಇಂತಹ ಸಮಾಧಿಗುಹ್ಯ ಭಾಷೆಯನ್ನು ಭಾಗವತದಲ್ಲಿ ಸಾಕಷ್ಟು ಬಳಸಿದ್ದಾರೆ. ಅಲ್ಲಿ ಅನೇಕ ಗೂಡಾರ್ಥಗಳನ್ನು ತುಂಬಿ ಮೇಲ್ನೋಟಕ್ಕೆ ಅದು ಅರ್ಥವಾಗದಂತೆ ಮುಚ್ಚಿಡಲಾಗಿದೆ. ನಾವು ಆ ಮುಚ್ಚಳವನ್ನು ತೆರೆದು ಕಂಡಾಗ ಮಾತ್ರ ಸತ್ಯದ ಸಾಕ್ಷಾತ್ಕಾರವಾಗುತ್ತದೆ. ಇಡೀ ವೈದಿಕ

ಸಾಹಿತ್ಯವೇ ಹೀಗೆ. ಇದಕ್ಕಾಗಿಯೇ ವೇದವನ್ನು ಛಂದಸ್ಸುಗಳೆಂದು ಕರೆದರು. ***ಛಾದಯಂತಿ ಇತಿ ಛಂದಃ.*** ಅಂದರೆ ಹೇಳಬೇಕಾದುದನ್ನು ಮುಚ್ಚಿಟ್ಟು ಹೇಳುವಂಥಹದ್ದು ಎಂದರ್ಥ.

ಶಬ್ದ ಅಥವಾ ಭಾಷೆ ಎಂದರೆ ಅದು ಕ್ರಿಯೆ ಮತ್ತು ಕಾರಕಗಳ ಸಮಷ್ಟಿ. ಪ್ರಾಚೀನ ಭಾಷಾಶಾಸ್ತ್ರಜ್ಞರಲ್ಲಿ ಒಂದು ಪಂತ ಶಬ್ದದಲ್ಲಿ ಮುಖ್ಯವಾದುದು ಕ್ರಿಯೆ ಎನ್ನುವ ವಾದದಲ್ಲಿ ತೊಡಗಿತ್ತು. ಇದನ್ನು 'ಕಾರ್ಯತಾವಾದ' ಎನ್ನುತ್ತಾರೆ. ಕ್ರಿಯೆಯ ಮೂಲಕವೇ ಭಾಷಾಜ್ಞಾನ ಬರುವುದು ಮತ್ತು ಕ್ರಿಯೆಗೆ ಅನ್ವಿತವಾಗಿ ಉಳಿದ ಶಬ್ದಗಳು ಅರ್ಥವಾಗುತ್ತದೆ ಎನ್ನುವುದು ಈ ಪಂತದ ತಿಳುವಳಿಕೆಯಾಗಿತ್ತು. ಆದರೆ ಭಾಷಾಜ್ಞಾನಕ್ಕೆ ಕಾಲಿಡುವ ಪುಟ್ಟ ಮಗು ಭಾಷೆಯನ್ನು ಕಲಿಯುವಾಗ ಮೊತ್ತ ಮೊದಲು ಕಲಿಯುವುದು: "ಇದು ನನ್ನ ಅಮ್ಮ/ಅಪ್ಪ" ಎನ್ನುವ ಮಾತನ್ನು. ಇಲ್ಲಿ ಕ್ರಿಯಾಪದವೇ ಇಲ್ಲ. ಈ ಹಿನ್ನೆಲೆಯಲ್ಲಿ ನೋಡಿದಾಗ ವ್ಯಕ್ತಿ ಅಥವಾ ವಸ್ತು ಭಾಷೆಯಲ್ಲಿ ಮುಖ್ಯವಾಗುತ್ತದೆ ಮತ್ತು ಕ್ರಿಯೆ ಅದರ ಸುತ್ತ ಹೆಣೆದುಕೊಳ್ಳುತ್ತದೆ ಎನ್ನುವ ವಿಚಾರ. ಹೀಗಾಗಿ ಕಾರ್ಯತಾವಾದ ಕ್ರಮೇಣ ಬಿದ್ದು ಹೋಯಿತು.

ಭಾಷೆಯಲ್ಲಿ ನಾವು ಏಳು ವಿಭಕ್ತಿಗಳ ಮೂಲಕ ಕ್ರಿಯೆಯನ್ನು ಅನ್ವಯ ಮಾಡುತ್ತೇವೆ:

| ವಿಭಕ್ತಿ | ಕಾರಕ | ಅರ್ಥ | ಉದಾಹರಣೆ |
|---|---|---|---|
| ಪ್ರಥಮಾ | ಕರ್ತೃ | ಉ | ಅವನು |
| ದ್ವಿತೀಯಾ | ಕರ್ಮ | ಅನ್ನು | ಅವನನ್ನು |
| ತೃತೀಯಾ | ಕಾರಣ ಕರ್ತೃ | ಇಂದ | ಅವನಿಂದ |
| ಚತುರ್ಥೀ | ಸಂಪ್ರದಾನ | ಗೆ, ಇಗೆ, ಕ್ಕೆ | ಅವನಿಗೆ |
| ಪಂಚಮೀ | ಅಪಾದಾನ | ದೆಸೆಯಿಂದ | ಅವನ ದೆಸೆಯಿಂದ |
| ಷಷ್ಠೀ | ಸಂಬಂಧ | ಅ | ಅವನ |
| ಸಪ್ತಮೀ | ಅಧಿಕರಣ | ಅಲ್ಲಿ | ಅವನಲ್ಲಿ |

ಕಾರಕಗಳು ವಸ್ತುವಿನಲ್ಲಿ ಇರತಕ್ಕಂತಹ ಕ್ರಿಯೆಗೆ ಸಂಬಂಧಪಟ್ಟ ಗುಣಗಳನ್ನು ಹೇಳುತ್ತವೆ ಮತ್ತು ಕ್ರಿಯೆಯನ್ನು ಹೇಳುತ್ತವೆ. ಭಾಷೆ ಎಂದರೆ ಕ್ರಿಯೆ ಮತ್ತು ಕಾರಕಗಳ ಸಂಗಮ. ಯಾವ ಭಾಷೆಯಲ್ಲಾದರೂ ಕೂಡಾ ಅಲ್ಲಿ ಒಂದು ಕ್ರಿಯಾಪದವಿರುತ್ತದೆ ಮತ್ತು ಅದಕ್ಕೆ ಅನ್ವಿತವಾಗುವ ಕಾರಕ ಪದಗಳಿರುತ್ತವೆ. ಕಾರಕ ಪದಗಳಲ್ಲಿ ಒಂದು ಕರ್ತೃ ಇದ್ದು ಅದಕ್ಕೊಂದು ವಿಶೇಷಣವಿರಬಹುದು. ಅಂದರೆ ಒಂದು ವಿಶೇಷ್ಯ ಅದಕ್ಕೊಂದು ವಿಶೇಷಣ. ಆನಂತರ ವಿಭಕ್ತಿಗಳು. ವಿಶೇಷ್ಯಕ್ಕೆ ಯಾವ ವಿಭಕ್ತಿಯೋ ವಿಶೇಷಣಕ್ಕೂ ಅದೇ ವಿಭಕ್ತಿ. ವಿಶೇಷ್ಯಕ್ಕೆ ಯಾವ ಲಿಂಗವೋ ವಿಶೇಷಣಕ್ಕೂ ಅದೇ ಲಿಂಗ. ಸಂಸ್ಕೃತದಲ್ಲಿ ಕಾರಕಗಳಿಗೆ ಲಿಂಗವಿದೆ ಆದರೆ ಕ್ರಿಯಾಪದಗಳಿಗೆ ಲಿಂಗವಿಲ್ಲ. [ಕನ್ನಡದಲ್ಲಿ ಕ್ರಿಯಾಪದಕ್ಕೆ ಲಿಂಗವನ್ನು ಹೇಳುತ್ತಾರೆ. ಉದಾಹರಣೆಗೆ ಅವನು ಹೋಗುತ್ತಾನೆ; ಅವಳು ಹೋಗುತ್ತಾಳೆ. ಆದರೆ ನಿಜವಾಗಿ ಕ್ರಿಯಾಪದಕ್ಕೆ ಲಿಂಗವಿಲ್ಲ. ಹೀಗಾಗಿ ಸಂಸ್ಕೃತದಲ್ಲಿ ಕ್ರಿಯಾಪದಕ್ಕೆ ಲಿಂಗವನ್ನು ಹೇಳುವುದಿಲ್ಲ. ಉದಾಹರಣೆಗೆ: ಗಚ್ಛತಿ]. ಕಾರಕಗಳಿಗೆ ಲಿಂಗವಿರುವುದರಿಂದ ಅದಕ್ಕನುಗುಣವಾಗಿ ವಿಶೇಷ್ಯ-ವಿಶೇಷಣಗಳು ಸ್ತ್ರೀ/ಪುರುಷ/ನಪುಂಸಕ ಲಿಂಗವಾಗಿ ಬದಲಾಗುತ್ತಿರುತ್ತವೆ. ಆದರೆ ಕೆಲವೊಮ್ಮೆ ಲಿಂಗಕ್ಕೂ ಕಾರಕಕ್ಕೂ ಸಂಬಂಧವಿರುವುದಿಲ್ಲ. ಉದಾಹರಣೆಗೆ ಮಗು. ಅಲ್ಲಿ ಅದು ಗಂಡೇ ಇರಬಹುದು ಅಥವಾ ಹೆಣ್ಣೇ ಇರಬಹುದು. ಆದರೆ ಅಲ್ಲಿ ಸ್ತ್ರೀ/ಪುರುಷ ಲಿಂಗವನ್ನು ಬಳಸುವುದಿಲ್ಲ. ಕಾರಣವೇನೆಂದರೆ ಮಗುವಿನಲ್ಲಿ ಇನ್ನೂ ಸ್ತ್ರೀತ್ವ ಅಥವಾ ಪುಂಸತ್ವ ಬೆಳೆದಿರುವುದಿಲ್ಲ. ಹಾಗಾಗಿ

ಅದನ್ನು ನಪುಂಸಕ ಲಿಂಗದಲ್ಲಿ ಹೇಳಲಾಗುತ್ತದೆ. ಇನ್ನು ಕೆಲವೊಮ್ಮೆ ಲಿಂಗಕ್ಕಿಂತ ಹೆಚ್ಚಾಗಿ ಅರ್ಥಕ್ಕೆ ಮಹತ್ವ ಕೊಡುತ್ತಾರೆ. ಉದಾಹರಣೆಗೆ ಕೆಲವು ಸಂದರ್ಭದಲ್ಲಿ ಹೆಂಡತಿಯನ್ನು ದಾರಾಃ ಎಂದು ಬಹುವಚನ ಮತ್ತು ಪುಲ್ಲಿಂಗದಲ್ಲಿ ಹೇಳಲಾಗುತ್ತದೆ. ಕಾರಣವೇನೆಂದರೆ ಇದು ಲಿಂಗಕ್ಕಿಂತ ಪ್ರಾಧಾನ್ಯವಾಗಿ ಅರ್ಥಕ್ಕೆ ಮಹತ್ವ ಕೊಟ್ಟು ಹೇಳುವ ಮಾತು. ಹೆಂಡತಿ ಎಂದು ಹೇಳುವಾಗಲೆಲ್ಲಾ ದಾರಾಃ ಎಂದು ಹೇಳುವುದಿಲ್ಲ. ಇದು ಮನೆ ಒಡೆಯುವ(ದಾರಯತಿ) ಗಂಡುಬೀರಿ ಹೆಂಡತಿಗೆ ಉಪಯೋಗಿಸುವ ಪದ. ಇವೆಲ್ಲವೂ ಮೂಲ ಸಂಸ್ಕೃತದ ಸೊಬಗು. ಆದರೆ ಕ್ರಮೇಣ ವ್ಯಾಕರಣ ಮತ್ತು ಕೋಶಗಳಿಂದಾಗಿ ಭಾಷೆಯಲ್ಲಿ ಅನೇಕ ದೋಷಗಳು ಸೇರಿಕೊಂಡವು. ಉದಾಹರಣೆಗೆ: ಸಂಖ ಎನ್ನುವ ಪದ ತಪ್ಪಾಗಿ ಸಂಖ್ಯ ಎಂದು ಬಳಕೆಗೆ ಬಂತು; ದುಃಷಂತ ಎನ್ನುವ ಪದ ದುಷ್ಯಂತ ಎಂದು ಬಳಕೆಗೆ ಬಂತು; ರುಗ್ಮನನ್ನು ರುಕ್ಮ ಮಾಡಲಾಯಿತು; ಬಾಹುಷಾಳಿ ಬಾಹುಶಾಲಿಯಾದ; ಅಕ್ಷೋಹಿಣಿಯನ್ನು ತಪ್ಪಾಗಿ ಅಕ್ಷೌಹಿಣಿ ಮಾಡಲಾಯಿತು. ಹೀಗೆ ಅನೇಕ ತಪ್ಪುಗಳು ಸೇರಿಕೊಂಡವು. ಮೂಲ ಸಂಸ್ಕೃತಕ್ಕೆ ತಪ್ಪು ಸೂತ್ರಗಳನ್ನು ಬರೆದು ತಪ್ಪು ಶಬ್ದಗಳನ್ನು ಸೃಷ್ಟಿ ಮಾಡಲಾಯಿತು; 'ಳ ಮತ್ತು ಕ್ಷ' ಅಕ್ಷರವನ್ನೇ ತಿಂದು ಹಾಕಲಾಯಿತು. ಅಮರಕೋಶದಲ್ಲೂ ಕೂಡ ಅನೇಕ ತಪ್ಪುಗಳು ಸೇರಿಕೊಂಡವು. ಉದಾಹರಣೆಗೆ ಸಣ್ಣಸಣ್ಣ ಎಲೆಗಳಿರುವ 'ಗಾಯತ್ರೀ ಬಾಲಪತ್ರೆ' ಎನ್ನುವ ಔಷಧ ಗಿಡವನ್ನು ಅಮರಕೋಶ ತಪ್ಪಾಗಿ 'ಗಾಯತ್ರೀಬಾಲತನಯ' ಎಂದು ಹೇಳಿದೆ. ಇದಲ್ಲದೆ ಅತ್ಯಂತ ದೊಡ್ಡ ಅನಾಹುತ ಉಚ್ಛಾರ ದೋಷ. ಇಂದು ಭಾಷಾಧ್ವನಿಶಾಸ್ತ್ರ **(phonetics)** ವಿದ್ಯೆ ಕಣ್ಮರೆಯಾಗುತ್ತಿದೆ. ಇದರಿಂದಾಗಿ ನಾವು ಭಾಷೆಯನ್ನು ತಪ್ಪುತಪ್ಪಾಗಿ ಉಚ್ಛರಿಸುತ್ತಿದ್ದೇವೆ. ಹೀಗೆ ಅನೇಕ ತಪ್ಪುಗಳು ನಡೆದು ಅದರಿಂದಾಗಿ ಭಾಷೆಗೆ ಅನ್ಯಾಯವಾಗುತ್ತಿದೆ.

ಭಾಷೆಯ ವ್ಯಾಪ್ತಿ ಏನೇ ಇದ್ದರೂ ಕೂಡಾ, ಒಟ್ಟಿನಲ್ಲಿ ಹೇಳಬೇಕೆಂದರೆ ಕಾರಕವಿರಲೀ, ವಿಶೇಷ್ಯವಿರಲೀ, ವಿಶೇಷಣವಿರಲೀ ಇದಾವುದರಿಂದಲೂ ಭಗವಂತನನ್ನು ಪೂರ್ಣವಾಗಿ ವಿವರಿಸಲು ಸಾಧ್ಯವಿಲ್ಲ ಎನ್ನುವುದನ್ನು ಇಲ್ಲಿ ಚತುರ್ಮುಖ ನಾರದರಿಗೆ ವಿವರಿಸಿದ್ದಾನೆ.

ಯಾವ ಭಾಷೆಯೂ ಕೂಡಾ ಭಗವಂತನನ್ನು ಪೂರ್ಣವಾಗಿ ವಿವರಿಸಲಾರದು ಎನ್ನುವುದು ಮೇಲಿನ ಶ್ಲೋಕದ ಒಂದು ಅರ್ಥವಾದರೆ, ಈ ಶ್ಲೋಕಕ್ಕೆ ರೋಚಕವಾದ ಇನ್ನೊಂದು ಮುಖವಿದೆ. *"ಶಬ್ದಃ ನ ಪುರುಕಾರಕವಾನ್ ನ ಕ್ರಿಯಾರ್ಥಃ"* ಭಗವಂತನ ವಿಷಯದಲ್ಲಿ ಶಬ್ದಗಳು ಅನ್ವಯವಾದಾಗ ಅಲ್ಲಿ ಕಾರಕವೂ ಇಲ್ಲ, ವಿಭಕ್ತಿಯೂ ಇಲ್ಲ. ಎಲ್ಲವೂ ಭಗವಂತನ ನಾಮವಾಗಿ ಬಿಡುತ್ತದೆ. ಇದನ್ನು ತೋರಿಸುವುದಕ್ಕಾಗಿಯೇ ಪ್ರಾಚೀನರು ಒಂದು ಸುಂದರವಾದ ಪರಿಕಲ್ಪನೆ ನೀಡಿದರು. ಈ ಹಿಂದೆ ಹೇಳಿದಂತೆ: 'ಅ-ಕಾರದಿಂದ ಕ್ಷ-ಕಾರದವರೆಗಿನ ಐವತ್ತೈದು ವರ್ಣಮಾಲೆಯನ್ನು ಅಕ್ಷರ ಎಂದು ಕರೆಯುತ್ತಾರೆ. ಈ ಐವತ್ತೈದು ಅಕ್ಷರಗಳೂ ಕೂಡಾ ಭಗವಂತನ ನಾಮಧೇಯ ಎನ್ನುವ ಅಪೂರ್ವ ವಿಷಯವನ್ನು ಪ್ರಾಚೀನರು ನೀಡಿದ್ದಾರೆ. [ವಿವರಕ್ಕಾಗಿ ಒಂದನೇ ಸ್ಕಂಧದ ಮೊದಲ ಅಧ್ಯಾಯ ನೋಡಿ ೧.೧.೧]. ನಮಗೆ ತಿಳಿದಂತೆ ಸಂಸ್ಕೃತ ಭಾಷೆ ಸಂಕ್ಷಿಪ್ತ ಪದಗಳ ಭಂಡಾರ. **(language of abbreviation)**. ಇಡೀ ಸಂಸ್ಕೃತ ಭಾಷೆ ಬೆಳೆದಿರುವುದೇ ಸಂಕ್ಷೇಪಣಾ ತತ್ವದ ಮೇಲೆ. ಇದನ್ನು ಸಂಸ್ಕೃತದಲ್ಲಿ ***'ಸಮಾಹಾರ'*** ಎನ್ನುತ್ತಾರೆ. ಎಲ್ಲವೂ ಹುಟ್ಟಿರುವುದು ಮೂಲತಃ ಓಂ-ಕಾರದಿಂದ. ಪ್ರತೀ ಅಕ್ಷರ ಭಗವಂತನ ನಾಮವಾದಾಗ ಪ್ರತೀ ಪದವೂ ಕೂಡಾ ಭಗವಂತನ ನಾಮವಾಗುತ್ತದೆ. ಉದಾಹರಣೆಗೆ: ವಿಶ್ವಂ ಎನ್ನುವ ಪದ ವರ್ಣಮಾಲೆಯಲ್ಲಿನ ವ+ಇ+ಶ+ವ+ಅಂ ಎನ್ನುವ ಐದು ಅಕ್ಷರಗಳ ಸಂಗಮ. ಪ್ರತಿಯೊಂದು ಅಕ್ಷರಗಳೂ ಭಗವಂತನ ನಾಮವೆಂದಮೇಲೆ ಅದರ ಸಮಷ್ಟಿಯೂ ಭಗವಂತನ ನಾಮವಾಗಲೇ ಬೇಕು. ಇದನ್ನೇ ವರಾಹಪುರಾಣ ಹೀಗೆ ವರ್ಣಿಸುತ್ತದೆ: *"ಯಾವಂತಿ ಪಟಿಥಾನಿ*

***ತಾವಂತಿ ಹರಿನಾಮಂತಿ ಪಟಿಥಾನಿ ನಾಸಂಶಯಃ*" .** ಒಮ್ಮೆ ವೇದವನ್ನು ಓದಿದರೆ ಅದರಲ್ಲಿ ಎಷ್ಟು ಅಕ್ಷರಗಳಿವೆಯೋ ಅಷ್ಟು ಹರಿನಾಮವನ್ನು ನಾವು ಪಠಿಸಿದಂತಾಗುತ್ತದೆ.

ಮೇಲ್ನೋಟದಲ್ಲಿ ವೇದವನ್ನು ನೋಡಿದರೆ ಅಲ್ಲಿ ಅನೇಕ ಕರ್ಮವಾಚಕ ಪದಗಳನ್ನು ಕಾಣುತ್ತೇವೆ. ಆದರೆ ನಮಗೆ ತಿಳಿದಂತೆ ವೇದ ಅಂತತಃ ಹೇಳುವುದು ಭಗವಂತನನ್ನು. ಉದಾಹರಣೆಗೆ: "***ವಸಂತೇ ವಸಂತೇ ಜ್ಯೋತಿಷ ಯಜೇತಾ***": ಮೇಲ್ನೋಟದಲ್ಲಿ ನೋಡಿದರೆ: "ಪ್ರತಿಯೊಂದು ವಸಂತದಲ್ಲೂ ಜ್ಯೋತಿಷ್ಟೋಮಯಾಗ ಮಾಡು" ಎನ್ನುವುದು ಈ ಮಾತಿನ ಅರ್ಥ. ಆದರೆ ಇಲ್ಲಿ ಬರುವ ಪ್ರತಿಯೊಂದು ಪದವನ್ನು ಭಗವಂತನ ಪರ ಅರ್ಥ ಮಾಡಿದಾಗ ಇದು ಭಗವಂತನನ್ನು ಹೇಳುವ ಅಪೂರ್ವವಾದ ಶ್ಲೋಕ ಎನ್ನುವುದು ತಿಳಿಯುತ್ತದೆ. 'ವಸಂತೇ' ಎನ್ನುವುದು ಸಂಬೋಧನೆ. ಅಲ್ಲಿ ವಸಂತಿಃ ಎಂದರೆ '***ಸರ್ವತ್ರ ವಸತೀತಿ ವಸನ್*'; *ತತತ್ವತ್ ತಿತಿಃ.*** ಹೀಗಾಗಿ ವಸಂತೇ ಎಂದರೆ: ಎಲ್ಲವುದರ ಒಳಗೂ ವಾಸ ಮಾಡುವವನು, ಎಲ್ಲೆಡೆ ತುಂಬಿರುವವನು ಎಂದರ್ಥ. ಅದೇ ರೀತಿ '***ಜ್ಯೋತಿಷ*'.** **ಜ್ಯೋತಿಃ+ಷ= ಜ್ಯೋತಿಷ,** ***ಷ-ಕಾರೋ ಪ್ರಾಣೋ ಆತ್ಮಾ*** ಎನ್ನುತ್ತದೆ ಉಪನಿಷತ್. ಹೀಗಾಗಿ 'ಷ' ಎಂದರೆ ಸರ್ವಚೇಷ್ಟಕತ್ವ. ಆದ್ದರಿಂದ ಜ್ಯೋತಿಷ ಎಂದರೆ ಸ್ವಯಂ ಪ್ರಕಾಶಸ್ವರೂಪನೂ(ಜ್ಯೋತಿಃ), ಸರ್ವಚೇಷ್ಟಕನೂ(ಷ) ಆದ ಭಗವಂತ ಎಂದರ್ಥ. ಇನ್ನು 'ಆಯುಜೇತಾ'. ***ಆಯಜ್ಞೇ ತಸ್ಯ ಆಯುಜೇತಃ.*** ಅಂದರೆ: ಎಲ್ಲಾ ಯಜ್ಞಗಳಿಂದ ಪೂಜಿತನಾದವನು ಎಂದರ್ಥ. ಹೀಗೆ ಇಲ್ಲಿರುವ ಎಲ್ಲಾ ಪದಗಳೂ ಭಗವಂತನ ಗುಣವರ್ಣನೆ ಮಾಡುವ ಪದಗಳು. ಈ ರೀತಿ ಪ್ರತಿಯೊಂದು ಪದವನ್ನು ಭಗವಂತನ ಪರ ನೋಡಿದಾಗ ಅಲ್ಲಿ ಕಾರಕವೂ ಇಲ್ಲ, ಕ್ರಿಯಾರ್ಥವೂ ಇಲ್ಲ. ಎಲ್ಲವೂ ಭಗವಂತನ ಗುಣವಾಚಕ ಪದಗಳು. ಇದು ಶಬ್ದಪ್ರಪಂಚವನ್ನು ಕೆದಕಿದಾಗ ಅಲ್ಲಿ ಸಿಗುವ ಅಪೂರ್ವ ಒಳಾರ್ಥಗಳು. ಆದರೆ ಇಷ್ಟೆಲ್ಲಾ ಇದ್ದರೂ ಕೂಡಾ, "ಯಾವುದೇ ಭಾಷೆಯಿಂದಾಗಲೀ, ಶಬ್ದ ಭಂಡಾರದಿಂದಾಗಲೀ ಭಗವಂತನನ್ನು ಪೂರ್ಣವಾಗಿ ವರ್ಣಿಸಲು ಸಾಧ್ಯವಿಲ್ಲ" ಎಂದಿದ್ದಾನೆ ಚತುರ್ಮುಖ.

ಈ ಮೊದಲು ಹೇಳಿದಂತೆ ನಮಗೂ ಭಗವಂತನಿಗೂ ನಡುವೆ ಎರಡು ಮಾಯಾ ಪರದೆಗಳಿವೆ. ಆದರೆ ಇದು ಕೇವಲ ನಮಗೆ ಮಾತ್ರ ಅನ್ವಯವಾಗುವ ಪರದೆ ಹೊರತು ಭಗವಂತನಿಗಲ್ಲ. "ಮಾಯಾತೀತನಾದ ಭಗವಂತನ ಮುಂದೆ ಯಾವ ಮಾಯೆಯೂ ತಲೆ ಎತ್ತಲಾರದು" ಎಂದಿದ್ದಾನೆ ಚತುಮುಖ. ಒಟ್ಟಿನಲ್ಲಿ ಹೇಳಬೇಕೆಂದರೆ: ಈ ಶ್ಲೋಕ ಭಾಷಾಶಾಸ್ತ್ರದ ಅದ್ಭುತ ಒಳನೋಟದೊಂದಿಗೆ "ಮಾಯಾತೀತನಾದ ಭಗವಂತನನ್ನು ಶಬ್ದಗಳಿಂದ ಪೂರ್ಣವಾಗಿ ವರ್ಣಿಸುವುದು ಅಸಾಧ್ಯ" ಎನ್ನುವ ಸಂದೇಶವನ್ನು ನೀಡುವ ಅಪೂರ್ವ ಶ್ಲೋಕ.

**ಸ ಶ್ರೇಯಸಾಮಪಿ ವಿಭುರ್ಭಗವಾನ್ ಯತೋSಸ್ಯ ಭಾವಸ್ವಭಾವವಿಹಿತಸ್ಯ ಸತಃ ಪ್ರಸಿದ್ಧಃ ।**
**ದೇಹೇ ಸ್ವಧಾತುವಿಗಮೇ ತು ವಿಶೀರ್ಯಮಾಣೇ ವ್ಯೋಮೇವ ತತ್ರ ಪುರುಷೋ ನ ವಿಶೀರ್ಯತೇSಜಃ ॥೪೯॥**

ಭಗವಂತನ ಗುಣಲಕ್ಷಣಗಳ ವರ್ಣನೆ ಮಾಡಿದ ಚತುರ್ಮುಖ ಮುಂದುವರಿದು ಹೇಳುತ್ತಾನೆ: "ನಮ್ಮ ಬದುಕಿನ ಅತ್ಯಂತ ದೊಡ್ಡ ಶ್ರೇಯಸ್ಸು ಎಂದರೆ ಮುಕ್ತಿ. ಅದರಾಚೆಗೆ ಯಾವ ಪುರುಷಾರ್ಥವೂ ಇಲ್ಲ. ಮೋಕ್ಷಕ್ಕಾಗಿಯೇ ಧರ್ಮ-ಅರ್ಥ-ಕಾಮಗಳಿರುವುದು. ಇಂತಹ ಮೋಕ್ಷವನ್ನು ಕರುಣಿಸುವ ಸಾಮರ್ಥ್ಯವಿರುವುದು ಕೇವಲ ಭಗವಂತನೊಬ್ಬನಿಗೆ ಮಾತ್ರ. ಯಾರಿಗೆ ಭಕ್ತಿ ಎನ್ನುವುದು ಸಹಜ ಸ್ವಭಾವವೋ ಅವನಿಗೆ ಭಗವಂತ ಮೋಕ್ಷ ಕರುಣಿಸುತ್ತಾನೆ. ಹೀಗಾಗಿ ನಮ್ಮ ಭಕ್ತಿ ಸಂಕಟ ಬಂದಾಗ ಮಾತ್ರ ಹುಟ್ಟುವ ಭಕ್ತಿಯಾಗದೇ ಅದು ನಮ್ಮ ಸ್ವಭಾವವಾಗಬೇಕು. ಆಗ ಅದು ನಮ್ಮನ್ನು ಮೋಕ್ಷಕ್ಕೆ ಕೊಂಡೊಯ್ಯಬಲ್ಲುದು" ಎಂದು.

ಭಗವಂತ ನಮ್ಮೊಂದಿಗೆ ನಮ್ಮ ದೇಹದಲ್ಲೇ ಇದ್ದಾನೆ. ಆದರೆ ಜೀವನಿಗಾಗಲೀ, ಭಗವಂತನಿಗಾಗಲೀ ಸಾವು ಎನ್ನುವುದಿಲ್ಲ. ಜೀವ ದೇಹವನ್ನು ಪಡೆದು ವ್ಯಕ್ತವಾಗುವುದನ್ನು ಜನನ ಎನ್ನುತ್ತಾರೆ(ಜನಿ ಪ್ರಾದುರ್ಭಾವೇ). ಜೀವ ದೇಹವನ್ನು ಬಿಟ್ಟು ಅವ್ಯಕ್ತವಾಗುವುದನ್ನು ಸಾವು ಎನ್ನುತ್ತಾರೆ. ಹೀಗಾಗಿ ಜೀವ ಮತ್ತು ಭಗವಂತ ಆಕಾಶದಂತೆ ನಾಶವಿಲ್ಲದ ತತ್ತ್ವ. ದೇಹವನ್ನು ಕಳಚಿಕೊಂಡಾಗ ಜೀವ ಸಪ್ತಧಾತುಗಳಿಂದ ಅಥವಾ ಪಂಚಭೂತಗಳಿಂದ ಕಳಚಿಕೊಳ್ಳುತ್ತಾನೆ ಹೊರತು ನಾಶವಾಗುವುದಿಲ್ಲ. ಭಗವಂತ ಅನಾದಿ ಅನಂತ. ಇಂತಹ ಸರ್ವಗತನಾದ ಭಗವಂತನನ್ನು ನಾಶಮಾಡುವುದಾಗಲೀ, ವಿಚ್ಛೇದ ಮಾಡುವುದಾಗಲೀ ಸಾಧ್ಯವಿಲ್ಲ. ಯಾವ ಜೀವ ಮರಳಿ ದೇಹವನ್ನು ಸೇರುವ ಪ್ರಾರಾಬ್ಧ ಕರ್ಮವನ್ನು ಕಳಚಿಕೊಳ್ಳುತ್ತದೋ ಅದು ಭಗವಂತನನ್ನು ಸೇರುತ್ತದೆ.

**ಸೋSಯಂ ತೇSಭಿಹಿತಸ್ತಾತ ಭಗವಾನ್ ಭೂತಭಾವನಃ ।**
**ಸಮಾಸೇನ ಹರೇರ್ನಾನ್ಯದನ್ಯಸ್ಮಾತ್ ಸದಸಚ್ಚ ಯತ್ ॥೫೦॥**

ತನ್ನ ಮಗನಾದ ನಾರದನಿಗೆ ಭಗವಂತನ ಕುರಿತು ವಿವರಿಸುತ್ತಿರುವ ಚತುರ್ಮುಖ, ಈ ಅಧ್ಯಾಯದಲ್ಲಿ ಭಗವಂತನ ಕುರಿತಾದ ಸೂಕ್ಷ್ಮಾತಿ ಸೂಕ್ಷ್ಮ ವಿಷಯಗಳನ್ನೂ ಬಿಚ್ಚಿಟ್ಟಿದ್ದಾನೆ. " ಸೃಷ್ಟಿ-ಸ್ಥಿತಿ-ಸಂಹಾರಕ್ಕೆ ಕಾರಣನಾದ, ನಮ್ಮ ಮನಸ್ಸಿನ ಭಾವನೆಗಳನ್ನು ಪ್ರೇರಣೆ ಮಾಡುವ, ನಮಗೆ ದೇಹದ ಸಂಯೋಗ ವಿಯೋಗವನ್ನೀಯುವ, ಸರ್ವಾಂತರ್ಯಾಮಿ ಭಗವಂತನ ಕುರಿತು ಎಷ್ಟು ಹೇಳಬಹುದೋ ಅಷ್ಟನ್ನು ಅಡಕವಾಗಿ(**in nutshell**) ವಿವರಿಸಿದ್ದೇನೆ" ಎನ್ನುತ್ತಾನೆ ಚತುರ್ಮುಖ. ಮುಂದುವರಿದು ಚತುರ್ಮುಖ ಹೇಳುತ್ತಾನೆ: " ಎಲ್ಲಕ್ಕಿಂತ ಭಿನ್ನನಾದ ಭಗವಂತನಿಗಿಂತ ಭಿನ್ನವಾದ ಯಾವುದೇ ಸತ್ ಅಥವಾ ಅಸತ್ ಇಲ್ಲ" ಎಂದು. "ಭಗವಂತ ಎಲ್ಲಕ್ಕಿಂತ ಭಿನ್ನ, ಆದರೆ ಯಾವುದೂ ಭಗವಂತನಿಗಿಂತ ಭಿನ್ನ ಅಲ್ಲ". ಅಂದರೆ ಭಗವಂತ ಎಲ್ಲಕ್ಕಿಂತ ಭಿನ್ನವಾದ, ಅನಾದಿ-ಅನಂತವಾದ ಸ್ವತಂತ್ರ ತತ್ತ್ವ. ಈ ಪ್ರಪಂಚದಲ್ಲಿ ಉಳಿದ ಎಲ್ಲವೂ ಭಗವಂತನ ಅಧೀನ. ಆದ್ದರಿಂದ ಭಗವಂತನನ್ನು ಬಿಟ್ಟು ಯಾವುದೂ ಇಲ್ಲ.

ನೃಜನ್ಮನಿ ನ ತುಷೇತ ಕಿಂ ಫಲಂ ಯಮನಶ್ವರೇ ।
ಕೃಷ್ಣೇ ಯದ್ಯಪವರ್ಗೇಶೇ ಭಕ್ತಿಃ ಸ್ಯಾನ್ನಾನಪಾಯಿನೀ ॥೫೩॥

ಎಲ್ಲವನ್ನೂ ವಿವರಿಸಿದ ಚತುರ್ಮುಖ ಕೊನೆಗೊಂದು ಎಚ್ಚರವನ್ನು ನೀಡುತ್ತಾನೆ. "ಕೇವಲ ಮನುಷ್ಯನಾಗಿ ಹುಟ್ಟುವುದು ಸಾರ್ಥಕ್ಯವಲ್ಲ. ಅದಕ್ಕಾಗಿ ಹೆಮ್ಮೆ ಪಟ್ಟು ಉಪಯೋಗವಿಲ್ಲ. ಮೋಕ್ಷಪ್ರದನಾದ ಭಗವಂತನಲ್ಲಿ ಸ್ಥಿರವಾದ ಮತ್ತು ಶಾಶ್ವತವಾದ ಭಕ್ತಿ ಇದ್ದರೆ ಮಾತ್ರ ಭಗವಂತ ಪ್ರಸನ್ನನಾಗುತ್ತಾನೆ ಹಾಗೂ ಅದರಿಂದ ಮನುಷ್ಯ ಜನ್ಮ ಸಾರ್ಥಕವಾಗುತ್ತದೆ" ಎಂದು.

ಕಿಂ ಸ್ಯಾದ್ ವರ್ಣಾಶ್ರಮಾಚಾರ್ಯೈಃ ಕಿಂ ದಾನೈಃ ಕಿಂ ತಪಃ ಶ್ರುತೈಃ ।
ಸರ್ವಾಘಘ್ನೋತ್ತ ಮಶ್ಲೋಕೇ ನ ಚೇದ್ ಭಕ್ತಿರ ಧೋಕ್ಷಜೇ ॥೫೪॥

“ಭಗವಂತನ ಎಚ್ಚರವಿಲ್ಲದ ವರ್ಣಾಶ್ರಮ ಧರ್ಮ ಪಾಲನೆ, ದಾನ, ವ್ರತಾನುಷ್ಠಾನ, ಶಾಸ್ತ್ರಚಿಂತನೆ, ಇತ್ಯಾದಿ ಎಲ್ಲವೂ ವ್ಯರ್ಥ. ನಮ್ಮ ಸಮಸ್ತ ಪಾಪಗಳನ್ನು ಪರಿಹಾರ ಮಾಡುವವನು ಆ ಅಧೋಕ್ಷಜ(ಯಾರ ಕಣ್ಣಿಗೂ ಗೋಚರಿಸದೇ ಎಲ್ಲರೊಳಗೂ ನೆಲೆಸಿರುವ ಭಗವಂತ ಅಧೋಕ್ಷಜ). ಆದ್ದರಿಂದ ಮನುಷ್ಯಜನ್ಮ ಸಾರ್ಥಕವಾಗಬೇಕಾದರೆ ನಾವು ಭಗವಂತನ ಬಗೆಗೆ ತಿಳಿಯಲು ಪ್ರಯತ್ನ ಮಾಡಬೇಕು ಮತ್ತು ತಿಳಿದು ಆತನಲ್ಲಿ ಭಕ್ತಿಯಿಂದ ಶರಣಾಗಬೇಕು” ಎಂದು ಚತುರ್ಮುಖ ನಾರದರಿಗೆ ವಿವರಿಸಿದ ಎನ್ನುವಲ್ಲಿಗೆ ಇಡೀ ಭಾಗವತದ ಸಾರ ಸಂಗ್ರಹ ರೂಪವಾದ, ಚತುರ್ಮುಖ ನಾರದ ಸಂವಾದ ರೂಪದ ಏಳನೇ ಅಧ್ಯಾಯ ಮುಕ್ತಾಯವಾಯಿತು.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಸಪ್ತಮೋSಧ್ಯಾಯಃ ॥**

ಭಾಗವತ ಮಹಾಪುರಾಣದ ಎರಡನೇ ಸ್ಕಂಧದ ಏಳನೇ ಅಧ್ಯಾಯ ಮುಗಿಯಿತು

*********

# ಅಷ್ಟಮೋSಧ್ಯಾಯಃ

ನಾಲ್ಕನೇ ಅಧ್ಯಾಯದಲ್ಲಿ ಈಗಾಗಲೇ ನೋಡಿದಂತೆ ಪರೀಕ್ಷಿತರಾಜ ಶುಕಾಚಾರ್ಯರಲ್ಲಿ "ಸೃಷ್ಟಿ ವಿನ್ಯಾಸದ ಬಗೆ ಮತ್ತು ಸೃಷ್ಟಿಯ ಉದ್ದೇಶ ಏನು" ಎನ್ನುವ ಪ್ರಶ್ನೆ ಮಾಡಿದ್ದ. ಪರೀಕ್ಷಿತನ ಪ್ರಶ್ನೆಗೆ ಚತುರ್ಮುಖ-ನಾರದ ಸಂವಾದ ರೂಪದಲ್ಲಿ ಉತ್ತರಿಸಿದ ಶುಕಾಚಾರ್ಯರು, ಸೃಷ್ಟಿಯ ಸಂಕ್ಷಿಪ್ತ ವಿವರಣೆಯ ಜೊತೆಗೆ ಭಗವಂತನ ಅವತಾರಗಳ ಸಂಕ್ಷಿಪ್ತ ಚಿತ್ರಣವನ್ನೂ ನೀಡಿದರು. ಇಲ್ಲಿ ಈ ಅಧ್ಯಾಯ ಮತ್ತೆ ಪರೀಕ್ಷಿತನ ಪ್ರಶ್ನೆಯೊಂದಿಗೆ ಪ್ರಾರಂಭವಾಗುತ್ತದೆ.
ಪರೀಕ್ಷಿತ ಕೇಳಿ ತಿಳಿಯಬೇಕಾಗಿದ್ದ ವಿಷಯಗಳು ಅನೇಕವಾಗಿದ್ದರೂ ಕೂಡಾ, ಆತನಲ್ಲಿದ್ದ ಸಮಯ ಕೇವಲ ಏಳು ದಿನಗಳು ಮಾತ್ರ. ಹೀಗಾಗಿ ಭಗವಂತನ ಅವತಾರಗಳ ಸಂಕ್ಷಿಪ್ತ ವಿವರಣೆಯ ನಂತರ ಆತ ಮತ್ತೆ ಪ್ರಶ್ನೆ ಮಾಡುತ್ತಾನೆ. ಆತನ ಈ ಪ್ರಶ್ನೆಗೆ ಉತ್ತರ ರೂಪವಾಗಿ ಶುಕಾಚಾರ್ಯರು ಭಾಗವತ ಪುರಾಣವನ್ನು ಬಿತ್ತರ ಮಾಡುತ್ತಾರೆ. ಹೀಗಾಗಿ ಈವರೆಗೆ ನಾವು ನೋಡಿರುವ ವಿಷಯ ಕೇವಲ ಹಿನ್ನೆಲೆಯಾಗಿದ್ದು, ನಿಜವಾದ ಭಾಗವತ ಪರೀಕ್ಷಿತ ರಾಜನ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಮುಂದಿನ ಅಧ್ಯಾಯದಿಂದ ಆರಂಭವಾಗಲಿದೆ. ಬನ್ನಿ, ಇಂತಹ ಅಪೂರ್ವವಾದ ಭಗವಂತನ ಕಥೆಯ ಬಿತ್ತರಕ್ಕೆ ಕಾರಣವಾದ ಪರೀಕ್ಷಿತನ ಪ್ರಶ್ನೆಗಳೇನು ಎನ್ನುವುದನ್ನು ಈ ಅಧ್ಯಾಯದಲ್ಲಿ ನೋಡೋಣ.

## ಭಾಗವತ ಬಿತ್ತರಕ್ಕೆ ಕಾರಣವಾದ ಪರೀಕ್ಷಿತನ ಪ್ರಶ್ನೆಗಳು

**ರಾಜೋವಾಚ--**

ಬ್ರಹ್ಮಣಾ ಚೋದಿತೋ ಬ್ರಹ್ಮನ್ ಗುಣಾಖ್ಯಾನೇSಗುಣಸ್ಯ ಚ ।
ಯಸ್ಮೈಯಸ್ಮೈ ಯಥಾ ಪ್ರಾಹ ನಾರದೋ ದೇವದರ್ಶನಃ ॥೦೧॥

ಪರೀಕ್ಷಿತ ಕೇಳುತ್ತಾನೆ: "ಚತುರ್ಮುಖನಿಂದ ನಾರದರಿಗೆ ಉಪದೇಶಿಸಲ್ಪಟ್ಟ ಜ್ಞಾನ ಮುಂದೆ ಹೇಗೆ ಇತರರಿಗೆ ಉಪದೇಶಿಸಲ್ಪಟ್ಟಿತು?" ಎಂದು. "ಲೋಕದಲ್ಲಿ ಈ ಜ್ಞಾನ ಪರಂಪರೆ ಹೇಗೆ ಮುಂದುವರಿಯಿತು ಎನ್ನುವುದನ್ನು ತಿಳಿಸಿ" ಎಂಬುದಾಗಿ ಪರೀಕ್ಷಿತ ಶುಕಾಚಾರ್ಯರನ್ನು ಕೇಳುವುದರೊಂದಿಗೆ ಎಂಟನೇ ಅಧ್ಯಾಯ ಆರಂಭವಾಗುತ್ತದೆ.

ಏತದ್ ವೇದಿತುಮಿಚ್ಛಾಮಿ ತತ್ತ್ವಂ ವೇದವಿದಾಂ ವರ ।
ಹರೇರದ್ಭುತವೀರ್ಯಸ್ಯ ಕಥಾ ಲೋಕಸುಮಂಗಳಾಃ ॥೦೨॥

ಕಥಯಸ್ವ ಮಹಾಭಾಗ ಯಥಾSಹಮಖಿಲಾತ್ಮನಿ ।
ಕೃಷ್ಣೇ ನಿವೇಶ್ಯ ನಿಃಸಂಗಂ ಮನಸ್ತ್ಯಕ್ಷ್ಯೇ ಕಳೇಬರಮ್ ॥೦೩॥

ಪರೀಕ್ಷಿತ ಹೇಳುತ್ತಾನೆ: "ಇಡೀ ಜಗತ್ತಿಗೆ ಮಾಂಗಲಿಕವಾಗಿರುವ ಭಗವಂತನ ಕಥೆಯನ್ನು ವಿಸ್ತಾರವಾಗಿ ನಾನು ಕೇಳಬೇಕು" ಎಂದು. ನಮಗೆ ತಿಳಿದಂತೆ ಪರೀಕ್ಷಿತ ತಾಯಿಯ ಉದರದಲ್ಲಿದ್ದಾಗಲೇ ಭಗವಂತನ ದರ್ಶನ ಪಡೆದು, ಭಗವಂತನನಿಂದ ರಕ್ಷಿಸಲ್ಪಟ್ಟು ಹುಟ್ಟಿದವ. ನಂತರ ಸುಮಾರು ೩೫ ವರ್ಷಗಳ ಕಾಲ ಶ್ರೀಕೃಷ್ಣನ ಒಡನಾಡಿಯಾಗಿ ಪರೀಕ್ಷಿತ ಬೆಳೆದಿದ್ದ. ಶ್ರೀಕೃಷ್ಣ ಅವತಾರ ಸಮಾಪ್ತಿ ಮಾಡಿದ ಮೇಲೆ ಸುಮಾರು ೩೦ ವರ್ಷಗಳ ಕಾಲ ಪರೀಕ್ಷಿತ ಧರ್ಮದಿಂದ ರಾಜ್ಯ ಪಾಲನೆ ಮಾಡಿದ್ದ. ಪರೀಕ್ಷಿತನ ತಂದೆ ಅಭಿಮನ್ಯುವಿನ ತಾಯಿ ಸುಭದ್ರೆ ಶ್ರೀಕೃಷ್ಣನ ತಂಗಿ. ಹೀಗಾಗಿ ಆತ ಸಂಬಂಧದಿಂದ ಮತ್ತು ಕಾಲತಃ ಶ್ರೀಕೃಷ್ಣನಿಗೆ ಹತ್ತಿರದವನಾಗಿದ್ದ. ಆದ್ದರಿಂದ ಆತನಿಗೆ ಶ್ರೀಕೃಷ್ಣ ಎಂದರೆ ಎಲ್ಲರ ಅಂತರ್ಯಾಮಿಯಾದ ಭಗವಂತ ಎನ್ನುವ ಸತ್ಯ ತಿಳಿದಿತ್ತು. ಆತ ಹೇಳುತ್ತಾನೆ: "ಈ ಏಳು ದಿನಗಳಲ್ಲಿ ನನ್ನ ಮನಸ್ಸು ಹೊರಪ್ರಪಂಚದ ಸೆಳೆತಕ್ಕೊಳಗಾಗದೇ ಸಂಪೂರ್ಣವಾಗಿ ಶ್ರೀಕೃಷ್ಣನಲ್ಲಿ ನೆಲೆಗೊಳ್ಳಬೇಕು. ಅಂತಹ ಚಿಂತನೆಯನ್ನು ಕೊಡಬಲ್ಲ ಶ್ರೀಕೃಷ್ಣನ ಕಥೆಯನ್ನು ಬಿತ್ತರಿಸಿ ಹೇಳಿ. ನಾನು ಆ ಭಗವಂತನ ಚಿಂತನಾ ಸ್ಥಿತಿಯಲ್ಲೇ ದೇಹತ್ಯಾಗ ಮಾಡಬೇಕು" ಎಂದು. ಈ ಹಿಂದೆ ವಿಶ್ಲೇಶಿಸಿದಂತೆ ಪ್ರಾಣೋತ್ಕ್ರಮಣ ಕಾಲದಲ್ಲಿ ನಮ್ಮ ಮನಸ್ಸು ಏನನ್ನು ಚಿಂತಿಸುತ್ತದೋ ಅದನ್ನೇ ಜೀವ ಮುಂದೆ ಪಡೆಯುತ್ತದೆ. ಗೀತೆಯಲ್ಲೂ ಕೂಡಾ ಶ್ರೀಕೃಷ್ಣ ಇದೇ ಮಾತನ್ನು ಹೇಳಿದ್ದಾನೆ: ***ಯಂ ಯಂ ವಾऽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇಬರಮ್ । ತನ್ತಮೇವೈತಿ ಕೌಂತೇಯ ಸದಾ ತದ್ ಭಾವಭಾವಿತಃ*** *॥೮-೬॥* "ಕೊನೆಯಲ್ಲಿ ಯಾವ ಯಾವ ವಿಷಯವನ್ನು ನೆನೆಯುತ್ತಾ ದೇಹವನ್ನು ತೊರೆಯುತ್ತಾನೋ ಅದರಲ್ಲೇ ಅನುಗಾಲ ಬೇರೂರಿದ ಸಂಸ್ಕಾರದಿಂದ ಅದನ್ನೇ ಪಡೆಯುತ್ತಾನೆ". ಈ ವಿಷಯವನ್ನು ಅರಿತಿದ್ದ ಪರೀಕ್ಷಿತ ತಾನು ಕೊನೇಗಾಲದಲ್ಲಿ ಕೇವಲ ಭಗವಂತನ ಚಿಂತನೆಯಲ್ಲೇ ನಿಲ್ಲಬಲ್ಲ ಭಗವಂತನ ಕಥೆಯನ್ನು ವಿಸ್ತಾರವಾಗಿ ಕೇಳಬೇಕು ಎನ್ನುವ ಅಭಿಲಾಷೆಯನ್ನು ಶುಕಾಚಾರ್ಯರ ಮುಂದಿಡುತ್ತಾನೆ. ಈ ಕಾರಣದಿಂದಲೇ ಭಾಗವತದಲ್ಲಿ ಭಗವಂತನ ಅವತಾರಗಳ, ವಿಶೇಷವಾಗಿ ದಶಾವತಾರಗಳ ವಿಸ್ತಾರವಾದ ವಿವರಣೆಯನ್ನು ಶುಕಾಚಾರ್ಯರು ನೀಡುವುದನ್ನು ನಾವು ಕಾಣುತ್ತೇವೆ.

**ಪುರುಷಾವಯವೈರ್ಲೋಕಾಃ ಸಪಾಲಾಃ ಪೂರ್ವಕಲ್ಪಿತಾಃ ।**
**ಲೋಕೈರಮುಷ್ಯಾವಯವಾಃ ಸಪಾಲೈರಿತಿ ಶುಶ್ರುಮಃ ॥೧೧॥**

ಭಗವಂತನ ಕಥೆಯನ್ನು ಹೇಳುವಾಗ ಕೇವಲ ಭಗವಂತನ ಕುರಿತು ಹೇಳಲು ಸಾಧ್ಯವಿಲ್ಲ. ಭಗವಂತನ ಕಥೆಯನ್ನು ತಿಳಿಯಬೇಕಾದರೆ ಅಲ್ಲಿ ಆತನ ಪರಿವಾರವನ್ನೂ ತಿಳಿದುಕೊಳ್ಳಬೇಕಾಗುತ್ತದೆ ಮತ್ತು ಜೊತೆಗೆ ಪ್ರಪಂಚವನ್ನು ಸೃಷ್ಟಿಸಿದ ಭಗವಂತನ ಗುಣಾನುಸಂಧಾನದಿಂದ ಪ್ರಪಂಚವನ್ನೂ ತಿಳಿದುಕೊಳ್ಳಬೇಕಾಗುತ್ತದೆ. ಇದನ್ನು ಬಿಟ್ಟು ಪ್ರಪಂಚ ಮಿಥ್ಯ ಎಂದುಕೊಂಡರೆ ಭಗವಂತನ ಗುಣಾನುಸಂಧಾನ ಮಾಡಲು ಸಾಧ್ಯವಿಲ್ಲ.

ಶಾಸ್ತ್ರಗಳು ಹೇಳುವಂತೆ ಭಗವಂತ ಸೃಷ್ಟಿಪೂರ್ವದಲ್ಲಿ ಮೊತ್ತಮೊದಲು ಪುರುಷರೂಪವನ್ನು ಧರಿಸಿದ. ಪುರುಷರೂಪ ಎಂದರೆ ಅದು ಮನುಷ್ಯನ ಅವಯವಗಳನ್ನು ಹೋಲುವ ರೂಪ. ಇದು ಭಗವಂತನ ಅನಂತ ರೂಪಗಳಲ್ಲಿ ಒಂದು. ಆದರೆ ಆ ರೂಪದ ವಿಶೇಷತೆ ಏನೆಂದರೆ: ***ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷ: ಸಹಸ್ರಪಾತ್.*** ಇಲ್ಲಿ ಭಗವಂತನಿಗೆ ಸಹಸ್ರಾರು ತಲೆಗಳು, ಸಹಸ್ರಾರು ಕೈ-ಕಾಲುಗಳು. ಹೀಗೆ ಸಹಸ್ರಾರು ಅಂಗಾಂಗಗಳುಳ್ಳ ಈ ರೂಪ ಇಡೀ ಬ್ರಹ್ಮಾಂಡವನ್ನು ತುಂಬಿ ನಿಲ್ಲುವ ಅದ್ಭುತ ರೂಪ. ಭಗವಂತನ ಶಿರಸ್ಸಿನಿಂದ ಸ್ವರ್ಗದ ಸೃಷ್ಟಿಯಾಯಿತು, ನಾಭಿಯಿಂದ ಅಂತರಿಕ್ಷದ ಸೃಷ್ಟಿ ಮತ್ತು ಪಾದದಿಂದ ಭೂಮಿಯ ಸೃಷ್ಟಿಯಾಯಿತು ಎನ್ನುತ್ತದೆ ಪುರುಷಸೂಕ್ತ.

***ನಾಭ್ಯಾಆಸೀದಂತರಿಕ್ಷಂ ಶೀರ್ಷ್ಣೋದ್ಯೌಃಸಮವರ್ತತ. ಪದ್ಭ್ಯಾಂಭೂಮಿರ್ದಿಶಃ ಶ್ರೋತ್ರಾತ್ತಥಾಲೋಕಾಃ ಅಕಲ್ಪಯನ್ ।।೧೪।।*** . ಆದರೆ ಶಾಸ್ತ್ರಗಳಲ್ಲಿ ಇನ್ನು ಕೆಲವೆಡೆ ಭೂಮಿಯೇ ಭಗವಂತನ ಪಾದ, ಭಗವಂತನ ತಲೆಯೇ ಸ್ವರ್ಗ, ಆಕಾಶ ಭಗವಂತನ ಹೃದಯಭಾಗ ಎನ್ನುವ ವಿವರಣೆ ಬರುತ್ತದೆ. ಇಲ್ಲಿ ಪರೀಕ್ಷಿತನ ಪ್ರಶ್ನೆ ಏನೆಂದರೆ: ಲೋಕಗಳೇ ಭಗವಂತನ ಅವಯವಗಳೋ ಅಥವಾ ಭಗವಂತನ ಅವಯವಗಳಿಂದ ಲೋಕಗಳ ಸೃಷ್ಟಿಯಾಯಿತೋ ಎನ್ನುವುದು. "ಸೃಷ್ಟಿ ಎಂದರೇನು? 'ಭಗವಂತ ಸೃಷ್ಟಿ ಮಾಡುತ್ತಾನೆ" ಎನ್ನುವುದರ ಅರ್ಥವೇನು? ಪ್ರಪಂಚಕ್ಕೂ ಭಗವಂತನಿಗೂ ನಡುವೆ ಇರುವ ಸಂಬಂಧವೇನು? ಈ ಪ್ರಪಂಚವೇ ಭಗವಂತನ ರೂಪವೋ ಅಥವಾ ಭಗವಂತ ಪ್ರಪಂಚಕ್ಕಿಂತ ಭಿನ್ನನಾಗಿ ನಿಂತು ಪ್ರಪಂಚಕ್ಕೆ ರೂಪ ನೀಡುತ್ತಾನೋ? ನಾವು ಭಗವಂತನ ಪರಿಕಲ್ಪನೆ ಹೇಗೆ ಮಾಡಬೇಕು ಎನ್ನುವುದನ್ನು ನನಗೆ ವಿವರಿಸಿ ಹೇಳಿ" ಎಂದು ಶುಕಾಚಾರ್ಯರನ್ನು ಕೇಳುತ್ತಾನೆ ಪರೀಕ್ಷಿತ.

ಈ ಶ್ಲೋಕದಲ್ಲಿ **ಶುಶ್ರುಮಃ** ಎನ್ನುವ ಪದಪ್ರಯೋಗವಿದೆ. 'ಕೇಳಿದ್ದೆ' ಎಂದು ಭೂತಕಾಲದಲ್ಲಿ ಹೇಳುವಾಗ **ಶುಶ್ರುಮ** ಎಂದು ಹೇಳಬೇಕು. ಆದರೆ ಇಲ್ಲಿ ವಿಸರ್ಗವನ್ನು ಸೇರಿಸಿ ಹೇಳಲಾಗಿದೆ. ಇದು ಎರಡು ಕಾಲಗಳನ್ನು ಒಟ್ಟು ಮಾಡಿ ಪ್ರಯೋಗಿಸುವ ಚಮತ್ಕಾರ. ಅಂದರೆ ಹಿಂದೆ ಕೇಳಿರುವುದಷ್ಟೇ ಅಲ್ಲ, ಈಗಲೂ ಕೂಡಾ ಅದೇ ಮಾತನ್ನು ಹೇಳುತ್ತಾರೆ ಎನ್ನುವ ಅರ್ಥದಲ್ಲಿ **ಶುಶ್ರುಮಃ** ಎನ್ನುವ ಪದಪ್ರಯೋಗ ಮಾಡಿದ್ದಾರೆ ವ್ಯಾಸರು. ["ಭೂಮಿ ಭಗವಂತನ ಪಾದವೆಂದು ಹೇಳುತ್ತಾರೆ ಮತ್ತು ಭಗವಂತನ ಪಾದದಿಂದ ಭೂಮಿ ಸೃಷ್ಟಿಯಾಯಿತೆಂದೂ ಹೇಳುತ್ತಾರೆ. ಈ ಮಾತನ್ನು ಹಿಂದೆಯೂ ಶಾಸ್ತ್ರಕಾರರು ಹೇಳಿರುವುದನ್ನು ನಾನು ಕೇಳಿದ್ದೆ ಮತ್ತು ಈಗಲೂ ಕೂಡಾ ಕೇಳುತ್ತಿದ್ದೇನೆ" ಎಂದು ಪರೀಕ್ಷಿತ ಹೇಳಿದ ಎನ್ನುವುದನ್ನು **ಶುಶ್ರುಮಃ** ಪದ ಸೂಚಿಸುತ್ತದೆ ]

ಯಸ್ಮಿನ್ ಕರ್ಮಸಮಾವಾಪೋ ಯಥಾ ಯೇನೋಪಗೃಹ್ಯತೇ ।
ಗುಣಾನಾಂ ಗುಣಿನಾಂ ಚೈವ ಪರಿಮಾಣಂ ಸುವಿಸ್ತರಮ್ ॥೧೪॥

ಎಲ್ಲರನ್ನೂ ಕಾಡುವ ಅತ್ಯಂತ ಮುಖ್ಯವಾದ ಪ್ರಶ್ನೆಯೊಂದನ್ನು ಪರೀಕ್ಷಿತ ಶುಕಾಚಾರ್ಯರ ಮುಂದಿಡುವುದನ್ನು ನಾವಿಲ್ಲಿ ಕಾಣುತ್ತೇವೆ. ನಮಗೆ ತಿಳಿದಂತೆ ಕರ್ಮಕ್ಕೆ ತಕ್ಕಂತೆ ನಮಗೆ ಸುಖ-ದುಃಖದ ಫಲ ದೊರೆಯುತ್ತದೆ. ಪಾಪ ಮಾಡಿದರೆ ನರಕ, ಪುಣ್ಯ ಮಾಡಿದರೆ ಸ್ವರ್ಗ ಎನ್ನುವುದು ಸಮಸ್ತ ಶಾಸ್ತ್ರಗಳ ಸಾರ. ಆದರೆ ಇನ್ನೊಂದೆಡೆ ***ನಾಹಂ ಕರ್ತಾ ಹರಿಃ ಕರ್ತಾ*** ಎನ್ನುತ್ತಾರೆ. ಅಂದರೆ "ನಾನು ಮಾಡಿದೆ ಎಂದರೆ ಅದು ಅಹಂಕಾರವಾಗುತ್ತದೆ, ಎಲ್ಲವನ್ನೂ ಮಾಡಿಸುವವನು ಆ ಭಗವಂತ" ಎನ್ನುತ್ತವೆ ಶಾಸ್ತಗಳು. ಇಲ್ಲಿ ಪರೀಕ್ಷಿತನ ಪ್ರಶ್ನೆ ಏನೆಂದರೆ: "ನಾವು ಏನನ್ನೂ ಮಾಡಿಲ್ಲ, ಎಲ್ಲವನ್ನೂ ಭಗವಂತನೇ ಮಾಡಿಸಿದ ಎಂದಮೇಲೆ, ಭಗವಂತ ನಮ್ಮ ಮೂಲಕ ಮಾಡಿಸುವ ಕರ್ಮದ ನಂಟು ನಮಗೇಕೆ?" ಎನ್ನುವುದು.

ಕರ್ಮ ಎನ್ನುವುದು ಜಡ. ಹೀಗಾಗಿ ಕರ್ಮದಿಂದ ನೇರವಾಗಿ ಸುಖ-ದುಃಖ ಬರಲಾರದು. ಆದರೆ ಕರ್ಮದ ಮೂಲಕವೇ ಎಲ್ಲವೂ ನಡೆಯುತ್ತದೆ. ಕರ್ಮ ಮಾಡಿಸುವವನೂ ಭಗವಂತ, ಕರ್ಮದ ಫಲ ಕೊಡುವವನೂ ಭಗವಂತ. ಹೀಗಿರುವಾಗ ಕರ್ಮ ಮಾಡಿಸಿದ ಭಗವಂತನಿಗೆ ಫಲ ಸೇರದೇ ನಮಗೇಕೆ ಸೇರುತ್ತದೆ? ಭಗವಂತನೇಕೆ ನಮ್ಮಿಂದ ಕೇವಲ ಒಳ್ಳೆಯ ಕರ್ಮಗಳನ್ನು ಮಾಡಿಸುವುದಿಲ್ಲ? ಕೆಟ್ಟ ಕರ್ಮಗಳನ್ನು ನಮ್ಮಿಂದ ಮಾಡಿಸುವ ಭಗವಂತ ನಮಗೇಕೆ ಅದರ ದುಃಖದ ಫಲವನ್ನು ಕೊಡುತ್ತಾನೆ ಎನ್ನುವುದು ಪರೀಕ್ಷಿತನ ಪ್ರಶ್ನೆ.

ಈ ಹಿಂದೆ ಅನೇಕ ಬಾರಿ ವಿಶ್ಲೇಶಿಸಿದಂತೆ ತ್ರಿಗುಣಗಳು ಮನುಷ್ಯನ ಮೇಲೆ ತಮ್ಮ ಪ್ರಭಾವವನ್ನು ಸದಾ ಬೀರುತ್ತಿರುತ್ತವೆ. ಭಗವಂತ ನಮ್ಮ ಮುಖೇನ ಕರ್ಮ ಮಾಡಿಸುವುದು ನಮ್ಮ ಅರಿವಿಗೆ ಬಾರದಿದ್ದರೂ ಕೂಡಾ, ಗುಣತ್ರಯಗಳ ಪ್ರಭಾವದ ಅರಿವು ಪ್ರತಿಯೊಬ್ಬರಿಗೂ ತಿಳಿದಿರುತ್ತದೆ. ಈ ಪ್ರಪಂಚದಲ್ಲಿರುವ ಪ್ರತಿಯೊಂದು ಜಡ ವಸ್ತುವೂ ಕೂಡಾ ತ್ರಿಗುಣಗಳ (ಮಣ್ಣು-ನೀರು-ಬೆಂಕಿಯ) ಮಿಶ್ರಣದಿಂದಲೇ ನಿರ್ಮಾಣವಾಗಿದೆ. "ಸೃಷ್ಟಿಯಲ್ಲಿ ಗುಣದ ಪರಿಮಾಣ ಮತ್ತು ಪ್ರಭಾವ ಹೇಗೆ ಕೆಲಸ ಮಾಡುತ್ತದೆ? ಗುಣಗಳು ಯಾವ ಪ್ರಮಾಣದಲ್ಲಿ ಸೃಷ್ಟಿಯಲ್ಲಿ ವಿಸ್ತಾರವಾಗಿವೆ? ಮನುಷ್ಯರಲ್ಲಿ ಯಾವ-ಯಾವ ಗುಣಗಳು ಯಾವ ಯಾವ ಪ್ರಮಾಣದಲ್ಲಿವೆ? ಗುಣಗಳ ಪ್ರಭಾವದಿಂದ ಜೀವಗಳ ಮೇಲೆ ಆಗುವ ಪರಿಣಾಮವೇನು ಮತ್ತು ಅದು ಯಾವ ಪ್ರಮಾಣದಿಂದಾಗುತ್ತದೆ ಎನ್ನುವುದನ್ನು ನನಗೆ ವಿಸ್ತಾರವಾಗಿ ವಿವರಿಸಿ" ಎಂದು ಕೇಳುತ್ತಿದ್ದಾನೆ ಪರೀಕ್ಷಿತ.

ನೃಣಾಂ ಸಾಧಾರಣೋ ಧರ್ಮಃ ಸವಿಶೇಷಶ್ಚ ಯಾದೃಶಃ ।
ಶ್ರೇಣೀನಾಂ ರಾಜರ್ಷೀಣಾಂ ಚ ಧರ್ಮಃ ಕೃಚ್ಛ್ರೇಷು ಜೀವತಾಮ್ ॥೧೮॥

ಮುಂದುವರಿದು ಪರೀಕ್ಷಿತ ಕೇಳುತ್ತಾನೆ: "ಮನುಷ್ಯನ ಸಮಾಜ ಧರ್ಮ ಯಾವುದು? ಸ್ವಭಾವತಃ ವ್ಯಕ್ತಿಯ ವಿಶೇಷ ಧರ್ಮ ಯಾವುದು?" ಎಂದು. ಪ್ರಜಾಪಾಲನೆ, ಜನರನ್ನು ಧರ್ಮದ ಮಾರ್ಗದಲ್ಲಿ ನಡೆಸುವ ಜವಾಬ್ಧಾರಿ ರಾಜನದು. ಹೀಗಾಗಿ ಪ್ರಜೆಗಳಿಂದ ತಪ್ಪಾದರೆ ಅದರ ಪಾಲೂ ರಾಜನಿಗೆ ಸಲ್ಲುತ್ತದೆ. ಇನ್ನು ಸೈನಿಕರಾದವರು ಯುದ್ಧದಲ್ಲಿ ಪ್ರಾಣದ ಹಂಗು ತೊರೆದು ಹೋರಾಡಬೇಕಾಗುತ್ತದೆ; ಎದುರಾಳಿಯನ್ನು ಆತನ ಯೋಗ್ಯತೆ ಏನೇ ಇದ್ದರೂ ಕೊಲ್ಲಬೇಕಾಗುತ್ತದೆ. ಆದ್ದರಿಂದ ಸೈನಿಕರ ಮತ್ತು ರಾಜರ್ಷಿಗಳ ಜೀವನ ತುಂಬಾ ಕಷ್ಟ. ಅಂತಹ ಸೈನಿಕರ ಮತ್ತು ರಾಜರ್ಷಿಗಳ ಧರ್ಮದ ನಡೆ ಯಾವುದು ಎನ್ನುವುದನ್ನು ನನಗೆ ವಿವರಿಸಿ ಹೇಳಬೇಕೆಂದು ಪರೀಕ್ಷಿತ ಕೇಳಿಕೊಳ್ಳುತ್ತಾನೆ. [ಈ ಪ್ರಶ್ನೆಗೆ ಉತ್ತರ ಏಳನೇ ಸ್ಕಂಧದಲ್ಲಿ ಬರುತ್ತದೆ].

ತತ್ತ್ವಾನಾಂ ಪರಿಸಂಖ್ಯಾನಂ ಲಕ್ಷಣಂ ಹೇತುಲಕ್ಷಣಂ ।
ಪುರುಷಾರಾಧನವಿಧಿರ್ಯೋಗಸ್ಯಾಧ್ಯಾತ್ಮಿಕಸ್ಯ ಚ ॥೧೯॥

ಪ್ರಪಂಚದಲ್ಲಿ ಒಟ್ಟು ಎಷ್ಟು ಪದಾರ್ಥಗಳಿವೆ ಮತ್ತು ಅದರ ಗುಣಲಕ್ಷಣಗಳೇನು? ಈ ಪ್ರಪಂಚಕ್ಕೆ ಹೇತುವಾಗಿರುವ ಭಗವಂತನ ಗುಣಲಕ್ಷಣಗಳೇನು? ಭಗವಂತನ ಪೂಜೆ ಎಂದರೇನು? ಅವನನ್ನು ಹೇಗೆ ಯಾವ ಪ್ರತೀಕದಲ್ಲಿ ಪೂಜೆ ಮಾಡಬೇಕು? ಭಗವಂತನಲ್ಲಿ ಮನಸ್ಸನ್ನು ನೆಲೆಗೊಳಿಸುವುದು ಹೇಗೆ ಎನ್ನುವುದು ಪರೀಕ್ಷಿತನ ಪ್ರಶ್ನೆ.

ಯೋಗೇಶ್ವರೈಶ್ವರ್ಯಗತಿಂ ಲಿಂಗಭಂಗಂ ಚ ಯೋಗಿನಾಮ್ ।
ವೇದೋಪವೇದಧರ್ಮಾಣಾಮಿತಿಹಾಸಪುರಾಣಯೋಃ ॥೨೦॥

"ಯೋಗಸಿದ್ಧರಿಗೆ(ಸನಕಾದಿಗಳಂತಹ) ಸಿದ್ಧಿ [ಉದಾ: ಅಣಿಮಾ, ಮಹಿಮಾದಂತಹ ಅಷ್ಟಸಿದ್ಧಿಗಳು] ಹೇಗೆ ದೊರಕುತ್ತದೆ? ಅದು ಹೇಗೆ ಸಾಧ್ಯ ಎನ್ನುವುದನ್ನು ನನಗೆ ತಿಳಿಸಿಕೊಡಿ" ಎಂದು ಕೇಳುತ್ತಾನೆ ಪರೀಕ್ಷಿತರಾಜ.

ನಮಗೆ ತಿಳಿದಂತೆ ಮನುಷ್ಯನಿಗೆ ಮೂರು ಶರೀರಗಳಿವೆ ೧. ಕಾಣುವ ಸ್ಥೂಲ ಶರೀರ, ೨. ಸತ್ತ ಮೇಲೆ ಪುಣ್ಯಪಾಪಗಳನ್ನು ಅನುಭವಿಸಲು ಬೇಕಾಗಿರುವ ಸೂಕ್ಷ್ಮ ಶರೀರ ಮತ್ತು ೩. ಅನಾದಿ-ಅನಂತವಾಗಿ ಬಂದಿರುವ ಲಿಂಗ ಶರೀರ. ಜೀವ ಮೋಕ್ಷಕ್ಕೆ ಹೋಗುವಾಗ ಮಾತ್ರ ಲಿಂಗಶರೀರದಿಂದ ಬಿಡುಗಡೆ ಹೊಂದುತ್ತಾನೆ. ಹಾಗಾಗಿ ಇಲ್ಲಿ ಪರೀಕ್ಷಿತ ಕೇಳುತ್ತಾನೆ: "ನನಗೆ ಮತ್ತೆ ಹುಟ್ಟು ಬರಬಾರದು. ನಾನು ಲಿಂಗಶರೀರದಿಂದ ಕಳಚಿಕೊಳ್ಳಬೇಕು. ಅದು ಹೇಗೆ ಸಾಧ್ಯ ಎನ್ನುವುದನ್ನು ತಿಳಿಸಿಕೊಡಿ" ಎಂದು.
ವೇದಗಳು, ಉಪವೇದಗಳು(ಶಿಲ್ಪಕಲೆ, ಲಲಿತಕಲೆ ಇತ್ಯಾದಿ), ಇತಿಹಾಸ-ಪುರಾಣಗಳು, ಇವೆಲ್ಲವುದರ ರಚನೆ ಹೇಗಾಯಿತು ಎನ್ನುವುದನ್ನು ನನಗೆ ತಿಳಿಯಬೇಕೆಂಬ ಅಪೇಕ್ಷೆಯನ್ನು ಪರೀಕ್ಷಿತ ಶುಕಾಚಾರ್ಯರ ಮುಂದಿಡುತ್ತಾನೆ.

ಯಥಾತ್ಮತಂತ್ರೋ ಭಗವಾನ್ ವಿಕ್ರೀಡತ್ಯಾತ್ಮಮಾಯಯಾ ।
ವಿಸೃಜ್ಯ ಚ ಯಥಾ ಮಾಯಾಮುದಾಸ್ತೇ ಸಾಕ್ಷಿವದ್ ವಿಭುಃ ॥೨೩॥

ಭಗವಂತ ಇನ್ನಾರದೋ ನಿಯಮಕ್ಕೆ ಬದ್ಧನಾಗಿರುವವನಲ್ಲ. ಆದರೆ ಆತ ತನ್ನ ನಿಯಮಕ್ಕೆ ತಾನು ಬದ್ಧ. ಅದನ್ನು ಆತ ಎಂದೂ ಮೀರುವುದಿಲ್ಲ. ಇಂತಹ ಭಗವಂತ ಏಕೆ ಸೃಷ್ಟಿ-ಸಂಹಾರಗಳನ್ನು ಮಾಡುತ್ತಾನೆ? ಆತನ ಸೃಷ್ಟಿಯ ಹಿಂದಿನ ಉದ್ದೇಶವೇನು? ಆತನ ಸೃಷ್ಟಿಯಲ್ಲಿ ಏಕೆ ಎಲ್ಲರೂ ಜ್ಞಾನಾನಂದಪೂರ್ಣರಾಗಿಲ್ಲ? ಸೃಷ್ಟಿಯಲ್ಲಿನ ಅಂತರದ ಹಿಂದಿನ ರಹಸ್ಯವೇನು? ಭಗವಂತನ ಇಚ್ಛೆ/ಜ್ಞಾನ/ಮಹಿಮೆಯಿಂದ(ಮಾಯೆಯಿಂದ) ಮತ್ತು ಭಗವಂತನ ಅಧೀನವಾಗಿರುವ ಮಾಯಾಶಕ್ತಿಯಿಂದ ನಡೆಯುವ ಈ ಸೃಷ್ಟಿ-ಸಂಹಾರ ಕಾರ್ಯದ ಹಿಂದಿನ ಉದ್ದೇಶವೇನೆಂಬುದನ್ನು ತಿಳಿಯಬೇಕೆಂದು ಪರೀಕ್ಷಿತ ಅಪೇಕ್ಷಿಸುತ್ತಾನೆ.
ಎಲ್ಲವನ್ನೂ ಮಾಡುವ ಭಗವಂತ ಪ್ರಳಯಕಾಲದಲ್ಲಿ ಮಾಯಶಕ್ತಿಯನ್ನು ವಿಸರ್ಜಿಸಿ ಪ್ರಳಯಜಲದಲ್ಲಿ ಯೋಗನಿದ್ರೆಯಲ್ಲಿರುತ್ತಾನೆ. ಹೀಗೆ ಆತ ಎಲ್ಲಾ ಆಗುಹೋಗುಗಳಿಗೆ ನಿರ್ಲಿಪ್ತ ಪ್ರೇಕ್ಷಕನಾಗಿರುತ್ತಾನೆ. ಆತ ಸರ್ವಸಮರ್ಥ ಮತ್ತು ಸರ್ವಗತ(ವಿಭುಃ). ಹೀಗಾಗಿ ಆತ ಎಲ್ಲವನ್ನೂ ಮಾಡಲು ಶಕ್ಯ. ಆದರೂ ಕೂಡಾ ಏನೂ ಮಾಡದವನಂತೆ ನಿರ್ಲಿಪ್ತನಾಗಿ ಎಲ್ಲವುದಕ್ಕೂ ಸಾಕ್ಷೀ ಪುರುಷನಾಗಿರುವ ಭಗವಂತನ ನಡೆಯ ಹಿಂದಿನ ಅಧ್ಯಾತ್ಮ ಸಂದೇಶ ಏನು ಎನ್ನುವುದು ಇಲ್ಲಿ ಪರೀಕ್ಷಿತ ತಿಳಿಯ ಬಯಸಿದ್ದಾನೆ.

ಅತ್ರ ಪ್ರಮಾಣಂ ಹಿ ಭವಾನ್ ಪರಮೇಷ್ಠೀ ಯಥಾSSತ್ಮಭೂಃ ।
ಅಪರೇ ಹ್ಯನುತಿಷ್ಠಂತಿ ಪೂರ್ವೇಷಾಂ ಪೂರ್ವಜೈಃ ಕೃತಮ್ ॥೨೪॥

ತನ್ನೆಲ್ಲಾ ಪ್ರಶ್ನೆಗಳನ್ನೂ ಶುಕಾಚಾರ್ಯರ ಮುಂದಿಟ್ಟ ಪರೀಕ್ಷಿತ ಹೇಳುತ್ತಾನೆ: "ಈ ನನ್ನ ಪ್ರಶ್ನೆಗೆ ಉತ್ತರಿಸುವ ಪೂರ್ಣ ಅಧಿಕಾರ ನಿಮಗಿದೆ. ಏಕೆಂದರೆ ಹೇಗೆ ಚತುರ್ಮುಖ ಈ ಜ್ಞಾನವನ್ನು ನೇರವಾಗಿ ಭಗವಂತನಿಂದ ಪಡೆದನೋ ಹಾಗೇ ನೀವೂ ವ್ಯಾಸರೂಪಿಯಾದ ಭಗವಂತನಿಂದ ಈ ಜ್ಞಾನವನ್ನು ಪಡೆದಿದ್ದೀರಿ. ನಮಗಾಗಲೀ ನಮ್ಮ ಪೂರ್ವಿಕರಿಗಾಗಲೀ ಈ ಸಾಮರ್ಥ್ಯವಿಲ್ಲ. ನಾವು ಕೇವಲ ಕೇಳಿ ತಿಳಿದು ಅನುಷ್ಠಾನ ಮಾಡುವವರು. ಹೀಗಾಗಿ ಎಲ್ಲವನ್ನು ತಿಳಿದ ನೀವು ನನ್ನ ಪ್ರಶ್ನೆಗಳಿಗೆ ಉತ್ತರಿಸಿ ನನ್ನನ್ನು ಉದ್ಧಾರ ಮಾಡಬೇಕು" ಎಂದು ಪ್ರಾರ್ಥಿಸುತ್ತಾನೆ ಪರೀಕ್ಷಿತ.

**ಸೂತ ಉವಾಚ--**

ಸ ಉಪಾಮಂತ್ರಿತೋ ರಾಜ್ಞಾ ಕಥಾಯಾಮಿತಿ ಸತ್ಪತೇಃ ।
ಬ್ರಹ್ಮರಾತೋ ಭೃಶಂ ಪ್ರೀತೋ ವಿಷ್ಣುರಾತೇನ ಸಂಸದಿ ॥೨೭॥

ಆಹ ಭಾಗವತಂ ನಾಮ ಪುರಾಣಂ ವೇದಸಮ್ಮಿತಮ್ ।
ಬ್ರಹ್ಮಣೇ ಭಗವತ್ಪ್ರೋಕ್ತಂ ಬ್ರಹ್ಮಕಲ್ಪ ಉಪಾಗತೇ ॥೨೮॥

ಯದ್ಯತ್ ಪರೀಕ್ಷಿದ್ ಋಷಭಃ ಪಾಂಡೂನಾಮನುಪೃಚ್ಛತಿ ।
ಆನುಪೂರ್ವ್ಯೇಣ ತತ್ ಸರ್ವಮಾಖ್ಯಾತುಮುಪಚಕ್ರಮೇ ॥೨೯॥

ನೈಮಿಶಾರಣ್ಯದಲ್ಲಿ ಭಾಗವತವನ್ನು ಶೌನಕಾದಿಗಳಿಗೆ ಹೇಳುತ್ತಿರುವ ಉಗ್ರಶ್ರವಸ್ಸು ಹೇಳುತ್ತಾರೆ: "ಪರೀಕ್ಷಿತನ ಮಾತನ್ನು ಕೇಳಿದ ಶುಕಾಚಾರ್ಯರಿಗೆ ಅತ್ಯಂತ ಸಂತೋಷವಾಯಿತು" ಎಂದು. ಈ ಹಿಂದೆ ಹೇಳಿದಂತೆ ಜ್ಞಾನಿಗಳಿಗೆ ಹೇಳಬೇಕು ಎನಿಸಿದರೂ ಕೂಡಾ ಕೇಳುವ ಯೋಗ್ಯತೆಯುಳ್ಳ ಶಿಷ್ಯರು ಸಿಗುವುದು ದುರ್ಲಭ. ಹೀಗಿರುವಾಗ ಇಲ್ಲಿ ಸಮಸ್ತ ವಿದ್ವಾಂಸರ ಸಮ್ಮುಖದಲ್ಲಿ ನಿಂತು, ಜ್ಞಾನಿಗಳ/ಸಜ್ಜನರ ಪಾಲಕನಾದ ಭಗವಂತನ ಲೀಲೆಗಳನ್ನು, ಅದರಲ್ಲಿ ಬರುವ ಸಂಶಯ ಪರಿಹರಿಸಿ ಹೇಳಬೇಕು ಎಂದು ಕೇಳುತ್ತಿರುವ ಪರೀಕ್ಷಿತನನ್ನು ಕಂಡು ಶುಕಾಚಾರ್ಯರಿಗೆ ಬಹಳ ಸಂತೋಷವಾಯಿತು.

ಜ್ಞಾನಿಗಳ ಜ್ಞಾನಿ, ಮಹಾಜ್ಞಾನಿಯಾದ ಶುಕಾಚಾರ್ಯರನ್ನು ಇಲ್ಲಿ ಉಗ್ರಶ್ರವಸ್ಸು ಬ್ರಹ್ಮರಾತಃ ಎಂದು ಕರೆದಿದ್ದಾರೆ. ವ್ಯಾಸರಿಂದ ನೇರ ಉಪದೇಶ ಪಡೆದ, ಪ್ರತಿಯೊಬ್ಬರ ಮನಸ್ಸನ್ನು ನಿಯಂತ್ರಿಸುವ ಶಿವಶಕ್ತಿಯಾದ ಶುಕಾಚಾರ್ಯರು, ಚತುರ್ಮುಖನಿಂದ ದತ್ತರಾದ ಗುರುಗಳಾಗಿದ್ದರು. ಸಮಸ್ತ ಜ್ಞಾನಿಗಳ ಸಂಶಯವನ್ನು ಪರಿಹರಿಸಬಲ್ಲ ಮಹಾಜ್ಞಾನಿಯಾದ ಅವರಿಗೆ ಇದು ಅನ್ವರ್ಥನಾಮ. ಅದೇ ರೀತಿ ತಾಯಿಯ ಗರ್ಭದಲ್ಲೇ ಭಗವಂತನ ದರ್ಶನ ಪಡೆದು, ಭಗವಂತನಿಂದ ರಕ್ಷಿಸಲ್ಪಟ್ಟು ಹುಟ್ಟಿದ ಪರೀಕ್ಷಿತನನ್ನು ಉಗ್ರಶ್ರವಸ್ಸು ವಿಷ್ಣುರಾತಃ ಎಂದು ಸಂಬೋಧಿಸಿದ್ದಾರೆ.

ವಿಷ್ಣುರಾತನ ಪ್ರಶ್ನೆಯಿಂದ ಸಂತೋಷಗೊಂಡ ಬ್ರಹ್ಮರಾತರು ಹೇಳುತ್ತಾರೆ: "ನಿನ್ನೆಲ್ಲಾ ಪ್ರಶ್ನೆಗಳಿಗೆ ಉತ್ತರ ಭಾಗವತದಲ್ಲಿದೆ. ಅಂತಹ ಪ್ರಸಿದ್ಧವಾದ, ವೇದತುಲ್ಯವಾದ ಭಾಗವತ ಪುರಾಣವನ್ನು ನಾನು ನಿನಗೆ ಹೇಳುತ್ತೇನೆ" ಎಂದು.

ಈಗಾಗಲೇ ಹೇಳಿದಂತೆ ಈ ಸಂಭಾಷಣೆ ನಡೆದಾಗ ಪರೀಕ್ಷಿತನಿಗೆ ಸುಮಾರು ಅರವತ್ತೈದು ವರ್ಷ. ಈ ಸಂಭಾಷಣೆ ನಡೆದದ್ದು ನಾವಿರುವ ಈ ಕಲಿಯುಗದಲ್ಲೇ. ಇದಕ್ಕೂ ಮೊದಲು ಶುಕಾಚಾರ್ಯರಿಗೆ ವೇದವ್ಯಾಸ ರೂಪದಲ್ಲಿ ಭಗವಂತ ಭಾಗವತ ಪುರಾಣವನ್ನು ಉಪದೇಶಿಸಿದ್ದ. ಆದರೆ ಅದು ಕೇವಲ ಭಗವಂತ ಮತ್ತು ಶಿವನ ನಡುವಿನ ಸಂವಾದವಾಗಿತ್ತು. ಹೀಗಾಗಿ ಮನುಷ್ಯಲೋಕದಲ್ಲಿ ಭಾಗವತ ಅವತರಿಸಿದ್ದು ಕಲಿಯುಗ ಪ್ರಾರಂಭವಾಗಿ ಅರವತ್ತೈದು ವರ್ಷಗಳ ನಂತರ.

ಭಾಗವತ ಪುರಾಣ ವೇದಗಳಿಗೆ ಸಾಟಿಯಾದ ಪುರಾಣ. ವೇದದಲ್ಲಿ ಅರ್ಥವಾಗದೇ ಇರುವ ವಿಷಯಗಳನ್ನು ಭಾಗವತ ಬಿಚ್ಚಿಡುತ್ತದೆ. ಇಂತಹ ಭಾಗವತವನ್ನು ಮೊತ್ತಮೊದಲು, ಮಹಾಪ್ರಳಯದ ನಂತರ, ಈ ಜಗತ್ತಿನ ಮೊದಲ ಜೀವ

ಚತುರ್ಮುಖನಿಗೆ [ಚತುರ್ಮುಖ ಸೃಷ್ಟಿಯಾದ ಬ್ರಹ್ಮಕಲ್ಪದಲ್ಲಿ] ಭಗವಂತ ಉಪದೇಶಿಸಿದ. "ಅಂತಹ ಭಾಗವತವನ್ನು ನಾನು ನಿನಗೆ ಉಪದೇಶಿಸುತ್ತೇನೆ" ಎಂದು ಶುಕಾಚಾರ್ಯರು ಪರೀಕ್ಷಿತನಿಗೆ ಹೇಳಿದರು ಎನ್ನುವಲ್ಲಿಗೆ ಎಂಟನೇ ಅಧ್ಯಾಯ ಕೊನೆಗೊಳ್ಳುತ್ತದೆ.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಅಷ್ಟಮೋSಧ್ಯಾಯಃ ॥**

ಭಾಗವತ ಮಹಾಪುರಾಣದ ಎರಡನೇ ಸ್ಕಂಧದ ಎಂಟನೇ ಅಧ್ಯಾಯ ಮುಗಿಯಿತು

*********

# ನವಮೋऽಧ್ಯಾಯಃ

## ಪರೀಕ್ಷಿತನ ಪ್ರಶ್ನೆಗೆ ಶುಕಾಚಾರ್ಯರ ಉತ್ತರ

**ಶ್ರೀಶುಕ ಉವಾಚ--**

ಆತ್ಮಮಾಯಾಮೃತೇ ರಾಜನ್ ಪರಸ್ಯಾನುಭವಾತ್ಮನಃ ।
ನ ಘಟೇತಾರ್ಥಸಂಬಂಧಃ ಸ್ವಪ್ನೇ ದ್ರಷ್ಟುರಿವಾಂಜಸಾ ॥೦೧॥

ವಿವರವಾಗಿ ಭಾಗವತವನ್ನು ಉಪದೇಶ ಮಾಡುವ ಮುನ್ನ ಅದ್ಭುತವಾದ ಮಾತೊಂದನ್ನು ಶುಕಾಚಾರ್ಯರು ಹೇಳುವುದನ್ನು ನಾವಿಲ್ಲಿ ಕಾಣುತ್ತೇವೆ. ಪುರಾಣ ಅಧ್ಯಯನ ಮಾಡುವಾಗ ನಮ್ಮ ನಿಲುವು ಹೇಗಿರಬೇಕು ಎನ್ನುವುದನ್ನು ಈ ಶ್ಲೋಕ ವಿವರಿಸುತ್ತದೆ. ಈ ಮಾತು ಬಹಳ ವಿಚಿತ್ರವಾಗಿದೆ. ಇಲ್ಲಿ ಶುಕಾಚಾರ್ಯರು ಹೇಳುತ್ತಾರೆ: "ಜೀವನಿಗೂ ಮತ್ತು ಆತನ ಶರೀರಕ್ಕೂ ಏನೂ ಸಂಬಂಧವಿಲ್ಲ" ಎಂದು. ಅಂದರೆ: "ಇದು ನನ್ನ ದೇಹ" ಎಂದು ಹೇಳುವುದು ತಪ್ಪು, ಏಕೆಂದರೆ ಜೀವದಿಂದ ದೇಹ ತೀರ ವಿಲಕ್ಷಣ. ಅದು ಮಣ್ಣು-ನೀರು-ಬೆಂಕಿಯಿಂದಾಗಿದೆ. ಆದರೆ ಜೀವ 'ಜ್ಞಾನಸ್ವರೂಪ'ವಾದುದು. ಹೀಗಾಗಿ ಸ್ವರೂಪಭೂತವಾದ ಜೀವಕ್ಕೂ ತ್ರಿಗುಣಾತ್ಮಕವಾದ ಶರೀರಕ್ಕೂ ಸಂಬಂಧವಿಲ್ಲ ಎನ್ನುವ ಮಾತನ್ನು ಶುಕಾಚಾರ್ಯರು ಪರೀಕ್ಷಿತನಿಗೆ ವಿವರಿಸಿದ್ದಾರೆ.

ಈ ಮೇಲಿನ ಮಾತನ್ನು ಅರ್ಥಮಾಡಿಕೊಳ್ಳಲು ಶುಕಾಚಾರ್ಯರು ಸ್ವಪ್ನದ ದೃಷ್ಟಾಂತವನ್ನು ಇಲ್ಲಿ ನೀಡಿದ್ದಾರೆ. ಕನಸಿನಲ್ಲಿ ನಾವು ಏನೇನನ್ನೋ ನೋಡುತ್ತೇವೆ. ಆದರೆ ಎಚ್ಚರವಾದಮೇಲೆ ಅದಾವುದೂ ಅಲ್ಲಿರುವುದಿಲ್ಲ. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳುವಂತೆ: *"ನ ತತ್ರ ರಥಾಃ ನ ರಥಯೋಗಾ ನ ಪಂಥಾನೋ ಭವಂತಿ ಅಥ ರಥಾನ್ ರಥಯೋಗಾನ್ ಪಥಃ ಸೃಜತೇ; ನ ತತ್ರಾನಂದಾ ಮುದಃ ಪ್ರಮುದೋ ಭವಂತಿ, ಅಥಾನಂದಾನ್ ಮುದಃ ಪ್ರಮುದಃ ಸೃಜತೇ; ನ ತತ್ರ ವೇಶಾಂತಾಃ ಪುಷ್ಕರಿಣ್ಯಃ ಸ್ರವಂತ್ಯೋ ಭವಂತಿ, ಅಥ ವೇಶಾಂತಾನ್ ಪುಷ್ಕರಿಣೀಃ ಸ್ರವಂತೀಃ ಸೃಜತೇ; ಸ ಹಿ ಕರ್ತಾ" (೪-೩-೧೦).* ಅಂದರೆ- ಅಲ್ಲಿ ರಥವಿಲ್ಲ-ಕುದುರೆಗಳಿಲ್ಲ-ರಸ್ತೆಗಳಿಲ್ಲ, ಆನಂದ-ಹರ್ಷ-ಪ್ರಮೋದಗಳಿಲ್ಲ, ಕೆರೆ-ಸರೋವರ-ನದಿಗಳಿಲ್ಲ. ಆದರೆ ಎಲ್ಲವನ್ನೂ ಸೃಷ್ಟಿಮಾಡಿ ನಮ್ಮ ಅನುಭವಕ್ಕೆ ಬರುವಂತೆ ಮಾಡುತ್ತಾನೆ ಕನಸಿನ ನಿಯಾಮಕನಾದ ತೈಜಸ ನಾಮಕ ಭಗವಂತ. ಇದೇ ರೀತಿ ಜೀವಕ್ಕೆ ದೇಹದ ನಂಟು. ದೇಹ ಬಂದಿರುವುದು ನಮ್ಮ ಇಚ್ಛೆಯಂತೆ ಅಲ್ಲ. ಅದು ಭಗವಂತನ ಇಚ್ಛೆಯಂತೆ ಬಂದಿರುವುದು. ಅಲ್ಲಿ ನಮ್ಮ ಜೀವಸ್ವಭಾವಕ್ಕನುಗುಣವಾಗಿ ತ್ರಿಗುಣಗಳು ಕೆಲಸ ಮಾಡುತ್ತಿರುತ್ತವೆ ಮತ್ತು ತ್ರಿಗುಣದ ಪರಿಮಾಣ ಮತ್ತು ಪ್ರಭಾವಕ್ಕನುಗುಣವಾಗಿ ಜೀವನದಲ್ಲಿ ಘಟನೆಗಳು ನಡೆಯುತ್ತಿರುತ್ತವೆ.

ನಮಗೆ ಯಾವ ತಾಯಿಯ ಹೊಟ್ಟೆಯಲ್ಲಿ, ಯಾವಪರಿಸರದಲ್ಲಿ ಹುಟ್ಟಿಬರುತ್ತೇವೆ ಎನ್ನುವುದು ತಿಳಿದಿರುವುದಿಲ್ಲ. ತಂದೆ-ತಾಯಿಯರನ್ನು ನಾವು ಆಯ್ಕೆ ಮಾಡಿಕೊಳ್ಳುವುದು ಸಾಧ್ಯವಿಲ್ಲ. ಹುಟ್ಟಿದ ಮೇಲೂ ನಮಗೆ ದೇಹದ ಮತ್ತು ಪ್ರಪಂಚದ ಅರಿವು ಮೂಡಲು ಸಮಯ ಬೇಕಾಗುತ್ತದೆ. ನಮ್ಮೆಲ್ಲಾ ಕರ್ಮಗಳು ಜೀವಸ್ವಭಾವಕ್ಕನುಗುಣವಾಗಿ, ಪರಿಸರದ ಪ್ರಭಾವದಲ್ಲಿ, ಸತ್ವ-ರಜಸ್ಸು-ತಮೋಗುಣಗಳೆಂಬ ಮಾಯೆಯ ಮಡಿಲಲ್ಲಿ, ಭಗವಂತನ ಇಚ್ಛೆಯಂತೆ ನಡೆಯುತ್ತಿರುತ್ತದೆ. ಮಾಯೆಯ ಮುಸುಕು ನಮ್ಮನ್ನು ಆವರಿಸಿಕೊಂಡಿದ್ದು, ನಾವು ಆ ಮುಸುಕಿನಲ್ಲಿ

ಬದುಕುತ್ತಿರುತ್ತೇವೆ. ಇದನ್ನು "ಆತ್ಮಮಾಯೆ" ಎಂದು ಕರೆದಿದ್ದಾರೆ ಶುಕಾಚಾರ್ಯರು. ಶುಕಾಚಾರ್ಯರ ಈ ಮಾತು ಪೂರ್ಣ ಪ್ರಮಾಣದಲ್ಲಿ ಅರ್ಥವಾಗಬೇಕಾದರೆ ನಾವು ಭಾಗವತವನ್ನು ಸಂಪೂರ್ಣ ಅಧ್ಯಯನ ಮಾಡಬೇಕಾಗುತ್ತದೆ.

**ಬಹುರೂಪ ಇವಾಭಾತಿ ಮಾಯಯಾ ಬಹುರೂಪಯಾ ।**
**ರಮಮಾಣೋ ಗುಣೇಷ್ವಸ್ಯಾ ಮಮಾಹಮಿತಿ ಮನ್ಯತೇ ॥೦೨॥**

ಒಂದು ಜನ್ಮದಲ್ಲಿ ಮನುಷ್ಯನಾಗಿ ಹುಟ್ಟಿದಮಾತ್ರಕ್ಕೆ ಪ್ರತೀಜನ್ಮದಲ್ಲಿ ಮನುಷ್ಯನಾಗಿ ಹುಟ್ಟುತ್ತಾನೆ ಎನ್ನುವ ನಿಯಮವಿಲ್ಲ. ಪೂರ್ವಜನ್ಮದ ಸಂಸ್ಕಾರಕ್ಕನುಗುಣವಾಗಿ ಜೀವಿಯ ಮುಂದಿನ ಜನ್ಮ ನಿರ್ಧಾರವಾಗುತ್ತದೆ. ಕ್ರೂರಿಯಾಗಿ ಬದುಕಿದರೆ ಮುಂದಿನ ಜನ್ಮದಲ್ಲಿ ವ್ಯಾಘ್ರನಾಗಬಹುದು; ಕೊಳಕನಾಗಿ ಬದುಕಿದರೆ ಮುಂದಿನ ಜನ್ಮದಲ್ಲಿ ಹಂದಿಯಾಗಬಹುದು; ಅಧ್ಯಯಶೀಲತೆಯನ್ನು ಮರೆತು ಬದುಕಿದವ ಮುಂದೆ ಮರವಾಗಿ ಹುಟ್ಟಬಹುದು. ಹೀಗಾಗಿ ತ್ರಿಗುಣಗಳ ಪ್ರಭಾವದಿಂದ ಪೂರ್ವಜನ್ಮದಲ್ಲಿ ನಮ್ಮ ಸ್ವಭಾವಕ್ಕನುಗುಣವಾಗಿ ನಮ್ಮಿಂದ ಏನು ಕರ್ಮ ನಡೆಯಿತೋ, ಅದಕ್ಕನುಗುಣವಾಗಿ ಮುಂದಿನ ಜನ್ಮ. ಈ ಎಲ್ಲಾ ಕಾರಣದಿಂದ ಜನ್ಮದ ಹೆಗ್ಗಳಿಕೆ, ಜಾತಿಯ ಹೆಗ್ಗಳಿಕೆ, ನಾನು-ನನ್ನದು ಎನ್ನುವ ಅಹಂಕಾರ-ಮಮಕಾರ ಎಲ್ಲವೂ ವ್ಯರ್ಥ. ಯಾವುದೂ ಶಾಶ್ವತವಲ್ಲ ಮತ್ತು ಯಾವುದರ ನಿಯಂತ್ರಣವೂ ನಮ್ಮಕೈಯಲ್ಲಿಲ್ಲ. ಒಂದೊಂದು ಜನ್ಮದಲ್ಲಿ ಒಂದೊಂದು ವೇಷ. ಈ ವೇಷವನ್ನು ತೊಡಿಸುವ ಮಾಯೆ ನಮ್ಮನ್ನು ವಿಧವಿಧವಾಗಿ ಆಡಿಸುತ್ತಿರುತ್ತದೆ. ಆದರೆ ತ್ರಿಗುಣಗಳ ಮಾಯಾ ಪರದೆಯಲ್ಲಿ ಸಿಲುಕಿದ ನಮಗೆ ಯಾವುದರ ಅರಿವೂ ಇರುವುದಿಲ್ಲ. ಸತ್ಯದ ಸಾಕ್ಷಾತ್ಕಾರವಾಗಲು ನಾವು ಈ ತ್ರಿಗುಣಗಳ ಮಾಯಾ ಪೊರೆಯಿಂದಾಚೆ ಬರಬೇಕು.

**ಯರ್ಹಿ ಚಾಯಂ ಮಹಿತ್ವೇ ಸ್ವೇ ಪರಸ್ಮಿನ್ ಕಾಲಮಾಯಯೋಃ ।**
**ರಮತೇ ಗತಸಮ್ಮೋಹಸ್ತ್ಯಕ್ತ್ವೋದಾಸ್ತೇ ತದೋಭಯಮ್ ॥೦೩॥**

ಭಗವಂತನನ್ನು ತಿಳಿಯುವ ಮೊದಲು ನಾವು ನಮ್ಮ ಸ್ವರೂಪವನ್ನು ತಿಳಿದುಕೊಳ್ಳಬೇಕು. ಆ ಅರಿವಿಲ್ಲದೆ ಭಗವಂತನನ್ನು ತಿಳಿಯುವುದು ಸಾಧ್ಯವಿಲ್ಲ. ಸ್ವರೂಪಭೂತವಾದ ಜೀವ ಸತ್ವ-ರಜಸ್ಸು-ತಮೋಗುಣಳಿಂದಾದ ದೇಹದ ಒಳಗೆ ಬಂಧಿ. ಅನಾದಿ-ಅನಂತವಾಗಿರುವ ಆ ಜೀವ ಕಾಲಬದ್ಧವಲ್ಲ. ತ್ರಿಗುಣಾತ್ಮಕವಾದ ಮಾಯೆಯ ಬಂಧಕ ಶಕ್ತಿಯಿಂದಾಚೆಗೆ ನಿಂತು ನೋಡಿದಾಗ ಮಾತ್ರ ಈ ಸತ್ಯ ತಿಳಿಯುತ್ತದೆ. ಒಮ್ಮೆ ಈ ಸತ್ಯ ತಿಳಿದರೆ ಆಗ ಎಲ್ಲಾ ಭ್ರಮೆ ಹೊರಟು ಹೋಗುತ್ತದೆ ಮತ್ತು ಆಗ ಸಿಗುವ ಆನಂದಕ್ಕೆ ಸಾಟಿ ಇಲ್ಲ. ಹೀಗಾಗಿ ಮಾಯೆ ತೊಡಿಸಿರುವ ತ್ರಿಗುಣಾತ್ಮಕವಾದ ಕೃತಕ ವೇಷದ ಭ್ರಮೆಯಲ್ಲಿ ಬೀಳದೇ ಅದನ್ನು ಮೀರಿ ಸತ್ಯವನ್ನು ತಿಳಿಯುವ ಪ್ರಯತ್ನ ಮಾಡಬೇಕು.

**ಆತ್ಮತತ್ತ್ವವಿಶುದ್ಧ್ಯರ್ಥಂ ಯದಾಹ ಭಗವಾನೃತಮ್ ।**
**ಬ್ರಹ್ಮಣೇSದರ್ಶಯದ್ ರೂಪಮವ್ಯಲೀಕವ್ರತಾದೃತಃ ॥೦೪॥**

ಆತ್ಮ- ಪರಮಾತ್ಮ ಎಂದರೇನು ಎನ್ನುವ ಆತ್ಮತತ್ತ್ವದ ಅರಿವನ್ನು ನಮಗೆ ತಿಳಿಯಪಡಿಸುವುದಕ್ಕೋಸ್ಕರವೇ ಮೊಟ್ಟಮೊದಲು, ಸೃಷ್ಟಿಯ ಆದಿಯಲ್ಲಿ ಭಗವಂತ ಈ ಜ್ಞಾನವನ್ನು ಚತುರ್ಮುಖನಿಗೆ ಉಪದೇಶಿಸಿದ. ಈ ಜಗತ್ತಿನ

ಮೊದಲ ಜೀವ ಚತುರ್ಮುಖನ ಧ್ಯಾನಕ್ಕೆ ಮೆಚ್ಚಿದ ಭಗವಂತ ಆತನಿಗೆ ದರ್ಶನ ನೀಡಿದ ಮತ್ತು ವಿಶ್ವದ ರಹಸ್ಯವನ್ನು ಆತನಿಗೆ ಉಪದೇಶಿಸಿದ. ಇಲ್ಲಿ ಪರೀಕ್ಷಿತನಿಗೆ ಭಾಗವತವನ್ನು ಉಪದೇಶಿಸಲಿರುವ ಶುಕಾಚಾರ್ಯರು ಹೇಳುತ್ತಾರೆ: " ಈ ರೀತಿ ಸ್ವಯಂ ಭಗವಂತನಿಂದ ಚತುರ್ಮುಖನಿಗೆ ಉಪದೇಶಿಸಲ್ಪಟ್ಟ ಅಪೂರ್ವವಾದ ಯಥಾರ್ಥ ಜ್ಞಾನವನ್ನು ನಾನು ನಿನಗೆ ಉಪದೇಶಿಸುತ್ತೇನೆ" ಎಂದು.

## ಚತುರ್ಮುಖನಿಗೆ ಸೃಷ್ಟಿಯ ಆದಿಯಲ್ಲಿ ಭಗವಂತ ನೀಡಿದ ಉಪದೇಶ

**ಸಂಚಿಂತಯನ್ ದ್ವಕ್ಷರಮೇಕದಾಂಭಸ್ಯುಪಾಶೃಣೋದ್ ದ್ವಿರ್ಗದಿತಂ ವಚೋ ವಿಭುಃ ।**
**ಸ್ಪರ್ಶೇಷು ಯತ್ ಷೋಡಶಂ ಏಕವಿಂಶಂ ನಿಷ್ಕಿಂಚನಾನಾಂ ನೃಪ ಯದ್ ಧನಂ ವಿದುಃ ॥೦೬॥**

ಸೃಷ್ಟಿಯ ಆದಿಯಲ್ಲಿ ಭಗವಂತ ತನ್ನ ನಾಭೀಕಮಲದಿಂದ ಚತುರ್ಮುಖನನ್ನು ಸೃಷ್ಟಿ ಮಾಡಿದ. ಈ ರೀತಿ ಹುಟ್ಟಿದ ಚತುರ್ಮುಖನಿಗೆ ಅಲ್ಲಿ ಏನೂ ಕಾಣಿಸಲಿಲ್ಲ. ಏಕೆಂದರೆ ಆಗಿನ್ನೂ ಪ್ರಪಂಚ ಸೃಷ್ಟಿಯಾಗಿರಲಿಲ್ಲ. ಆಗ "ನಾನು ಏಕೆ ಹುಟ್ಟಿದೆ? ನನ್ನನ್ನು ಯಾರು ಸೃಷ್ಟಿ ಮಾಡಿದರು? ನನ್ನ ಜನನದ ಉದ್ದೇಶವೇನು?" ಇಂತಹ ಅನೇಕ ಪ್ರಶ್ನೆಗಳು ಚತುರ್ಮುಖನನ್ನು ಕಾಡಲಾರಂಭಿಸಿದವು. ಈ ರೀತಿ ಚತುರ್ಮುಖ ಗೊಂದಲಗೊಂಡಾಗ ಆತನಿಗೊಂದು ಶಬ್ದ ಕೇಳಿಸಿತಂತೆ. ಆ ಶಬ್ದ "ಸ್ಪರ್ಶಾಕ್ಷರಗಳಲ್ಲಿ ಹದಿನಾರು ಮತ್ತು ಇಪ್ಪತ್ತೊಂದನೇ ಅಕ್ಷರ" ಎಂದಿದ್ದಾರೆ ಶುಕಾಚಾರ್ಯರು! ಅಂದರೆ ಅವನಿಗೆ ಕೇಳಿಸಿದ ಶಬ್ದ 'ತಪ'. **[** ಕ ಖ ಗ ಘ ಙ ಚ ಛ ಜ ಝ ಞ ಟ ಠ ಡ ಢ ಣ ತ ಥ ದ ಧ ನ ಪ ಫ ಬ ಭ ಮ**]**. ತಪ ಎಂದರೆ ಆಲೋಚನೆ. "ಪ್ರಶ್ನೆ ಬಂದಾಗ ಉತ್ತರಕ್ಕಾಗಿ ಯಾರ್ಯಾರನ್ನೋ ಕೇಳುವ ಬದಲು ನೀನೇ ಯೋಚಿಸು. ನಿನ್ನ ಪ್ರಶ್ನೆಗೆ ಉತ್ತರ ನಿನಗೇ ಹೊಳೆಯುತ್ತದೆ" ಎನ್ನುವ, ಇಂದಿಗೂ ಅನ್ವಯವಾಗುವ ಅದ್ಭುತ ಸಂದೇಶವಿದು.

[ಇತ್ತೀಚೆಗೆ ಮುದ್ರಣಗೊಂಡ ಅನೇಕ ಪುಸ್ತಕಗಳಲ್ಲಿ ಈ ಮೇಲಿನ ಶ್ಲೋಕದಲ್ಲಿನ ಯತ್ ಷೋಡಶ ಎನ್ನುವ ಪದವನ್ನು ಯಚ್ಛೋಡಶ ಎಂದು ತಪ್ಪಾಗಿ ಮುದ್ರಿಸಿರುವುದು ಕಾಣಸಿಗುತ್ತದೆ. ಯತ್ +ಷೋಡಶ=ಯಚ್ಛೋಡಶ ಎಂದು ಸಂಸ್ಕೃತದಲ್ಲಿ ಸಂಧಿ ಮಾಡಲು ಬರುವುದಿಲ್ಲ. ಹೀಗಾಗಿ ಇದನ್ನು ಯತ್ ಷೋಡಶ ಎಂದು ಬಿಡಿಯಾಗಿ ಬರೆಯಬೇಕು. ಇನ್ನು ವ್ಯಾಕರಣ ಪುಸ್ತಕಗಳಲ್ಲಿ 'ತಪ – ಸಂತಾಪೇ' ಎನ್ನುವ ತಪ್ಪು ಅರ್ಥ ಮುದ್ರಣಗೊಂಡಿದ್ದು, ಇಲ್ಲಿ 'ತಪ' ಎಂದರೆ ಸಂತಾಪವಲ್ಲ, ಬದಲಿಗೆ ಆಲೋಚನೆ]

**ದಿವ್ಯಂ ಸಹಸ್ರಾಬ್ದಮಮೋಘದರ್ಶನೋ ಜಿತಾನಿಲಾತ್ಮಾ ವಿಜಿತೋಭಯೇಂದ್ರಿಯಃ ।**
**ಅತಪ್ಯತ ಸ್ಮಾಖಿಲಲೋಕತಾಪನಂ ತಪಸ್ತಪೀಯಾಂಸ್ತಪತಾಂ ಸಮಾಹಿತಃ ॥೦೮॥**

ಭಗವಂತ "ನೀನೇ ಯೋಚಿಸು" ಎಂದು ಹೇಳಿದಾಗ ಚತುರ್ಮುಖ ಯೋಚಿಸಲಾರಂಭಿಸಿದನಂತೆ. "ಆತ ದೇವತೆಗಳ ಒಂದು ಸಾವಿರ ವರ್ಷಗಳಷ್ಟು ಕಾಲ ಯೋಚಿಸಿದ" ಎಂದಿದ್ದಾರೆ ಶುಕಾಚಾರ್ಯರು. ನಮಗೆ ತಿಳಿದಂತೆ ನಮ್ಮ ಒಂದು ವರ್ಷ ದೇವತೆಗಳಿಗೆ ಒಂದು ದಿನವಿದ್ದಂತೆ. ಹೀಗಾಗಿ ದೇವತೆಗಳ ಒಂದು ಸಾವಿರ ವರ್ಷ ನಮ್ಮ ಕಾಲಮಾನದ ಪ್ರಕಾರ ೩,೬೦,೦೦೦ ವರ್ಷಗಳು. ಆದರೆ ನಮ್ಮ ೧ ಲಕ್ಷ ವರ್ಷ ಚತುರ್ಮುಖನ ಒಂದು ಸೆಕೆಂಡ್. ಹೀಗಾಗಿ

ದೇವತೆಗಳ ೧ ಸಾವಿರ ವರ್ಷಗಳು ಚತುರ್ಮುಖನ ೩.೬ ಸೆಕೆಂಡ್ ಅಷ್ಟೇ. ಹೀಗೆ ಯೋಚಿಸಿದ ಚತುರ್ಮುಖನಿಗೆ ತಕ್ಷಣ ಉತ್ತರ ಹೊಳೆಯಿತಂತೆ.

ಚತುರ್ಮುಖನನ್ನು ಇಲ್ಲಿ ಶುಕಾಚಾರ್ಯರು 'ಅಮೋಘ ದರ್ಶನಃ, ಜಿತಾನಿಲಾತ್ಮಾ ಮತ್ತು ವಿಜಿತೋಭಯೇಂದ್ರಿಯಃ ಎನ್ನುವ ವಿಶೇಷಣ ಬಳಸಿ ಸಂಬೋಧಿಸಿದ್ದಾರೆ. ಚತುರ್ಮುಖ ಎಂದೂ ತಪ್ಪಾಗಿ ಯೋಚಿಸಲಾರ. ಜ್ಞಾನದ ಕಡೆಗೆ ಆತನ ಪಯಣ ಎಂದೂ ತಪ್ಪಾಗಲು ಸಾಧ್ಯವಿಲ್ಲ. ಪ್ರಾಣಶಕ್ತಿ/ಪ್ರಾಣಾಯಾಮ ಆತನ ಸಹಜ ಧರ್ಮ ಮತ್ತು ಆತ ಇಂದ್ರಿಯಗಳನ್ನು ಸಂಪೂರ್ಣ ಗೆದ್ದವನು. ಅಂತಹ ಜನ್ಮತಃ ಸರ್ವಜ್ಞನಾದ, ಶ್ರೇಷ್ಠ ಚಿಂತಕನಾದ ಚತುರ್ಮುಖ ಇಡೀ ಬ್ರಹ್ಮಾಂಡವನ್ನು ಬೆಳಗಿಸುವ ಶಕ್ತಿಯಾದ, ಜ್ಞಾನರೂಪಿ ಭಗವಂತನನ್ನು ಕುರಿತು ಆಳವಾದ ಚಿಂತನೆ(ತಪಸ್ಸು) ಮಾಡಿದನಂತೆ. [ಕೆಲವರು ಇಲ್ಲಿ ಹೇಳಿದ 'ಅಖಿಲಲೋಕತಾಪನಂ' ಎನ್ನುವ ಸಂಬೋಧನೆಯನ್ನು 'ಇಡೀ ಲೋಕವನ್ನು ಸುಟ್ಟುಬಿಡುವಂತಹ ಉಗ್ರ ತಪಸ್ಸು' ಎಂದು ವ್ಯಾಖ್ಯಾನ ಮಾಡಿದ್ದಾರೆ. ಆದರೆ ಚತುರ್ಮುಖನು ಭಗವಂತನ ಬಗೆಗೆ ಯೋಚಿಸಿದ ಈ ಕಾಲದಲ್ಲಿ ಇನ್ನೂ ಲೋಕದ ಸೃಷ್ಟಿಯೇ ಆಗಿರುವುದಿಲ್ಲ. ಹೀಗಾಗಿ ಮೇಲಿನ ಅರ್ಥ ಅಲ್ಲಿ ಕೂಡುವುದಿಲ್ಲ. ಆದ್ದರಿಂದ **ಅಖಿಲಲೋಕತಾಪನಂ** ಎನ್ನುವುದು 'ಇಡೀ ಬ್ರಹ್ಮಾಂಡವನ್ನು ಬೆಳಗಿಸುವ ಶಕ್ತಿ' ಎಂದು ಭಗವಂತನನ್ನು ಸಂಬೋಧಿಸುವ ವಿಶೇಷಣ].

## ಚತುರ್ಮುಖ ಕಂಡ ಶ್ವೇತದ್ವೀಪ

ತಸ್ಮೈ ಸ್ವಲೋಕಂ ಭಗವಾನ್ ಸಭಾಜಿತಃ ಸಂದರ್ಶಯಾಮಾಸ ಪರಂ ನ ಯತ್ ಪದಮ್ ।
ವ್ಯಪೇತಸಂಕ್ಲೇಶವಿಮೋಹಸಾಧ್ವಸಂ ಸಂದೃಷ್ಟವದ್ಭಿರ್ವಿಬುಧೈರಭಿಷ್ಟುತಮ್ ॥೦೯॥

ಚತುರ್ಮುಖ ಬ್ರಹ್ಮ, ಭಗವಂತನ ಚಿಂತನೆ ಮಾಡಿದಾಕ್ಷಣ, ಆತನ ಚಿಂತನೆಯಿಂದ ಪೂಜಿತನಾದ ಭಗವಂತ ತನ್ನ ನಿತ್ಯಲೋಕವಾದ ಶ್ವೇತದ್ವೀಪದ ದರ್ಶನವನ್ನು ನೀಡುತ್ತಾನೆ. ಎಂತಹ ಲೋಕವನ್ನು ಚತುರ್ಮುಖ ಕಂಡ ಎನ್ನುವುದರ ಸಂಕ್ಷಿಪ್ತ ಚಿತ್ರಣವನ್ನು ಇಲ್ಲಿ ಶುಕಾಚಾರ್ಯರು ನೀಡಿದ್ದಾರೆ: "ಅದಕ್ಕಿಂತ ಮಿಗಿಲಾದ ಇನ್ನೊಂದು ಸ್ಥಾನ ಇಲ್ಲ" ಎಂದಿದ್ದಾರೆ ಶುಕಾಚಾರ್ಯರು. ಭ್ರಮೆ, ಭಯ ಮತ್ತು ದುಃಖದ ಸ್ಪರ್ಶವೇ ಇಲ್ಲದ ಅದ್ಭುತ ಲೋಕವನ್ನು ಮತ್ತು ಅಲ್ಲಿ ಭಗವಂತನನ್ನು ಸ್ತೋತ್ರಮಾಡುತ್ತಿರುವ ಮುಕ್ತರನ್ನು ಚತುರ್ಮುಖ ಕಂಡನಂತೆ. ಈ ರೀತಿ ತನ್ನ ರೂಪವನ್ನು ತೋರಿದ ಭಗವಂತ ಚತುರ್ಮುಖನಿಗೆ ಉಪದೇಶ ಮಾಡುತ್ತಾನೆ. ತನ್ನ ತಂದೆಯಾದ ವೇದವ್ಯಾಸರಿಂದ ಕೇಳಿ ತಿಳಿದ ಆ ಉಪದೇಶವನ್ನೇ ಇಲ್ಲಿ ಶುಕಾಚಾರ್ಯರು ಪರೀಕ್ಷಿತನಿಗೆ ಉಪದೇಶಿಸಲಿದ್ದಾರೆ.

ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।
ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ ॥೧೦॥

"ಭಗವಂತ ಚತುರ್ಮುಖನಿಗೆ ನಿತ್ಯಲೋಕದ ದರ್ಶನ ನೀಡಿದ" ಎನ್ನುವ ಮಾತನ್ನು ಕೇಳಿದಾಗ ನಮಗೆ ಆ ಲೋಕದ ಕುರಿತು ತಿಳಿದುಕೊಳ್ಳಬೇಕು ಎನ್ನುವ ಕುತೂಹಲ ಮೂಡುತ್ತದೆ. ಇದಕ್ಕಾಗಿ ಶುಕಾಚಾರ್ಯರು ಇಲ್ಲಿ ನಮಗೆ ನಾವಿರುವ ಪ್ರಪಂಚಕ್ಕೂ ಭಗವಂತನ ಲೋಕಕ್ಕೂ ಇರುವ ವ್ಯತ್ಯಾಸವೇನು ಎನ್ನುವುದನ್ನು ವಿವರಿಸಿದ್ದಾರೆ.

ನಾವು ಕಾಣುವ ಈ ನಮ್ಮ ಪ್ರಪಂಚ ಮಣ್ಣು-ನೀರು-ಬೆಂಕಿಯ ಮಿಶ್ರಣ. ಇಲ್ಲಿರುವ ಪ್ರತಿಯೊಂದು ವಸ್ತುಗಳೂ ಕೂಡಾ ಸತ್ವ-ರಜಸ್ಸು-ತಮೋಗುಣಗಳಿಂದಾಗಿದೆ. ಇಲ್ಲಿ ಶುದ್ಧ ಸತ್ವ, ಶುದ್ಧ ರಜಸ್ಸು ಅಥವಾ ಶುದ್ಧ ತಮಸ್ಸು ಎನ್ನುವುದಿಲ್ಲ. ಎಲ್ಲವೂ ಮೂರರ ಮಿಶ್ರಣ. ಆದರೆ ಶುಕಾಚಾರ್ಯರು ಹೇಳುತ್ತಾರೆ: "ವೈಕುಂಠಲೋಕ ತ್ರೈಗುಣ್ಯಮುಕ್ತ" ಎಂದು. ಸತ್ವ-ರಜಸ್ಸು-ತಮೋಗುಣಗಳ ಪ್ರಭಾವ ಅಲ್ಲಿಲ್ಲ. ಹೀಗಾಗಿ ಅದು ಸಂಪೂರ್ಣ ಅಪ್ರಾಕೃತ. ಅದು ಕಾಲದ ಪ್ರಭಾವಕ್ಕೊಳಪಟ್ಟು ಬದಲಾವಣೆ ಹೊಂದುವ ಲೋಕವಲ್ಲ. ಮಾಯೆಯ ಪರದೆ ಅಲ್ಲಿಲ್ಲ. "ಅಲ್ಲಿರುವವರು ಸುರರಿಂದ ಮತ್ತು ಅಸುರರಿಂದ ಅರ್ಚಿತರಾಗುತ್ತಿದ್ದಾರೆ" ಎನ್ನುತ್ತಾರೆ ಶುಕಾಚಾರ್ಯರು. ಇಲ್ಲಿ ಶುಕಾಚಾರ್ಯರು 'ಅಸುರ' ಎನ್ನುವ ಪದವನ್ನು ಬಳಸಿರುವುದು ನಮಗೆ ಗೊಂದಲವನ್ನುಂಟುಮಾಡುತ್ತದೆ. ಇದರಿಂದಾಗಿ "ಅಸುರರಿಗೂ ಮೋಕ್ಷ ಸಿಗುವುದೇ?" ಎನ್ನುವ ಪ್ರಶ್ನೆ ಮೂಡುತ್ತದೆ. ಆದರೆ ಇಲ್ಲಿ ಬಳಸಿರುವ ಅಸುರ ಎನ್ನುವ ಪದಕ್ಕೆ ಬೇರೆ ಅರ್ಥವಿದೆ. "***ಮಹದ್ದೇವಾನಾಂ ಅಸುರತ್ವಮೇತುಂ***" ಎನ್ನುವ ಮಾತಿದೆ. ವೇದದಲ್ಲೂ ಕೂಡಾ ಅಸುರ ಎನ್ನುವ ಪದ ಬೇರೆ ಅರ್ಥದಲ್ಲಿ ಬಳಕೆಯಾಗಿರುವುದನ್ನು ನಾವು ಕಾಣುತ್ತೇವೆ. ಅಸು=ಪ್ರೇರಣೆ. ಹೀಗಾಗಿ ಎಲ್ಲವನ್ನೂ ಪ್ರೇರಣೆ ಮಾಡುವ ಭಗವಂತ 'ಅಸು'. ಪ್ರಾಣದೇವರಿಗೂ 'ಅಸು' ಎನ್ನುತ್ತಾರೆ. ಹೀಗಾಗಿ ಪ್ರಾಣತತ್ತ್ವದಲ್ಲಿ, ಭಗವಂತನಲ್ಲಿ ಸುಖವನ್ನು ಕಾಣುವವರು 'ಅಸುರರು'. '***ನಾಹಂಕರ್ತಾ ಹರಿಃ ಕರ್ತಾ***' ಎಂದು ಭಗವಂತನ ಕರ್ತೃತ್ವಶಕ್ತಿಯ ಅರಿವಿನಿಂದ ಅರ್ಚಿಸುವ ದೇವತೆಗಳನ್ನು, ಅಂತಹ ದೇವತೆಗಳಿಂದ ಅರ್ಚಿತರಾಗುವ ಬ್ರಹ್ಮಾದಿಗಳನ್ನು ಶ್ವೇತದ್ವೀಪದಲ್ಲಿ ಚತುರ್ಮುಖ ಕಾಣುತ್ತಾನೆ. [ಈಗಾಗಲೇ ಕಳೆದುಹೋಗಿರುವ ಅನಂತ ಬ್ರಹ್ಮಕಲ್ಪದಲ್ಲಿ ಮುಕ್ತಿಯನ್ನು ಪಡೆದ ಬ್ರಹ್ಮಾದಿಗಳು ಆತನಿಗೆ ವೈಕುಂಠಲೋಕದಲ್ಲಿ ಕಾಣಿಸುತ್ತಾರೆ].

ಮೋಕ್ಷದಲ್ಲೂ ಕೂಡಾ ತಾರತಮ್ಯವಿದೆ ಎನ್ನುವ ಅಪೂರ್ವವಾದ ವಿಷಯ ಇಲ್ಲಿ ನಮಗೆ ತಿಳಿಯುತ್ತದೆ. ಅಂದರೆ ಅವರವರ ಸಾಧನೆಗೆ ತಕ್ಕಂತೆ ಸಿದ್ಧಿ ಹೊರತು ಎಲ್ಲರಿಗೂ ಸಮಾನವಾದ ಸಿದ್ಧಿ ಎನ್ನುವುದಿಲ್ಲ. ಒಂದು ಕಲ್ಪ ಸಾಧನೆ ಮಾಡುವ ಮನುಷ್ಯನಿಗೂ, ನೂರು ಕಲ್ಪ ಸಾಧನೆ ಮಾಡುವ ಚತುರ್ಮುಖನಿಗೂ ಒಂದೇ ಸಿದ್ಧಿ ಅಲ್ಲ. ಯೋಗ್ಯತೆಗನುಗುಣವಾದ ಸಿದ್ಧಿ. ಅಷ್ಟೇ ಅಲ್ಲಾ, ಶುಕಾಚಾರ್ಯರ ಮಾತಿನಿಂದ ತಿಳಿಯುವ ಇನ್ನೊಂದು ವಿಷಯ ಏನೆಂದರೆ: ಮೋಕ್ಷಕ್ಕೆ ಹೋದ ಜೀವ ಭಗವಂತನ ಜೊತೆ ಸೇರಿ ಭಗವಂತನೇ ಆಗಿ ಬಿಡುವುದಿಲ್ಲ, ಬದಲಿಗೆ ಆತ ಸದಾ ಭಗವಂತನೊಂದಿಗಿರುತ್ತಾನೆ. ಮೋಕ್ಷದಲ್ಲಿ ಹಿರಿಯ-ಕಿರಿಯ ಎನ್ನುವ ತಾರತಮ್ಯ ಇದ್ದರೂ ಕೂಡಾ ಅಲ್ಲಿ ಪೈಪೋಟಿ ಜಗಳವಿಲ್ಲ. ಕಿರಿಯರು ಹಿರಿಯರನ್ನು ಸದಾ ಗೌರವದಿಂದ ಕಾಣುತ್ತಾರೆ. ಏಕೆಂದರೆ ತ್ರೈಗುಣ್ಯದ ಮಾಯಾಪರದೆ ಅಲ್ಲಿಲ್ಲ. ಮೋಕ್ಷದಲ್ಲಿ ಜ್ಞಾನಾನಂದಪೂರ್ಣನಾದ ಜೀವನಿಗೆ ತನ್ನ ಸಿದ್ಧಿಯ ಎತ್ತರ ಏನು ಎನ್ನುವ ಅರಿವಿರುತ್ತದೆ ಮತ್ತು ಅದಕ್ಕನುಗುಣವಾಗಿ, ಭಗವಂತನ ಸೇವಕನಾಗಿ***(ಹರೇರನುವ್ರತಾ)*** ಆತನಿರುತ್ತಾನೆ. ಭಗವಂತನ ಅಧೀನತ್ವ ಮೋಕ್ಷದಲ್ಲೂ ಇರುತ್ತದೆ ಎನ್ನುವ ಸತ್ಯ ಈ ಮಾತಿನಿಂದ ಸ್ಪಷ್ಟವಾಗಿ ತಿಳಿಯುತ್ತದೆ.

ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ ಕರೋತಿ ಮಾನಂ ಬಹುಧಾ ವಿಭೂತಿಭಿಃ ।
ಪ್ರೇಂಖಶ್ರಿತಾ ಯಾಃ ಕುಸುಮಾಕರಾನುಗೈರ್ವಿಗೀಯಮಾನಾ ಪ್ರಿಯಕರ್ಮ ಗಾಯತೀ ॥೧೩॥

ಮುಕ್ತಲೋಕ ದರ್ಶನ ಮಾಡುತ್ತಿರುವ ಚತುರ್ಮುಖ ಅಲ್ಲಿ ಭಗವಂತನ ಪಾದಸೇವೆ ಮಾಡುತ್ತಿರುವ ಶ್ರೀಲಕ್ಷ್ಮಿಯನ್ನು ಕಾಣುತ್ತಾನೆ. ಆಕೆ ತನ್ನ ಅನೇಕ ವಿಭೂತಿ ರೂಪಗಳಿಂದ ಭಗವಂತನನ್ನು ಪೂಜಿಸುತ್ತಿರುವುದು ಆತನಿಗೆ ಕಾಣಿಸುತ್ತದೆ. ಆಕೆ ಒಂದು ರೂಪದಲ್ಲಿ ಭಗವಂತನ ಜೊತೆಗೆ ಜ್ಞಾನಾನಂದಮಯವಾದ ಉಯ್ಯಾಲೆಯಲ್ಲಿ ಕಾಣಿಸಿಕೊಂಡರೆ,

ಇನ್ನೊಂದು ರೂಪದಲ್ಲಿ ಭಗವಂತನ ಪಾದಸೇವೆ ಮಾಡುತ್ತಿದ್ದಾಳೆ. ಜೊತೆಗೆ ಮುಕ್ತರಾದ ಬ್ರಹ್ಮಾದಿ-ದೇವತೆಗಳು ದುಂಬಿಗಳಂತೆ ಭಗವಂತನ ಸುತ್ತ ಆತನ ಗುಣಾನುಸಂಧಾನ ಮಾಡುತ್ತಿದ್ದಾರೆ. ಕಾಲದ ವಿಕ್ರಮವಿಲ್ಲದ ಮೋಕ್ಷದಲ್ಲಿ ನಿತ್ಯ ವಸಂತ. ಅಲ್ಲಿ ಮುಕ್ತರಾದ ದೇವತೆಗಳೇ ಹೂ-ದುಂಬಿಗಳು. ಹೀಗೆ ದುಂಬಿಗಳಂತೆ ಸದಾ ಭಗವಂತನ ಸ್ತೋತ್ರ ಮಾಡುತ್ತಿರುವ ದೇವತೆಗಳನ್ನು ಚತುರ್ಮುಖ ಕಾಣುತ್ತಾನೆ.

ದದರ್ಶ ತತ್ರಾಖಿಲಸಾತ್ವತಾಂ ಪತಿಂ ಶ್ರಿಯಃಪತಿಂ ಯಜ್ಞಪತಿಂ ಜಗತ್ಪತಿಮ್ ।
ಸುನಂದನಂದಪ್ರಬಲಾರ್ಹಣಾದಿಭಿಃ ಸ್ವಪಾರ್ಷದಮುಖ್ಯೈಃ ಪರಿಸೇವಿತಂ ವಿಭುಮ್ ॥೧೪॥

ಇಲ್ಲಿ "ಲಕ್ಷ್ಮೀ-ನಾರಾಯಣರ ಸುತ್ತಲೂ ಸಾತ್ವಿಕರು ಭಗವಂತನ ಸ್ತೋತ್ರ ಮಾಡುತ್ತಿರುವುದನ್ನು ಚತುರ್ಮುಖ ಕಂಡ" ಎಂದಿದ್ದಾರೆ ಶುಕಾಚಾರ್ಯರು. ಈ ಹಿಂದೆ ನಾವು ಕಂಡುಕೊಂಡಂತೆ ಮೋಕ್ಷ ಎಂದರೆ ಅದು ತ್ರಿಗುಣಗಳಿಂದ ಅತೀತವಾದುದು. ಹೀಗಾಗಿ ಇಲ್ಲಿ ಹೇಳಿರುವ ಸಾತ್ವಿಕರು ಎಂದರೆ ಸ್ವರೂಪ ಸಾತ್ವಿಕರಾದ ಮುಕ್ತರು.
ವೇದಾರ್ಥ ಚಿಂತನೆ ಲೋಕದಲ್ಲಿ ಮಾತ್ರವಲ್ಲ, ಮೋಕ್ಷದಲ್ಲಿ ಕೂಡಾ ಸದಾ ನಡೆಯುತ್ತಿರುತ್ತದೆ. ವೇದದಲ್ಲಿ ಹೇಳುವಂತೆ: *ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಿಮೀತ ಉತ್ವಃ ॥ಋಗ್ವೇದ-೧೦.೦೭೧.೧೧॥* ಜ್ಞಾನಯಜ್ಞ ನಿರಂತರ. ಅದಕ್ಕೆ ಕೊನೆ ಎನ್ನುವುದಿಲ್ಲ ಎನ್ನುವ ಸತ್ಯವನ್ನು ಚತುರ್ಮುಖ ಕಂಡ.
ಇಡೀ ಜಗತ್ತು, ಜಗತ್ತಿನ ಮೂಲ ಎಲ್ಲವೂ ಮೋಕ್ಷದಲ್ಲಿರುವುದನ್ನು, ಸುನಂದ, ನಂದ, ಪ್ರಬಲ, ಅರ್ಹಣಾ ಮುಂತಾದ ದ್ವಾರಪಾಲಕರು, ಹಿಂದಿನ ಕಲ್ಪದ ದೇವತೆಗಳು ಎಲ್ಲರನ್ನೂ, ಲಕ್ಷ್ಮೀ ಸಮೇತನಾದ ಭಗವಂತನ ಜೊತೆಗೆ ಚತುರ್ಮುಖ ಕಾಣುತ್ತಾನೆ.

ಅಧ್ಯರ್ಹಣೀಯಾಸನಮಾಸ್ಥಿತಂ ಪರಂ ವೃತಂ ಚತುಃಷೋಡಶಪಂಚಶಕ್ತಿಭಿಃ ।
ಯುಕ್ತಂ ಭಗೈಃ ಸ್ವೈರಿತರತ್ರ ಚಾಧ್ರುವೈಃ ಸ್ವ ಏವ ಧಾಮನ್ ರಮಮಾಣಮೀಶ್ವರಮ್ ॥೧೬॥

ಮೋಕ್ಷಲೋಕದಲ್ಲಿ ಜ್ಞಾನಾನಂದಮಯವಾದ ಅನರ್ಗವಾದ ಆಸನದ ಮೇಲೆ(ಅಥವಾ ಶೇಷಶಾಯಿಯಾಗಿ) ಭಗವಂತ ಕುಳಿತಿರುವುದನ್ನು ಚತುರ್ಮುಖ ಕಾಣುತ್ತಾನೆ. ಅಲ್ಲಿ ಭಗವಂತನ ಒಂದೇ ರೂಪವಲ್ಲ, ಆತನ ಅನೇಕಾನೇಕ ರೂಪಗಳನ್ನು ಆತ ಕಾಣುತ್ತಾನೆ. ಇಲ್ಲಿ ಪರೀಕ್ಷಿತನಿಗೆ ಚತುರ್ಮುಖನಿಗಾದ ಮೋಕ್ಷಲೋಕ ದರ್ಶನವನ್ನು ವಿವರಿಸುತ್ತಿರುವ ಶುಕಾಚಾರ್ಯರು ಹೇಳುತ್ತಾರೆ: "ಚತುರ್ಮುಖ ಬ್ರಹ್ಮ ಭಗವಂತನ ನಾಲ್ಕು-ಹದಿನಾರು-ಐದು ರೂಪಗಳನ್ನು ಕಂಡ" ಎಂದು. ಭಗವಂತನ ನಾಲ್ಕು ರೂಪಗಳು ಎಂದರೆ ಆತನ ಚತುರ್ಮೂರ್ತಿ ರೂಪಗಳು(ಆತ್ಮಾ-ಅಂತರಾತ್ಮಾ-ಜ್ಞಾನಾತ್ಮಾ-ಪರಮಾತ್ಮಾ). ಹದಿನಾರು ರೂಪಗಳು ಎಂದರೆ: ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ ರೂಪಗಳು. ಇನ್ನು ಐದು ರೂಪಗಳೆಂದರೆ ಅವು ನಮ್ಮಲ್ಲಿರುವ ಅಜ್ಞಾನವನ್ನು ನಾಶಮಾಡುವ ಭಗವಂತನ ಐದು ವಿಶಿಷ್ಟ ರೂಪಗಳು. ಅವುಗಳೆಂದರೆ: ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯುಲ್ಕ ಮತ್ತು ಸಹಸ್ರೋಲ್ಕ.

ಈ ಶ್ಲೋಕದಲ್ಲಿ ಹೇಳಿರುವ ಚತುಃಷೋಡಶಪಂಚರೂಪಗಳನ್ನು ಇನ್ನೊಂದು ವಿಧದಲ್ಲಿ ನೋಡಿದರೆ: ವಿಮಲಾ, ಉತ್ಕರ್ಷಿಣಿ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ ಎನ್ನುವ ಒಂಬತ್ತು(೫+೪) ಶಕ್ತಿ ರೂಪಗಳು ಮತ್ತು ಅಷ್ಟಸಿದ್ಧಿ ಹಾಗೂ ಅಷ್ಟಶಕ್ತಿ ರೂಪಗಳೆಂಬ ಹದಿನಾರು ರೂಪಗಳೂ ಆಗುತ್ತದೆ.( ಅಷ್ಟಸಿದ್ಧಿ ರೂಪಗಳು: ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿಃ, ಪ್ರಾಕಾಮ್ಯ, ಈಶಿತ್ವ, ವಶಿತ್ವ; ಅಷ್ಟಶಕ್ತಿರೂಪಗಳು: ಮೋಚಿಕಾ, ಸೂಕ್ಷ್ಮ, ಸೂಕ್ಷ್ಮಾಮೃತ, ಜ್ಞಾನಾಮೃತ, ಆಪ್ಯಾಯಿನಿ, ವ್ಯಾಪಿನಿ, ವ್ಯೋಮರೂಪ, ಅನಂತ). ಹೀಗೆ ಭಗವಂತನ ಅನೇಕ ರೂಪಗಳ ಸಾಕ್ಷಾತ್ ದರ್ಶನ ಚತುರ್ಮುಖನಿಗಾಗುತ್ತದೆ.

ಇಲ್ಲಿ ಶುಕಾಚಾರ್ಯರು "ಸ್ವರೂಪಾನಂದಭೂತನಾದ 'ಭಗಃ'ನನ್ನು ಚತುರ್ಮುಖ ಕಂಡ ಎಂದಿದ್ದಾರೆ. ಭಗಃ ಎನ್ನುವ ಪದಕ್ಕೆ ವಿಶೇಷ ಅರ್ಥವಿದೆ. ಮಹಾಭಾರತದಲ್ಲಿ ಹೇಳಿದಂತೆ: "*ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಶ್ರೀಹ ಜ್ಞಾನ ವೈರಾಗ್ಯ ಯೋಗಸ್ಚೈವ ಶನ್ನುಂ ಭಗಃ*". ಆರು ಗುಣಗಳನ್ನು 'ಭಗ' ಶಬ್ದ ಹೇಳುತ್ತದೆ. ಅವುಗಳೆಂದರೆ: ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ, ಜ್ಞಾನ ಮತ್ತು ವೈರಾಗ್ಯ.

೧) ಐಶ್ವರ್ಯ: ಪೂರ್ಣ ಐಶ್ವರ್ಯ ಅಂದರೆ ಸರ್ವ ಸಮರ್ಥ **(Omnipotent)**

೨) ವೀರ್ಯ: ಶತ್ರುಗಳನ್ನು, ದೋಷವನ್ನು ನಿರ್ನಾಮ ಮಾಡುವ ಶಕ್ತಿ.

೩) ಯಶಸ್ಸು: ಯಶಸ್ಸು ಎಂದರೆ ಕೀರ್ತಿ. ಭಗವಂತನ ಸರ್ವ ನಿಯಾಮಕತ್ವವನ್ನು ಎಲ್ಲರೂ ಕೀರ್ತನೆ ಮಾಡುತ್ತಾರೆ, ಅದರಿಂದ ಯಶಸ್ಸು.

೪) ಶ್ರೀ: ಶ್ರೀ ಎಂದರೆ ಸಂಪತ್ತು. ಇಡೀ ಜಗತ್ತಿನ ಸಮಸ್ತ ವಸ್ತುವು ಯಾರಿಗೆ ಸೇರಿದ್ದೋ ಅವನು ನಿಜವಾದ ಶ್ರೀ. ಈ ಬ್ರಹ್ಮಾಂಡವೇ ಅತಿದೊಡ್ಡ ಸಂಪತ್ತು.

೫) ಜ್ಞಾನ: ಜ್ಞಾನಪೂರ್ಣ, ಸರ್ವಜ್ಞ

೬) ವೈರಾಗ್ಯ: ಯಾವುದರ ಬಗ್ಗೆಯೂ 'ನನ್ನದು' ಅನ್ನುವ ಭಾವನೆ ಇಲ್ಲದಿರುವುದು.

ಈ ಆರು ಗುಣಗಳು ಪೂರ್ಣಪ್ರಮಾಣದಲ್ಲಿರುವ, ಸತ್ವ-ರಜ-ತಮೋಗುಣಗಳ ಸ್ಪರ್ಶವೇ ಇಲ್ಲದ ಭಗವಂತನನ್ನು ಚತುರ್ಮುಖ ಕಂಡ. ಭಗವಂತನ ದರ್ಶನದಿಂದ ವಿಸ್ಮಿತನಾದ ಚತುರ್ಮುಖ ರೋಮಾಂಚಕಗೊಂಡು ಭಗವಂತನ ಪಾದಗಳಿಗೆ ನಮಸ್ಕರಿಸುತ್ತಾನೆ. ಆಗ ಭಗವಂತ ಚತುರ್ಮುಖನ ಕೈ ಹಿಡಿದೆತ್ತಿ ಹೇಳುತ್ತಾನೆ: " ನನಗೆ ತಪಸ್ಸೆಂದರೆ ಬಹಳ ಇಷ್ಟ. ನಿನ್ನ ತಪಸ್ಸನ್ನು ಮೆಚ್ಚಿ ನಾನು ಬಂದೆ" ಎಂದು.

## ಸೃಷ್ಟಿ ಪೂರ್ವದಲ್ಲಿ ಚತುರ್ಮುಖನಿಗಾದ ಭಗವಂತನ ದರ್ಶನ

**ಶ್ರೀಭಗವಾನುವಾಚ--**

ಮನೀಷಿತಾನುಭಾವೋSಯಂ ಮಮ ಲೋಕಾವಲೋಕನಮ್ ।
ಯದುಪಶ್ರುತ್ಯ ರಹಸಿ ಚಕರ್ಥ ಪರಮಂ ತಪಃ ॥೨೧॥

ಪ್ರತ್ಯಾದಿಷ್ಟಂ ಮಯಾ ತತ್ರ ತ್ವಯಿ ಕರ್ಮವಿಮೋಹಿತೇ ।
ತಪೋ ಮೇ ಹೃದಯಂ ಸಾಕ್ಷಾದಾತ್ಮಾSಹಂ ತಪಸೋSನಘ ॥೨೨॥

ಸೃಜಾಮಿ ತಪಸೈವೇದಂ ಗ್ರಸಾಮಿ ತಪಸಾ ಪುನಃ ।
ಬಿಭರ್ಮಿ ತಪಸಾ ವಿಶ್ವಂ ವೀರ್ಯಂ ಮೇ ದುಸ್ತರಂ ತಪಃ ॥೨೩॥

ರೋಮಾಂಚನದಿಂದ ಆನಂದಭಾಷ್ಪ ಸುರಿಸುತ್ತಿರುವ ಚತುರ್ಮುಖನನ್ನು ಕುರಿತು ಭಗವಂತ ಹೇಳುತ್ತಾನೆ: "ಇದೆಲ್ಲವೂ ನಿನ್ನ ತಪಸ್ಸಿನ(ಆಳವಾದ ಚಿಂತನೆಯ) ಫಲ. ನನಗೆ ಅತ್ಯಂತ ಪ್ರಿಯವಾದುದು 'ತಪಸ್ಸು'. 'ತಪ' ಎನ್ನುವ ಎರಡಕ್ಷರ ಕಿವಿಯ ಮೇಲೆ ಬಿದ್ದ ತಕ್ಷಣ ನೀನು ಆಳವಾದ ಚಿಂತನೆಯಲ್ಲಿ ತೊಡಗಿದೆ. ಅದರ ಫಲವಾಗಿ ನಿನಗೆ ನನ್ನ ಮತ್ತು ನನ್ನ ಲೋಕದ ದರ್ಶನವಾಯಿತು" ಎಂದು. ಭಗವಂತನ ಈ ಮಾತಿನಿಂದ ನಮಗೆ ತಿಳಿಯುವುದೇನೆಂದರೆ: ಎಲ್ಲಾ ಸಾಧನೆಗಿಂತ ಶ್ರೇಷ್ಠ ಸಾಧನೆ 'ಆಳವಾದ ಚಿಂತನೆ' ಎನ್ನುವ ಸತ್ಯ. ಚಿಂತನೆ ಇಲ್ಲದ ಕರ್ಮ ವ್ಯರ್ಥ. ಸತ್ಯದ ಸಾಕ್ಷಾತ್ಕಾರವಾಗಲು ಅಂತರಂಗದ ಚಿಂತನೆ(ತಪಸ್ಸು) ಅತ್ಯಗತ್ಯ. ಕೇವಲ ತೀರ್ಥಯಾತ್ರೆ ಅಥವಾ ಪಾರಾಯಣ ಮಾಡುವುದರಿಂದ ಭಗವಂತನನ್ನು ಕಾಣುವುದು ಸಾಧ್ಯವಿಲ್ಲ. ನಾವು ನಮ್ಮ ಪಾರಾಯಣದ ಜೊತೆಗೆ ಆಳವಾದ ಚಿಂತನೆಯನ್ನು ನಮ್ಮ ಜೀವನದ ಗುರಿಯಾಗಿಸಿಕೊಂಡು ಸಾಧನೆ ಮಾಡಬೇಕು. ಇದರಿಂದ ಶೀಘ್ರ ಭಗವಂತನ ಅನುಗ್ರಹಕ್ಕೆ ಪಾತ್ರರಾಗಬಹುದು. ಅಂತರಂಗದಲ್ಲಿ ಜ್ಞಾನದ ಆಳಕ್ಕೆ ಇಳಿದಷ್ಟೂ ನಾವು ಭಗವಂತನಿಗೆ ಹತ್ತಿರವಾಗುತ್ತೇವೆ. ಹೀಗಾಗಿ ಪಾಪನಾಶಕ್ಕೆ ಅತ್ಯಂತ ಪರಿಣಾಮಕಾರಿ ವಿಧಾನ ಜ್ಞಾನಸಾಧನೆ. [ಇಲ್ಲಿ ಭಗವಂತ ಚತುರ್ಮುಖನನ್ನು 'ಅನಘ' ಎಂದು ಸಂಬೋಧಿಸಿರುವುದನ್ನು ನಾವು ಕಾಣುತ್ತೇವೆ. ಅನಘ ಎಂದರೆ ಪಾಪದ ಲೇಪವೇ ಇಲ್ಲದವನು ಎಂದರ್ಥ].

"ನಿನಗೆ 'ತಪ' ಎನ್ನುವ ಎರಡಕ್ಷರವನ್ನು ಕೇಳಿಸಿದವನು ನಾನು. ಅದನ್ನು ನೀನು ತಕ್ಷಣ ಪಾಲಿಸಿದೆ. ನಿನ್ನ ಸಾಧನೆ ಪ್ರಶಂಸನೀಯ" ಎಂದು ಚತುರ್ಮುಖನನ್ನು ಶ್ಲಾಘಿಸುತ್ತಾನೆ ಭಗವಂತ. ಯಾವಾಗಲೂ ಭಗವದನುಗ್ರಹವಾಗುವುದು ಹೀಗೆಯೇ. ಭಗವಂತ ಮೊದಲು ಕಾಣಿಸಿಕೊಳ್ಳುವುದಿಲ್ಲ. ಬದಲಿಗೆ ಆತನಿಂದ ಸಂದೇಶ ಬರುತ್ತದೆ. ತನ್ನ ಕರ್ತವ್ಯ ಏನು ಎಂದರಿಯದೇ ಗೊಂದಲಕ್ಕೊಳಗಾಗಿದ್ದ ಚತುರ್ಮುಖನಿಗೆ ಭಗವಂತನಿಂದ ಸೂಕ್ಷ್ಮ ಸಂದೇಶ ಬಂತು. ಆತ ಅದನ್ನು ಗಂಭೀರವಾಗಿ ಪರಿಗಣಿಸಿ ಪಾಲಿಸಿದ. ಹೀಗಾಗಿ ಆತನಿಗೆ ಮೋಕ್ಷಲೋಕ ಮತ್ತು ಭಗವಂತನ ದರ್ಶನ ಭಾಗ್ಯ ದೊರೆಯಿತು. [ನಾರದರಿಗೆ ಭಗವದನುಗ್ರಹವಾಗಿರುವುದು ಕೂಡಾ ಇದೇ ರೀತಿ. ಈ ಕುರಿತ ವಿವರಣೆಯನ್ನು ನಾವು ಈಗಾಗಲೇ ಮೊದಲ ಸ್ಕಂಧದ ಐದನೇ ಅಧ್ಯಾಯದಲ್ಲಿ ನೋಡಿದ್ದೇವೆ).

ಭಗವಂತ ಹೇಳುತ್ತಾನೆ: "ಜ್ಞಾನಸ್ವರೂಪನಾದ ನಾನು ಸೃಷ್ಟಿ-ಸ್ಥಿತಿ-ಸಂಹಾರ ಎಲ್ಲವನ್ನೂ ತಪಸ್ಸಿನಿಂದಲೇ ಮಾಡುತ್ತೇನೆ" ಎಂದು. ಭಗವಂತನ ಸಮಸ್ತ ಕ್ರಿಯೆಯ ಹಿಂದಿರುವುದು ಜ್ಞಾನಶಕ್ತಿ . ಅಂತಹ ಅಗಾಧವಾದ ಜ್ಞಾನ-ಸಾಮರ್ಥ್ಯದ ಎತ್ತರಕ್ಕೆ ಏರಲು ಯಾರಿಂದಲೂ ಸಾಧ್ಯವಿಲ್ಲ. ಹೀಗಾಗಿ ಜ್ಞಾನಮೂರ್ತಿಯಾದ ಭಗವಂತನನ್ನು ಸೇರಲು ಮುಖ್ಯ ಸಾಧನವೂ ಜ್ಞಾನವೇ. ಆದ್ದರಿಂದ ನಾವು ಯಾವುದೇ ಕಾರ್ಯವನ್ನು ಮಾಡುವುದಿದ್ದರೂ ಕೂಡಾ ಅದನ್ನು ತಿಳಿದು ಮಾಡಬೇಕು. ಜ್ಞಾನವನ್ನು ನಿರಾಕರಿಸಿ ಮಾಡುವ ಮೂಢ ಆಚರಣೆಯಿಂದ ಜ್ಞಾನದ ರಾಶಿಯಾದ ಭಗವಂತನನ್ನು ಸೇರಲು ಸಾಧ್ಯವಿಲ್ಲ.

# ಭಗವಂತ ಚತುರ್ಮುಖನಿಗೆ ಉಪದೇಶಿಸಿದ ಚತುಃಶ್ಲೋಕೀ ಮೂಲಭಾಗವತ

**ಶ್ರೀಭಗವಾನುವಾಚ--**

ಜ್ಞಾನಂ ಪರಮಗುಹ್ಯಂ ಮೇ ಯದ್ ವಿಜ್ಞಾನಸಮನ್ವಿತಮ್ ।
ಸರಹಸ್ಯಂ ತದಂಗಂ ಚ ಗೃಹಾಣ ಗದಿತಂ ಮಯಾ ॥೩೦॥

ಯಾವಾನಹಂ ಯಥಾಭಾವೋ ಯದ್ರೂಪಗುಣಕರ್ಮಕಃ ।
ತಥೈವ ತತ್ತ್ವವಿಜ್ಞಾನಮಸ್ತು ತೇ ಮದನುಗ್ರಹಾತ್ ॥೩೧॥

ನಾವಿಲ್ಲಿ ನೋಡುತ್ತಿರುವುದು ಸೃಷ್ಟಿಯ ಮೊದಲ ಜೀವನಾದ ಚತುರ್ಮುಖನ ಸೃಷ್ಟಿಯ ನಂತರ ನಡೆದ ಭಗವಂತ ಮತ್ತು ಚತುರ್ಮುಖನ ನಡುವಿನ ಸಂಭಾಷಣೆಯನ್ನು. ಈ ಹಿಂದೆ ಹೇಳಿದಂತೆ ಚತುರ್ಮುಖ ಭಗವಂತನ ಮೊದಲ ಮಗ. ಆತನನ್ನು ಆದಿಜೀವ, ಹಿರಣ್ಯಗರ್ಭ, ವಿರಾಟಪುರುಷ, ಇತ್ಯಾದಿಯಾಗಿ ಶಾಸ್ತ್ರಗಳಲ್ಲಿ ಕರೆದಿದ್ದಾರೆ. ಚತುರ್ಮುಖನನ್ನು ಸೃಷ್ಟಿ ಮಾಡಿದ ಭಗವಂತ ಆತನಿಗೆ ದರ್ಶನ ಕೊಟ್ಟು ಉಪದೇಶ ನೀಡಿದ. ಈಗಾಗಲೇ ಹೇಳಿರುವಂತೆ: ಇಂದು ನಾವು ಯಾವುದನ್ನು ವ್ಯಾಸ ರಚಿತ ಭಾಗವತ ಎಂದು ಅಧ್ಯಯನ ಮಾಡುತ್ತಿದ್ದೇವೆ, ಅದು ಮೂಲತಃ ಸೃಷ್ಟಿಯ ಆರಂಭದಲ್ಲಿ ಭಗವಂತ ಚತುರ್ಮುಖನಿಗೆ ನೀಡಿದ ಉಪದೇಶ.

"ಅತ್ಯಂತ ರಹಸ್ಯವಾದ ಜ್ಞಾನ ಮತ್ತು ವಿಜ್ಞಾನವನ್ನು ನಾನು ನಿನಗೆ ಹೇಳುತ್ತಿದ್ದೇನೆ " ಎಂದಿದ್ದಾನೆ ಭಗವಂತ. ಇಲ್ಲಿ ಬಳಸಿರುವ 'ವಿಜ್ಞಾನ' ಪದದ ಅರ್ಥವನ್ನು ನಾವು ಗೀತೆಯಲ್ಲಿ ಕಾಣಬಹುದು. ***ಜ್ಞಾನಂ ತೇSಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ (೭-೨).*** ಜ್ಞಾನ ವಿಜ್ಞಾನವಾದಾಗಲೇ ಅದು ಸಮಗ್ರವಾಗುವುದು. ವಿಜ್ಞಾನ ಅಂದರೆ ವಿ+ಜ್ಞಾನ. ಇಲ್ಲಿ 'ವಿ' ಉಪಸರ್ಗ. ಅದು ವಿಲಕ್ಷಣವಾದ, ವಿಶಿಷ್ಟವಾದ, ವಿಶೇಷವಾದ, ಇತ್ಯಾದಿ ಅರ್ಥವನ್ನು ಕೊಡುತ್ತದೆ. ಒಂದು ವಿಷಯವನ್ನು ತಳಸ್ಪರ್ಶಿಯಾಗಿ ತಿಳಿಯುವುದು ವಿಜ್ಞಾನ. ಒಬ್ಬನ ವಿಜ್ಞಾನ ಇನ್ನೊಬ್ಬನ ವಿಜ್ಞಾನವಾಗಬೇಕೆಂದೇನೂ ಇಲ್ಲ. ವಾಮನಪುರಾಣದಲ್ಲಿ ಹೇಳುವಂತೆ: ***ಯೇನ ಯೇನ ಯಥಾ ಜ್ಞಾತ್ವಾ ನಿಯತಂ ಮುಕ್ತಿರಾಪ್ಯತೇ । ತದ್ ವಿಜ್ಞಾನಮಿತಿ ಪ್ರೋಕ್ತಂ, ಜ್ಞಾನಂ ಸಾಧಾರಣಂ ಸ್ಮೃತಂ ॥*** ಯಾವ ನಿಶ್ಚಿತವಾದ ಜ್ಞಾನದಿಂದ ಒಬ್ಬ ವ್ಯಕ್ತಿಗೆ ಮೋಕ್ಷ ಪ್ರಾಪ್ತಿಯಾಗುವುದೋ ಅದು ಆತನ 'ವಿಜ್ಞಾನ'ವೆನಿಸುತ್ತದೆ. ಭಗವಂತನ ಮಹಿಮೆಯನ್ನು ಮತ್ತು ಆಯಾ ಮೋಕ್ಷ ಸಾಧಕರ ಯೋಗ್ಯತೆಗನುಗುಣವಾದ ಉಪಾಸನೆಯ ಭಗವಂತನ ವಿಶೇಷ ಗುಣಗಳನ್ನು ಉಪನಿಷತ್ತಿನಲ್ಲಿ ಹೇಳಲಾಗಿದೆ. "ಅಂತಹ ಪರಮಗುಹ್ಯವಾದ ವಿಜ್ಞಾನವನ್ನು ನಾನು ನಿನಗೆ ಹೇಳುತ್ತೇನೆ" ಎಂದಿದ್ದಾನೆ ಭಗವಂತ.

ಭಗವಂತ ಚತುರ್ಮುಖನಿಗೆ ನೀಡಿದ ಸಮಸ್ತ ಶಾಸ್ತ್ರದ ಪ್ರಮೇಯವನ್ನು ಮುಂದಿನ ನಾಲ್ಕು ಶ್ಲೋಕಗಳು (ಚತುಃಶ್ಲೋಕೀ ಮೂಲಭಾಗವತ)ವಿವರಿಸುತ್ತವೆ. ಈ ಶ್ಲೋಕಗಳು ಭಾಗವತದ ಸಾರವಾಗಿದ್ದು, ಇವು ನಾವು ಎಷ್ಟು ಬಗೆಯಿಂದ ಚಿಂತನೆ ಮಾಡಿದರೂ ಅಷ್ಟು ಬಗೆಯಿಂದ ತೆರೆದುಕೊಳ್ಳುವಂತಹ ಅಪೂರ್ವ ಶ್ಲೋಕಗಳಾಗಿವೆ.

ಅಹಮೇವಾಸಮಗ್ರೇ ಚ ನಾನ್ಯದ್ ಯತ್ ಸದಸತ್ ಪರಮ್ ।
ಪಶ್ಚಾದಹಂ ತ್ವಮೇತಚ್ಚ ಯೋSವಶಿಷ್ಯೇತ ಸೋSಸ್ಮ್ಯಹಮ್ ॥೩೨॥

“ಸೃಷ್ಟಿಗೂ ಮುನ್ನ ಯಾರೂ ಇಲ್ಲದೇ ಇದ್ದಾಗ ನಾನಿದ್ದೆ(ಸ್ವತಂತ್ರನಾಗಿದ್ದೆ). ಮುಂದೆ ಪ್ರಳಯವಾಗಿ ಈ ಸೃಷ್ಟಿ ನಾಶವಾದಾಗಲೂ ನಾನಿರುತ್ತೇನೆ(ಸ್ವತಂತ್ರನಾಗಿರುವವನು ನಾನು) . ಈ ನಡುವಿನ ಸ್ಥಿತಿ ಕಾಲದಲ್ಲಿ, ಇದೀಗ ನನ್ನೊಂದಿಗೆ ನೀನು, ಮುಂದೆ ಸೃಷ್ಟಿ ವಿಸ್ತಾರವಾದಾಗ ಇತರ ಜೀವಗಳೂ ಇರುತ್ತಾರೆ(ಸ್ಥಿತಿ ಕಾಲದಲ್ಲೂ ನಾನೊಬ್ಬನೇ ಸ್ವತಂತ್ರ. ಇನ್ನಾವುದೂ ಸ್ವತಂತ್ರವಲ್ಲ.)” ಎಂದಿದ್ದಾನೆ ಭಗವಂತ. ಭಗವಂತನ ಈ ಮಾತಿನ ಅರ್ಥ: ಸೃಷ್ಟಿಗೂ ಮುನ್ನ ಮತ್ತು ಪ್ರಳಯದ ನಂತರ ಯಾವ ಜೀವರೂ ಇರುವುದಿಲ್ಲ ಎಂದಲ್ಲ. ಈಗಾಗಲೇ ಅನೇಕ ಬಾರಿ ಹೇಳಿರುವಂತೆ: ಜೀವರೂ ಕೂಡಾ ಅನಾದಿನಿತ್ಯರು. ಆದರೆ ಅವರು ಸೃಷ್ಟಿಗೂ ಮುನ್ನ ಮತ್ತು ಪ್ರಳಯದ ನಂತರ ಸುಪ್ತಾವಸ್ಥೆಯಲ್ಲಿರುತ್ತಾರೆ. ಸ್ಥಿತಿಕಾಲದಲ್ಲಿ ಜೀವರಿಗೆ ಇರವಿನ ಅರಿವು ಹುಟ್ಟುತ್ತದೆ. ಆದರೆ ಜೊತೆಗೆ ‘ತಾನು ಸ್ವತಂತ್ರ’ ಎನ್ನುವ ಭ್ರಮೆಯೂ(ಅಜ್ಞಾನವೂ) ಹುಟ್ಟುತ್ತದೆ. ಆದರೆ ಸಮಸ್ತ ಕಾಲದಲ್ಲೂ ಭಗವಂತನೊಬ್ಬನೇ ಸ್ವತಂತ್ರ ಮತ್ತು ಇತರ ಎಲ್ಲವೂ ಆತನ ಅಧೀನವಾಗಿರುತ್ತದೆ.

ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಈ ಮೇಲಿನ ಮಾತನ್ನು ಬ್ರಹ್ಮತರ್ಕದ ಪ್ರಮಾಣ ಶ್ಲೋಕಗಳೊಂದಿಗೆ ಈ ರೀತಿ ವಿವರಿಸಿದ್ದಾರೆ:

*ಪರಂ ಸ್ವತಂತ್ರಂ ನ ।*

*ವಿಷ್ಣೋರಧೀನಂ ಪ್ರಾಕ್ ಸೃಷ್ಟೇ ಸ್ತಥೈವ ಚ ಲಯಾದನು ।*
*ಅಸ್ಯ ಸತ್ತ್ವ ಪ್ರವೃತ್ತ್ಯಾದಿ ವಿಶೇಷೇಣಾಧಿಗಮ್ಯತೇ ।*
*ಸ್ವಾತಂತ್ರ್ಯಂ ಸ್ಥಿತಿಕಾಲೇ ತು ಕಥಂಚಿದ್ ಬುದ್ಧಿಮೋಹತಃ ।*
*ಪ್ರತೀಯಮಾನಮಪಿ ತು ತಸ್ಮಾನ್ನೈವೇತಿ ಗಮ್ಯತಾಮ್ ।*
*ಜನಿಷ್ಯೇSಹಂ ಲಯಿಷ್ಯೇSಹಮಿತಿ ನ ಹ್ಯಭಿಸಂಧಿತಃ ।*
*ಅತೋ ಜೀವನಮಪ್ಯೇತದ್ ಭವೇದೀಶಾಭಿಸಂಧಿತಮ್ ।*
*ಅತಃ ಸ್ವರೂಪಭೇದೇSಪಿ ಹ್ಯಾತ್ಮೈವೇದಮಿತಿ ಶ್ರುತಿಃ ।*
*ವದತ್ಯಸ್ಯೇಶತಂತ್ರತ್ವಾದ್ ಯಥಾSಶಕ್ತಸ್ಯ ಸನ್ನಿತಿ ।*
*ವಿದ್ಯಂತೇ ಹಿ ತದಾ ಜೀವಾಃ ಕಾಲಕರ್ಮಾದಿಕಂ ತಥಾ ।*
*ಕ್ವಾನ್ಯಥಾ ಹಿ ಪುನಃ ಸೃಷ್ಟಿಃ ಪೂರ್ವಕರ್ಮಾನುಸಾರಿಣೀ ॥*

*ಇತಿ ಬ್ರಹ್ಮ ತರ್ಕೇ । ತ್ವಮೇತಚ್ಚ ಪರಂ ನ ಭವತಿ । ಸ್ವತಂತ್ರಂ ನ ॥*

ಸೃಷ್ಟಿಪೂರ್ವ ಮತ್ತು ಲಯಕಾಲದಲ್ಲಿ ಭಗವಂತನೊಬ್ಬನೇ ಸ್ವತಂತ್ರ. ಸ್ಥಿತಿಕಾಲದಲ್ಲಿ ಜೀವರಿಗೆ ಸ್ವತಂತ್ರಾನುಭವ ಕೇವಲ ಅಜ್ಞಾನದಿಂದ ಬರುವ ಭ್ರಮೆ. ಹೀಗಾಗಿ ಎಲ್ಲಾ ಕಾಲದಲ್ಲೂ ಜೀವ, ಪ್ರಕೃತಿ, ಈ ಪ್ರಪಂಚ, ಎಲ್ಲವೂ ಆ ಭಗವಂತನ ಅಧೀನ.

**ಋತೇSರ್ಥಂ ಯತ್ಪ್ರತೀಯೇತ ನ ಪ್ರತೀಯೇತ ಚಾತ್ಮನಿ ।**
**ತದ್ ವಿದ್ಯಾದಾತ್ಮನೋ ಮಾಯಾಂ ಯಥಾಭಾಸೋ ಯಥಾತಮಃ ॥೩೩॥**

ಪ್ರಕೃತಿ ನಿರ್ಮಿತ ಪ್ರಪಂಚದಲ್ಲಿರುವ ನಾವು ಆ ಭಗವಂತನ 'ಪ್ರತಿಬಿಂಬ'. ಆದರೆ ಅದರ ಎಚ್ಚರ ನಮಗಿರುವುದಿಲ್ಲ. ನಮ್ಮನ್ನಾವರಿಸಿರುವ ಅಜ್ಞಾನದಿಂದಾಗಿ 'ಯಥಾರ್ಥ' ಮುಚ್ಚಿಹೋಗಿರುತ್ತದೆ. ಈ ಜಗತ್ತು, ಈ ಮಾಯೆ, ಎಲ್ಲವೂ ಭಗವಂತನಲ್ಲಿದೆ. ಆದರೆ ಅದರಿಂದಾಗಿ ಅವನಿಗೇನೂ ಪ್ರಯೋಜನವಾಗಬೇಕಿಲ್ಲ, ಆಗುವುದೂ ಇಲ್ಲ. ಸೃಷ್ಟಿಪೂರ್ವದಲ್ಲಿ ಅನಾದಿನಿತ್ಯರಾದ ಜೀವರು ಇದ್ದರೂ ಕೂಡಾ ಅವರಿಗೆ ಯಾವುದೇ ಪ್ರೇರಕತ್ವವಾಗಲೀ, ಇರವಿನ ಅರಿವಾಗಲೀ ಇರುವುದಿಲ್ಲ. ಈ ಕಾಲದಲ್ಲಿ ಪ್ರಕೃತಿಗೆ ಬಂಧಕತ್ವವಿರುವುದಿಲ್ಲ, ತ್ರಿಗುಣಗಳಲ್ಲಿ ಕಂಪನವಿರುವುದಿಲ್ಲ. ಇಂತಹ ಸ್ಥಿತಿಯಲ್ಲಿ ಎಲ್ಲವೂ ನಿಷ್ಕ್ರೀಯವಾಗಿ ಭಗವಂತನಲ್ಲಿರುತ್ತದೆ. ಸೃಷ್ಟಿ ಕಾಲದಲ್ಲಿ ಭಗವಂತನ ಇಚ್ಛೆಯಂತೆ ನಿಷ್ಕಂಪನದಲ್ಲಿ ಕಂಪನ ಆರಂಭವಾಗಿ ನಾದ ಹುಟ್ಟುತ್ತದೆ. ನಾದದಿಂದ ರೂಪ ಹುಟ್ಟುತ್ತದೆ. ಈ ಸ್ಪಂದನದಿಂದ ಜಗತ್ತಿನ ಸೃಷ್ಟಿಯಾಗುತ್ತದೆ. ಸುಪ್ತಾವಸ್ಥೆಯಲ್ಲಿ ಭಗವಂತನಲ್ಲಿ ಇದ್ದೂ ಇಲ್ಲದಂತೆ ಇದ್ದ ಎಲ್ಲವುದಕ್ಕೂ ಸೃಷ್ಟಿಯಾದಾಗ ಒಂದು ಅರ್ಥ ಬರುತ್ತದೆ. ಸೃಷ್ಟಿ ರಚನೆಯಾದಾಗ ಮಾಯೆಯಲ್ಲಿ ಚಟುವಟಿಕೆ ಪ್ರಾರಂಭವಾಗುತ್ತದೆ. ಇವೆಲ್ಲವೂ ಭಗವಂತನ ಇಚ್ಛೆಯಂತೆ ಗಣಿತಬದ್ಧವಾಗಿ ನಡೆಯುತ್ತದೆ. ಭಗವಂತನ ಈ ವಿಶ್ವಗಣಿತವನ್ನು ಅರಿಯುವ ಶಕ್ತಿ ಸಾಮಾನ್ಯ ಜೀವರಿಗಿರುವುದಿಲ್ಲ. ಇವೆಲ್ಲವನ್ನೂ ಭಗವಂತ ನಮ್ಮ ಮೇಲಿನ ಕಾರುಣ್ಯದಿಂದ ಮಾಡುತ್ತಾನೆಯೇ ಹೊರತು ಆತನಿಗೆ ಇದರಿಂದ ಯಾವ ಉಪಯೋಗವೂ ಇಲ್ಲ.

ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಈ ಮೇಲಿನ ಮಾತನ್ನು ಪ್ರಮಾಣ ಸಹಿತ ಈರೀತಿ ವಿವರಿಸಿದ್ದಾರೆ:

*ಅರ್ಥವದಿವ ಪ್ರತೀಯತೇ । ನ ಚ ಪರಮಾತ್ಮನ್ಯರ್ಥವತ್ ಪ್ರತೀಯತೇ ।*
*ಅರ್ಥಂ ಪ್ರಯೋಜನಮೃತೇ । ನಹಿ ಜೀವ ಪ್ರಕೃತಿಭ್ಯಾಮೀಶ್ವರಸ್ಯಾರ್ಥಃ ।*
*ಮುಖ್ಯತೋ ವಿಷ್ಣುಶಕ್ತಿರ್ಹಿ ಮಾಯಾಶಬ್ದೇನ ಭಣ್ಯತೇ ।*
*ಉಪಚಾರತಸ್ತು ಪ್ರಕೃತಿರ್ಜೀವಶ್ಚೈವ ಹಿ ಭಣ್ಯತೇ । ಇತಿ ಚ ।*
*ಯಥಾ**SS**ಭಾಸೋ ಜೀವಃ ।*
*ಸರ್ವಂ ಪರೇ ಸ್ಥಿತಮಪಿ ನೈವ ತತ್ರೇತಿ ಭಣ್ಯತೇ ।*
*ಯತೋ ಹರೇರ್ನ ಜೀವೇನ ಜೀವನಂ ನ ಹರೌ ತತಃ* |
*ಜೀವಃ ಪ್ರಕೃತಿರಪ್ಯತ್ರ ಯತೋ ನೈವ ಹಿ ಬಂಧಕೃತ್ ।*
*ಕರ್ಮ ಚಾಫಲದಾತೃತ್ವಾತ್ ಕಾಲಶ್ಚಾಪರಿಣಾಮನಾತ್ ।*
*ಯಥಾ ಛತ್ರಧಾರಾದ್ಯಾಸ್ತು ರಥಸ್ಥಾ ಅಪಿ ಸರ್ವಶಃ ।*
*ರಥಿನೋ ನೈವ ಭಣ್ಯಂತೇ ಏವಂ ಹರಿಗತಾ ಅಪಿ ।*

ಭಗವಂತನಿಗೆ ಜೀವ ಮತ್ತು ಪ್ರಕೃತಿಯಿಂದ ಯಾವುದೇ ಪ್ರಯೋಜನ ಇಲ್ಲ. [ಹಾಗೇನಾದರೂ ಇರುವುದಾದರೆ ಆತ ಪರಮಾತ್ಮ ಎನಿಸುತ್ತಾನೆಯೇ?]. ಭಗವಂತನ ಇಚ್ಛೆಯಂತೆ ಆತನಿಗೆ ಅಧೀನವಾಗಿರುವ ಜೀವ, ಪ್ರಕೃತಿ, ಮುಂತಾದವುಗಳು ಭಗವಂತನ ಮಾಯೆ ಎನಿಸುತ್ತವೆ. [ಸಂಸ್ಕೃತದಲ್ಲಿ 'ಮಾಯಾ' ಶಬ್ದಕ್ಕೆ ಅನೇಕ ಅರ್ಥಗಳಿವೆ. ಮುಖ್ಯವಾಗಿ ಭಗವಂತನ ಇಚ್ಛೆ, ಜ್ಞಾನ ಮತ್ತು ಮಹಿಮೆ ಆತನ ಸ್ವರೂಪಭೂತವಾದ ಮಾಯೆ ಎನಿಸುತ್ತದೆ. ಇನ್ನು ಭಗವಂತನ ಅಧೀನವಾಗಿರುವ ಪ್ರಕೃತಿ ಮಾಯೆ. ಜಡಪ್ರಕೃತಿಯನ್ನು ಕೂಡಾ ಮಾಯೆ ಎನ್ನುತ್ತಾರೆ]. ಬ್ರಹ್ಮತರ್ಕದಲ್ಲಿ

ಹೇಳಿರುವಂತೆ: ಪ್ರಪಂಚ ಭಗವಂತನಲ್ಲಿದ್ದರೂ ಕೂಡಾ ಅದರಿಂದ ಆತನಿಗೆ ಯಾವುದೇ ಪ್ರಯೋಜನ ಇಲ್ಲವಾದ್ದರಿಂದ ಅದು 'ಅವನಲ್ಲಿ ಇಲ್ಲಾ' ಎನಿಸುತ್ತದೆ. ಹೇಗೆ ಛತ್ರಧಾರಿಗಳ ಇರುವಿಕೆಗೂ ರಥದ ಚಲನೆಗೂ ಸಂಬಂಧವಿರುವುದಿಲ್ಲವೋ ಹಾಗೇ, ಭಗವಂತನಿಗೆ ಜೀವನಿಂದ ಜೀವನವಾಗಲೀ, ಪ್ರಕೃತಿಯಿಂದ ಬಂಧನವಾಗಲೀ, ಕರ್ಮದಿಂದ ಫಲವಾಗಲೀ, ಕಾಲದಿಂದಾಗಿ ವಿಕಾರವಾಗಲೀ ಉಂಟಾಗುವುದಿಲ್ಲ. ಈ ಕಾರಣದಿಂದ ಜೀವ-ಪ್ರಕೃತಿ-ಕರ್ಮ-ಕಾಲಗಳು ಭಗವಂತನಲ್ಲಿದ್ದರೂ ಕೂಡಾ 'ಇಲ್ಲಾ' ಎನಿಸುತ್ತವೆ.

ಯಥಾ ಮಹಾಂತಿ ಭೂತಾನಿ ಭೂತೇಷೂಚ್ಚಾವಚೇಷು ಚ ।
ಪ್ರವಿಷ್ಟಾನ್ಯಪ್ರವಿಷ್ಟಾನಿ ತಥಾ ತೇಷು ನ ತೇಷ್ವಹಮ್ ॥೩೪॥

"ಹೇಗೆ ಪಂಚಮಹಾಭೂತಗಳು ಪ್ರತಿಯೊಂದು ವಸ್ತುವಿನ ಒಳಗೂ ಇದ್ದು ಹೊರಗೂ ವ್ಯಾಪಿಸಿವೆಯೋ, ಹಾಗೇ ನಾನೂ ಕೂಡಾ ಎಲ್ಲರ ಒಳಗೆ ಅಂತರ್ಯಾಮಿಯಾಗಿದ್ದೂ ಕೂಡಾ ಎಲ್ಲವುದರ ಹೊರಗೂ ಇದ್ದೇನೆ" ಎಂದಿದ್ದಾನೆ ಭಗವಂತ. ಅಂದರೆ ಭಗವಂತ ಎಲ್ಲವುದರಲ್ಲೂ ಇದ್ದಾನೆ ಆದರೆ ಯಾವುದರಲ್ಲೂ ಇಲ್ಲ. ಇದನ್ನು ಬ್ರಹ್ಮತರ್ಕ ಈ ರೀತಿ ವಿವರಿಸುತ್ತದೆ:*ಯಥಾ ಮಹಾನ್ತಿ ಭೂತಾನಿ ಶರೀರೇಷು ಬಹಿಸ್ತಥಾ । ಏವಂ ಹರಿಶ್ಚ ಭೂತೇಷು ಬಹಿಶ್ಚವ್ಯಾಪ್ತಿಹೇತುತಃ । ತಸ್ಮಾತ್ ತತ್ಸ್ಥೋ ನ ತತ್ಸ್ಥಶ್ಚಪ್ರೋಚ್ಯತೇ ಹರಿರೀಶ್ವರಃ' ಇತಿ ಚ ॥* :ಹೇಗೆ ಮಹಾಭೂತಗಳು ಶರೀರದ ಒಳಗೂ ಹೊರಗೂ ಇವೆಯೋ, ಹಾಗೇ ಭಗವಂತ ಎಲ್ಲಾ ಜೀವ-ಜಡಗಳಲ್ಲಿ ಒಳಗೂ ಹೊರಗೂ ವ್ಯಾಪಿಸಿರುವುದರಿಂದ ಅವುಗಳಲ್ಲಿ ಇರುವನೆಂಬುದೂ ಸತ್ಯ, ಇಲ್ಲವೆಂಬುದೂ ಸತ್ಯ.

ಏತಾವದೇವ ಜಿಜ್ಞಾಸ್ಯಂ ತತ್ತ್ವಜಿಜ್ಞಾಸುನಾ**SS**ತ್ಮನಃ ।
ಅನ್ವಯವ್ಯತಿರೇಕಾಭ್ಯಾಂ ಯತ್ ಸ್ಯಾತ್ ಸರ್ವತ್ರ ಸರ್ವದಾ ॥೩೫॥

ಈ ಹಿಂದೆ ಹೇಳಿದ ಮಾತಿನ ಹಿಂದೆ ಗಾಢವಾದ ತತ್ತ್ವವಿಜ್ಞಾನವಿದೆ. ಆದರೆ ಭಗವಂತನ ಯಥಾವತ್ತಾದ ಅರಿವು ಬೇಕು ಎನ್ನುವವರು ಇಷ್ಟು ವಿಷಯಗಳನ್ನು ಅರಿತಿರಬೇಕು: ಭಗವಂತ 'ಅನ್ವಯ' ಮತ್ತು 'ಅತಿರೇಕ'. ಅಂದರೆ ಆತ ಪ್ರಪಂಚ ಇರುವಾಗಲೂ, ಇಲ್ಲದೇ ಇರುವಾಗಲೂ ಇರುವವನು. ಎಲ್ಲಾ ಕಾಲ-ದೇಶಗಳಲ್ಲಿ, ಈ ಪ್ರಪಂಚ ಇರಲೀ, ಇಲ್ಲದೇ ಇರಲೀ, ಯಾರು ಸದಾ ಸ್ವತಂತ್ರನಾಗಿರುತ್ತಾನೋ ಆತನೇ 'ದೇವರು'. ಪ್ರಪಂಚದಲ್ಲಿ ಯಾವುದೂ ಶಾಶ್ವತವಲ್ಲ. ಜೀವ-ಜಡಗಳು ರೂಪವನ್ನು ಪಡೆದು ವ್ಯಕ್ತವಾಗುತ್ತವೆ, ರೂಪ ನಾಶವಾಗಿ ಪರಮಾಣುವಾಗಿ ಅವ್ಯಕ್ತವಾಗುತ್ತವೆ. ಆದರೆ ಎಲ್ಲಾ ದೇಶ-ಕಾಲದಲ್ಲಿ ನಾಶವಾಗದೇ ಉಳಿಯುವ ಏಕಮಾತ್ರ ತತ್ತ್ವ ಆ ಭಗವಂತ.
ಈ ರೀತಿ ಚತುರ್ಮುಖನಿಗೆ ಉಪದೇಶ ನೀಡಿದ ಭಗವಂತ: "ನಿನಗೆ ಸತ್ಯವನ್ನು ಹೇಳಿದ್ದೇನೆ. ಸೃಷ್ಟಿಯ ರಹಸ್ಯ ನಿನಗೀಗ ತಿಳಿಯಿತು. ಇನ್ನು ನೀನು ಸೃಷ್ಟಿ ಕಾರ್ಯವನ್ನು ಮುಂದುವರಿಸು" ಎಂದು ಹೇಳಿ ಅದೃಶ್ಯನಾಗುತ್ತಾನೆ.

ಅಂತರ್ಹಿತೇಂದ್ರಿಯಾರ್ಥಾಯ ಹರಯೇ**S**ವಹಿತಾಂಜಲಿಃ ।
ಸರ್ವಭೂತಮಯೋ ವಿಶ್ವಂ ಸಸರ್ಜೇದಂ ಸ ಪೂರ್ವವತ್ ॥೩೮॥

ಹೊರಗಣ್ಣಿಗೆ ಕಾಣುವ ರೂಪವನ್ನು ಭಗವಂತ ಅಂತರ್ಧಾನಗೊಳಿಸಿದಾಗ, ಸರ್ವಭೂತಮಯನಾದ ಚತುರ್ಮುಖ ಬ್ರಹ್ಮ ಭಗವಂತನಿಗೆ ನಮಸ್ಕರಿಸಿ, ಭಗವಂತನ ಇಚ್ಛೆಗನುಗುಣವಾಗಿ, ಪೂರ್ವಕಲ್ಪದಂತೆಯೇ ಸಮಸ್ತ ಜಗತ್ತನ್ನು ಸೃಷ್ಟಿಸುತ್ತಾನೆ. [ಸರ್ವಭೂತಮಯ ಎನ್ನುವಲ್ಲಿ 'ಮಯಾ' ಎಂದರೆ 'ಪ್ರಧಾನ' ಎಂದರ್ಥ. ಆದ್ದರಿಂದ ಸರ್ವಭೂತಮಯ ಎಂದರೆ ಸಮಸ್ತ ಜೀವಜಾತಗಳಿಗೆ ಉತ್ತಮನಾದವನು(ಜೀವೋತ್ತಮನಾದ ಚತುರ್ಮುಖ) ಎಂದರ್ಥ]. ಈ ರೀತಿ ಸೃಷ್ಟಿ ಕಾರ್ಯದಲ್ಲಿ ತೊಡಗಿದ ಚತುರ್ಮುಖ ಮೊದಲು ನವಪ್ರಜಾಪತಿಗಳನ್ನು ಮತ್ತು ಜೊತೆಗೆ ನಾರದರನ್ನು ಸೃಷ್ಟಿ ಮಾಡುತ್ತಾನೆ.

ಮಾಯಾಂ ವಿವಿದಿಷುರ್ವಿಷ್ಣೋರ್ಮಾಯೇಶಸ್ಯ ಮಹಾಮುನಿಃ ।
ಮಹಾಭಾಗವತೋ ರಾಜನ್ ಪಿತರಂ ಪರ್ಯತೋಷಯತ್ ॥೪೦॥

ಸದಾ ಭಗವಂತನ ಧ್ಯಾನದಲ್ಲಿ ನಿರತನಾಗಿರುವ ಚತುರ್ಮುಖನ ಪುತ್ರ ಬ್ರಹ್ಮಚಾರಿ ನಾರದರಿಗೆ ಒಮ್ಮೆ ಸಮಸ್ತ ಮಹಿಮೆಗಳ ಈಶನಾದ(ಮಾಯೇಶ), ಭಗವಂತನ (ವಿಷ್ಣುವಿನ) ಮಹಿಮೆಯನ್ನು ತಿಳಿಯಬೇಕು ಎನ್ನುವ ಆಸೆಯಾಯಿತಂತೆ. ಹೀಗಾಗಿ ಅವರು ಸಮಸ್ತ ಭಗವದ್ಭಕ್ತರಲ್ಲೇ ಹಿರಿಯರಾದ ತನ್ನ ತಂದೆ ಚತುರ್ಮುಖನಲ್ಲಿ ತಮ್ಮ ಬಯಕೆಯನ್ನು ತೋಡಿಕೊಳ್ಳುತ್ತಾರೆ. ಆಗ ಚತುರ್ಮುಖ ಭಾಗವತವನ್ನು ನಾರದರಿಗೆ ಉಪದೇಶಿಸುತ್ತಾನೆ.

ನಾರದಃ ಪ್ರಾಹ ಮುನಯೇ ಸರಸ್ವತ್ಯಾಸ್ತಟೇ ನೃಪ ।
ಧ್ಯಾಯತೇ ಬ್ರಹ್ಮ ಪರಮಂ ವ್ಯಾಸಾಯಾಮಿತತೇಜಸೇ ॥೪೪॥

ಚತುರ್ಮುಖನಿಂದ ಉಪದೇಶಿಸಲ್ಪಟ್ಟ ಮೂಲ ಭಾಗವತವನ್ನು ನಾರದರು ಸರಸ್ವತೀ ನದಿ ತೀರದಲ್ಲಿ ಅಮಿತ ತೇಜಸ್ವಿಯಾದ ವೇದವ್ಯಾಸರಿಗೆ ಉಪದೇಶಿಸುತ್ತಾರೆ. ವೇದವ್ಯಾಸರು ಈ ಭಾಗವತವನ್ನು ವಿಸ್ತಾರವಾಗಿ ರಚನೆ ಮಾಡಿ ಮುಂದೆ ತಮ್ಮ ಪುತ್ರ ರುದ್ರಾವತಾರಿ ಶುಕಾಚಾರ್ಯರಿಗೆ ಉಪದೇಶಿಸುತ್ತಾರೆ.
ವೇದ ವ್ಯಾಸರು ಭಗವಂತನ ಅವತಾರ. ಆದರೆ ಲೋಕದ ನಿಯಮಕ್ಕನುಗುಣವಾಗಿ, ಗುರು ಪರಂಪರೆಯಂತೆ ಅವರು ನಾರದರಿಂದ ಉಪದೇಶ ಪಡೆದು ಭಾಗವತ ರಚನೆ ಮಾಡಿದರು. ತನ್ನ ಪ್ರಿಯ ಭಕ್ತನಾದ ನಾರದರ ಕೀರ್ತಿಯನ್ನು ಪ್ರಪಂಚದ ಮುಂದೆ ಬೆಳಗಿಸಲು ಇದು ಭಗವಂತನಾಡಿದ ಲೀಲಾ ನಾಟಕ. [*ಹರಿರ್ವ್ಯಾಸಾದಿರೂಪೇಣ ಸರ್ವಜ್ಞೋಽಪಿ ಸ್ವಯಂ ಪ್ರಭುಃ । ಶೃಣೋತಿ ನಾರದಾದಿಭ್ಯೋ ಮೋಹಾಯೈಷಾಂ ಪ್ರಸಿದ್ಧಯೇ ॥* ಭಗವಂತ ವ್ಯಾಸಾದಿ ಅವತಾರಗಳಲ್ಲಿಯೂ ಸ್ವಯಂ ಸರ್ವಶಕ್ತ-ಸರ್ವಜ್ಞನಾಗಿದ್ದರೂ ಸಹ, ಅಸುರ ಮೋಹಕ್ಕಾಗಿ, ನಾರದಾದಿಗಳಿಗೆ ಕೀರ್ತಿಯನ್ನು ತರುವುದಕ್ಕಾಗಿ ಅವರಿಂದ ಉಪದೇಶ ಕೇಳುತ್ತಾನೆ ಎಂದಿದೆ ಪಾದ್ಮಪುರಾಣ].

ಯದುತಾಹಂ ತ್ವಯಾ ಪೃಷ್ಟೋ ವೈರಾಜಾತ್ ಪುರುಷಾದಿದಮ್ ।
ಯಥಾSSಸೀತ್ ತದುಪಾಖ್ಯಾಸ್ಯೇ ಪ್ರಶ್ನಾನನ್ಯಾಂಶ್ಚ ಕೃತ್ಸ್ನಶಃ ॥೪೫॥

ಇಲ್ಲಿ ಪರೀಕ್ಷಿತನ ಪ್ರಶ್ನೆಗಳಿಗೆ ಉತ್ತರಿಸುತ್ತಿರುವ ಶುಕಾಚಾರ್ಯರು ಹೇಳುತ್ತಾರೆ: "ಚತುರ್ಮುಖನ ಅಂತರ್ಯಾಮಿಯಾದ ಭಗವಂತನಿಂದ ಈ ಜಗತ್ತು ಹೇಗೆ ಸೃಷ್ಟಿಯಾಯಿತು ಎನ್ನುವುದನ್ನು ನೀನು ತಿಳಿಯಬಯಸಿದೆ.

ಅದಕ್ಕೆ ಉತ್ತರ ರೂಪವಾಗಿ ಹಾಗೂ ನೀನು ಕೇಳಿದ ಇತರ ಎಲ್ಲಾ ಪ್ರಶ್ನೆಗಳಿಗೆ ಉತ್ತರ ರೂಪವಾಗಿ, ನಾನು ನನ್ನ ತಂದೆ ವೇದವ್ಯಾಸರಿಂದ ಉಪದೇಶಿಸಲ್ಪಟ್ಟ ಭಾಗವತವನ್ನು ನಿನಗೆ ಉಪದೇಶಿಸುತ್ತೇನೆ" ಎಂದು. [ಚತುರ್ಮುಖ ಬ್ರಹ್ಮನನ್ನು ವಿರಾಡ್ ಎಂದು ಕರೆಯುತ್ತಾರೆ. ಹಾಗಾಗಿ ಆತನ ಅಂತರ್ಯಾಮಿ ಹರಿಯನ್ನು ಇಲ್ಲಿ 'ವೈರಾಜ' ಎಂದು ಸಂಬೋಧಿಸಿದ್ದಾರೆ. *ವಿರಾಡ್ ಬ್ರಹ್ಮಾಸುಮುದ್ದಿಷ್ಟಸ್ತದ್ಗತಃ ಪರಮೋ ಯತಃ***|** *ಅತೋ ವೈರಾಜಮಿತ್ಯೇನಮಾಹುರೀಶತ್ವತೋ ವಿರಾಟ್ ॥ ಇತಿ ಬೃಹತ್ಸಂಹಿತಾಯಾಮ್ ॥*]

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ನವಮೋSಧ್ಯಾಯಃ ॥**

ಭಾಗವತ ಮಹಾಪುರಾಣದ ಎರಡನೇ ಸ್ಕಂಧದ ಒಂಬತ್ತನೇ ಅಧ್ಯಾಯ ಮುಗಿಯಿತು

*************

# ದಶಮೋSಧ್ಯಾಯಃ

## ಪುರಾಣದ ದಶ ಲಕ್ಷಣಗಳು

**ಶ್ರೀಶುಕ ಉವಾಚ--**

ಅತ್ರ ಸರ್ಗೋ ವಿಸರ್ಗಶ್ಚ ಸ್ಥಾನಂ ಪೋಷಣಮೂತಯಃ ।
ಮನ್ವಂತರೇಶಾನುಕಥಾ ನಿರೋಧೋ ಮುಕ್ತಿರಾಶ್ರಯಃ ॥೦೧॥

ದಶಮಸ್ಯ ವಿಶುದ್ಧ್ಯರ್ಥಂ ನವಾನಾಮಿಹ ಲಕ್ಷಣಮ್ ।
ವರ್ಣಯಂತಿ ಮಹಾತ್ಮಾನಃ ಶ್ರುತೇನಾರ್ಥೇನ ಚಾಂಜಸಾ ॥೦೨॥

‘*ಪುರಾಣಂ ದಶಲಕ್ಷಣಂ*’ ಎನ್ನುವ ಮಾತನ್ನು ನಾವು ಕೇಳಿದ್ದೇವೆ. ಇಲ್ಲಿ ಭಾಗವತವನ್ನು ಪರೀಕ್ಷಿತನಿಗೆ ಉಪದೇಶಿಸುವ ಮುನ್ನ ಶುಕಾಚಾರ್ಯರು ಪುರಾಣದ ಹತ್ತು ಪ್ರಮುಖ ಲಕ್ಷಣಗಳನ್ನು ಆತನಿಗೆ ವಿವರಿಸಿರುವುದನ್ನು ಕಾಣುತ್ತೇವೆ. ಸರ್ಗ, ವಿಸರ್ಗ, ಸ್ಥಾನ, ಪೋಷಣ, ಊತಿ, ಮನ್ವಂತರ, ಈಶಕಥಾ, ನಿರೋಧ, ಮುಕ್ತಿ ಮತ್ತು ಆಶ್ರಯ. ಇವು ಪುರಾಣದ ದಶಲಕ್ಷಣಗಳು. ‘*ಆಶ್ರಯ*’ ಎಂದರೆ ಸಮಸ್ತ ಜೀವಜಾತಗಳಿಗೂ ಆಶ್ರಯಭೂತನಾದ ಭಗವಂತ ಎಂದರ್ಥ. ಇಂತಹ ಭಗವಂತನ ಅರಿವು ಮೂಡಿಸುವುದಕ್ಕೆ ಪೂರಕವಾಗಿಯೇ ಇತರ ಒಂಬತ್ತು ಲಕ್ಷಣಗಳಿರುವುದು. ಅಂದರೆ ಒಂಬತ್ತು ವಿಷಯಗಳಿರುವುದು ಹತ್ತನೆಯದನ್ನು ತಿಳಿಯುವುದಕ್ಕಾಗಿ. ಈ ರೀತಿ ಹತ್ತು ಲಕ್ಷಣಗಳುಳ್ಳ ಪುರಾಣ ಮಹಾಪುರಾಣವೆನಿಸುತ್ತದೆ.

ಭೂತಮಾತ್ರೇಂದ್ರಿಯಧಿಯಾಂ ಜನ್ಮ ಸರ್ಗ ಉದಾಹೃತಃ ।
ಬ್ರಹ್ಮಣೋ ಗುಣವೈಷಮ್ಯಾದ್ ವಿಸರ್ಗಃ ಪೌರುಷಃ ಸ್ಮೃತಃ ॥೦೩॥

**(೧-೨). ಸರ್ಗ-ವಿಸರ್ಗ:** ಈ ಬ್ರಹ್ಮಾಂಡ ಸೃಷ್ಟಿಯಾಗುವ ಮೊದಲು ಬ್ರಹ್ಮಾಂಡದ ಮೂಲದ್ರವ್ಯಗಳ ಸೃಷ್ಟಿಯಾಯಿತು. ಇದನ್ನು ಸೂಕ್ಷ್ಮಸೃಷ್ಟಿ ಎನ್ನುತ್ತಾರೆ. ಪಂಚಭೂತಗಳು, ಪಂಚತನ್ಮಾತ್ರೆಗಳು, ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು ಮತ್ತು ಪಂಚವಿಧದ ಅಂತಃಕರಣ ಎನ್ನುವ ಪಂಚಕಗಳ ಸೃಷ್ಟಿ ಬ್ರಹ್ಮಾಂಡ ಸೃಷ್ಟಿಗೆ ಪೂರ್ವಭಾವಿಯಾಗಿ ನಡೆದ ಸೃಷ್ಟಿ. ಇದನ್ನೇ ‘*ಸರ್ಗ*’ ಎನ್ನುತ್ತಾರೆ. ಈ ಎಲ್ಲಾ ಮೂಲದ್ರವ್ಯಗಳಿಂದ ಮುಂದೆ ಸೃಷ್ಟಿಯ ವಿಸ್ತಾರವಾಯಿತು. ಅದನ್ನು ‘*ವಿಸರ್ಗ*’ ಎನ್ನುತ್ತಾರೆ. ಲೋಕಗಳ ಸೃಷ್ಟಿ, ಲೋಕದಲ್ಲಿ ಜೀವಿಗಳ ಸೃಷ್ಟಿ ಇವೆಲ್ಲವೂ ‘ವಿಸರ್ಗ’. ಇದನ್ನು ಇಲ್ಲಿ ‘***ಪೌರುಷಃ ಸ್ಮೃತಃ***’ ಎಂದು ಕರೆದಿದ್ದಾರೆ. ಮೂಲತಃ ಪುರುಷ ಎಂದರೆ ಭಗವಂತ. ಜೀವ ಕಲಾಭಿಮಾನಿಯಾದ ಚತುರ್ಮುಖನನ್ನೂ ಕೂಡಾ ‘ಪುರುಷ’ ಎನ್ನುತ್ತಾರೆ. ಜೀವಜಾತವೂ ಕೂಡಾ ಪುರುಷ ಶಬ್ದವಾಚ್ಯ. ಹೀಗಾಗಿ ಪುರುಷನಿಂದಾದ ಪುರುಷ ಸೃಷ್ಟಿ- ಪೌರುಷಃ ಸ್ಮೃತಃ.

ಒಟ್ಟಿನಲ್ಲಿ ಹೇಳಬೇಕೆಂದರೆ: ಬ್ರಹ್ಮಾಂಡ ನಿರ್ಮಾಣದ ಪೂರ್ವಭಾವಿಯಾಗಿ ಸೂಕ್ಷ್ಮಸೃಷ್ಟಿಯಾಯಿತು. ನಂತರ ಬ್ರಹ್ಮಾಂಡ ಸೃಷ್ಟಿಯಾಯಿತು. ಸೃಷ್ಟಿಯಾದ ಬ್ರಹ್ಮಾಂಡದ ಒಳಗೆ ತ್ರಿಗುಣಗಳ ವೈಷಮ್ಯದಿಂದ ಸೃಷ್ಟಿ ವಿಸ್ತಾರವಾಯಿತು. ಇವೆಲ್ಲವುದರ ವಿವರಣೆಯನ್ನು ನಮಗೆ ಭಾಗವತ ನೀಡುತ್ತದೆ. ನಾವು ಭಗವಂತನನ್ನು ತಿಳಿಯಬೇಕಾದರೆ ಆತನ ಸೃಷ್ಟಿಯ ಬಗೆಗೆ ತಿಳಿಯಲೇಬೇಕು. ಪುರಾಣದಲ್ಲಿನ ಸರ್ಗ ಮತ್ತು ವಿಸರ್ಗ ನಮಗೆ ಆ ವಿವರಣೆಯನ್ನು ನೀಡುತ್ತದೆ.

**ಸ್ಥಿತಿರ್ವೈಕುಂಠವಿಜಯಃ ಪೋಷಣಂ ತದನುಗ್ರಹಃ ।**
**ಮನ್ವಂತರಾಣಿ ಸದ್ಧರ್ಮಾ ಊತಯಃ ಕರ್ಮವಾಸನಾಃ ॥೦೪॥**

**(೩-೪).ಸ್ಥಿತಿ-ಪೋಷಣ:** ಸ್ಥಾನ ಅಥವಾ ***'ಸ್ಥಿತಿ'*** ಎಂದರೆ ಸೃಷ್ಟಿಯಾದ ಪ್ರಪಂಚವನ್ನು ಅದರ ಇರುವಿಕೆಯ ನಿಯಮದಲ್ಲಿಟ್ಟು ಸಂರಕ್ಷಿಸುವುದು ಎಂದರ್ಥ. ಉದಾಹರಣೆಗೆ ಹಿರಣ್ಯಾಕ್ಷರಂತಹ ದೈತ್ಯರು ಸೃಷ್ಟಿ ವ್ಯವಸ್ಥೆಯನ್ನು ಕೆಡಿಸಲು ಪ್ರಯತ್ನಿಸಿದಾಗ, ಭಗವಂತ ಅವತಾರರೂಪಿಯಾಗಿ ಬಂದು ಅವರನ್ನು ಸಂಹಾರಮಾಡಿ, ಸೃಷ್ಟಿಯನ್ನು ತನ್ನ ನಿಯಮದಂತೆ ಯಥಾಸ್ಥಿತಿಯಲ್ಲಿರಿಸಿ, ಧರ್ಮರಕ್ಷಣೆ ಮಾಡಿ 'ಪೋಷಿಸು'ತ್ತಾನೆ. ಒಂದು ಬಲಕಾರ್ಯವಾದರೆ(ದುಷ್ಟನಿಗ್ರಹವಾದರೆ), ಇನ್ನೊಂದು ಜ್ಞಾನಕಾರ್ಯ(ಶಿಷ್ಟರಕ್ಷಣ/***'ಪೋಷಣ'***). ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ಪರಶುರಾಮ, ರಾಮ ಇತ್ಯಾದಿ ಅವತಾರಗಳು ಬಲಕಾರ್ಯಕ್ಕಾಗಿ ನಡೆದ ಭಗವಂತನ ಅವತಾರಗಳಾದರೆ, ದತ್ತಾತ್ರೇಯ, ಕಪಿಲ, ವೇದವ್ಯಾಸ, ಇತ್ಯಾದಿ ಅವತಾರಗಳು ಜ್ಞಾನಕಾರ್ಯಕ್ಕಾಗಿ ನಡೆದ ಅವತಾರಗಳಾಗಿವೆ. ಶ್ರೀಕೃಷ್ಣಾವಾತಾರ ಜ್ಞಾನ ಮತ್ತು ಬಲಕಾರ್ಯವೆರಡನ್ನೂ ಮಾಡಿದ ಅಪೂರ್ವ ಅವತಾರ. ಪುರಾಣ ನಮಗೆ ಭಗವಂತನ ಈ ಎಲ್ಲಾ ಅವತಾರಗಳ ವಿವರಣೆಯನ್ನು ನೀಡಿ ಭಗವಂತನ ಬಗೆಗಿನ ಅರಿವನ್ನು ನೀಡುತ್ತದೆ.

**(೫-೭). ಮನ್ವಂತರ ಮತ್ತು ಊತಿ:** ಪುರಾಣಗಳಲ್ಲಿ '*ಮನ್ವಂತರ*'ದ ಕಥೆಯನ್ನು ನಾವು ಕಾಣುತ್ತೇವೆ. ನಮಗೆ ತಿಳಿದಂತೆ ಒಂದು ದಿನಕಲ್ಪದಲ್ಲಿ ಒಟ್ಟು ಹದಿನಾಲ್ಕು ಮನ್ವಂತರಗಳಿವೆ. ಮನ್ವಂತರದ ಮೂಲಪುರುಷನನ್ನು 'ಮನು' ಎಂದು ಕರೆಯುತ್ತಾರೆ. ಪ್ರಸ್ತುತ ಚಾಲನೆಯಲ್ಲಿರುವ ಮನ್ವಂತರ 'ವೈವಸ್ವತ ಮನ್ವಂತರ'. ಸೂರ್ಯಪುತ್ರ ಶ್ರಾದ್ಧದೇವ ಮನುವೇ ಈ ಮನ್ವಂತರದ ಒಡೆಯ. ಯಾವಯಾವ ಮನ್ವಂತರದಲ್ಲಿ ಯಾವಯಾವ ಮನುಗಳು ಮತ್ತು ಅವರ ವಂಶದಲ್ಲಿ ಬಂದಿರುವ ಋಷಿಗಳು ಲೋಕಕ್ಕೆ ಯಾವಯಾವ ರೀತಿ ಧರ್ಮಬೋಧನೆ ಮಾಡಿದರು/ಮಾಡುತ್ತಾರೆ ಎನ್ನುವುದನ್ನು ಪುರಾಣದಲ್ಲಿ ಬರುವ ಮನ್ವಂತರದ ಕಥೆ ವಿವರಿಸುತ್ತದೆ.

***'ಊತಯಃ'*** ಎಂದರೆ 'ಜೀವ'ರುಗಳ ಅನಾದಿ ಕರ್ಮಗಳು ಮತ್ತು ಸಂಸ್ಕಾರಗಳು. ನಮ್ಮ ಇಂದಿನ ಜೀವನಕ್ರಮದ ಹಿಂದೆ ಪೂರ್ವ ಜನ್ಮಗಳ ಸಂಸ್ಕಾರ ಬೆಸೆದುಕೊಂಡಿರುತ್ತದೆ. ಕೆಲವೊಮ್ಮೆ ಹಿಂದಿನ ಜನ್ಮದ ಸಂಸ್ಕಾರ ಜಾಗೃತಗೊಳ್ಳುತ್ತದೆ. ನಮ್ಮ ಮನಸ್ಸು ಹಿಂದೆ ಅನುಭವಿಸಿದ್ದನ್ನು ನೆನಪಿಸಿಕೊಂಡು ಈ ಜನ್ಮದಲ್ಲಿ ಅದಕ್ಕೆ ಬೇಕಾದ ಚಟುವಟಿಕೆಗಳನ್ನು, ಆಕರ್ಷಣೆಗಳನ್ನು ಸೃಷ್ಟಿ ಮಾಡಿಕೊಳ್ಳುತ್ತದೆ. ಇಂತಹ ಸಂಸ್ಕಾರಗಳ ಚಿತ್ರಣವನ್ನು ಭಾಗವತ ನಮಗೆ ನೀಡುತ್ತದೆ.[ಉದಾಹರಣೆ : ಗಜೇಂದ್ರನಿಗೆ ತನ್ನ ಪೂರ್ವಜನ್ಮದ ಸಂಸ್ಕಾರ ಜಾಗೃತಗೊಂಡು ಆತ ಭಗವಂತನನ್ನು ಸ್ಮರಿಸಿ ಮೋಕ್ಷ ಪಡೆದ ಕಥೆಯನ್ನು ನಾವು ಗಜೇಂದ್ರಮೋಕ್ಷ ಪ್ರಸಂಗದಲ್ಲಿ ಕಾಣುತ್ತೇವೆ].

ಅವತಾರಾನುಚರಿತಂ ಹರೇಶ್ಚಾಸ್ಯಾನುವರ್ತಿನಾಮ್ ।
ಪುಂಸಾಮೀಶಕಥಾಃ ಪ್ರೋಕ್ತಾ ನಾನಾಖ್ಯಾನೋಪಬೃಂಹಿತಾ ॥೦೫॥

**(೭). ಈಶಕಥಾ:** ಭಗವಂತ ಯಾವಯಾವ ಮನ್ವಂತರದಲ್ಲಿ ಏನೇನು ರೂಪತಾಳಿ ಏನೇನು ಲೀಲೆಗಳನ್ನು ತೋರುತ್ತಾನೆ ಮತ್ತು ಆತನ ಅನುವರ್ತಿಗಳಾಗಿ ದೇವತೆಗಳು, ಋಷಿಗಳು, ಚಕ್ರವರ್ತಿಗಳು ಭೂಮಿಯಲ್ಲಿ ಏನೇನು ಮಾಡಿದರು ಎನ್ನುವ ಕಥೆಯೇ ಈಶಕಥಾ. ಇವೆಲ್ಲವನ್ನೂ ನಾವು ಭಾಗವತದಲ್ಲಿ ಕಾಣುತ್ತೇವೆ. ಬಗೆಬಗೆಯ ಉಪಾಖ್ಯಾನಗಳು, ಬಗೆಬಗೆಯ ಇತಿಹಾಸವನ್ನೊಳಗೊಂಡ, ಆಯಾ ಮನ್ವಂತರದಲ್ಲಿ ಆಗಿರತಕ್ಕ ಭಗವಂತನ ಮತ್ತು ಭಗವದ್ ಭಕ್ತರ ಕಥೆ ಇದಾಗಿದೆ.

ನಿರೋಧೋSಸ್ಯಾನುಶಯನಮಾತ್ಮನಃ ಸಹ ಶಕ್ತಿಭಿಃ ।
ಮುಕ್ತಿರ್ಹಿತ್ವಾSನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ ॥೦೬॥

**(೮-೯). ನಿರೋಧ ಮತ್ತು ಮುಕ್ತಿ:** ಬದುಕಿನಿಂದ ಕಳಚಿಕೊಳ್ಳುವ ಪ್ರಳಯದ ಕಥೆಯನ್ನು ನಿರೋಧ ಎನ್ನುತ್ತಾರೆ. ಪ್ರಳಯ ಕಾಲದಲ್ಲಿ ಜ್ಞಾನ-ಸ್ಮರಣೆಯನ್ನು ಕಳೆದುಕೊಂಡು, ಜೀವರು ಭಗವಂತನ ಉದರದಲ್ಲಿ ಸುಪ್ತಾವಸ್ಥೆಯಲ್ಲಿರುತ್ತಾರೆ. ಈ ರೀತಿ ಇರುವ ಜೀವರಲ್ಲಿ ಕೆಲವರು ಮತ್ತೆ ಸಂಸಾರದಲ್ಲಿ ಹುಟ್ಟಿ ಬರುತ್ತಾರೆ. ಇನ್ನು ಕೆಲವರು ಮೋಕ್ಷವನ್ನು ಪಡೆಯುತ್ತಾರೆ. ಈ ನಮ್ಮ ರೂಪ ನಮ್ಮ ನಿಜರೂಪವಲ್ಲ. ನಮ್ಮ ಮೂಲರೂಪ ಜ್ಞಾನಾನಂದಮಾಯವಾದುದು. ಜಡರೂಪವನ್ನು ಶಾಶ್ವತವಾಗಿ ಕಳಚಿಕೊಂಡು ಜ್ಞಾನಾನಂದರೂಪದಲ್ಲಿ ನೆಲೆಗೊಳ್ಳುವುದು ಮುಕ್ತಿ.

ಆಭಾಸಶ್ಚ ನಿರೋಧಶ್ಚ ಯತಸ್ತತ್ ತ್ರಯಮೀಯತೇ ।
ಸ ಆಶ್ರಯಃ ಪರಂ ಬ್ರಹ್ಮ ಪರಮಾತ್ಮೇತಿ ಶಬ್ದ್ಯತೇ ॥೦೭॥

**(೧೦) ಆಶ್ರಯ:** ಈ ಜಗತ್ತಿಗೆಲ್ಲಾ ಆಶ್ರಯವಾದ, ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಕೊಡತಕ್ಕಂತಹ ಶಕ್ತಿ ಯಾವುದು ಎಂದು ಚಿಂತನೆ ಮಾಡುವುದನ್ನು ಆಶ್ರಯ ಎನ್ನುತ್ತಾರೆ. ಯಾವುದನ್ನು ಪರಂಬ್ರಹ್ಮ, ಪರಮಾತ್ಮಾ, ಇತ್ಯಾದಿಯಾಗಿ ಶಾಸ್ತ್ರಗಳು ಉಲ್ಲೇಖಿಸಿ ಮಾಹಿತಿ ಕೊಡುತ್ತವೋ ಅದನ್ನು 'ಆಶ್ರಯ' ಎನ್ನುತ್ತಾರೆ.

## ಬ್ರಹ್ಮಾಂಡ ಸೃಷ್ಟಿ

ಆಧ್ಯಾತ್ಮಿಕೋ ಯಃ ಪುರುಷಃ ಸೋSಸಾವೇವಾಧಿದೈವಿಕಃ ।
ಯಸ್ತತ್ರೋಭಯವಿಚ್ಛೇದಃ ಸ ಸ್ಮೃತೋ ಹ್ಯಾಧಿಭೌತಿಕಃ ॥೦೮॥

ಈ ಶ್ಲೋಕ ಮೇಲ್ನೋಟಕ್ಕೆ ಅರ್ಥವಾಗದ ಒಗಟಿನರೂಪದಲ್ಲಿದೆ. ಇಲ್ಲಿ ಹೇಳುತ್ತಾರೆ:"ಅಧ್ಯಾತ್ಮಪುರುಷನೊಬ್ಬನಿದ್ದಾನೆ. ಅವನೇ ಅದಿದೈವಿಕ ಪುರುಷ. ಈ ಇಬ್ಬರು ಪುರುಷರು ಪರಿಚಯವಾಗುವುದು ಅಧಿಭೌತಿಕ ಪುರುಷನಿಂದ" ಎಂದು.

ಇದು ನಮ್ಮ ನಿತ್ಯ ಅನುಭವಕ್ಕೆ ಬರುವ ಭಗವಂತನ ಮೂರು ಅಂಶಗಳು**(aspects).** ಉದಾಹರಣೆಗೆ ನಾವು ಕಣ್ಣಿನಿಂದ ನೋಡುತ್ತೇವೆ. ಇಲ್ಲಿ ನಮ್ಮ ಕಣ್ಣಿನೊಳಗೆ ನಿಂತಿರುವ ಭಗವಂತ ಆಧ್ಯಾತ್ಮಪುರುಷನಾದರೆ, ಸೂರ್ಯನಲ್ಲಿ ನಿಂತು ಬೆಳಕು ಹಾಯಿರುವ ಭಗವಂತ ಆದಿದೈವಿಕಪುರುಷ ಮತ್ತು ನಮ್ಮ ಮುಂದಿರುವ ವಸ್ತುವಿಗೆ ರೂಪ ನೀಡುವ ಭಗವಂತ ಆದಿಭೌತಿಕ ಪುರುಷ. ಭಗವಂತ ನಮಗೆ ಕಣ್ಣನ್ನು ಕೊಟ್ಟ, ಕಣ್ಣಿನ ಮುಂದೆ ಕಾಣುವ ರೂಪವನ್ನಿಟ್ಟ, ಅದನ್ನು ನೋಡಲು ಬೆಳಕನ್ನು ಕೊಟ್ಟ. ಹೀಗೆ ಈ ಮೂರು ಬಗೆಯಿಂದ (ಆಧ್ಯಾತ್ಮಿಕ, ಆದಿದೈವಿಕ ಮತ್ತು ಆದಿಭೌತಿಕ) ಸಮಸ್ತ ವ್ಯವಹಾರಗಳನ್ನೂ ನಡೆಸುವ ಭಗವಂತ 'ಆಶ್ರಯಃ'.

ಏತದೇಕತಮಾಭಾವೇ ಯದಾ ನೋಪಲಭಾಮಹೇ ।
ತ್ರಿತಯಂ ತತ್ರ ಯೋ ವೇದ ಸ ಆತ್ಮಾ ಸ್ವಾಶ್ರಯಾಶ್ರಯಃ ॥೦೯॥

ಆಧ್ಯಾತ್ಮಿಕ, ಆದಿದೈವಿಕ ಮತ್ತು ಆದಿಭೌತಿಕ ಈ ಮೂರರಲ್ಲಿ ಯಾವುದೇ ಒಂದು ಇಲ್ಲದಿದ್ದರೂ ನಮಗೆ ಅರಿವು ಬರುವುದಿಲ್ಲ. ಆದರೆ ಈ ಮೂರೂ ಇದ್ದೂ ಯಾವ ಅರಿವೂ ಬಾರದೇ ಇರುವ ಸ್ಥಿತಿಯಲ್ಲಿ (ನಿದ್ರಾಸ್ಥಿತಿ/ಸುಪ್ತಾವಸ್ತೆ) ಎಲ್ಲವನ್ನೂ ತಿಳಿಯಬಲ್ಲವನೇ ಪರಮಾತ್ಮ. ಅಂದರೆ: ಜೀವ ಸುಪ್ತನಾಗಿರುವಾಗ ತಾನು ಸುಪ್ತನಾಗದೇ ಎಲ್ಲವನ್ನೂ ಕಾಣುತ್ತಿರುತ್ತಾನೆ ಆ ಭಗವಂತ. ಇದನ್ನೇ ಶ್ರುತಿ ಹೀಗೆ ಹೇಳಿದೆ: *ಸುಪ್ತಾವಪಿ ಯಃ ಸರ್ವಂ ವೇತ್ತಿ ಜೀವಾನಾಂ ಸ ಪರಃ। 'ಸ್ವಪ್ನೇನ ಶಾರೀರಮಭಿಪ್ರಹತ್ಯಾಸುಪ್ತಃ ಸುಪ್ತಾನಭಿಚಾಕಶೀತಿ' ಇತಿ ಶ್ರುತೇಃ । ಸುಪ್ತಾ ಶ್ರಯಾಣಾಮಪ್ಯಾಶ್ರಯಃ ।*

ಪುರುಷೋSಣ್ಡಂ ವಿನಿರ್ಭಿದ್ಯ ಯದಾಸೌ ಸ ವಿನಿರ್ಗತಃ ।
ಆತ್ಮನೋSಯನಮನ್ವಿಚ್ಛನ್ನಪೋSಸ್ರಾಕ್ಷೀಚ್ಛುಚಿಃ ಶುಚೀಃ ॥೧೦॥

ತಾಸ್ವವಾತ್ಸೀತ್ ಸ್ವಸೃಷ್ಟಾಸು ಸಹಸ್ರಪರಿವತ್ಸರಾನ್ ।
ತೇನ ನಾರಾಯಣೋ ನಾಮ ಯದಾಪಃ ಪುರುಷೋದ್ಭವಾಃ ॥೧೧॥

ಚತುರ್ಮುಖನಿಗೂ ಮೊದಲು ಭಗವಂತ ಸೂಕ್ಷ್ಮರೂಪದಲ್ಲಿ ಬ್ರಹ್ಮಾಂಡ ಸೃಷ್ಟಿ ಮಾಡಿರುವ ವಿಷಯವನ್ನು ಈ ಹಿಂದೆ ನೋಡಿದ್ದೇವೆ. ಸೃಷ್ಟಿಯ ಪೂರ್ವದಲ್ಲಿ ಭಗವಂತ ಮೂರು ರೂಪಗಳನ್ನು ಧರಿಸಿದ. ***ಪ್ರಥಮಂ ಮಹತ್ಸ್ರಷ್ಟುಃ, ದ್ವಿತೀಯಂ ಅಂಡ ಸಂಸ್ಥಿತಂ, ತೃತೀಯಂ ಪ್ರಾಣಿನಾಂ ದೇಹೇ.*** ಬ್ರಹ್ಮಾಂಡ ಸೃಷ್ಟಿಗೆ ಕಾರಣವಾದುದು ಮೊದಲನೇ ಪುರುಷರೂಪ, ಬ್ರಹ್ಮಾಂಡ ಸೃಷ್ಟಿ ಮಾಡಿ ಅದರಲ್ಲಿ ತುಂಬಿರುವುದು ಎರಡನೇ ಪುರುಷರೂಪ ಮತ್ತು ಬ್ರಹ್ಮಾಂಡದಲ್ಲಿ ಪಿಂಡಾಂಡ ಸೃಷ್ಟಿ ಮಾಡಿ ಪಿಂಡಾಂಡದೊಳಗೆ ತುಂಬಿರುವುದು ಭಗವಂತನ ಮೂರನೇ ಪುರುಷರೂಪ. ಈ ಮೇಲಿನ ಶ್ಲೋಕದಲ್ಲಿ ಬ್ರಹ್ಮಾಂಡದೊಳಗೆ ತುಂಬಿರುವ ಎರಡನೇ ಪುರುಷ ರೂಪದ ವಿವರಣೆಯನ್ನು ಕಾಣುತ್ತೇವೆ. ಬ್ರಹ್ಮಾಂಡದೊಳಗೆ ತುಂಬಿದ ಭಗವಂತ ಬ್ರಹ್ಮಾಂಡವನ್ನು ಚತುರ್ದಶ ಭುವನಗಳಾಗಿ ವಿಂಗಡಣೆಮಾಡಿ ಪ್ರಕಟಗೊಂಡನಂತೆ. ಈ ರೀತಿ ಪ್ರಕಟಗೊಂಡ ಭಗವಂತ ತನಗೆ ವಿಶ್ರಾಂತಿಸಲು ಸ್ಥಳವನ್ನು ಬಯಸಿ ನೀರನ್ನು ಸೃಷ್ಟಿಮಾಡಿ ಅದರಲ್ಲಿ ವಾಸಮಾಡಿದ. ಅಂದರೆ ನೀರಿನಲ್ಲಿ ಭಗವದ್ ಶಕ್ತಿ ತುಂಬಿತು. ಅಂಥಹ ಶುದ್ಧವಾದ ನೀರಿನಲ್ಲಿ ಭಗವಂತ ಸಹಸ್ರಾರು ವರ್ಷಗಳ

ಕಾಲ(ನಮ್ಮ ಗಣನೆಯಂತೆ) ಮಲಗಿದ. ಈ ರೀತಿ ನಾಶವಿಲ್ಲದ ಭಗವಂತನಿಂದ(ನರನಿಂದ) ಹುಟ್ಟಿದ ನೀರನ್ನು ನಾರಾ ಎಂದೂ, ಅಂಥಹ ನಾರದಲ್ಲಿ ವಾಸಿಸುವ ಭಗವಂತನನ್ನು ನಾರಾಯಣ ಎಂದೂ ಜ್ಞಾನಿಗಳು ಕರೆಯುತ್ತಾರೆ.

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥೧೨॥**

ಪರೀಕ್ಷಿತನಿಗೆ ಭಾಗವತ ಉಪದೇಶ ಮಾಡುತ್ತಿರುವ ಶುಕಾಚಾರ್ಯರು ಇಲ್ಲಿ ಒಂದು ಮಹತ್ವದ ವಿಷಯವನ್ನು ನಮ್ಮ ಮುಂದೆ ತೆರೆದಿಟ್ಟಿದ್ದಾರೆ. ಜಗತ್ತಿನ ಸೃಷ್ಟಿ ಮಾಡಲು ಭಗವಂತ ಯಾವಯಾವ ವಸ್ತುಗಳನ್ನು ಬಳಸುತ್ತಾನೆ ಎನ್ನುವ ವಿಷಯ ಈ ಶ್ಲೋಕದಲ್ಲಿದೆ. "ಭಗವಂತ ತನ್ನ ಅಧೀನವಾಗಿರುವ ದ್ರವ್ಯ, ಕರ್ಮ, ಕಾಲ , ಸ್ವಭಾವ ಮತ್ತು ಜೀವರನ್ನು ಬಳಸಿ ಸೃಷ್ಟಿ ಮಾಡುತ್ತಾನೆ" ಎಂದಿದ್ದಾರೆ ಶುಕಾಚಾರ್ಯರು. ಜೀವಗಳಿಗೆ ಅವುಗಳದ್ದೇ ಆದ ಸ್ವಭಾವವಿದೆ. ಆ ಸ್ವಭಾವಕ್ಕೆ ತಕ್ಕಂತೆ ಜೀವದ ಕರ್ಮ ನಡೆಯುತ್ತದೆ. ಜೀವಗಳ ಪಾಪ-ಪುಣ್ಯಗಳು ಪಕ್ವವಾಗುವ ಕಾಲ ಬಂದಾಗ ಅದಕ್ಕನುಗುಣವಾಗಿ ಮಣ್ಣು-ನೀರು-ಬೆಂಕಿಯಿಂದಾದ(ದ್ರವ್ಯದಿಂದಾದ) ಸ್ಥೂಲ ಶರೀರವನ್ನು ಜೀವ ಭಗವಂತನಿಂದ ಪಡೆಯುತ್ತಾನೆ.

ಮೇಲಿನ ಮಾತಿನಿಂದ ನಮಗೆ ಸ್ಪಷ್ಟವಾಗಿ ತಿಳಿಯುವುದೇನೆಂದರೆ: ಅನಂತ ಜೀವದ ಹರವು ಅನಂತ ಕಾಲದಲ್ಲಿ ನಿರಂತರವಾಗಿರುತ್ತದೆ. ಆತ್ಮ ಎಂದೆಂದಿಗೂ ಅಜರಾಮರ. ಪ್ರತಿಯೊಂದು ಜೀವಕ್ಕೆ ಅದರದ್ದೇ ಆದ ಸ್ವಭಾವವಿರುತ್ತದೆ. ಜೀವ ಒಂದು ಬೀಜದಂತೆ. ಭಗವಂತ ಒಬ್ಬ ತೋಟಗಾರನಂತೆ. ಆತ ಈ ಪ್ರಪಂಚವೆಂಬ ತೋಟವನ್ನು ಸೃಷ್ಟಿ ಮಾಡಿ, ಜೀವವನ್ನು ಆ ತೋಟದಲ್ಲಿ ಬಿತ್ತಿ ಅದಕ್ಕೊಂದು ಅಸ್ತಿತ್ವವನ್ನು ಕೊಡುತ್ತಾನೆ. ಆಗ ಜೀವದ ಇರವಿಗೆ ಒಂದು ಅರ್ಥ ಬರುತ್ತದೆ. ಪ್ರತಿಯೊಂದು ಜೀವ ತನ್ನ ಸ್ವಭಾವಕ್ಕನುಗುಣವಾಗಿ ಈ ಪ್ರಪಂಚದಲ್ಲಿ ಬೆಳೆಯುತ್ತವೆ. ಒಂದು ಜೀವದ ಸ್ವಭಾವ ಇನ್ನೊಂದು ಜೀವದ ಸ್ವಭಾವಕ್ಕಿಂತ ಭಿನ್ನ. ಈ ಕಾರಣದಿಂದಾಗಿ ಈ ಪ್ರಪಂಚ ಇಷ್ಟೊಂದು ವೈವಿಧ್ಯಪೂರ್ಣ.

## ಚತುರ್ಮುಖನ ಸೃಷ್ಟಿ

**ಏಕೋ ನಾನಾತ್ವಮನ್ವಿಚ್ಛನ್ ಯೋಗತಲ್ಪಾತ್ ಸಮುತ್ಥಿತಃ ।**
**ವೀರ್ಯಂ ಹಿರಣ್ಮಯಂ ದೇವೋ ಮಾಯಯಾ ವ್ಯಸೃಜತ್ ತ್ರಿಧಾ ॥೧೩॥**

**ಅಧಿದೈವಮಥಾಧ್ಯಾತ್ಮಮಧಿಭೂತಮಿತಿ ಪ್ರಭುಃ ।**
**ಪುನಸ್ತತ್ ಪೌರುಷಂ ವೀರ್ಯಂ ತ್ರಿಧಾSಭಿದ್ಯತ ತಚ್ಛೃಣು ॥೧೪॥**

ಭಗವಂತನ ಸೃಷ್ಟಿ ಪ್ರಕ್ರಿಯೆಯನ್ನು ನಮಗೆ ಅರ್ಥವಾಗುವಂತೆ ಪಾರಿಭಾಷಿಕವಾಗಿ ಶುಕಾಚಾರ್ಯರು ವರ್ಣಿಸಿರುವುದನ್ನು ನಾವಿಲ್ಲಿ ಕಾಣುತ್ತೇವೆ. ಅಗಾಧವಾದ ನೀರಿನ ಮೇಲೆ ಮಲಗಿದ್ದ ಭಗವಂತ ಸೃಷ್ಟಿಮಾಡಬೇಕೆಂದು ಇಚ್ಛಿಸಿ ಜ್ಞಾನಾನಂದಮಯವಾದ ತನ್ನ ವೀರ್ಯದಿಂದ ಚತುರ್ಮುಖನನ್ನು ಸೃಷ್ಟಿಸಿದ. ಹೀಗೆ ಸೃಷ್ಟಿಯಾದ ಚತುರ್ಮುಖನಿಗೆ ಮೂರು ರೂಪಗಳನ್ನು ಭಗವಂತ ನೀಡಿದ. ಚತುರ್ಮುಖನಿಗೆ ಮೊದಲು ಅಧಿಭೂತವಾಗಿ

ಬ್ರಹ್ಮಾಂಡದ ಶರೀರ ಬಂತು. ಅಧ್ಯಾತ್ಮವಾಗಿ ಆತ ಜೀವ ಕಲಾಭಿಮಾನಿ ಎನಿಸಿದ. ಅಧಿದೈವವಾಗಿ ಸತ್ಯಲೋಕದದ ಒಡೆಯ ಚತುರ್ಮುಖನಾದ.

ಅಂತಃ ಶರೀರ ಆಕಾಶೇ ಪುರುಷಸ್ಯ ವಿಚೇಷ್ಟತಃ ।
ಓಜಃ ಸಹೋ ಬಲಂ ಜಜ್ಞೇ ತತಃ ಪ್ರಾಣೋ ಮಹಾನಭೂತ್ ॥೧೫॥

ಅನುಪ್ರಾಣಂತಿ ಯಂ ಪ್ರಾಣಾಃ ಪ್ರಾಣಂತಂ ಸರ್ವಜಂತುಷು ।
ಅಪಾನಂತಮಪಾನಂತಿ ನರದೇವಮಿವಾನುಗಾಃ ॥೧೬॥

ಪ್ರಾಣೇನ ಕ್ಷಿಪತಾ ಕ್ಷುತ್ತೃಡಂತರಾ ಜಾಯತೇ ವಿಭೋಃ ।
ಪಿಪಾಸತೋ ಜಕ್ಷತಶ್ಚ ಪ್ರಾಙ್ಮುಖಂ ನಿರಭಿದ್ಯತ ॥೧೭॥

ಮುಖತಸ್ತಾಲು ನಿರ್ಭಿಣ್ಣಂ ಜಿಹ್ವಾ ತತ್ರೋಪಜಾಯತೇ ।
ತತೋ ನಾನಾರಸೋ ಜಜ್ಞೇ ಜಿಹ್ವಯಾ ಯೋಽಧಿಗಮ್ಯತೇ ॥೧೮॥

ವಿವಕ್ಷೋರ್ಮುಖತೋ ಭೂಮ್ನೋ ವಹ್ನಿರ್ವಾಗ್ ವ್ಯಾಹೃತಂ ತಯೋಃ ।
ಜಲೇ ವೈ ತಸ್ಯ ಸುಚಿರಂ ನಿರೋಧಃ ಸಮಜಾಯತ ॥೧೯॥

ನಾಸಿಕೇ ನಿರಭಿದ್ಯೇತಾಂ ದೋಧೂಯತಿ ನಭಸ್ವತಿ ।
ತತ್ರ ವಾಯುರ್ಗಂಧವಹೋ ಘ್ರಾಣೋ ನಸಿ ಜಿಘೃಕ್ಷತಃ ॥೨೦॥

ಯದಾತ್ಮನಿ ನಿರಾಲೋಕ ಆತ್ಮಾನಂ ಚ ದಿದೃಕ್ಷತಃ ।
ನಿರ್ಭಿಣ್ಣೇ  ಅಕ್ಷಿಣೀ ತಸ್ಯ ಜ್ಯೋತಿಶ್ಚಕ್ಷುರ್ಗುಣಗ್ರಹಃ ॥೨೧॥

ಬೋಧ್ಯಮಾನಸ್ಯ ಋಷಿಭಿರಾತ್ಮನಸ್ತಜ್ಜಿಘೃಕ್ಷತಃ ।
ಕರ್ಣೌ ಚ ನಿರಭಿದ್ಯೇತಾಂ ದಿಶಃ ಶ್ರೋತ್ರಂ ಗುಣಗ್ರಹಃ ॥೨೨॥

ವಸ್ತುನೋ ಮೃದುಕಾಠಿನ್ಯ ಲಘುಗುರ್ವೋಷ್ಣಶೀತತಾಮ್ ।
ಜಿಘೃಕ್ಷತಸ್ತ್ವಚ್ ನಿರ್ಭಿಣ್ಣಾ ತಸ್ಯಾಂ ರೋಮಮಹೀರುಹಾಃ ।
ತತ್ರ ಚಾಂತರ್ಬಹಿರ್ವಾತಸ್ತ್ವಚಾ ಲಬ್ಧಗುಣಾವೃತಃ ॥೨೩॥

ಹಸ್ತೌ ರುರುಹತುಸ್ತಸ್ಯ ನಾನಾಕರ್ಮಚಿಕೀರ್ಷಯಾ ।
ತಯೋಸ್ತು ಬಲವಾನಿಂದ್ರ ಆದಾನಮುಭಯಾಶ್ರಯಮ್ ॥೨೪॥

ಗತಿಂ ಚಿಕೀರ್ಷತಃ ಪಾದೌ ರುರುಹಾತೇಽಭಿಕಾಮತಃ ।
ಪದ್ಭ್ಯಾಂ ಯಜ್ಞಃ ಸ್ವಯಂ ಹವ್ಯಂ ಕರ್ಮ ಯತ್ ಕ್ರಿಯತೇ ನೃಭಿಃ ॥೨೫॥

ನಿರಭಿದ್ಯತ ಶಿಶ್ನೋ ವೈ ಪ್ರಜಾನಂದಾಮೃತಾರ್ಥಿನಃ ।
ಉಪಸ್ಥ ಆಸೀತ್ ಕಾಮಾನಾಂ ಪ್ರಿಯಂ ತದುಭಯಾಶ್ರಯಮ್ ॥೨೬॥

ಉತ್ಸಿಸೃಕ್ಷೋರ್ಧಾತುಮಲಂ ನಿರಭಿದ್ಯತ ವೈ ಗುದಮ್ ।
ತತಃ ಪಾಯುಸ್ತತೋ ಮಿತ್ರ ಉತ್ಸರ್ಗ ಉಭಯಾಶ್ರಯಃ ॥೨೭॥

ಆಸಿಸೃಕ್ಷೋ ಪುರಃ ಪುರ್ಯಾಂ ನಾಭಿದ್ವಾರಮಪಾವೃತಮ್ ।
ತತೋ ಪಾನಸ್ತತೋ ಮೃತ್ಯುಃ ಪೃಥಕ್ತ್ವಮುಭಯಾಶ್ರಯಮ್ ॥೨೮॥

ಆದಿತ್ಸೋರನ್ನಪಾನಾನಾಂ ಅಸೃಕ್ ಕುಕ್ಷ್ಯಂತ್ರನಾಡಿಕೇ ।
ನದ್ಯಃ ಸಮುದ್ರಾಶ್ಚ ತಯೋಸ್ತುಷ್ಟಿಃ ಪುಷ್ಟಿಸ್ತದಾಶ್ರಯೇ ॥೨೯॥

ನಿದಿಧ್ಯಾಸೋರಾತ್ಮಮಾಯಾಂ ಹೃದಯಂ ನಿರಭಿದ್ಯತ ।
ತತೋ ಮನಶ್ಚಂದ್ರ ಇತಿ ಸಂಕಲ್ಪಃ ಕಾಮ ಏವ ಚ ॥೩೦॥

ತ್ವಕ್ಚರ್ಮಮಾಂಸರುಧಿರ ಮೇದೋಮಜ್ಜಾಸ್ಥಿಧಾತವಃ ।
ಭೂಮ್ಯಪ್ತೇಜೋಮಯಾಃ ಸಪ್ತ ಪ್ರಾಣೋ ವ್ಯೋಮಾಂಬುವಾಯುಭಿಃ ॥೩೧॥

ಗುಣಾತ್ಮಕಾನೀಂದ್ರಿಯಾಣಿ ಭೂತಾದಿಪ್ರಭವಾ ಗುಣಾಃ ।
ಮನಃ ಸರ್ವವಿಕಾರಾತ್ಮಾ ಬುದ್ಧಿರ್ವಿಜ್ಞಾನರೂಪಿಣೀ ॥೩೨॥

ಯಾವ ರೀತಿ ಚತುರ್ಮುಖನ ಸೃಷ್ಟಿಯಾಯಿತು ಎನ್ನುವುದನ್ನು ಬಹಳ ವಿಚಿತ್ರವಾಗಿ ಇಲ್ಲಿ ವಿವರಿಸಿರುವುದನ್ನು ಕಾಣುತ್ತೇವೆ. ಭಗವಂತನ ರೇತಸ್ಸಿನಿಂದ, ಬ್ರಹ್ಮಾಂಡವೆಂಬ ಅಂಡದಲ್ಲಿ ಚತುರ್ಮುಖ ಬೆಳೆಯುತ್ತಿದ್ದಾನೆ. ಯಾವ ರೀತಿ ತಾಯಿಯ ಗರ್ಭದಲ್ಲಿ ಮಗು ಬೆಳೆಯುತ್ತದೋ ಹಾಗೆ ಚತುರ್ಮುಖ ಬ್ರಹ್ಮಾಂಡದಲ್ಲಿ ಬೆಳೆಯುತ್ತಿದ್ದಾನೆ. ಬಾಯಿ ಹುಟ್ಟಿತು ನಂತರ ಹಸಿವೆ ಹುಟ್ಟಿತು. ನಾಲಿಗೆ ಬಂತು. ಮಾತು ಹುಟ್ಟಿತು(ವಾಗ್ದೇವತೆ ಸರಸ್ವತಿ ಮತ್ತು ಅಧಿಷ್ಠಾನವಾಗಿ ಅಗ್ನಿಯ ಸೃಷ್ಟಿ). ಇದೇ ರೀತಿ ಮೂಗು, ಘ್ರಾಣೇಂದ್ರಿಯ, ಕಣ್ಣು, ಕಿವಿ, ಚರ್ಮ, ಹಸ್ತಗಳು, ಲಿಂಗ, ಪಾಯು, ಹೊಟ್ಟೆ, ಕರುಳು, ಹೃದಯ, ಮನಸ್ಸು, ಕಾಮ, ಸಂಕಲ್ಪ, ತ್ವಕ್, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ಶಬ್ದಾದಿ ಗುಣಗಳು, ಮನಸ್ಸು, ಬುದ್ಧಿಯ ಬೆಳವಣಿಗೆಯಾಯಿತು. ಮುಂದೆ ಲೋಕದಲ್ಲಿ ಯಾವ ರೀತಿ ಜೀವಿಗಳ ಸೃಷ್ಟಿ ಆಗಬೇಕೋ ಅದಕ್ಕೆ ಮಾದರಿಯಾಗಿ ಎಲ್ಲಾ ಅಂಗಾಂಗ ಮತ್ತು ಇಂದ್ರಿಯಗಳ ಸೃಷ್ಟಿ ಚತುರ್ಮುಖ ಬ್ರಹ್ಮನ ಶರೀರದಲ್ಲಾಯಿತು.

ಇಲ್ಲಿ ಚತುರ್ಮುಖ ಮಲವಿಸರ್ಜನೆ ಮಾಡ ಬಯಸಿದಾಗ ಗುದ, ಪಾಯು ಮತ್ತು ಅದರ ಅಭಿಮಾನಿ ದೇವತೆ ಮಿತ್ರನಿಂದಾಗಿ ವಿಸರ್ಜನೆ ಕ್ರಿಯೆ ನಡೆಯಿತು ಎನ್ನುವ ವಿವರಣೆ ಬಂದಿದೆ(ಶ್ಲೋಕ ೨೭). ದಿವ್ಯ ಶರೀರಿಯಾದ ಚತುರ್ಮುಖನಲ್ಲಿ ನಿಸ್ಸಾರವಾದುದು ಯಾವುದೂ ಇಲ್ಲ. ಹೀಗಿರುವಾಗ ಆತನ ಶರೀರದಲ್ಲಿ ಪಾಯು ಇಂದ್ರಿಯದ ಸೃಷ್ಟಿ ಏಕೆ ಎನ್ನುವ ಪ್ರಶ್ನೆ ಇಲ್ಲಿ ನಮಗೆ ಬರುತ್ತದೆ. ಈ ಪ್ರಶ್ನೆಗೆ ಪ್ರಮಾಣ ಸಹಿತ ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ವಿವರಣೆ ನೀಡಿರುವುದನ್ನು ನಾವು ಕಾಣಬಹುದು. ***ಮಲಾದಿಕಂ ಕದಾಚಿತ್ ತು ಬ್ರಹ್ಮಾಲೋಕಾಭಿಪತ್ತಯೇ| ಆತ್ಮನೋ ನಿರ್ಮಮೇ ಕಾಮಾತ್ ಸರ್ವೇಷಾಮಭವತ್ ತತಃ| ವಶಿತ್ವಾತ್ ತಸ್ಯ ದಿವ್ಯಾತ್ವಾದಿಚ್ಛಯಾ ಭವತಿ ಪ್ರಭೋಃ ॥ಇತಿ ಚ ॥*** ವಿಸರ್ಜನೇಂದ್ರಿಯದ ಅಗತ್ಯ ಚತುರ್ಮುಖನಿಗಿಲ್ಲ. ಆದರೆ ಲೋಕದಲ್ಲಿ ಜೀವಿಗಳಿಗಿದೆ. ಒಟ್ಟಿನಲ್ಲಿ, ಮೇಲೆ ಹೇಳಿದಂತೆ: ಮುಂದೆ ಲೋಕದಲ್ಲಿ ಯಾವ ರೀತಿ ಜೀವಿಗಳ ಸೃಷ್ಟಿ ಆಗಬೇಕೋ ಅದಕ್ಕೆ ಮಾದರಿಯಾಗಿ ಚತುರ್ಮುಖ ಬ್ರಹ್ಮನ ಶರೀರ ನಿರ್ಮಾಣವಾಯಿತು.

## ಮಹತೋಮಯ-ಅಣೋರಣೀಯ

ಏತದ್ ಭಗವತೋ ರೂಪಂ ಸ್ಥೂಲಂ ತೇ ವ್ಯಾಹೃತಂ ಮಯಾ ।
ಮಹ್ಯಾದಿಭಿಶ್ಚಾವರಣೈರಷ್ಟಭಿರ್ಬಹಿರಾವೃತಮ್ ॥೩೩॥

ಅತಃ ಪರಂ ಸೂಕ್ಷ್ಮತಮಮವ್ಯಕ್ತಂ ನಿರ್ವಿಶೇಷಣಮ್ ।
ಅನಾದಿಮಧ್ಯನಿಧನಂ ನಿತ್ಯಂ ವಾಙ್ಮನಸೋಃ ಪರಮ್ ॥೩೪॥

ಪಂಚಭೂತಗಳು, ಪ್ರಕೃತಿ, ಅಹಂಕಾರತತ್ತ್ವ ಮತ್ತು ಮಹತತ್ತ್ವ ಎನ್ನುವ ಎಂಟು ಆವರಣಗಳಿಂದ ಕೂಡಿದ ಬ್ರಹ್ಮಾಂಡ ಅಥವಾ ಬ್ರಹ್ಮನ ಶರೀರ ಮಹತೋಮಯನಾದ ಭಗವಂತನ ಸ್ಥೂಲರೂಪ. ***ಸ್ಥೂಲಂ ಭಗವತೋ ರೂಪಂ ಬ್ರಹ್ಮದೇಹ ಉದಾಹೃತಃ /*** ಭಗವಂತ ಚತುರ್ಮುಖನೊಳಗೆ ತುಂಬಿರುವುದರಿಂದ ಚತುರ್ಮುಖನ ರೂಪವೂ ಕೂಡಾ ಭಗವಂತನ ಪ್ರತೀಕ. ಹೀಗಾಗಿ ನಾವು ಪ್ರಪಂಚದಲ್ಲಿನ ಪ್ರತಿಯೊಂದು ವಸ್ತುವಿನಲ್ಲಿಯೂ ಕೂಡಾ ಭಗವಂತನನ್ನು ಕಾಣಬೇಕು. ಭಾಗವತದಲ್ಲೇ ಮುಂದೆ ಹೇಳುವಂತೆ: ***ಸೂರ್ಯೋSಗ್ನಿರ್ಬ್ರಾಹ್ಮಣಾ ಗಾವೋ ವೈಷ್ಣವಃ ಖಂ ಮರುಜ್ಜಲಂ । ಭೂರಾತ್ಮಾ ಸರ್ವಭೂತಾನಿ ಭದ್ರ ಪೂಜಾಪದಾನಿ ಮೇ ॥*** (ಭಾಗವತ ೧೧ನೇ ಸ್ಕಂಧ ಶ್ರೀಕೃಷ್ಣ-ಉದ್ಧವ ಸಂವಾದ). ಆದ್ದರಿಂದ ಬ್ರಹ್ಮಾಂಡವೇ ಮಹತೋಮಹೀಯನಾದ ಭಗವಂತನ ಸ್ಥೂಲರೂಪ. ಆದರೆ ಇಂಥಹ ಸ್ಥೂಲರೂಪ ಚಿಂತನೆ ಎಲ್ಲರಿಗೂ ಸಾಧ್ಯವಿಲ್ಲ. ಅದಕ್ಕಾಗಿ ಶುಕಾಚಾರ್ಯರು ಇಲ್ಲಿ ಭಗವಂತನ ಅಣೋರಣೀಯವಾದ ಸೂಕ್ಷರೂಪದ ವಿವರಣೆಯನ್ನೂ ನೀಡಿದ್ದಾರೆ.

ಪ್ರಪಂಚದಲ್ಲಿ ಮನುಷ್ಯನ ಬುದ್ಧಿಗೆ ಗೋಚರವಾಗುವ ಅತ್ಯಂತ ಸೂಕ್ಷ್ಮವಸ್ತು ಎಂದರೆ ಅದು ಜೀವಸ್ವರೂಪ. ಇಂಥಹ ಅಣುವಿಗೂ ಅಣುವಾಗಿರುವ ಜೀವಸ್ವರೂಪದ ಒಳಗೆ ಬಿಂಬರೂಪಿಯಾಗಿರುವ ಭಗವಂತನ ರೂಪವೇ ಆತನ ಸ್ವರೂಪರೂಪ. ಇಂಥಹ ಭಗವಂತನನ್ನು ತಿಳಿಯಬೇಕಾದರೆ ಮೊದಲು ನಮಗೆ ಆತ್ಮಸಾಕ್ಷಾತ್ಕಾರವಾಗಬೇಕು. ಆತ್ಮಸಾಕ್ಷಾತ್ಕಾರವಾದರೂ ಕೂಡಾ ನಿತ್ಯ ಭಗವಂತನ ದರ್ಶನ ಸಾಧ್ಯವಿಲ್ಲ. ಅವ್ಯಕ್ತನಾದ ಭಗವಂತ ಅಪರೋಕ್ಷ ಜ್ಞಾನಿಗಳಿಗೆ ಎಲ್ಲೋ ಒಮ್ಮೆ ಮಿಂಚಿನಂತೆ ಕಾಣಿಸಿ ಕಣ್ಮರೆಯಾಗುತ್ತಾನೆ. ಭಗವಂತನಲ್ಲಿ ಎಲ್ಲಾ ಗುಣಗಳೂ ಇವೆ.

ಆದರೆ ಅದನ್ನು ಮೀರಿಸುವ ಗುಣ ಯಾರಲ್ಲೂ ಇಲ್ಲ. ಭಗವಂತ ಸೃಷ್ಟಿ ಮಾಡುತ್ತಾನೆ. ಆದರೆ ಆತನನ್ನು ಇನ್ನ್ಯಾರೋ ಸೃಷ್ಟಿ ಮಾಡುವುದಿಲ್ಲ. ಭಗವಂತ ಸಂಹಾರ ಮಾಡುತ್ತಾನೆ. ಆದರೆ ಆತನನ್ನು ಯಾರೂ ಸಂಹಾರ ಮಾಡಲು ಸಾಧ್ಯವಿಲ್ಲ. ಭಗವಂತ ಪಾಲನೆ ಮಾಡುತ್ತಾನೆ. ಆದರೆ ಆತನನ್ನು ಪಾಲಿಸುವ ಇನ್ನೊಂದು ಶಕ್ತಿ ಇಲ್ಲ. ಒಟ್ಟಿನಲ್ಲಿ ಹೇಳಬೇಕೆಂದರೆ ನಮ್ಮ ಮಾತು-ಮನಸ್ಸಿಗೆ ನಿಲುಕದ ತತ್ತ್ವ ಆ ಭಗವಂತ. ಅಂತಹ ಭಗವಂತನನ್ನು ಶಬ್ದಗಳಲ್ಲಿ ಸೆರೆಹಿಡಿದು ಖಚಿತವಾಗಿ ಹೇಳುವುದು ಅಸಾಧ್ಯ.

ಅಮುನೀ ಭಗವದ್ರೂಪೇ ಮಯಾ ತೇ ಹ್ಯನುವರ್ಣಿತೇ ।
ಉಭೇ ಅಪಿ ನ ಗೃಹ್ಣಂತಿ ಮಾಯಾಸೃSಷ್ಟೇ ವಿಪಶ್ಚಿತಃ ॥೩೫॥

ಭಗವಂತನ ಅಣೋರಣೀಯರೂಪ ಮತ್ತು ಮಹತೋಮಯರೂಪದ ವರ್ಣನೆ ಮಾಡಿದ ಶುಕಾಚಾರ್ಯರು ಹೇಳುತ್ತಾರೆ: " ಅಜ್ಞಾನದ ಆವರಣದ ಜೊತೆಗೆ ಸೃಷ್ಟಿಯಾದ ಈ ಪ್ರಪಂಚದಲ್ಲಿ ತಿಳುವಳಿಕೆ ಇಲ್ಲದ ಮಂದಿಗೆ ಭಗವಂತನ ಈ ಯಾವ ರೂಪದ ಗ್ರಹಣವೂ ಆಗುವುದಿಲ್ಲ" ಎಂದು.

ಸ ವಾಚ್ಯವಾಚಕತಯಾ ಭಗವಾನ್ ಬ್ರಹ್ಮರೂಪಧೃಕ್ ।
ನಾಮರೂಪಕ್ರಿಯಾ ಧತ್ತೇ ಸಕರ್ಮಾಕರ್ಮಕಃ ಪರಃ ॥೩೬॥

ಶಬ್ದಗಳಿಂದ ವರ್ಣಿಸಲಾಗದ ಭಗವಂತನನ್ನು ಶುಕಾಚಾರ್ಯರು ವರ್ಣಿಸುವುದನ್ನು ನಾವಿಲ್ಲಿ ಕಾಣುತ್ತೇವೆ. "ಭಗವಂತ ಸಕರ್ಮಕ ಆದರೂ ಆಕರ್ಮಕಃ" ಎಂದಿದ್ದಾರೆ ಶುಕಾಚಾರ್ಯರು. ಅಂದರೆ ಭಗವಂತ ಎಲ್ಲರೊಳಗಿದ್ದು ಎಲ್ಲವನ್ನೂ ಮಾಡುತ್ತಾನೆ. ಆದರೆ ಯಾವುದೇ ಕರ್ಮದ ಲೇಪ ಆತನಿಗಿಲ್ಲ. ಮೊದಲು ಚತುರ್ಮುಖನ ಒಳಗೆ ಪ್ರವೇಶಿಸಿದ ಭಗವಂತ ಅನೇಕ ರೂಪಿಯಾಗಿ ಸಮಸ್ತ ಪಿಂಡಾಂಡದ ಒಳಗೆ ನೆಲೆಸಿ ಅದಕ್ಕೊಂದು ರೂಪ ಕೊಟ್ಟ. ಈ ರೀತಿ ಸಮಸ್ತ ಬ್ರಹ್ಮಾಂಡ-ಪಿಂಡಾಂಡದಲ್ಲಿ ನೆಲೆಸಿರುವ ಭಗವಂತ ಸರ್ವಶಬ್ದವಾಚ್ಯ. ಪ್ರಪಂಚದಲ್ಲಿನ ಸಮಸ್ತ ನಾಮಗಳೂ ಭಗವಂತನ ಅನ್ವರ್ಥ ನಾಮ. ಪ್ರಪಂಚದ ಸಮಸ್ತ ರೂಪಗಳೂ ಅವನ ಪ್ರತೀಕ. ಹೀಗಾಗಿ ಭಗವಂತನಿಗೆ ಅನ್ವಯವಾಗದ ಯಾವುದೇ ವಿಷಯ ಈ ಪ್ರಪಂಚದಲ್ಲಿಲ್ಲ.

## ಚತುರ್ಮುಖನ ಸೃಷ್ಟಿಯ ನಂತರ

ಪ್ರಜಾಪತೀನ್ ಮನೂನ್ ದೇವಾನೃಷೀನ್ ಪಿತೃಗಣಾನ್ ಪ್ರಥಕ್ ।
ಸಿದ್ಧಚಾರಣಗಂಧರ್ವಾನ್ ವಿದ್ಯಾಧ್ರಾಸುರಗುಹ್ಯಕಾನ್ ॥೩೭॥

ಕಿನ್ನರಾಪ್ಸರಸೋ ನಾಗಾನ್ ಸರ್ಪಾನ್ ಕಿಂಪುರುಷಾನಪಿ ।
ಮಾತೃರಕ್ಷಃಪಿಶಾಚಾಂಶ್ಚ ಪ್ರೇತಭೂತವಿನಾಯಕಾನ್ ॥೩೮॥

ಕೂಷ್ಮಾಂಡೋನ್ಮಾದವೇತಾಳಾನ್ ಯತುಧಾನಾನ್ ಗ್ರಹಾನಪಿ ।
ಖಗಾನ್ ಮೃಗಾನ್ ಪಶೂನ್ ವೃಕ್ಷಾನ್ ಗಿರೀನ್ ನೃಪ ಸರೀಸೃಪಾನ್ ॥೩೯॥

ವಿವಿಧಾಶ್ಚತುರ್ವಿಧಾ ಯೇSನ್ಯೇ ಜಲಸ್ಥಲನಭೌಕಸಃ ।
ಕುಶಲಾಕುಶಲಮಿಶ್ರಾಣಾಂ ಕರ್ಮಣಾಂ ಗತಯಸ್ತ್ವಿಮಾಃ ॥೪೦॥

ಚತುರ್ಮುಖನನ್ನು ಸೃಷ್ಟಿಮಾಡಿದ ಭಗವಂತ ನಂತರ ಪ್ರಜಾಪತಿಗಳನ್ನು, ದೇವಾಸುರರನ್ನು, ಮಾನವರನ್ನು, ಸಹಸ್ರಾರು ಋಷಿಗಳನ್ನು, ಪಿತೃದೇವತೆಗಳ ಗುಂಪನ್ನು, ದೇವತೆಗಳ ಪರಿಚಾರಕರಾದ ಸಿದ್ಧರು( ದೇವತೆಗಳ ಗುಣಗಾನ ಮಾಡುವವರು), ಚಾರಣರು(ದೇವತೆಗಳ ರಥ ಸಾರಥಿಗಳು), ಗಂಧರ್ವರು(ಸಂಗೀತಗಾರರು), ವಿದ್ಯಾಧರರು( ನೃತ್ಯಕಾರರು ಮತ್ತು ಇತರರು), ಅಸುರರು(ರುದ್ರಗಣ ಇತ್ಯಾದಿ), ಗುಹ್ಯಕರು(ಗೂಡಾಚಾರಿಗಳು ಇತ್ಯಾದಿ), ಕಿನ್ನರ, ಕಿಂಪುರುಷ, ಯಕ್ಷರಾಕ್ಷಸರು, ಭೂತ-ಪ್ರೇತ ಪಿಶಾಚಾದಿಗಳು, ಗ್ರಹಗಳು, ಮೃಗ-ಪಕ್ಷಿಗಳು, ವೃಕ್ಷಗಳು, ನದಿ-ಪರ್ವತಗಳು, ಇತ್ಯಾದಿಗಳನ್ನು ಜೀವರುಗಳ ಕರ್ಮಕ್ಕನುಗುಣವಾಗಿ ಸೃಷ್ಟಿ ಮಾಡಿ ಧಾರಣೆ ಮಾಡಿದ.

ಸತ್ತ್ವಂ ರಜಸ್ತಮ ಇತಿ ತಿಸ್ರಃ ಸುರನೃನಾರಕಾಃ ।
ತತ್ರಾಪ್ಯೇಕೈಕಶೋ ರಾಜನ್ ಭಿದ್ಯಂತೇ ಗತಯಸ್ತ್ರಿಧಾ ॥೪೧॥

ಮುಖ್ಯವಾಗಿ ಭಗವಂತ ಮೂರು ತೆರನಾದ ಜೀವರುಗಳ ಸೃಷ್ಟಿ ಮಾಡಿರುವುದನ್ನು ಇಲ್ಲಿ ಶುಕಾಚಾರ್ಯರು ಪರೀಕ್ಷಿತನಿಗೆ ವಿವರಿಸುವುದನ್ನು ನಾವು ಕಾಣುತ್ತೇವೆ. ೧. ಸತ್ವ ಪ್ರಧಾನರಾದ ದೇವತೆಗಳು. ೨. ರಜ ಪ್ರಧಾನರಾದ ಮಾನವರು ಮತ್ತು ೩. ತಮ ಪ್ರಧಾನರಾದ ಅಸುರರು. ಈ ಮೂರು ವಿಧದಲ್ಲಿ ಪ್ರತಿಯೊಂದು ವಿಧದಲ್ಲೂ ಮತ್ತೆ ಸಾತ್ವಿಕ-ರಾಜಸ-ತಾಮಸವೆಂಬ ಮೂರು ವರ್ಗಗಳಿವೆ. ಅವರ ವರ್ಣನೆ ಈ ಕೆಳಗಿನಂತಿದೆ:

*ತಾಮಸಾಸ್ತಾಮಸಾ ದೈತ್ಯಾಃ ಪ್ರಧಾನಾ ದೇವಶತ್ರವಃ।*
*ತಾಮಸಾ ರಾಜಸಾಸ್ತೇಷಾಮನುಗಾಸ್ತೇಷು ಸಾತ್ವಿಕಾಃ।*
*ಅನಾಕ್ಯಾತಾಸುರಾಃ ಪ್ರೋಕ್ತಾ ಮಾನುಷಾ ದುಷ್ಟಚಾರಿಣಃ।*
*ರಾಜಸಾಸ್ತಾಮಸಾಶ್ಚೈವ ಮಧ್ಯಾ. ರಾಜಸರಾಜಸಾಃ।*
*ರಾಜಸಾಃ ಸಾತ್ವಿಕಾಸ್ತತ್ರ ಮಾನುಷೇಷೂತ್ತಮಾ ಗಣಾಃ।*
*ದೇವಾಃ ಪೃಥಗನಾಖ್ಯಾತಾಃ ಸ್ಮೃತಾಃ ಸಾತ್ವಿಕತಾಮಸಾಃ।*
*ಅತಾತ್ವಿಕಾಸ್ತಥಾSSಖ್ಯಾತಾಃ ಸ್ಮೃತಾಃ ಸಾತ್ವಿಕರಾಜಸಾಃ।*
*ಸಾತ್ವಿಕಾಃ ಸಾತ್ವಿಕಾಸ್ತತ್ರ ತಾತ್ವಿಕಾಃ ಪರಿಕೀರ್ತಿತಾಃ।*
*ತೇಷಾಂ ಚ ಸಾತ್ವಿಕಾಃ ಶೇಷಗರುತ್ಮದ್ರುದ್ರತತ್ಸ್ತ್ರಿಯಃ।*
*ತತೋSಪಿ ದೇವೀ ಬ್ರಹ್ಮಾಣೀ ಬ್ರಹ್ಮಾ ಚೈವ ತತಃ ಸ್ವಯಮ್*

ದೈತ್ಯ ಪ್ರಧಾನರು(ಉದಾಹರಣೆಗೆ ಕಾಲನೇಮಿ) ತಾಮಸರಲ್ಲಿ-ತಾಮಸರು. ಇಂತಹ ದೈತ್ಯ ಪ್ರಧಾನರ ಪರಿವಾರದವರು ತಾಮಸರಲ್ಲಿ-ರಾಜಸರು. ಇನ್ನು ಅಪ್ರಸಿದ್ಧರಾದ ಅಸುರರು ತಾಮಸರಲ್ಲಿ-ಸಾತ್ವಿಕರು.
ಅತ್ಯಂತ ನೀಚರಾದ ಮಾನವರು ರಾಜಸರಲ್ಲಿ-ತಾಮಸರು. ಸಂಸಾರ ಚಕ್ರಭ್ರಮಣದಲ್ಲಿರುವ ಮನುಷ್ಯಮಧ್ಯರು ರಾಜಸರಲ್ಲಿ-ರಾಜಸರು. ಭಗವಂತನನ್ನು ಅನುಸರಿಸಿ ಮೋಕ್ಷ ಮಾರ್ಗದಲ್ಲಿ ನಡೆಯುವ ಮಾನವರು ರಾಜಸರಲ್ಲಿ-ಸಾತ್ವಿಕರು.
ಅಪ್ರಸಿದ್ಧವಾದ ದೇವತೆಗಳು(ಒಂಬತ್ತು ಕೋಟಿ ದೇವತೆಗಳಲ್ಲಿ ಅನಾಖ್ಯಾತ ದೇವತೆಗಳು) ಸಾತ್ವಿಕರಲ್ಲಿ-ತಾಮಸರು. ಪ್ರಸಿದ್ಧರಾದ ಆದರೆ ತತ್ತ್ವಾಭಿಮಾನಿ ಅಲ್ಲದ ದೇವತೆಗಳು ಸಾತ್ವಿಕರಲ್ಲಿ-ರಾಜಸರು(ಉದಾಹರಣೆಗೆ ಕರ್ಮ ದೇವತೆಗಳು). ತತ್ತ್ವಾಭಿಮಾನಿ ದೇವತೆಗಳು ಸಾತ್ವಿಕರಲ್ಲಿ ಸಾತ್ವಿಕರು.
ಸಾತ್ವಿಕ-ಸಾತ್ವಿಕರಲ್ಲಿಯೂ-ಸಾತ್ವಿಕರು ಗರುಡ-ಶೇಷ-ರುದ್ರರು ಮತ್ತು ಅವರ ಪತ್ನಿಯರು. ಸಾತ್ವಿಕ-ಸಾತ್ವಿಕ-ಸಾತ್ವಿಕರಲ್ಲಿಯೂ- ಸಾತ್ವಿಕರು ಸರಸ್ವತಿ-ಭಾರತೀದೇವಿಯರು. ಇವರೆಲ್ಲರಿಗಿಂತ ಮೇಲಿನ ಸಾತ್ವಿಕ-ಸಾತ್ವಿಕ-ಸಾತ್ವಿಕ-ಸಾತ್ವಿಕರಲ್ಲಿ-ಸಾತ್ವಿಕರು ಬ್ರಹ್ಮ-ವಾಯುಗಳು.

**ಯದೈವ್ಯೆಕತಮೋSನ್ಯಾಭ್ಯಾಂ ಸ್ವಭಾವ ಉಪಹನ್ಯತೇ ।**
**ತದೈವೇದಂ ಜಗದ್ ಧಾತಾ ಭಗವಾನ್ ಧರ್ಮರೂಪಧೃಕ್ ।**
**ಪುಷ್ಣಾತಿ ಸ್ಥಾಪಯನ್ ವಿಶ್ವಂ ತಿರ್ಯಙ್ನರಸುರಾದಿಭಿಃ ॥೪೨॥**

ಭಗವಂತನ ಸೃಷ್ಟಿ ಪ್ರಕ್ರಿಯೆಯನ್ನು ವಿವರಿಸಿದ ಶುಕಾಚಾರ್ಯರು ಇಲ್ಲಿ ಆತ ತಾನು ಸೃಷ್ಟಿಸಿದ ಪ್ರಪಂಚದ ರಕ್ಷಣೆಯನ್ನು ಹೇಗೆ ಮಾಡುತ್ತಾನೆ ಎನ್ನುವುದನ್ನು ವರ್ಣಿಸಿದ್ದಾರೆ. ತ್ರಿವಿಧ ಸಾತ್ವಿಕರಲ್ಲಿ ಯಾರನ್ನಾದರೂ ರಾಜಸರು ಅಥವಾ ತಾಮಸರು ಬಾಧಿಸಿದಾಗ, ಅಸುರ ಶಕ್ತಿಗಳು ಪ್ರಪಂಚ ನಾಶ ಮಾಡುವ ಸಂಕಲ್ಪ ತೊಟ್ಟಾಗ, ಧರ್ಮ ಸಂಸ್ಥಾಪಕನಾಗಿ ಭಗವಂತ ಪ್ರಾಣಿ-ನರ-ಸುರ ಇತ್ಯಾದಿ ರೂಪಿಯಾಗಿ ಬಂದು ಲೋಕವನ್ನು ರಕ್ಷಿಸಿ ಪೋಷಿಸುತ್ತಾನೆ.

**ತತಃ ಕಾಲಾಗ್ನಿರುದ್ರಾತ್ಮಾ ಯತ್ ಸೃಷ್ಟಮಿದಮಾತ್ಮನಃ ।**
**ಸನ್ನಿಯಚ್ಛತಿ ತತ್ ಕಾಲೇ ಘನಾನೀಕಮಿವಾನಿಲಃ ॥೪೩॥**

ಸೃಷ್ಟಿಕರ್ತನೇ ಸಂಹಾರ ಕರ್ತ. ಸೃಷ್ಟಿಯಾದ ಭೂಮಿಯ ಆಯಸ್ಸು ೪೩೨ ಕೋಟಿ ವರ್ಷಗಳು. ಆ ನಂತರ ಲಯಕಾಲದಲ್ಲಿ ಕಾಲ-ಅಗ್ನಿ-ರುದ್ರರ ಅಂತರ್ಗತ ನರಸಿಂಹ ರೂಪಿಯಾಗಿ ನಿಲ್ಲುವ ಭಗವಂತ ತಾನೇ ನಿರ್ಮಿಸಿದ ಜಗತ್ತನ್ನು ಗಾಳಿ ಮೋಡವನ್ನು ಚದುರಿಸುವಂತೆ ಚದುರಿಸಿ ಲಯಗೊಳಿಸುತ್ತಾನೆ.
ಭಗವಂತನ ಸೃಷ್ಟಿ-ಸ್ಥಿತಿ-ಸಂಹಾರ ಕ್ರಿಯೆಯನ್ನು ವಾಮನ ಪುರಾಣ ಹೀಗೆ ವರ್ಣಿಸಿದೆ: ***ಮತ್ಸ್ಯಾದಿರೂಪೀ ಪೋಷಯತಿ ನೃಸಿಂಹೋ ರುದ್ರಸಂಸ್ಥಿತಃ । ವಿಲಾಪಯೇದ್ವಿರಿಞ್ಚಸ್ಥಃ ಸೃಜತೇ ವಿಷ್ಣುರವ್ಯಯಃ ॥ ಇತಿ ವಾಮನೇ ॥***
ಮತ್ಸ್ಯಾದಿ ರೂಪದಿಂದ ಭಗವಂತ ಲೋಕವನ್ನು ರಕ್ಷಿಸುತ್ತಾನೆ, ರುದ್ರನಲ್ಲಿ ನರಸಿಂಹನಾಗಿ ನಿಂತು ಲಯಗೊಳಿಸುತ್ತಾನೆ ಮತ್ತು ಮರಳಿ ಬ್ರಹ್ಮನಲ್ಲಿ ನಿಂತು ಆತನೇ ಸೃಷ್ಟಿ ಮಾಡುತ್ತಾನೆ.

ಇತ್ಥಂಭಾವೇನ ಕಥಿತೋ ಭಗವಾನ್ ಭಗವತ್ತಮಃ ।
ನೇತ್ಥಂಭಾವೇನ ಹಿ ಪರಂ ದ್ರಷ್ಟುಮರ್ಹಂತಿ ಸೂರಯಃ ॥೪೪॥

ಇಲ್ಲಿ ಶುಕಾಚಾರ್ಯರು ಪರೀಕ್ಷಿತನಲ್ಲಿ ಹೇಳುತ್ತಾರೆ: ಇಲ್ಲಿಯ ತನಕ ಭಗವಂತನ ಸೃಷ್ಟಿ-ಸ್ಥಿತಿ-ಸಂಹಾರ ಇತ್ಯಾದಿಯ ಬಗ್ಗೆ ಕರಾರುವಕ್ಕಾಗಿ ಹೇಳಿದೆ. ಜ್ಞಾನಿಗಳು ಎಲ್ಲಾ ದೇವಾದಿ ದೇವತೆಗಳಿಗೂ ಹಿರಿಯನಾದ (ಭಗವತ್ತಮಃ) ನಾರಾಯಣನನ್ನು ಹೀಗೆಯೇ ತಿಳಿದುಕೊಳ್ಳುತ್ತಾರೆ" ಎಂದು. [*ಭಗವತ್ತಮಃ / ನಾ – ಪುರುಷಃ*, ಇಲ್ಲಿ 'ನಾ' ಎಂದರೆ ಪುರುಷಸೂಕ್ತ ಪ್ರತಿಪಾದ್ಯನಾದ ನಾರಾಯಣ ಎಂದರ್ಥ]

ನ ಚಾಸ್ಯ ಜನ್ಮಕರ್ಮಾಣಿ ಪರಸ್ಯ ನವಿಧೀಯತೇ ।
ಕರ್ತೃತ್ವಪ್ರತಿಷೇಧಾರ್ಥಂ ಮಾಯಯಾSರೋಪಿತಂ ಹಿ ತತ್ ॥೪೫॥

ಭಗವಂತನ ಜನ್ಮ- ಕರ್ಮಗಳ ಬಗ್ಗೆ, ಆತ ಅವತಾರ ರೂಪದಿಂದ ಬಂದು ಭೂಮಿಯಲ್ಲಿ ತೋರಿದ ಲೀಲೆಗಳ ಬಗ್ಗೆ ಶಾಸ್ತ್ರಗಳು ವಿವರಣೆ ನೀಡುತ್ತವೆ. ಆದರೆ ಆತ ಏಕೆ ಹೀಗೆ ಅವತಾರ ರೂಪಿಯಾಗಿ ಬರುತ್ತಾನೆ? ಇಚ್ಛಾಮಾತ್ರದಿಂದ ಎಲ್ಲವನ್ನೂ ಮಾಡಬಲ್ಲ ಭಗವಂತ ಅವತಾರ ಮಾಡುವ ಉದ್ದೇಶವೇನು ಎನ್ನುವುದನ್ನು ಈ ಶ್ಲೋಕ ವಿವರಿಸುತ್ತದೆ. ಭಗವಂತ ನಮ್ಮ ಮೇಲಿನ ಕಾರುಣ್ಯದಿಂದ, ನಮ್ಮನ್ನು ಈ ಸಂಸಾರ ಬಂಧನದಿಂದ ಮುಕ್ತಿಗೊಳಿಸುವುದಕ್ಕಾಗಿ, ತನ್ನ ಇಚ್ಛೆಇಚ್ಛೆಯಂತೆ, ಅವತಾರರೂಪಿಯಾಗಿ ಬಂದು, ನಮಗೆ ತನ್ನ ಜ್ಞಾನವನ್ನು ನೀಡಿ ಅನುಗ್ರಹಿಸುತ್ತಾನೆ. ಒಂದು ವೇಳೆ ಭಗವಂತ ಯಾವ ಅವತಾರವನ್ನು ತಾಳದೇ ವೈಕುಂಠದಲ್ಲೇ ನಿಂತು ಎಲ್ಲವನ್ನೂ ಮಾಡಿದಿದ್ದರೆ, ಇಂದು ನಮಗೆ ಭಗವಂತನ ಕುರಿತು ಯಾವ ಜ್ಞಾನವೂ ಬರುತ್ತಿರಲಿಲ್ಲ.

ಅಯಂ ತೇ ಬ್ರಹ್ಮಣಃ ಕಲ್ಪಃ ಸವಿಕಲ್ಪ ಉದಾಹೃತಃ ।
ವಿಧಿಃ ಸಾಧಾರಣೋ ಯತ್ರ ಸರ್ಗಾಃ ಪ್ರಾಕೃತವೈಕೃತಾಃ ॥೪೬॥

"ಇಲ್ಲಿಯ ತನಕ ಬ್ರಹ್ಮನ ಸೃಷ್ಟಿಯಿಂದ ಹಿಡಿದು, ಪಂಚಭೂತಗಳ ಸೃಷ್ಟಿ, ಬ್ರಹ್ಮಾಂಡದ ಸೃಷ್ಟಿ ಎಲ್ಲಾ ವಿವರಗಳನ್ನು ಸಂಕ್ಷಿಪ್ತವಾಗಿ ನಾನು ನಿನಗೆ ವಿವರಿಸಿದೆ" ಎಂದು ಶುಕಾಚಾರ್ಯರು ಪರೀಕ್ಷಿತನಿಗೆ ಹೇಳಿದರು ಎನ್ನುವಲ್ಲಿಗೆ ಭಾಗವತದ ಎರಡನೇ ಸ್ಕಂಧ ಮುಕ್ತಾಯವಾಯಿತು.

॥ ಇತಿ ಶ್ರೀಮದ್ಭಾಗವತೇ ಮಹಾ ಪುರಾಣೇ ದ್ವಿತೀಯಸ್ಕಂಧೇ ದಶಮೋSಧ್ಯಾಯಃ॥

ಭಾಗವತ ಮಹಾ ಪುರಾಣದ ಎರಡನೇ ಸ್ಕಂಧದ ಹತ್ತನೇ ಅಧ್ಯಾಯ ಮತ್ತು ಎರಡನೇ ಸ್ಕಂಧ ಮುಗಿಯಿತು.

॥ಸಮಾಪ್ತಶ್ಚ ದ್ವಿತೀಯಸ್ಕಂಧಃ॥

*********

# ದ್ವಿತೀಯ ಸ್ಕಂಧ ಮೂಲ ಶ್ಲೋಕ

## ಅಥ ಪ್ರಥಮೋSಧ್ಯಾಯಃ

॥ ಓಂ ನಮೋ ಭಗವತೇ ವಾಸುದೇವಾಯ ಓಂ ॥

॥ ಹರಿಃ ಓಂ ॥

ಶ್ರೀಶುಕ ಉವಾಚ--

ವರೀಯಾನೇಷ ತೇ ಪ್ರಶ್ನಃ ಕೃತೋ ಲೋಕಹಿತಂ ನೃಪ ।
ಆತ್ಮವಿತ್ಸಮ್ಮತಃ ಪುಂಸಾಂ ಶ್ರೋತವ್ಯಾದಿಷು ಯಃ ಪರಃ ॥೦೧॥

ಶ್ರೋತವ್ಯಾನೀಹ ರಾಜೇಂದ್ರ ನೃಣಾಂ ಸಂತಿ ಸಹಸ್ರಶಃ ।
ಅಪಶ್ಯತಾಮಾತ್ಮತತ್ತ್ವಂ ಗೃಹೇಷು ಗೃಹಮೇಧಿನಾಂ ॥೦೨॥

ನಿದ್ರಯಾ ಹ್ರಿಯತೇ ನಕ್ತಂ ವ್ಯವಾಯೇನ ನವಂ ವಯಃ ।
ದಿವಾ ಚಾರ್ಥೇಹಯಾ ರಾಜನ್ ಕುಟುಂಬಭರಣೇನ ವಾ ॥೦೩॥

ಗೇಹಾಪತ್ಯಕಳತ್ರಾದಿಷ್ವಾತ್ಮದೈನ್ಯೇಷ್ವಸತ್ಸ್ವಪಿ ।
ತೇಷು ಪ್ರಸಕ್ತೋ ನಿಧನಂ ಪಶ್ಯನ್ನಪಿ ನ ಪಶ್ಯತಿ ॥೦೪॥

ತಸ್ಮಾದ್ ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾSಭಯಮ್ ॥೦೫॥

ಏತಾವಾನ್ ಸಾಂಖ್ಯಯೋಗಾಭ್ಯಾಂ ಸ್ವಧರ್ಮಪರಿನಿಷ್ಠಯಾ ।
ಜನ್ಮಲಾಭಃ ಪರಃ ಪುಂಸಾಮಂತೇ ನಾರಾಯಣಸ್ಮೃತಿಃ ॥೦೬॥

ಪ್ರಾಯೇಣ ಮುನಯೋ ರಾಜನ್ ನಿವೃತ್ತಾ ವಿಧಿನಿಷೇಧತಃ ।
ನೈರ್ಗುಣ್ಯಸ್ಥಾ ರಮಂತೇ ಸ್ಮ ಗುಣಾನುಕಥನೇ ಹರೇಃ ॥೦೭॥

ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಂ ।
ಅಧೀತವಾನ್ ದ್ವಾಪರಾದೌ ಪಿತುರ್ದ್ವೈಪಾಯನಾದಹಮ್ ॥೦೮॥

ಪರಿನಿಷ್ಠಿತೋSಪಿ ನೈರ್ಗುಣ್ಯ ಉತ್ತಮಶ್ಲೋಕಲೀಲಯಾ ।
ಗೃಹೀತಚೇತಾ ರಾಜರ್ಷ ಆಖ್ಯಾನಂ ಯದಧೀತವಾನ್ ॥೦೯॥

ತದಹಂ ತೇಽಭಿಧಾಸ್ಯಾಮಿ ಮಹಾಪೂರುಷಿಕೋ ಭವಾನ್ ।
ಯತ್ರ ಶ್ರದ್ದಧತಾಮಾಶು ಸ್ಯಾನ್ಮುಕುಂದೇ ಮತಿಃ ಸತೀ ॥೧೦॥

ಏತನ್ನಿರ್ವಿದ್ಯಮಾನಾನಾಮಿಚ್ಛತಾಮಕುತೋಭಯಮ್ ।
ಯೋಗಿನಾಂ ನೃಪ ನಿರ್ಣೀತಂ ಹರೇರ್ನಾಮಾನುಕೀರ್ತನಮ್ ॥೧೧॥

ಕಿಂ ಪ್ರಮತ್ತಸ್ಯ ಬಹುಭಿಃ ಪರೋಕ್ಷೈರ್ಹಾಯನೈರಿಹ ।
ಪರಂ ಮುಹೂರ್ತಂ ವಿದಿತಂ ಘಟತೇ ಶ್ರೇಯಸೇ ಯತಃ ॥೧೨॥

ಖಟ್ವಾಂಗೋ ನಾಮ ರಾಜರ್ಷಿಃ ಜ್ಞಾತ್ವೇಯತ್ತಾಮಿಹಾಯುಷಃ ।
ಮುಹೂರ್ತಾತ್ ಸಂಗಮುತ್ಸೃಜ್ಯ ಗತವಾನಭಯಂ ಹರಿಮ್ ॥೧೩॥

ತವಾಪ್ಯೇತರ್ಹಿ ಕೌರವ್ಯ ಸಪ್ತಾಹಂ ಜೀವಿತಾವಧಿಃ ।
ಉಪಕಲ್ಪಯ ತತ್ಸರ್ವಂ ಯತ್ತಾವತ್ ಸಾಂಪರಾಯಿಕಮ್ ॥೧೪॥

ಅಂತಕಾಲೇ ತು ಪುರುಷ ಆಗತೇ ಗತಸಾಧ್ವಸಃ ।
ಛಿಂದ್ಯಾದಸಂಗಶಸ್ತ್ರೇಣ ಸ್ಪೃಹಾಂ ದೇಹೇಽನು ಯೇ ಚ ತಮ್ ॥೧೫॥

ಗೃಹಾತ್ ಪ್ರವ್ರಜಿತೋ ಧೀರಃ ಪುಣ್ಯತೀರ್ಥಜಲಾಪ್ಲುತಃ ।
ಶುಚೌ ವಿವಿಕ್ತ ಆಸೀನೋ ವಿಧಿವತ್ ಕಲ್ಪಿತಾಸನೇ ॥೧೬॥

ಅಭ್ಯಸೇನ್ಮನಸಾ ಶುದ್ಧಂ ತ್ರಿವೃತ್ ಬ್ರಹ್ಮಾಕ್ಷರಂ ಪರಮ್ ।
ಮನೋ ಯಚ್ಛೇಜ್ಜಿತಶ್ವಾಸೋ ಬ್ರಹ್ಮಬೀಜಮವಿಸ್ಮರನ್ ॥೧೭॥

ನಿಯಚ್ಛೇದ್ವಿಷಯೇಭ್ಯೋಽಕ್ಷಾನ್ ಮನಸಾ ಬುದ್ಧಿಸಾರಥಿಃ ।
ಮನಃ ಕರ್ಮಭಿರಾಕ್ಷಿಪ್ತಂ ಶುಭಾರ್ಥೇ ಧಾರಯೇದ್ ಧಿಯಾ ॥೧೮॥

ತತ್ರೈಕಾವಯವಂ ಧ್ಯಾಯೇದವ್ಯುಚ್ಛಿನ್ನೇನ ಚೇತಸಾ ।
ಮನೋ ನಿರ್ವಿಷಯಂ ಯುಕ್ತ್ವಾ ತತಃ ಕಿಂಚಿನ್ನ ಸಂಸ್ಮರೇತ್ ।
ಪದಂ ತತ್ಪರಮಂ ವಿಷ್ಣೋರ್ಮನೋ ಯತ್ರ ಪ್ರಸೀದತಿ ॥೧೯॥

ರಜಸ್ತಮೋಭ್ಯಾಮಾಕ್ಷಿಪ್ತಂ ವಿಮೂಢಂ ಮನ ಆತ್ಮನಃ ।
ಯಚ್ಛೇದ್ಧಾರಣಯಾ ಧೀರೋ ಹಂತಿ ಯಾ ತತ್ಕೃತಂ ಮಲಮ್ ॥೨೦॥

ಯಸ್ಯಾಂ ಸಂಧಾರ್ಯಮಾಣಾಯಾಂ ಯೋಗಿನೋ ಭಕ್ತಿಲಕ್ಷಣಃ ।
ಆಶು ಸಂಪದ್ಯತೇ ಯೋಗ ಆಶ್ರಯಂ ಭದ್ರಮೀಕ್ಷತಃ ॥೨೧॥

ರಾಜೋವಾಚ--
ಯಥಾ ಸಂಧಾರ್ಯತೇ ಬ್ರಹ್ಮನ್ ಧಾರಣಾ ಯತ್ರ ಸಮ್ಮತಾ ।
ಯಾದೃಶೀ ವಾ ಹರೇದಾಶು ಪುರುಷಸ್ಯ ಮನೋಮಲಮ್ ॥೨೨॥

ಶ್ರೀಶುಕ ಉವಾಚ--
ಜಿತಾಸನೋ ಜಿತಶ್ವಾಸೋ ಜಿತಸಂಗೋ ಜಿತೇಂದ್ರಿಯಃ ।
ಸ್ಥೂಲೇ ಭಗವತೋ ರೂಪೇ ಮನಃ ಸಂಧಾರಯೇದ್ ಧಿಯಾ ॥೨೩॥

ವಿಶೇಷಸ್ತಸ್ಯ ದೇಹೋSಯಂ ಸ್ಥವಿಷ್ಠಶ್ಚ ಸ್ಥವೀಯಸಾಮ್ ।
ಯತ್ರೇದಂ ದೃಶ್ಯತೇ ವಿಶ್ವಂ ಭೂತಂ ಭವ್ಯಂ ಭವಚ್ಚ ಯತ್ ॥೨೪॥

ಆಂಡಕೋಶೇ ಶರೀರೇSಸ್ಮಿನ್ ಸಪ್ತಾವರಣಸಂಯುತೇ ।
ವೈರಾಜಃ ಪುರುಷೋ ಯೋSಸೌ ಭಗವಾನ್ ಧಾರಣಾಶ್ರಯಃ ॥೨೫॥

ಪಾತಾಲಮೇತಸ್ಯ ಹಿ ಪಾದಮೂಲಂ ಪಠಂತಿ ಪಾರ್ಷ್ಣಿಪ್ರಪದೇ ರಸಾತಲಮ್ ।
ಮಹಾತಲಂ ವಿಶ್ವಸೃಜಃ ಸುಗುಲ್ಫೌ ತಲಾತಲಂ ವೈ ಪುರುಷಸ್ಯ ಜಂಘೇ ॥೨೬॥

ದ್ವೇ ಜಾನುನೀ ಸುತಲಂ ವಿಶ್ವಮೂರ್ತೇ ರೂರುದ್ವಯಂ ವಿತಲಂ ಚಾತಲಂ ಚ ।
ಮಹೀತಲಂ ತಜ್ಜಘನಂ ಮಹೀಪತೇ ನಭಸ್ತಲಂ ನಾಭಿಸರೋ ಗೃಣಂತಿ ॥೨೭॥

ಉರಃಸ್ಥಲಂ ಜ್ಯೋತಿರನೀಕಮಸ್ಯ ಗ್ರೀವಾ ಮಹರ್ವದನಂ ವೈ ಜನೋಽಸ್ಯ ।
ತಪೋ ರರಾಟಿಂ ವಿದುರಾದಿಪುಂಸಃ ಸತ್ಯಂ ತು ಶೀರ್ಷಾಣಿ ಸಹಸ್ರಶೀರ್ಷ್ಣಃ ॥೨೮॥

ಇಂದ್ರಾದಯೋ ಬಾಹವ ಆಹುರಸ್ಯ ಕರ್ಣೌ ದಿಶಃ ಶ್ರೋತ್ರಮಮುಷ್ಯ ಶಬ್ದಃ ।

